# ಇಂಗ್ಲಾಂಡ್ ದೇಶದ

# ಚರಿತ್ರ

ಹೆನ್ರಿ ಮೊರಿಸ್ ಧೊರೆ ಬರೆದದ್ದು

ಚನ್ನಪಟ್ಟಣದ ಅಧಿಪತ್ಯದ ಕೆಳಗೆ ಇರುವ ಶಾಲೆಗಳ ಪ್ರಯೋಜನಾರ್ಥವಾಗಿ ಬೋಧನೆಯ ಸರಕಾರಿ ಡಿರೆಕ್ಟರವರ ಅಪ್ಪಣೆಯ ಪ್ರಕಾರ ಕನ್ನಡದಲ್ಲಿ ಟೀಕಿಸಿದ್ದು.

ಎರಡನೆ ಛಾಪೆ.

ಮಂಗಳೂರು
ಸರಕಾರಿ ಶಾಲಾಪುಸ್ತಕಖಾನೆ
1866

# HISTORY OF ENGLAND

# ಇಂಗ್ಲಾಂಡ್ ದೇಶದ ಚರಿತ್ರೆ

## CHAPTER I.

### BRITAIN UNDER THE ROMANS, THE SAXON CONQUEST, AND THE HEPTARCHY.

FROM B. C. 55 TO A. D. 827.

## 1 ಸಂಧಿ.

### ಬ್ರಿತನ್ ರೋಮಾಯರ ಕೈಕೆಳಗೆ ಇದ್ದದ್ದು; ಸಕ್ಸನರು ಅದನ್ನು ಜಯಿಸಿದ್ದು; ಸಪ್ತರಾಜ್ಯಗಳು.

ಕ್ರಿ. ಮು. 55 ಮೊದಲು ಕ್ರಿ. ಶ. 827 ವರೆಗೂ.

ಮುಖ್ಯ ತಾರೀಖುಗಳು: (Romans) ರೋಮಾಯರ ಕೈಕೆಳಗೆ ಇದ್ದದ್ದು. ಕ್ರಿ. ಮು. 56—ಕ್ರಿ. ಶ. 410. (Saxons) ಸಕ್ಸನರ ಜಯ ಕ್ರಿ. ಶ. 410—560. (Heptarchy) ಸಪ್ತರಾಜ್ಯಗಳು ಕ್ರಿ. ಶ. 560—827. ಅದೇ ಕಾಲದ ಇಂದ್ಯ ಚರಿತ್ರೆ: ವಿಕ್ರಮಾದಿತ್ಯನ ಶಕ ಕ್ರಿ. ಮು. 57. ಶಾಲಿವಾಹನಶಕ ಕ್ರಿ. ಶ. 78. ಮಹಮ್ಮದಿನವರು ಮೊದಲು ಹಿಂದುಸ್ಥಾನಕ್ಕೆ ಬಂದದ್ದು ಕ್ರಿ. ಶ. 664. ಶ್ರೇಷ್ಠ ನಾಮಗಳು: (Gildas) ಗಿಲ್ದಾಸ್, ಈತನು ಮೊದಲನೇ (British) ಬ್ರಿತ್ಯ ಚರಿತ್ರಗಾರನು, ಕ್ರಿ. ಶ. 570 ಸತ್ತನು. ಮಹಮ್ಮದು ಕ್ರಿ. ಶ. 570 ಹುಟ್ಟಿ, ಕ್ರಿ. ಶ. 632

## ಸಂಧಿ 1. ಬ್ರಿತನಿನ ಪೂರ್ವ ಒಕ್ಕಲುತನದವರು.

ಸತ್ತನು. (Aldhelm) ಅಲ್‌ದ್‌ಹೆಲಮ್. ಈತನು ಮೊದಲನೇ (British) ಬ್ರಿತ್ಯಕಕ್ಷೀಶ್ವರನು ಕ್ರಿ. ತ. 709 ಸತ್ತನು. ಘನವುಳ್ಳ (Bede) ಬೀದನು. ಈತನ ವಿದ್ಯವೂ ಭಕ್ತಿಯೂ (Europe) ಯೂರೋಪಿನಲ್ಲೆಲ್ಲಿಯೂ ಪ್ರಸಿದ್ಧವಾದದ್ದು ಕ್ರಿ. ತ. 670—735. ವಿದ್ಯಾಶಾಲಿಯಾದ (Alcuin) ಅಲ್‌ಕ್ವೀನ್, ಈತನು (York) ಯೊರ್ಕ ಪಟ್ಣದಲ್ಲಿ ಹುಟ್ಟಿ, (Bede) ಬೀದನಿಂದ ತಿದ್ದಲ್ಪಟ್ಟು, (France) ಫ್ರಾನ್ಸ ದೇಶದ ಮಹಾರಾಜನಾದ (Charlemagne) ಚಾರ್ಲಮಾನನಿಗೆ ಬೋಧಕನಾದನು. ಕ್ರಿ. ತ. 804 ಸತ್ತನು.

ಪೂರ್ವ ಕಾಲದಲ್ಲಿ ಬ್ರಿತನ್ ಎಂಬ ದ್ವೀಪವು * ಇದ್ದ ಸ್ಥಿತಿಯನ್ನು ವಿಚಾರಿಸುವಾಗ, ಅದರ ಈಗಿನ ಸ್ಥಿತಿಗೂ ಆಗಿನ ಸ್ಥಿತಿಗೂ ಬಹಳ ವೆತ್ಯಾಸ ಕಾಣ ಬರುತ್ತದೆ. ಹ್ಯಾಗಂದರೆ, ಆ ಕಾಲದಲ್ಲಿ ಆ ದೇಶವು ನಾನಾ ತರದ ಕಿರಾತಕರು ಸಂಚರಿಸುತ್ತಿದ್ದ ಕಾಡೇ ಹೊರ್ತು ಮತ್ತು ಬೇರೆ ಅಲ್ಲ. ಆ ಜಾತಿಯವರು ಯಾರಂದರೆ, ಬ್ರಿತನಿಗೆ ನೆರೆಶೀಮೆಯವರಾದ (Gaul) ಗಾಲ್ ಎಂಬ (France) ಫ್ರಾನ್ಸ್ ದೇಶದಲ್ಲಿದ್ದ ಗಾಲಿಯರು; ಅಥವಾ, (Celts) ಕೆಲ್ತಿಯರಿಗೂ ಪೂರ್ವಿಕ ಬ್ರಿತಾನಿಯರಿಗೂ ಭಾಷೆಯೂ ಆಚಾರಗಳೂ ಒಂದಾಗಿದ್ದದರಿಂದ, ಇವರು ಅವರಿಗೆ ಸಮ್ಮಂಧಿಕರೆಂದು ನೆನಸುವದಕ್ಕೆ ಆಸ್ಪದ ಉಂಟು. ಗಾಲ್ ದೇಶಕ್ಕೆ ಸಮೀಪವಾದ ಬ್ರಿತನ್ ದ್ವೀಪದ ಈಶಾನ್ಯ ದಿಕ್ಕಿನಲ್ಲಿರುವವರು ಸ್ವಲ್ಪ ನಾಗರೀಕತೆ ಹೊಂದಿದವರೆಂದು ಹೇಳ ಬಹುದು. ಅವರು ಆ ದ್ವೀಪದ ಮಧ್ಯಭಾಗದಲ್ಲಿದ್ದವರಿಗಿಂತ ಸ್ವಲ್ಪ ಒಳ್ಳೇ ಸ್ಥಿತಿಯಲ್ಲಿದ್ದರು; ಸ್ವಲ್ಪ ಯೋಗ್ಯವಾದ ಉಡಿಗೆ ಧರಿಸಿ ಕೊಳ್ಳುವರು; ಮನೆಗಳನ್ನು ಕಟ್ಟಿ ಕೊಳ್ಳುವರು; ವ್ಯವಸಾಯ ಮಾಡುವರು. ಆ ದ್ವೀಪದ ಮಿಕ್ಕಾದವರು ಬೆಟ್ಟಗಳ ಗುಹೆಗಳಲ್ಲಿಯೂ ಕಾಡುಗಳಲ್ಲಿಯೂ ನಿವಾಸವಾಗಿದ್ದು, ಕಾಡುಮೃಗಗಳ ಚರ್ಮಗಳಿಂದ ಉಡಿಗೆಗಳನ್ನು ಮಾಡಿ ಕಟ್ಟಿ ಕೊಂಡು, ತಮ್ಮ ದೇಹಕ್ಕೆ ನಾನಾ ಬಣ್ಣಗಳನ್ನು ಹಚ್ಚಿ ಕೊಂಡು, ಬಹು ವಿಕಾರವಾಗಿ ತಿರುಗುವರು.

---

* ಇಂಗ್ಲಾಂಡ್, ವೇಲ್ಸ್, ಸ್ಕೊತ್ಲಾಂಡ್ ಎಂಬ ಮೂರು ಭಾಗಗಳುಳ್ಳ ದ್ವೀಪಕ್ಕೆ ಬ್ರಿತನ್, ಬ್ರಿತಾನಿಯ, ಮಹಾ ಬ್ರಿತನ್ ಎಂಬುವ ಹೆಸರುಗಳುಂಟು.

## ಸಂಧಿ 1. ಬ್ರಿತನಿನ ಪೂರ್ವ ಒಕ್ಕಲುತನದವರು.

ಈ ಬ್ರಿತನ್ ದೇಶದವರಲ್ಲಿದ್ದ ಪೂರ್ವಿಕ ಆಳಿಕೆಯು ಬಹು ಕ್ರಮ ಹೀನವಾದದ್ದಾಗಿಯೂ, ಕಾಡುಮನುಷ್ಯರಿಗೆ ತಕ್ಕದ್ದಾಗಿಯೂ ಇತ್ತು. ಒಂದೊಂದು ಕುಟುಂಬಕ್ಕೆ ಸ್ವತಂತ್ರಿಕನಾದ ಒಬ್ಬೊಬ್ಬ ಯಜಮಾನನು ಇದ್ದನು. ಆದಾಗ್ಯೂ ಆ ಜನರು ಖಂಡಿತವಾದ ಯಾವ ಆಳಿಕೆಗಾದರೂ ವಿಧೇಯರಾಗಿರಲಿಲ್ಲ. ತಮ್ಮ ಪೂಜಾರಿಗಳಿಗೆ ಮಾತ್ರ ಒಂದು ವಿಧವಾಗಿ ಅಣಗಿ ಇರುವರು. ತಮ್ಮ ಕುಲದ ಯಜಮಾನನಿಗೆ ಅಷ್ಟಾಗಿ ಅಣಗಿ ಇರುವದಿಲ್ಲ. ಅವರು ಎಡೆ ಬಿಡದೆ ಒಬ್ಬರ ಸಂಗಡಲೊಬ್ಬರು ಯುದ್ಧ ಮಾಡುವರು. ಇಂಥ ಕ್ರೂರ ಯುದ್ಧಗಳಲ್ಲಿ ಅವರು ಬಹು ಧೈರ್ಯವನ್ನೂ ಕ್ರೂರ ಗುಣವನ್ನೂ ತೋರಿಸುವರು.

ಅವರ ಮತಾಚಾರಗಳನ್ನು ವಿಚಾರಿಸಿದರೆ, ಅವು ಬಹು ನೀಚವಾದವುಗಳಾಗಿಯೂ ಕ್ರೂರವಾದವುಗಳಾಗಿಯೂ ಇದ್ದವು. ನರಬಲಿ ಕೊಡುವರು. ಇನ್ನು ನಾನಾ ಕ್ರೂರವಾದ ಆಚರಣೆಗಳನ್ನು ನಡಿಸುವರು, ಕೆಲವು ವೇಳೆ ಮುಖ್ಯವಾದ ಉತ್ಸವಗಳನ್ನು ನಡಿಸುವಾಗ, ಅವರು ಬೆತ್ತದಿಂದ ಮನುಷ್ಯಾಕಾರವಾಗಿ ದೊಡ್ಡ ಗೂಡೆಗಳನ್ನು ಹೆಣೆದು, ಅವುಗಳೊಳಗೆ ಬಹಳ ಮನುಷ್ಯರನ್ನು ನುಗ್ಗಿಸಿ, ತಮ್ಮ ದೇವರುಗಳಿಗೆ ಬಲಿಯಾಗಿ ಒಂದೇ ಸಾರಿ ಸುಟ್ಟು ಬಿಡುವರು. ಅಪರಾಧಿಗಳನ್ನೂ ಯುದ್ಧರಂಗದಲ್ಲಿ ಶೆರೆ ಹಿಡಿದವರನ್ನೂ ಮುಖ್ಯವಾಗಿ ಹೀಗೆ ಬಲಿ ಕೊಡುವ ವಾಡಿಕೆ ಇತ್ತು.

ಆ ಮತದ ಪೂಜಾರಿಗಳಿಗೆ (Druids) ಡ್ರೂಯಿದರೆಂದು ಹೆಸರು. ಇವರಿಗೆ ಆ ಕಾಲದಲ್ಲಿ ಆ ದ್ವೀಪದೊಳಗೆ ಮುಖ್ಯವಾದ ಅಧಿಕಾರವೂ ಘನವೂ ಇತ್ತು. ಜನವೆಲ್ಲಾ ಇವರಿಗೆ ಬಹಳವಾಗಿ ಅಂಜಿ ಕೊಳ್ಳುವರು. ಆ ದ್ವೀಪದಲ್ಲಿ ವಿದ್ವಾಂಸರು ಇವರ ಮತಗಳಲ್ಲಿಯೇ ಹೊರ್ತು ಬೇರೆಲ್ಲಿಯೂ ಇರುವದಿಲ್ಲ. ಇವರೇ ಮಕ್ಕಳಿಗೆ ಉಪದೇಶ ಹೇಳುವರು. ಇವರು ಕಂದಾಯ ಗುತ್ತಿಗೆ ಮುಂತಾದದ್ದು ಏನೂ ಕೊಡುವದಿಲ್ಲ. ಇವರು ಒಳ್ಳೇದು ಇಂಥಾದ್ದು, ಕೆಟ್ಟದ್ದು ಇಂಥಾದ್ದು ಎಂದು, ತಮ್ಮ ಇಚ್ಛೆಯ ಪ್ರಕಾರ ನಿಧಾನಿಸಿ, ಒಂದು ಬಗೆಯಾಗಿ ನ್ಯಾಯ ತೀರಿಸುವದು ಉಂಟು. ಯಾರಾದರು ಒಬ್ಬನು ಮತ್ತೊಬ್ಬರು ಹೊಗಳುವಂಥ ಉಪ

ಯೋಗವಾದ ಕಾರ್ಯವನ್ನು ಮಾಡಿದರೆ, ಅಂಥವನಿಗೆ ಇವರೇ ಬಹು ಮಾನ ಕೊಡುವರು. ಯಾವನಾದರು ಇವರು ಮಾಡುವ ತೀರ್ವಿಗೆ ಆಕ್ಷೇಪಣೆ ಮಾಡಿ ಇವರ ಚಿತ್ತಕ್ಕೆ ಸಮ್ಮತಿಸದೆ ಇದ್ದರೆ, ಅವನನ್ನು ಜಾತಿಯಿಂದ ಹೊರಗೆ ಹಾಕುವದಕ್ಕೆ ಇವರಿಗೆ ಅಧಿಕಾರ ಉಂಟು. ಇವರು ಆ ದ್ವೀಪದೊಳಗೆ ಬಹು ದಟ್ಟವಾದ ಕಾಡುಗಳಲ್ಲಿ ಮರೆಯಾಗಿದ್ದು, ತಮ್ಮ ಮತಾಚಾರದ ರಹಸ್ಯವಾದ ನೇಮ ನಿಷ್ಠೆಗಳನ್ನು ನಡಿಸುವರು. ಅವರು ತಮ್ಮ ಮರ್ಮಗಳನ್ನು ಬರೆದು ಇರಿಸದೆ ಹೋದದರಿಂದ ಅವರ ಮತಾಭಿಪ್ರಾಯಗಳನ್ನು ದಿಟ್ಟವಾಗಿ ತಿಳಿದು ಕೊಳ್ಳ ಹೇತುವೆ ಇಲ್ಲ. ಇವರು (oak) ಓಕ್ ಎಂಬ ಒಂದು ಜಾತೀ ಮರವನ್ನೂ ಆ ಮರದ ಕೊಂಬೆಗಳಲ್ಲಿ ಹಬ್ಬಿ ಬೆಳೆಯುವ ಬದನಿಕೆಯನ್ನೂ ಬಹು ಭಯದಿಂದ ಆರಾಧಿಸುವರು.

ಲೋಕರಕ್ಷಕನು ಅವತಾರ ಎತ್ತುವದಕ್ಕೆ ಮುಂಚೆ ೫೫ನೇ ವರುಷದಲ್ಲಿ (B. C. 55.) ರೋಮ ರಾಜ್ಯದಲ್ಲಿ ಮಹಾ ಕೀರ್ತಿ ಹೊಂದಿದ ಸೈನ್ಯಾಧಿಪತಿಯಾದ (Julius Cæsar) ಜೂಲಿಯಸ್ ಕೈಸರನೆಂಬವನು ಗಾಲ್ ಎಂಬ ದೇಶವನ್ನೆಲ್ಲಾ ತನ್ನ ವೀರರಾದ ಸೈನ್ಯಗಳಿಂದ ಜಯಿಸಿ, ತರುವಾಯ ಬ್ರಿತನ್ ದ್ವೀಪದ ಮೇಲೆ ದಂಡೆತ್ತಿ ಕೊಂಡು ಬಂದನು. ಬ್ರಿತನ್ ದ್ವೀಪದವರು ಅವನನ್ನು ತಮ್ಮ ದ್ವೀಪದ ತೀರದಲ್ಲಿ ಇಳಿಯ ಕೊಡದೆಂದು ಅಭ್ಯಂತರಿಸಿ, ಬಹಳ ಹೊತ್ತು ಬಹು ವೈರದಿಂದ ಯುದ್ಧ ಮಾಡಿದಾಗ್ಯೂ, ಮಹಾ ಧೈರ್ಯವೂ ಸಾಮರ್ಥ್ಯವೂ ಅಭ್ಯಾಸವೂ ಉಳ್ಳ ರೋಮಾಯರಿಂದ ಜಯಿಸಲ್ಪಟ್ಟರು. ಅದರ ತರುವಾಯ ಆ ಜಯಶೂರನು ತನ್ನ ಸೈನ್ಯಗಳೊಡನೆ ಗಾಲ್ ದೇಶಕ್ಕೆ ಹಿಂತಿರುಗಿ ಹೋಗುವದಕ್ಕಿಂತ ಮುಂಚೆ ಆ ದ್ವೀಪದವರು ತಾವು ಇನ್ನು ಕಲಹ ಮಾಡುವದಿಲ್ಲವೆಂದು ಮಾತು ಕೊಟ್ಟು ಕರಾರು ಮಾಡಿ ಕಳುಹಿಂಸಿದರು.

ತರುವಾಯ ಕೈಸರನು ಮಳೆಗಾಲದಲ್ಲಿ ಗಾಲ್ ದೇಶದೊಳಗೆ ವಸ್ತಿ ಇದ್ದು ಬ್ರಿತನಿಗೆ ತಿರಿಗಿ ಬರುವಾಗ್ಯೆ, ಆ ದೇಶದವರು ತಾವು ಮುಂಚೆ ಸಮ್ಮತಿಸಿ ಇದ್ದ ಪ್ರಕಾರ ಅನುಕೂಲವಾಗಿರದೆ ಕಲಹ ಮಾಡಿದ್ದರಿಂದ, ಅವನು ಮಾರಣೆ ವರುಷದಲ್ಲಿ ದಂಡೆತ್ತಿ ಕೊಂಡು ಬಂದು (Casibelaunus)

ನೆಶೆ 1. ರೋಮಾಯರಿಗೂ ಬ್ರಿತಾನಿಯರಿಗೂ ಉಂಟಾದ ಯುದ್ಧ.

ಕಸಿಬಲಾನಸ್ ಎಂಬ ಮುಖ್ಯಸ್ಥನು ಕೂಡಿಸಿ ಕೊಂಡಿದ್ದ ಯುದ್ಧ ನಿಘಕವರಿಯದ ಕಾಡುಜನರ ಗುಂಪುಗಳನ್ನು ಮುರಿಯ ಬಡಿದು, (Thames) ತೇಮ್ಸ್ ನದಿಯನ್ನು ದಾಟಿ, ಬ್ರಿತನ್ ದೇಶದ ರಾಜಧಾನಿಯಾದ (Verulam) ವೆರುಲಂ ಎಂಬ ಪಟ್ಣವನ್ನು ಸುಟ್ಟು ನಾಶ ಮಾಡಿಬಿಟ್ಟು, ಎರಡನೇ ಸಾರಿ ತನ್ನ ದೇಶಕ್ಕೆ ತಿರುಗಿದನು. ಅವನು ಹೀಗೆ ಅನಿವಾರ್ಯವಾಗಿ ಬ್ರಿತನ್ ದೇಶವನ್ನು ವಶ ಮಾಡಿ ಕೊಳ್ಳಲಿಲ್ಲವೆಂದು ಚನ್ನಾಗಿ ತೋರುತ್ತದೆ.

ಆ ಮೇಲೆ ನೂರು ವರುಷಗಳ ಮಟ್ಟಿಗೂ ಆ ರೋಮಾಯರು ಬ್ರಿತನ್ ದೇಶದವರನ್ನು ವಶ ಮಾಡಿ ಕೊಳ್ಳ ಏನೂ ಪ್ರಯತ್ನ ಮಾಡಲಿಲ್ಲ. ಆದಾಗ್ಯೂ ಯಾವ ದೇಶದವರನ್ನೂ ಆಳ ಬೇಕೆಂಬ ಅಹಂಕಾರವುಳ್ಳ ರೋಮಾಯರು ತಮಗೆ ಬಹು ದೂರದಲ್ಲಿದ್ದ ಬ್ರಿತನ್ ದ್ವೀಪವನ್ನು ಸಹ ಜಯಿಸಿ ಆಳ ಬೇಕೆಂಬುವ ಆಶೆಯನ್ನು ಬಿಟ್ಟು ಬಿಡಲಿಲ್ಲ. ಅದದರಿಂದ ಕ್ರಿಸ್ತಶಕದ 43 (A. D. 43.) ಸಂವತ್ಸರ (Claudius) ಕ್ಲಾದಿಯಸ್ ರಾಯನು (Aulus Plautius) ಆಲಸ್ ಪ್ಲಾತಿಯಸ್ ಎಂಬ ಸೈನ್ಯಾಧಿಪತಿಯಿಂದ ನಡಿಸಲ್ಪಟ್ಟ ದೊಡ್ಡ ಸೈನ್ಯವನ್ನು ಅಲ್ಲಿಗೆ ಕಳುಹಿಸಿ, ತರುವಾಯ ತಾನೂ ಆ ದೇಶಕ್ಕೆ ಹೋದನು. ಆ ದ್ವೀಪದ ಆಗ್ನೇಯ ದಿಕ್ಕಿನಲ್ಲಿರುವ ಜನರು ಸಂಗಡಲೇ ಅವನಿಗೆ ವಶವಾದರು. ಮಿಕ್ಕಾದ ಬ್ರಿತಾನಿಯರು (Caractacus) ಕರಾಕ್ತಕಸ್ ಎಂಬ ಮಹಾ ವೀರನಾದ ಸೈನ್ಯಾಧಿಪತಿಯನ್ನು ಶೇರಿ ಕೊಂಡು, ಅನೇಕ ವರುಷಗಳು ರೋಮಾಯರ ಹೇರಾಳವಾದ ಸೈನ್ಯಗಳನ್ನು ಎದುರಿಸಿ ನಿಂತು, ಬಹು ಬಿಡಿವಾದದಿಂದ ಯುದ್ಧ ಮಾಡುತ್ತಾ ಬಂದರು. ಕಡೆಯಲ್ಲಿ ಕೆಲವು ದ್ರೋಹಿಗಳು ಒಳಸಂಚು ನಡಿಸಿ, ಕರಾಕ್ತಕಸ್ ಎಂಬವನನ್ನು ಹಿಡಿದು, ರೋಮಾಯರಿಗೆ ಒಪ್ಪಿಸಿದರು. ಅವರು ಇವನನ್ನು ರೋಮು ಪಟ್ಣಕ್ಕೆ ಶೆರೆಯಾಗಿ ಕಳುಹಿಸಿದಾಗ, "ಕುಂದಿದವನಾದರೂ ಮುಂದವಾಗಿರ ಬಾರದು," ಎಂಬ ಗಾದೆಯ ಪ್ರಕಾರ, ಅವನು ದೃಢ ಮನಸ್ಸುಳ್ಳವನಾಗಿ ತನ್ನ ಮೇಲೆ ಬಂದ ನಾನಾ ಇಕ್ಕಟ್ಟುಗಳನ್ನು ತಾಳ್ಮೆಯಿಂದ ಸಹಿಸುವದನ್ನು ಕಂಡು, ರೋಮಾಯರು ಅವನನ್ನು ಮಹಾ ದೊಡ್ಡ ವೀರನೆಂದು ತಿಳಿದು, ಅವನನ್ನು ತಮ್ಮ ವಾಡಿಕೆಯ

ಪ್ರಕಾರ ದಾಸತ್ವದಲ್ಲಿರಿಸದೆ ಅವನಿಗೆ ಬೇಕಾದ ಉಪಚಾರಗಳೆಲ್ಲಾ ಮಾಡುತ್ತಾ ಬಂದರು.

ಬ್ರಿತನ್ ದೇಶದಲ್ಲಿ ಇನ್ನು ಯುದ್ಧ ನಡಿಯುತ್ತಾ ಬರುವಾಗ, ರೋಮ ಪಟ್ಟಣದಿಂದ ಅನೇಕ ಯೌವನಸ್ಥರು ಮುಂತಾದವರು ಶೌರ್ಯ ಪ್ರತಾಪ ಹೊಂಧ ಬೇಕೆಂದು ಬಹು ತ್ವರೆಯಾಗಿ ಅಲ್ಲಿಗೆ ಹೋದರು. ಆದಾಗ್ಯೂ ಬ್ರಿತಾನಿಯರು ಇನ್ನು ವಶವಾಗಲಿಲ್ಲ. ಯಾಕಂದರೆ ಅವರ ಪೂಜಾರಿಗಳು ಅವರಿಗೆ ಧೈರ್ಯ ಕೊಟ್ಟು, "ನಮ್ಮ ಜಪಮಂತ್ರ ಮುಂತಾದವುಗಳಿಂದ ನಿಮಗೆ ಜಯವಾಗುವದು, ಬಿಡದೆ ಯುದ್ಧ ಮಾಡಿರಿ," ಎಂದು ಅವರನ್ನು ಎಬ್ಬಿಸಿ ಬಿಟ್ಟರು. ಆದ ಕಾರಣ (Nero) ನೀರೊ ಎಂಬ ರಾಯನ ಕಾಲದಲ್ಲಿ ರೋಮಾಯರ ಸೈನ್ಯಾಧಿಪತಿಯಾದ (Suetonius Paulinus) ಸೂಯಿತೋನಿಯಸ್ ಪಾಲೀನಸ್ ಎಂಬವನು ಒಂದು ಉಪಾಯ ಮಾಡಿದನು, ಏನಂದರೆ — ಬ್ರಿತನ್ ದ್ವೀಪದ ಪಶ್ಚಿಮ ಥಡದಲ್ಲಿ (Mona) ಮೋನ ಎಂಬ ಒಂದು ಸಣ್ಣ ದ್ವೀಪ ಉಂಟು. ಅದರಲ್ಲಿ ದ್ರೂಯಿದರು ಕಟ್ಟಿದ ಪ್ರಾಮುಖ್ಯವಾದ ಗುಡಿಗಳೂ ಮಠಗಳೂ ಉಂಟು. ಅದನ್ನು ಹಿಡುಕೊಂಡರೆ ಆ ದೇಶದವರೆಲ್ಲಾ ವಶವಾಗುವರೆಂದು ಅವರ ಮೇಲೆ ಯುದ್ಧಕ್ಕೆ ಹೋದನು. ಹೀಗೆ ಆ ಸಣ್ಣ ದ್ವೀಪದಲ್ಲಿ ಯುದ್ಧ ಪ್ರಾರಂಭಿಸಿತು. ಆ ಪೂಜಾರಿಗಳು ಯುದ್ಧಮುಖದಲ್ಲಿ ನಿಂತು, ಜಪಮಂತ್ರಗಳನ್ನು ಉಚ್ಚರಿಸಿ, ಬ್ರಿತಾನಿಯರನ್ನು ದೃಢ ಪಡಿಸಿದರು. ಸ್ತ್ರೀಯರು ಸಹ ಬಂದು ಸಾಲುಸಾಲಾಗಿ ನಿಂತು ತಮ್ಮ ಪುರುಷರನ್ನೂ ಮಕ್ಕಳನ್ನೂ ಕಂಡು, "ನಮ್ಮನ್ನು ಶತ್ರುಗಳ ಕೈಯಲ್ಲಿ ದಾಸರಾಗಿ ಬಿಡ ಬೇಡಿರಿ, ಹಿಂತೆಗಿಯದೆ ಯುದ್ಧ ಮಾಡಿರಿ," ಎಂದು ಅವರ ಕಾಲುಗಳ ಮೇಲೆ ಬಿದ್ದು ಬೇಡಿ ಕೊಂಡರು. ಆದಾಗ್ಯೂ ಯುದ್ಧ ಸಾಧನೆಯಲ್ಲಿ ತೇರಿದ ಶೂರರಾದ ರೋಮಾಯರ ಮುಂದೆ ಅವರು ನಿಲ್ಲಲಾರದೆ ಚದರಿ ಹೋಗಲಾಗಿ, ರೋಮಾಯರು ಆ ಪುಣ್ಯಸ್ಥಳಗಳನ್ನು ಹೊಲೆ ಮಾಡಿ, ತಮ್ಮನ್ನು ಸುಡುವದಕ್ಕಾಗಿ ದ್ರೂಯಿದರು ಹೊತ್ತಿಸಿದ್ದ ಬೆಂಕಿಯಲ್ಲಿ ಅವರು ದ್ರೂಯಿದರನ್ನೇ ದೊಬ್ಬಿದರು.

ಆದಾಗ್ಯೂ ಸೂಯಿತೋನಿಯಸ್ ಎಂಬವನು ಅಲ್ಲಿ ಇಲ್ಲದೆ ಇದ್ದಾಗ

ಸಂಧಿ 1. ರೋಮಾಯರಿಗೂ ಬ್ರಿತಾನಿಯರಿಗೂ ಉಂಟಾದ ಯುದ್ಧ.

(Ileni) ಐಸೀನಿಯರೆಂಬ ಜಾತಿಯವರ ರಾಣಿಯಾದ (Boadicea) ಬೊಯದಿಸೀಯ ಎಂಬವಳು ಕೆಲವು ಯುದ್ಧವೀರರನ್ನು ಆದು ಕೊಂಡು, ಯುದ್ಧ ಪ್ರಾರಂಭಿಸಿದಳು. ರೋಮಾಯರ ಸೈನ್ಯಾಧಿಪತಿಯು ಅವಳನ್ನು ಬಹು ಅವಮಾನ ಮಾಡಿದ್ದದರಿಂದ ಅದಕ್ಕೆ ಬದಲು ಸಲ್ಲಿಸ ಬೇಕೆಂದು ಶಪಥ ಮಾಡಿ ಕೊಂಡಿದ್ದಳು. ಸೂಯಿತೋನಿಯಸ್ ಈ ಸುದ್ದಿ ಕೇಳಿ, ಅವಳನ್ನು ಎದುರಿಸುವದಕ್ಕೂ ರೋಮಾಯರು ಒಕ್ಕಲುತನವಿದ್ದ ಲಂಡನ್ ಎಂಬ ದೊಡ್ಡ ಪಟ್ಟಣವನ್ನು ಕಾಪಾಡುವದಕ್ಕೂ ಬಹು ತ್ವರೆಯಾಗಿ ಬಂದನು. ಅವನು ಬರುವಷ್ಟರೊಳಗೆ ಬ್ರಿತಾನಿಯರು ಆ ಪಟ್ಟಣವನ್ನು ಹಿಡಿದು, ಅದರಲ್ಲಿದ್ದ ಹಿರಿ ಕಿರಿಯರನ್ನೆಲ್ಲಾ ಸಂಹಾರ ಮಾಡಿ, ಪಟ್ಟಣವನ್ನು ಪೂರ್ಣವಾಗಿ ನಾಶ ಮಾಡಿದರು.

ಆ ತರುವಾಯ ಎರಡು ಕಡೆಯವರು ರೌದ್ರದಿಂದ ತುಂಬಿ ಕೊಂಡು ಬಹು ಘೋರವಾಗಿ ಯುದ್ಧ ಮಾಡ ಪ್ರಾರಂಭಿಸಿದರು. ರೋಮಾಯರು ಮಾಡಿದ ಕೇಡುಗಳಿಗೋಸ್ಕರ ಬ್ರಿತಾನಿಯರು ಬಹು ಕೋಪಗೊಂಡು, ಕಾಡುಮೃಗಗಳ ಹಾಗೆ ಶತ್ರುಗಳೊಳಗೆ ನುಗ್ಗಿ, ಅವರನ್ನು ಧ್ವಂಸ ಮಾಡಿದರು.

ರೋಮಾಯರು ಸಹ ಬ್ರಿತಾನಿಯರ ಮೂರ್ಖತ್ವವನ್ನು ಕಂಡು ಅವರನ್ನು ಸಂಪೂರ್ಣವಾಗಿ ಹತ ಮಾಡ ನಿಶ್ಚಯಿಸಿ ಕೊಂಡರು. ಮತ್ತು ಬೊಯದಿಸೀಯ ಎಂಬ ರಾಣಿ ಯುದ್ಧದಲ್ಲಿ ಸೋತು ಹೋಗಿ, ತನ್ನ ರಾಣುವೆಯಲ್ಲಿ 80,000 ಮಂದಿ ಮಡಿದು ಹೋದದ್ದನ್ನು ಕಂಡು, ತಾನು ಶತ್ರುಗಳ ಕೈಯಲ್ಲಿ ಬೀಳುವದಕ್ಕಿಂತ ಪ್ರಾಣ ಬಿಡುವದು ಲೇಸೆಂದು ವಿಷ ತಿಂದು ಸತ್ತಳು. "ಅತಿ ಮಥನದಿಂದ ವಿಷ ಹುಟ್ಟುವದೆಂಬ" ಗಾದೆಯ ಮೇರೆಗೆ ಉಭಯ ಪಕ್ಷದವರಿಗೂ ಸಂಭವಿಸಿತು. ಆ ಮೇಲೆ ರೋಮಾಯರ ಅರಸನು ಸೂಯಿತೋನಿಯಸ್ ಎಂಬ ಕನಿಕರವಿಲ್ಲದ ಸೈನ್ಯಾಧಿಪತಿಯನ್ನು ತೆಗದು ಹಾಕಿದ್ದರಿಂದ ಆ ಭಯಂಕರವಾದ ಯುದ್ಧವು ಶಾಂತವಾಯಿತು.

ಕೆಲವು ವರುಷಗಳ ತರುವಾಯ ಚತುರೋಪಾಯಗಳನ್ನು ಬಲ್ಲಂಥ ಬಹು ಸ್ಥಿತಿ ಹೊಂದಿದಂಥ ನಾಗರೀಕವುಳ್ಳ ಧೊರೆಯಾಗಿಯೂ ಸಾ

ಮರ್ಥ್ಯವುಳ್ಳ ಸೈನ್ಯಾಧಿಪತಿಯಾಗಿಯೂ ಇದ್ದಂಥ (Julius Agricola) ಜೂಲಿಯಸ್ ಅಗ್ರಿಕೊಲ ಎಂಬವನು ಬಂದು, ನಯ ಭಯಗಳಿಂದ ಬ್ರಿತಾನಿಯರನ್ನೆಲ್ಲಾ ಒಳ ಪಡಿಸಿ ಕೊಂಡನು. ಇವನು ಆ ಜನರು ಮನಃಪೂರ್ವಕವಾಗಿ ರೋಮಾಯರಿಗೆ ವಿಧೇಯರಾಗಿರುವಂತೆಯೂ ತನ್ನನ್ನು ಬಹುಶ ಸ್ನೇಹಿಸಿ ನಂಬಿ ಕೊಳ್ಳುವಂತೆಯೂ ಮಾಡಿ ಬಿಟ್ಟನು. ಇವನು ಬ್ರಿತನ್ ದೇಶದಲ್ಲೆಲ್ಲಾ ಸಮಾಧಾನವನ್ನು ಉಂಟು ಮಾಡಿದನು. ಒಳಪಡದವರು ಸ್ಕೊತ್ಲಾಂಡ್ ದೇಶದ ಪರ್ವತಪ್ರದೇಶಗಳಲ್ಲಿ ತಮ್ಮನ್ನು ಬಚ್ಚಿಟ್ಟು ಕೊಳ್ಳುವಂತೆ ಮಾಡಿ, (Clyde) ಕ್ಲೈದ್ (Forth) ಫೋರ್ತ್ ಎಂಬ ಕೊಲ್ಲಿಗಳಿಗೆ ನಡುವೆ ಕೋಟೆಗಳನ್ನು ಕಟ್ಟಿ, ಕೆಲವು ಸ್ಥಳಗಳಲ್ಲಿ ಬಹು ಬಲವಾದ ಬುರುಜುಗಳನ್ನೂ ಆವರಣಗಳನ್ನೂ ಕರೀ ಕಲ್ಲುಗಳಿಂದ ಕಟ್ಟಿಸಿದನು. ಅವನ ತರುವಾಯ ಬಂದವರು ಸಹ ಆಯಾ ಕಾಲಗಳಲ್ಲಿ ಆ ಕೋಟೆಗಳನ್ನು ಅಲಂಕರಿಸಿ ಬಲ ಪಡಿಸಿದರು.

ಈ ಪ್ರಕಾರ ಬ್ರಿತನ್ ದೇಶದಲ್ಲಿ ರೋಮಾಯರ ಅಧಿಕಾರವು ಅಭಿವೃದ್ಧಿಯಾಯಿತು. ಆ ತರುವಾಯ ಮುನ್ನೂರು ವರುಷಗಳ ಪರ್ಯಂತರ ಆ ದ್ವೀಪದ ಉತ್ತರ ಭಾಗದಲ್ಲಿ ಕೆಲವು ವೇಳೆ ಕಲಹಗಳುಂಟಾದವೇ ಹೊರ್ತು ಮಿಕ್ಕಾದ ದೇಶದಲ್ಲೆಲ್ಲಾ ಬಹು ಹೊಂದಿಕೆಯೂ ಸಮಾಧಾನವೂ ಸೌಖ್ಯವೂ ಉಂಟಾಗಿದ್ದವು. ರೋಮಾಯರನ್ನು ಅನುಸರಿಸಿ ಕೊಂಡಿದ್ದಂಥ ಬ್ರಿತಾನಿಯರಿಗೆ ಬರ ಬರ ನಾಗರೀಕತೆ ಉಂಟಾಗುತ್ತಾ ಬಂತು. ಆ ದ್ವೀಪದ ನಿವಾಸಿಗಳು ಬಹು ಬುದ್ಧಿವಂತರಾದ ರೋಮಾಯರ ಸಂಗಡ ಧಾರಾಳವಾಗಿ ಕಲತಿದ್ದದರಿಂದ ಅವರ ಆಚಾರಗಳನ್ನೂ ಬಳಿಕೆಗಳನ್ನೂ ಕಂಡು ಅವರಂತೆ ತಾವೂ ನಡಿಯ ಪ್ರಯಾಸ ಪಟ್ಟು, ರೋಮಾಯರ ಶಾಸ್ತ್ರಗಳನ್ನೂ ವಿದ್ಯೆಗಳನ್ನೂ ಕಲಿತು ಗ್ರಹಿಸಿದರು. ರೋಮಾಯರಿಂದ ನಾನಾ ಕೈಕೆಲಸಗಳಲ್ಲಿಯೂ ಅಭ್ಯಾಸಿಸಲ್ಪಟ್ಟರು. ರೋಮಾಯರ ನ್ಯಾಯನಿಬಂಧನೆಗಳೇ ದೇಶದಲ್ಲಿ ಸ್ಥಾಪಿಸಲ್ಪಟ್ಟವು. ರೋಮ ಭಾಷೆಯನ್ನು ಮಾತಾಡುತ್ತಾ ಬಂದರು. ಇದಲ್ಲದೆ ಆ ಮೊದಲನೇ ಕಾಲಗಳಲ್ಲಿಯೇ ಕ್ರಿಸ್ತನ ಮಾರ್ಗದಿಂದ ಉಂಟಾಗುವ ಅನೇಕ ಮೇಲುಗಳನ್ನು ಅನುಭವಿಸುವದಕ್ಕೆ ಹೇತುವೆ ಆಯಿತು. ಹ್ಯಾಗಂದರೆ,

ಸಂಧಿ 1. ರೋಮಾಯರು ಬ್ರಿತನ್ ದೇಶವನ್ನು ಬಿಟ್ಟು ಹೋದದ್ದು.

ಸಮಸ್ತ ಲೋಕದವರನ್ನು ವಿಮೋಚನೆ ಮಾಡಿ ರಕ್ಷಿಸುವದಕ್ಕೆ ಬಂದ ಯೇಸುವಿನ ದಿವ್ಯ ಚರಿತ್ರೆಯನ್ನು ಪರಿಶುದ್ಧ ಅಪೊಸ್ತಲನಾದ ಪೌಲನ ಬಾಯಿಯಿಂದ ಕೇಳಿ ಕಲಿತು ಕೊಂಡ ಶಿಷ್ಯರು ಬ್ರಿತನ್ ದೇಶಕ್ಕೆ ಬಂದು, ಶಿಲುಬೆ ಎಂಬ ಕೆಂಪು ಧ್ವಜವನ್ನು ನಿಲ್ಲಿಸಿ, ಲೋಕರಕ್ಷಕನು ತೋರಿಸಿದ ಅತಿಶಯವಾದ ಪ್ರೀತಿಯನ್ನು ಅನೇಕರು ಗ್ರಹಿಸುವಂತೆ ಪ್ರಸಂಗಿಸಲಾಗಿ, ಅದೇ ಪ್ರಕಾರ ನಿಜಸ್ಥರಾದ ಕೆಲವರು ಆತನ ಪವಿತ್ರ ಹೆಸರನ್ನು ಆರಾಧಿಸುತ್ತಾ ಬಂದರು.

ದಿನದಿನೇ ರೋಮು ರಾಜ್ಯದಲ್ಲಿ ನಾನಾ ವಿಧ ಕಲಾಪನೆಗಳೂ ಕಲಹಗಳೂ ಉಂಟಾದದರಿಂದ ತಮ್ಮ ಸ್ವಂತ ದೇಶವನ್ನು ಕಾಪಾಡುವ ಉದ್ದಿಶ್ಯ ಬ್ರಿತಾನಿಯದಲ್ಲಿದ್ದ ತಮ್ಮ ಸೈನ್ಯಗಳನ್ನೆಲ್ಲಾ ರೋಮಾಯರು ಕರೆಸಿ ಕೊಳ್ಳ ಬೇಕಾಗಿತ್ತು. ಆದಾಗ್ಯೂ ರೋಮಾಯರು ಆ ದ್ವೀಪವನ್ನು ಆಳಿದ ಕಾಲದಲ್ಲಿ ಬ್ರಿತಾನಿಯರ ಶೌರ್ಯವು ಬಹು ಕಡಿಮೆಯಾಯಿತು. ಮತ್ತು ಅವರ ಯೌವನಸ್ಥರಲ್ಲಿ ಅನೇಕರು ರೋಮಾಯರ ದಂಡಿನಲ್ಲಿ ಶೇರಿ ಕೊಂಡು, ಅನ್ಯ ದೇಶಗಳಲ್ಲಿ ಯುದ್ಧ ಮಾಡ ಹೋಗಿದ್ದರು. ಆದದರಿಂದ ರೋಮಾಯರು ಆ ದೇಶವನ್ನು ಬಿಟ್ಟು ಹೋದ ತರುವಾಯ ಬ್ರಿತನ್ ದ್ವೀಪದ ಉತ್ತರ ಭಾಗದಲ್ಲಿಂದ (Picts) ಪಿಕ್ತರೂ (Scots) ಸ್ಕೋತರೂ ಅಲ್ಲಿ ಕಟ್ಟಿ ಇದ್ದ ಆವರಣಗಳನ್ನು ದಾಟಿ ದೇಶದಲ್ಲೆಲ್ಲಾ ಕೊಳ್ಳೆ ಮಾಡ ಬಂದ ಸಮಯದಲ್ಲಿ ಇವರನ್ನು ಎದುರಿಸುವದಕ್ಕೆ ಬ್ರಿತಾನಿಯರಿಗೆ ಬಲವೂ ಧೈರ್ಯವೂ ಇರಲಿಲ್ಲ. ಇದನ್ನು ಕುರಿತು ರೋಮು ಪಟ್ಣಕ್ಕೆ ರಾಯಭಾರಿಗಳನ್ನು ಕಳುಹಿಸಿ ತಮಗೆ ಸಹಾಯ ಮಾಡ ಬೇಕೆಂದು ಒತ್ತಾಯ ಮಾಡಿ ಕೇಳಿ ಕೊಂಡರು. ಅದೇ ಪ್ರಕಾರ ರೋಮಾಯರ ರಾಣುವೆಯವರು ಎರಡು ಸಾರಿ ಸಹಾಯಕ್ಕೆ ಬಂದು, ಆ ಕಿರಾತಕರನ್ನು ಹೊರಡಿಸಿ ಬಿಟ್ಟರು. ಮೂರನೇ ಸಾರಿ ಅದೇ ಮೇರೆಗೆ ಸಹಾಯಕ್ಕೆ ಬರ ಬೇಕೆಂದು ಕೇಳಿ ಕೊಂಡಾಗ ಬರುವದಿಲ್ಲವೆಂದು ಹೇಳಿ ಬಿಟ್ಟರು. ಆ ತರುವಾಯ ರೋಮಾಯರಲ್ಲಿ ಒಬ್ಬನಾದರೂ ಬ್ರಿತನ್ ದೇಶಕ್ಕೆ ಬರಲೇ ಇಲ್ಲ. ಇದರಿಂದ ಬ್ರಿತಾನಿಯರು ಬಹು ಕ್ಷೀಣಿಸಿ ಹೋದರು. ಅವರ ದೇಶವು ನೆರೆಯ ಶೀಮೆಗಳಿಂದ ಬಂದ ನಾನಾ ತರದ ಮ್ಲೇಚ್ಛರಿಂದ ಹಾಳು

ಮಾಡಲ್ಪಟ್ಟಿತು. ಆ ಶತ್ರುಗಳನ್ನು ಹೊರಡಿಸ ಶಕ್ತಿ ಇಲ್ಲದ್ದರಿಂದ ಬೇರೆ ಜಾತಿಯವರ ಬಳಿಯಲ್ಲಿ ಸಹಾಯ ಹುಡುಕಿದರು. (Germany) ಜರ್ಮನಿ ದೇಶದ ಉತ್ತರ ಭಾಗದಲ್ಲಿದ್ದ (Saxons) ಸಕ್ಸನ್ ಜಾತಿಯವರು ಮಹಾ ವೀರರೆಂಬೂ ಯುದ್ಧದಲ್ಲಿ ತೇರಿದವರೆಂಬೂ ಬಹು ಕೀರ್ತಿ ಹೊಂದಿದ್ದರು. ಅವರು ಯೂರೋಪಿನ ಉತ್ತರದ ಅನೇಕ ದೇಶಗಳ ಮೇಲೆ ದಂಡೆತ್ತಿ ಕೊಂಡು ಹಡಗಮಾರ್ಗವಾಗಿ ಸಹ ಹೋಗಿ, ನಾನಾ ದೇಶದವರನ್ನು ಜಯಿಸಿ, ಅವರ ಒಡಿವೆಗಳನ್ನು ಬಾಚಿ ಕೊಂಡು ಹೋಗುವರು. ಅವರು ಯಾರಿಗೂ ವಶವಾಗದಂಥ ಸಾಧನೆಯುಳ್ಳಂಥ ಅಹಂಕಾರವುಳ್ಳಂಥ ಜನವು. ಅವರಿಗೆ ಅರಸನು ಉಂಟು; ಆದಾಗ್ಯೂ ಅರಸನು ತನ್ನ ಇಷ್ಟದ ಪ್ರಕಾರ ಆಳ ಕೂಡದು. ಆ ಜನರು ತಮ್ಮ ಪ್ರಭುಗಳನ್ನೂ ನ್ಯಾಯಾಧಿಪತಿಗಳನ್ನೂ ಮುಖ್ಯಸ್ಥರನ್ನೂ ತಾವೇ ಆದು ನೇಮಿಸಿ ಕೊಳ್ಳುವರು. ಯುದ್ಧದಲ್ಲಿ ಜಯಶಾಲಿಗಳಾದವರನ್ನು ಮುಖ್ಯಸ್ಥರಾಗಿ ವಿರ್ಮಿಸುವ ಬಳಿಕೆ ಉಂಟು. ಯುದ್ಧರಂಗದಲ್ಲಿ ಶೌರ್ಯವಾಗಿ ಯುದ್ಧ ಮಾಡುವದೇ ಉತ್ತಮವಾದ ಪುಣ್ಯವೆಂದು ಎಣಿಸುವರು. ಸ್ತ್ರೀಯರು ಸಹ ತಮ್ಮ ಪುರುಷರಿಗೂ ಸಹೋದರರಿಗೂ ಸಹಾಯ ಮಾಡುವದಕ್ಕಾಗಿ ರಣರಂಗಕ್ಕೆ ಹೋಗುವರು.

ಅವರ ಮತವು ಮಹಾ ನೀಚವಾಗಿದ್ದಾಗ್ಯೂ ಅವರಿಗೆ ಒಂದು ವಿಧವಾದ ಮನೋಧೈರ್ಯವು ಅದರಿಂದ ಉಂಟಾಗುವದು. ಹ್ಯಾಗಂದರೆ, ಸತ್ತು ಹೋದ ವೀರರನ್ನೂ ಮಹಾ ಪುರುಷರನ್ನೂ ದೇವರುಗಳೆಂದು ಆರಾಧಿಸುವರು. ಪರದಲ್ಲಿ ಹಲಿವು ಬಗೆಯಾದ ಭೋಗಗಳನ್ನು ಅನುಭವಿಸಿ ಕೊಂಡು, ಆಟಪಾಟಗಳಿಂದ ಕಾಲ ಕಳೆದು, ಯಾವಾಗ್ಯೂ ಔತಣ ಉಂಡು, ಶತ್ರುಗಳ ಕಪಾಲಗಳನ್ನು ಪಾತ್ರೆಗಳಾಗಿ ಇಟ್ಟು ಕೊಂಡು, ಮದ್ಯಪಾನ ಕುಡಿದು ಮತ್ತರಾಗಿ ಉಲ್ಲಾಸಿಸುವದೇ ಪರಮ ಪದವಿ ಎಂದು ಎಣಿಸುವರು.

"ಕೊಳದ ಮೀನುಗಳು ಕೊಕ್ಕರೆಯ ಸಹಾಯ ಹುಡುಕಿದಂತೆ," ಈ ವಿಧವಾದ ಜನರನ್ನು ಬ್ರಿತಾನಿಯರು ತಮಗೆ ಸಹಾಯವಾಗಿ ಕರೇ ಕಳುಹಿಸಿದರು. (Vortigern) ವೋರ್ತಿಗೆರ್ನ್ ಎಂಬ ಒಬ್ಬ ಪ್ರಭುವು ಜರ್ಮನಿ

ದೇಶಕ್ಕೆ ಆಳನ್ನು ಕಳುಹಿಸಿ, ಕೀರ್ತಿ ಹೊಂದಿದ ಸಕ್ಸನ್ ಸೈನ್ಯದವರನ್ನು ಕರೇ ಕಳುಹಿಸಿದನು. ಹಾಗೆಯೇ (Hengist) ಹೆಂಜಿಸ್ತು (Horsa) ಹೊರ್ಸ ಎಂಬ ಮಹಾ ಶೌರ್ಯವುಳ್ಳ ಸಹೋದರರು ಬಂದರು. ಅವರ ಸಂಗಡ ದೊಡ್ಡ ಸೈನ್ಯವೂ ಬಂತು. ಆ ಕ್ರೂರರಾದ ಪಿಕ್ತರನ್ನೂ ಸ್ಕೋತರನ್ನೂ ಚದರ ಬಡಿದು, ಬ್ರಿತನ್ ದೇಶವೆಲ್ಲೆಲ್ಲಿಯೂ ಸ್ವಲ್ಪ ಕಾಲದೊಳಗೆ ಸಮಾಧಾನವನ್ನೂ ಶಾಂತಿಯನ್ನೂ ಉಂಟು ಮಾಡಿದರು. ಆದಾಗ್ಯೂ ಆ ಸಕ್ಸನರು ಆ ದೇಶವು ಬಹು ಫಲಭರಿತವಾದ ಒಳ್ಳೇ ದೇಶವೆಂಬುವದನ್ನೂ ಅದರ ಒಕ್ಕಲಿಗರು ಬಹು ಬಲಹೀನರೆಂಬುವದನ್ನೂ ಕಂಡು, ಇನ್ನು ಮೇಲೆ ಇಲ್ಲಿಯೇ ಆಳುವೆವೆಂದು ತೀರ್ಮಾನ ಮಾಡಿ, ತಮ್ಮ ಸ್ವದೇಶದಿಂದ ಇನ್ನು ಅನೇಕ ಬಲಿಷ್ಠರನ್ನು ಕರೆಸಿ, ಬ್ರಿತನ್ ದೇಶವನ್ನು ವಶಮಾಡಿ ಕೊಳ್ಳ ಯುದ್ಧ ಪ್ರಾರಂಭಿಸಿದರು. ಅದರಿಂದ "ಬೇಲಿಗೆ ಹಾಕಿದ ಜಾಲಿ ಕಾಲಿಗೆ ಮುಪ್ಪಾಯಿತು," ಎಂಬ ಗಾದೆಯ ಪ್ರಕಾರ ಅವರಿಗೆ ಸಂಭವಿಸಿತು.

ಈ ಪ್ರಕಾರ ಉಂಟಾದ ಯುದ್ಧದಲ್ಲಿ ಬ್ರಿತಾನಿಯರು ಸೋತು ಹೋದರು. ಹೊರ್ಸ ಎಂಬವನು ಯುದ್ಧದಲ್ಲಿ ಸತ್ತ ತರುವಾಯ ಅವನ ಸಹೋದರನಾದ ಹೆಂಜಿಸ್ತ್ ಎಂಬವನು ಎಷ್ಟು ಮಾತ್ರವೂ ಹಿಂತೆಗಿಯದೆ ಬ್ರಿತಾನಿಯರನ್ನು ಬೊಗ್ಗಿಸ ಪ್ರಯತ್ನ ಮಾಡುತ್ತಾ ಬಂದನು. ಯೂರೋಪಿನ ಉತ್ತರ ಭಾಗದಿಂದ ಅನೇಕ ದುಷ್ಟರು ಬಂದು ಕೂಡಿದರು. ಇವರು ನಾನಾ ಗೋತ್ರಗಳವರೂ ಕುಟುಂಬಗಳವರೂ ಆಗಿದ್ದಾಗ್ಯೂ ಎಲ್ಲರೂ ಒಂದೇ ಜಾತಿ. ಅವರೊಳಗೆ (Angli) ಅಂಗ್ಲರೂ* (Jutes) ಜೂತರೂ (Saxons) ಸಕ್ಸನರೂ ಇದ್ದರು. ಹೀಗೆ ಹೇರಾಳವಾದ ಜನವು ಬಂದಿದ್ದಾಗ್ಯೂ ಅವರು ಬ್ರಿತಾನಿಯರನ್ನು ಅಣಗಿಸುವದಕ್ಕೆ ಬಹಳ ಕಾಲ ಹಿಡಿಯಿತು. ಹ್ಯಾಗಂದರೆ ಯುದ್ಧ ಉಂಟಾದ ತರುವಾಯ ಆ ದ್ವೀಪದವರಿಗೆ ಪೂರ್ವದಲ್ಲಿದ್ದ ಗಂಡಸುತನವೂ ಧೈರ್ಯವೂ ಇನ್ನೊಂದು ಸಾರಿ ತಿರಿಗಿ ಉಂಟಾದದರಿಂದ ಬಹು ಪಟ್ಟಾಗಿ ಯುದ್ಧ ಮಾಡಿದರು.

---

*ಅಂಗ್ಲರು ಮತ್ತೊಬ್ಬರಿಗಿಂತ ಬಲಿಷ್ಠರಾದ್ದರಿಂದ ದೇಶಕ್ಕೆಲ್ಲಾ ಅಂಗ್ಲರ ದೇಶವೆಂದರ್ಥವುಳ್ಳ ಇಂಗ್ಲಾಂಡ್ ಎಂಬ ಹೆಸರು ಉಂಟಾಯಿತು.

## ಸಂಧಿ 1. ಸಪ್ತರಾಜ್ಯಗಳು.

ಕೆಲವು ವೇಳೆ ಇವರು ಮೇಲ್ಗೊಳ್ಳುವರು. ಕೆಲವು ವೇಳೆ ಅವರಿಗೆ ಜಯವಾಗುವದು. ಆದಾಗ್ಯೂ ಉಭಯ ಪಕ್ಷದವರಲ್ಲಿ ಯಾರೂ ಸದ್ಲವಾಗಲಿಲ್ಲ. ಆ ಕಾಲದಲ್ಲಿ (Arthur) ಆರ್ಥರ್ ಎಂಬ ಪ್ರಭುವು ಇದ್ದನು. ಆತನ ಕೀರ್ತಿ ಪ್ರತಾಪವು ಅನೇಕ ಚರಿತ್ರೆಗಳಿಂದಲೂ ಕಾವ್ಯಗಳಿಂದಲೂ ತೋರುತ್ತದೆ. ಇವನು ತೇರಿದ ವೀರನೂ ಸಾಮರ್ಥ್ಯವುಳ್ಳ ಸೈನ್ಯಾಧಿಪತಿಯೂ ಆಗಿದ್ದನು ಎಂಬುವದಕ್ಕೆ ಸಂದೇಹವಿಲ್ಲ. ಆದರೂ ಅವನು ಮಾಡಿದ ಅತಿಶಯಗಳನ್ನೂ ಅವನು ಕಟ್ಟಿ ಕೊಂಡ ರಾಜ್ಯಗಳನ್ನೂ ಕುರಿತು ಕವೀಶ್ವರರು ಹಾಡಿದ್ದೆಲ್ಲಾ ನಂಬ ತಕ್ಕದ್ದಲ್ಲ.

ಸಕ್ಸನರ ಅಧಿಕಾರವು ಬರ ಬರ ಬಲವಾದದರಿಂದ ನೂರ ಐವತ್ತು ವರುಷಗಳ ವರಿಗೂ ನಾನಾ ಸ್ಥಳಗಳಲ್ಲಿ ಯುದ್ಧ ಮಾಡಿ ಗುಲ್ಲು ಮಾಡಿದ ತರುವಾಯ ಸ್ವಲ್ಪ ಹೆಚ್ಚು ಕಡಿಮೆ ದೇಶವೆಲ್ಲಾ ಅವರ ವಶವಾಯಿತು. ಬ್ರಿತಾನಿಯರಲ್ಲಿ ಮುಖ್ಯವಾದವರು (Wales) ವೇಲ್ಸ್ ದೇಶದ ಬೆಟ್ಟಗಳಿಗೂ (Cornwall) ಕೊರ್ನ್ವಾಲ್ ಎಂಬ ನಾಡಿಗೂ ಓಡಿ ಹೋದರು. ಕೆಲವರು ಸಮುದ್ರವನ್ನು ದಾಟಿ ಅನ್ಯ ದೇಶಗಳಲ್ಲಿ ಒಕ್ಕಲುತನ ಮಾಡಿದರು. ಕೆಲವರು ತಮ್ಮ ಸ್ವಂತ ದೇಶದಲ್ಲಿಯೇ ಇದ್ದು ಸಕ್ಸನರೆಂಬ ಜಯವೀರರಿಗೆ ದಾಸರಾದರು.

ಈ ವಿಧವಾಗಿ ಆ ಕಾಲದಲ್ಲಿ ಸಕ್ಸನರು ಬ್ರಿತನ್ ದೇಶವೆಲ್ಲೆಲ್ಲಿಯೂ ಆಧಿಕ್ಯವನ್ನು ಹೊಂದಿ ಇದ್ದರು. ಆ ದೇಶವನ್ನು ಏಳು ರಾಜ್ಯಗಳಾಗಿ ವಿಭಾಗಿಸಿ, ಒಂದೊಂದು ರಾಜ್ಯದಲ್ಲಿಯೂ ಅದಕ್ಕೆ ತಕ್ಕ ಅರಸನನ್ನು ನೇಮಿಸಿ ಇಟ್ಟರು. ಈ ಅರಸುಗಳು ಒಂದೇ ವಂಶದವರಾಗಿದ್ದಾಗ್ಯೂ ಎಡೆಬಿಡದೆ ಒಬ್ಬರಿಗೊಬ್ಬರು ಜಗಳ ಮಾಡುತ್ತಾ ಬಂದರು. ಯಾಕಂದರೆ ಯುದ್ಧ ಮಾಡುವದೇ ಅವರ ಕೆಲಸವಾದದರಿಂದ, ಎದುರಾಳಿಗಳಾದ ಅನ್ಯರನ್ನು ಅಣಗಿಸಿದ ತರುವಾಯ ತಮ್ಮೊಳಗೆ ಯುದ್ಧ ಮಾಡುವದಕ್ಕಿಂತ ಅವರಿಗೆ ಬೇರೆ ಸಂತೋಷವಿಲ್ಲ. ಆದದರಿಂದ (Heptarchy) ಸಪ್ತರಾಜ್ಯ ಎಂಬ ಏಳು ಅರಸುಗಳ ಚರಿತ್ರೆಯನ್ನು ಓದಿ ನೋಡಿದರೆ ಈ ಯುದ್ಧಗಳ ವಿಷಯವಾದ ವಿವರವೇ ಹೊರ್ತು ಸಂತೋಷ ಉಂಟು ಮಾಡ ತಕ್ಕ ಉಪಯೋಗವಾದ ವಿಶೇಷಗಳಿಲ್ಲ. ಈ ರಾಜ್ಯಗಳ ಉತ್ತರ ಕಡೆ

ಯಲ್ಲಿರುವ (Northumbria) ನೊರ್ತಂಬ್ರಿಯ ಎಂಬುವದೂ, ದೇಶದ ಮಧ್ಯದಲ್ಲಿರುವ (Mercia) ಮೆರ್ಸಿಯ ಎಂಬುವದೂ, ದಕ್ಷಿಣ ಕಡೆಯಲ್ಲಿರುವ (Wessex) ವೆಸ್ಸೆಕ್ಸ್ ಎಂಬುವದೂ ಮುಖ್ಯವಾದವುಗಳು. (East Anglia) ಪೂರ್ವದ ಅಂಗ್ಲಿಯ (Essex) ಎಸ್ಸೆಕ್ಸ್ (Kent) ಕೆನ್ತ್ (Sussex) ಸಸ್ಸೆಕ್ಸ್ ಎಂಬ ಸೀಮೆಗಳು ಮಿಕ್ಕಾದವುಗಳಿಗಿಂತ ಸಣ್ಣವುಗಳು. ಇವು ಆ ದ್ವೀಪದ ಪೂರ್ವ ಕಡೆಯಲ್ಲಿಯೂ ಉತ್ತರ ಕಡೆಯಲ್ಲಿಯೂ ಇರುವಂಥವುಗಳು.

ಆಗಾಗ್ಯೆ ಉಂಟಾಗುವ ಯುದ್ಧಗಳೊಳಗೆ ಆ ಸಕ್ಸನರ ಅರಸರಲ್ಲಿ ಆಯಾ ವೇಳೆಗಳಲ್ಲಿ ಯಾವನು ನೆರೆಯ ಅರಸರನ್ನು ಜಯಿಸುವನೋ ಅವನಿಗೆ ಶ್ರೇಷ್ಠಾಧಿಕ್ಯ ಉಂಟಾಗುವದು. ಈ ಶ್ರೇಷ್ಠತ್ವ ಪಿತುರಾರ್ಜಿತವಾಗಿ ಕೊಡಲ್ಪಡದೆ ಯುದ್ಧದಲ್ಲಿ ಜಯ ಹೊಂದಿದವನಿಗೆ ಮಾತ್ರ ಕೊಡಲ್ಪಡುವದು. ಈ ಪ್ರಕಾರ ಶ್ರೇಷ್ಠತ್ವ ಹೊಂದಿದವನನ್ನು (Bretwalda) ಬ್ರೆತ್‌ವಾಲ್ಡ ಎಂದು ಕರೆಯುವರು.

ಕ್ರಿಸ್ತನ ತರುವಾಯ 827 (A. D. 827) ವರುಷದಲ್ಲಿ ವೆಸ್ಸೆಕ್ಸ್ ರಾಜ್ಯವನ್ನು ಆಳಿದ (Egbert) ಎಗ್ಬರ್ತ್ ಎಂಬವನು ಮಿಕ್ಕಾದ ಅರಸರನ್ನೆಲ್ಲಾ ಜಯಿಸಿ, ಏಳು ರಾಜ್ಯಗಳನ್ನು ಒಂದಾಗಿ ಶೇರಿಸಿ, ಆ ಸೀಮೆಗಳನ್ನೆಲ್ಲಾ ಆಳುತ್ತಾ ಬಂದನು. ಆದಾಗ್ಯೂ ಆ ದೇಶಗಳಲೆಲ್ಲಾ ಆ ಮೇಲೆ ಒಂದಾಗಿ ಜೋಡಿಸಲ್ಪಟ್ಟ ಪ್ರಕಾರ ಇವನ ಕಾಲದಲ್ಲಿ ಅಷ್ಟು ಚನ್ನಾಗಿ ಜೋಡಿಸಲ್ಪಡಲಿಲ್ಲ. ಇವನೂ ಇವನ ತರುವಾಯ ಆಳಿದ ಐದು ಮಂದಿ ಅರಸರೂ ಪಶ್ಚಿಮ ಸಕ್ಸನರ ಅರಸರೆಂದು ಹೇಳಲ್ಪಡುವರೇ ಹೊರ್ತು ಅವರಿಗೆ ಬೇರೆ ಪಟ್ಟದ ಹೆಸರು ಇಲ್ಲ.

ಸಕ್ಸನರು ಆ ದೇಶವನ್ನು ಜಯಿಸಿದ್ದರಿಂದ ಮುಂಚೆ ಇದ್ದ ದುಷ್ಟತನವು ತಿರಿಗಿ ಬಂತು. ಓಡಿ ಹೋಗಿ ಬೆಟ್ಟಗಳಲ್ಲಿ ಬಚ್ಚಿಟ್ಟು ಕೊಂಡಿದ್ದ ಬ್ರಿತಾನಿಯರಿಗೇ ಹೊರ್ತು ಅಲ್ಲಿ ಮತ್ತೊಬ್ಬರಿಗೂ ಕ್ರಿಸ್ತನ ಮಾರ್ಗದ ಉಪದೇಶವೇನೂ ತಿಳಿಯಲಿಲ್ಲ. ನಿಜವಾದ ಬೆಳಕು ಮರೆಯಾಗಲು, ದೇಶವೆಲ್ಲಾ ಅಜ್ಞಾನಾಂಧಕಾರವು ಮುಚ್ಚಿ ಕೊಂಡಿತ್ತು. ಹೀಗಿರಲಾಗಿ ಆರನೇ ಶತಸಂವತ್ಸರಗಳ ಕಡೆಯಲ್ಲಿ ಕೆಲವು ದೇವಚಕ್ತರು ಪಾಪದಿಂದ

ಕೆಟ್ಟು ಹೋದ ಮನುಷ್ಯರನ್ನು ಕರುಣಿಸಿ, ಪ್ರೀತಿಯಿಂದಲೂ ಕರುಣೆಯಿಂದಲೂ ಚರಿತರಾಗಿ, ಇಂಗ್ಲಾಂದ್ ದೇಶಕ್ಕೆ ಬಂದು ಶೇರಿದರು. ಇವರಲ್ಲಿ ಮುಖ್ಯಸ್ಥನಿಗೆ (Augustine) ಔಗುಸ್ತೀನನೆಂಬ ಹೆಸರು. ಇವರನ್ನು ರೋಮು ಪಟ್ಣದಲ್ಲಿದ್ದ (Bishop) ಅಧ್ಯಕ್ಷನೆಂಬ ಶ್ರೇಷ್ಠ ಗುರುವಾದ (Gregory the Great) ಮಹಾ ಗ್ರೆಗೊರಿ ಎಂಬವನು ಅಲ್ಲಿಗೆ ಕಳುಹಿಸಿದನು. ಹೀಗೆ ಕಳುಹಿಸುವದಕ್ಕೆ ಕಾರಣವೇನಂದರೆ, ತಾನಿದ್ದ ಪಟ್ಣದಲ್ಲಿ ಒಂದು ದಿವಸ ಹೊಂಬಣ್ಣದ ತಲೆಗೂದಲುಳ್ಳ ಕೆಲ ಹುಡುಗರನ್ನು ಸಂತೆಯಲ್ಲಿ ಕಂಡನು. ಅವನು ಇವರು ಯಾರು ಎಂದು ಕೇಳಲು, ಮಾರುವದಕ್ಕಾಗಿ ತರಲ್ಪಟ್ಟ ಶೆರೆಯವರೆಂದು, ಹೇಳಿದರು. ಆಗಲವನು ಇವರ ಕಷ್ಟವಾದ ಸ್ಥಿತಿಯನ್ನು ಕಂಡು, ಕರುಣೆ ಪಟ್ಟು, ನೀವು ಯಾವ ದೇಶದವರೆಂದು ಕೇಳಿದನು. ಅದಕ್ಕವರು, ನಾವು ಅಂಗ್ಲರು, ಅಂದರು. ಅಂಗ್ಲರು ಅಂದರೆ, ರೋಮಾಯ ಭಾಷೆಯಲ್ಲಿ ದೇವದೂತರು ಎಂಬ ಅರ್ಥವುಂಟು. ಆದ ಕಾರಣ ಆತನು ಕಿರುನಗೆಯಿಂದ ಇವರ ಸೌಂದರ್ಯವಾದ ರೂಪವನ್ನೂ ಮುಖಗಳನ್ನೂ ನೋಡಿದರೆ ಅಂಗ್ಲರೆಂಬ ಹೆಸರು ಇವರಿಗೆ ತಕ್ಕದ್ದಾಗಿದೆ. ಕೃಪಾಳುವಾದ ಯೇಸುವಿನ ಪರಿಶುದ್ಧ ಹೆಸರನ್ನು ಇವರು ಅರಿತಿದ್ದರೆ ನಿಶ್ಚಯವಾಗಿ ಅಂಗ್ಲರೆಂಬ ದೇವದೂತರು ಆಗಲಾರರೋ? ಎಂದು ಸ್ವಲ್ಪ ಹೊತ್ತು ಚಿಂತೆ ಮಾಡಿದನು. ಆ ತರುವಾಯ ಅವನು ಈ ಸಂಗತಿಯನ್ನು ಮರೆತು ಬಿಡಲಿಲ್ಲ. ಆ ಬಾಲಕರ ದೇಶವಾದ ಇಂಗ್ಲಾಂದಿನಲ್ಲಿ ವಾಸ ಮಾಡುವ ಜನರಿಗೆ ಸುವಾರ್ತೆಯನ್ನು ತಿಳಿಸುವದಕ್ಕೋಸ್ಕರ ಮುಂಚೆ ಹೇಳಿದ ದೇವಭಕ್ತರನ್ನು ಕಳುಹಿಸುವ ಮಟ್ಟಿಗೂ ಅವನಿಗೆ ಒಂದು ದಿನವಾದರೂ ಮನಸ್ಸಂತೋಷವಿರಲಿಲ್ಲ.

ಔಗುಸ್ತೀನನೂ ಅವನ ಜತೆಯವರೂ ಮೊದಲು (Kent) ಕೆನ್ತ್ ಎಂಬ ಶೀಮೆಗೆ ಬಂದರು. ಯಾಕಂದರೆ ಆ ಶೀಮೆಯ ಅರಸನು ಕ್ರಿಸ್ತಿಯಳಾದ ಅರಸಿಯನ್ನು ಮದುವೆ ಮಾಡಿ ಕೊಂಡಿದ್ದನು. (Ethelbert) ಎತೆಲ್‌ಬರ್ತ್ ಎಂಬ ಆ ಅರಸನು ಅವರನ್ನು ಬಹು ಪಕ್ಷವಾಗಿ ಪರಾಮರಿಸಿ, ತನ್ನ ರಾಜಧಾನಿಯಾದ (Canterbury) ಕಾಂತರ್‌ಬರಿ ಎಂಬುವ ಪಟ್ಣದಲ್ಲಿ ಅವರಿಗೋಸ್ಕರ ಗುಡಿಯನ್ನೂ ಮನೆಯನ್ನೂ ಕಟ್ಟಿಸಿ ಕೊಟ್ಟು,

ತರುವಾಯ ತಾನು ಸಹ ಕ್ರಿಸ್ತನ ಮಾರ್ಗದಲ್ಲಿ ಶೇರಿದನು. ಹೀಗೆ ಕ್ರಿಸ್ತಮಾರ್ಗವೆಂಬ ಸೂರ್ಯನು ಮತ್ತೂ ಆ ಸ್ಥಳದಲ್ಲಿ ಮೂಡಿದ್ದರಿಂದ ಆ ದೇಶದಲ್ಲೆಲ್ಲಾ ಮುಚ್ಚಿ ಇದ್ದ ಗಾಡಾಂಧಕಾರವು ನಿವರ್ತಿಯಾಗಲಾಗಿ, ಮಹಿಮೆಯುಳ್ಳ ಪರಂಜ್ಯೋತಿಯು ಎಲ್ಲಾ ದಿಕ್ಕುಗಳಲ್ಲಿಯೂ ಪ್ರಕಾಶಿಸಿತು. ಆ ದೇಶದವರಿಗೆ ಈ ದೊಡ್ಡ ಉಪಕಾರವನ್ನು ಮಾಡಿದ ದೇವಭಕ್ತರಾದ ಔಗುಸ್ತೀನನು ಮೊದಲಾದವರು ಕೆಲವು ವಿಷಯಗಳಲ್ಲಿ ತಪ್ಪಾದ ಅಭಿಪ್ರಾಯವುಳ್ಳವರಾಗಿದ್ದರಂತೆ. ಮತ್ತು ಮುಂಚೆ ಕ್ರಿಸ್ತಿಯರಾಗಿದ್ದ ಬ್ರಿತಾನಿಯರಲ್ಲಿ ಕೆಲವರಿಗೆ ಸ್ವಲ್ಪ ಅನ್ಯಾಯ ಮಾಡಿದ್ದರಂತೆ. ಆದಾಗ್ಯೂ ಅವರನ್ನು ಉತ್ತಮರೆಂದೂ ಶುದ್ಧ ದೇವಭಕ್ತರೆಂದೂ ಮನೋಆಯಾಸವಿಲ್ಲದೆ ಕಷ್ಟ ಮಾಡಿದವರೆಂದೂ ಹೇಳ ಬೇಕು. "ಮೇಲು ಮರಿಯುವದು ಮೇಲಲ್ಲ; ಮೇಲಲ್ಲಿದ್ದನ್ನು ಆಗಲೇ ಮರಿಯುವದೇ ಮೇಲು," ಎಂಬ ವಾಕ್ಯದ ಪ್ರಕಾರ ಅವರಿಂದ ಇಂಗ್ಲಾಂದ್ ದೇಶದವರಿಗುಂಟಾದ ಬಹಳ ಉಪಕಾರಗಳನ್ನು ಜ್ಞಾಪಕ ಮಾಡಿ ಕೊಂಡು, ಇಂಗ್ಲಾಂದ್ ದೇಶದವರು ಅವರ ಹೆಸರನ್ನು ಯಾವಾಗಲೂ ಪ್ರೀತಿಯಿಂದಲೂ ಕೃತಜ್ಞತೆಯಿಂದಲೂ ಕೊಂಡಾಡ ತಕ್ಕದ್ದು.



# CHAPTER II.

## THE SAXON MONARCHY FROM ITS COMMENCEMENT UNDER EGBERT TO THE HEIGHT OF ITS POWER UNDER EDGAR.

FROM A. D. 827 TO A. D. 975.

## 2 ಸಂಧಿ.

## ಸಕ್ಸನರ ಧೊರೆತನವು, ಎಗ್ಬರ್ತನ ಕೈಕೆಳಗೆ ಅದರ ಆದಿ ಮೊದಲ್ಗೊಂಡು ಎಡ್ಗರನ ಕೈಕೆಳಗೆ ಅದರ ಪೂರ್ಣಾಭಿವೃದ್ಧಿಯ ಮಟ್ಟಿಗೂ.

ಕ್ರಿ. ಶ. 827 ಮೊದಲು ಕ್ರಿ. ಶ. 975 ವರೆಗೂ.

ಮುಖ್ಯ ತಾರೀಖುಗಳು: (Egbert) ಎಗ್ಬರ್ತನ ಧೊರೆತನದ ಮೊದಲು ಕ್ರಿ. ಶ. 827. (Ethelwolf) ಎತೆಲ್ವೊಲ್ಫ್ ಕ್ರಿ. ಶ. 837. (Ethelbald) ಎತೆಲ್ಬಾಲ್ಡ್ ಕ್ರಿ. ಶ. 857. (Ethelbert) ಎತೆಲ್ಬೆರ್ತ್ ಕ್ರಿ. ಶ. 860. (Ethelred I.) ಮೊದಲನೇ ಎತೆಲ್‌ರೆಡ್ ಕ್ರಿ. ಶ. 866. (Alfred the Great) ದೊಡ್ಡ ಆಲ್ಫ್ರೆಡ್ ಹುಟ್ಟಿದ್ದು ಕ್ರಿ. ಶ. 849. ಅರಸನಾದದ್ದು ಕ್ರಿ. ಶ. 871. ತೀರಿ ಹೋದದ್ದು ಕ್ರಿ. ಶ. 901. (Edward I.) ಮೊದಲನೇ ಎಡ್ವಾರ್ಡ್ ಅರಸನಾದದ್ದು ಕ್ರಿ. ಶ. 901. (Ethelstan) ಅಥೆಲ್ಸ್ತನ್ ಕ್ರಿ. ಶ. 925. (Edmund) ಎಡ್ಮುಂಡ್ ಕ್ರಿ. ಶ. 940. (Edred) ಎಡ್ರೆಡ್ ಕ್ರಿ. ಶ. 947. (Edwy) ಎಡ್ವಿ ಕ್ರಿ. ಶ. 955. (Edgar) ಎಡ್ಗರ್ ಕ್ರಿ. ಶ. 959. ತೀರಿ ಹೋದದ್ದು. ಕ್ರಿ. ಶ. 975. ಅದೇ ಕಾಲದ ಇಂದ್ಯ ಚರಿತ್ರೆ: ಪುರಾಣ ಕಾಲ. ಮಹಂಮದಿನವರು ಸಿಂಧು ದೇಶವನ್ನು ವಶ ಮಾಡಿದ್ದು ಕ್ರಿ. ಶ. 711. ಶ್ರೇಷ್ಠ ನಾಮಗಳು: ಸನ್ಯಾಸಿಚರಿತ್ರೆಗಾರನಾದ (Asser) ಅಸ್ಸೆರ್ ಕ್ರಿ. ಶ. 837—909. ಈತನ ಆಲೋಚನೆಯಿಂದ ಅರಸನಾದ (Alfred) ಆಲ್ಫ್ರೆಡ್ (Oxford) ಒಕ್ಸ್‌ಫೋರ್ಡ್ ವಿದ್ಯಾಶಾಲೆಯನ್ನು ಸ್ಥಾಪಿಸಿದನು ಕ್ರಿ. ಶ. 886.

ತರುವಾಯ ಅಂಗ್ಲೋಸಕ್ಸನರು ಎಲ್ಲರೂ ಒಬ್ಬ ಅರಸನಿಗೆ ಒಳ ಪಟ್ಟು, ಒಂದೇ ರಾಜ್ಯವಾಗಿ ಹೊಂದಿಕೆಯಾಗಿದ್ದರು. ಅವರು ಸಮಾಧಾನವಾಗಿ ಐಕ್ಯವಾಗಿದ್ದದರಿಂದ ಎಲ್ಲರಿಗೂ ಬಹಳ ಸೌಖ್ಯ ಉಂಟಾಗುವ

ದಕ್ಕೆ ಅನುಕೂಲವಿರಲಾಗಿ ಉತ್ತರ ದೇಶದಿಂದ ಬಂದ (Danes) ದೇನಿಯರು ಅವರನ್ನು ಶ್ರಮೆ ಪಡಿಸುವ ಉದ್ದಿಶ್ಯ ಆಗಾಗ್ಗೆ ದಂಡೆತ್ತಿ ಕೊಂಡು ಬರಲು ಅಧಿಕ ಉಪದ್ರ ಸಂಭವಿಸಿತು. ಈ ದೇನಿಯರು ಆದಿಯಲ್ಲಿ ಸಕ್ಸನರಿಗೆ ಬಂಧುಗಳು. ಇವರಂತೆ ಅವರೂ ಯುದ್ಧವೀರರು. ಸಕ್ಸನರು ಮೊದಲು ಬ್ರಿತನ್ ದೇಶಕ್ಕೆ ಬಂದಾಗ ಎಂಥವರಾಗಿದ್ದರೋ, ಈಗ ಬಂದ ದೇನಿಯರು ಸಹ ಹೆಚ್ಚು ಕಡಿಮೆ ಅಂಥವರೇ. ಆದದರಿಂದ "ಮುಂದು ಪರರಿಗೆ ಮಾಡಿದ ಅಪಕಾರ ಹಿಂದೆ ತಮಗೆ ಪ್ರಾಪ್ತಿಸಿತು" ಎಂಬ ವಾಕ್ಯದಂತೆ ಬ್ರಿತಾನಿಯರಿಗೆ ಮೊದಲು ದ್ರೋಹ ಮಾಡಿದ ಸಕ್ಸನರಿಗೆ ಇಕ್ಕಟ್ಟು ಪ್ರಾಪ್ತಿಯಾಯಿತು.

ಈ ದೇನಿಯರು ಪೂರ್ವಕಾಲದಲ್ಲಿ ಜರ್ಮನಿ ದೇಶದಲ್ಲಿ ಧೊರೆತನ ಮಾಡಿದ ಮಹಾ ಬಲಿಷ್ಠನಾದ (Charlemagne) ಚಾರ್ಲಮಾನ್ ಎಂಬ ಅರಸನಿಗೆ ಜಯ ಪಟ್ಟು, ವಲಸೆಯಾಗಿ ಉತ್ತರ ದೇಶಕ್ಕೆ ಹೋಗಿ, ಅಲ್ಲಿ ಒಕ್ಕಲುತನ ಮಾಡಿದರು. ಆ ಉತ್ತರ ಶೀಮೆಯಲ್ಲಿ ತಮ್ಮಂಥಾ ಅನೇಕ ದುಷ್ಟರನ್ನು ಶೇರಿಸಿ ಕೊಂಡು, ಅಧಿಕ ವೇಗವಾದ ಯುದ್ಧ ಹಡಗಗಳಲ್ಲಿ ಹತ್ತಿ ಕೊಂಡು, ಎಲ್ಲಾ ದೇಶಸ್ಥರನ್ನು ಹಗೆ ಮಾಡಿ ಕೊಂಡು, ಅವರ ಶೀರದ ರೇವುಗಳಲ್ಲಿ ಇಳಿದು, ಅವರ ಪಟ್ಣಗಳನ್ನು ಸುಟ್ಟು ನಾಶ ಮಾಡಿ ಕೊಳ್ಳೆ ಇಡುತ್ತಾ ಬರುವರು. ಇವರ ಮುಖ್ಯಸ್ಥರಿಗೆ "ಕಡಲಿನ ಅರಸರು" ಎಂದು ಹೆಸರು. ಇವರು ಆಗ್ಯಾಗ್ಯೆ ಇಂಗ್ಲಾಂದ್ ದೇಶದ ಶೀರಗಳಲ್ಲಿ ಬರುತ್ತಾ ಇದ್ದಾಗ್ಯೂ ದೊಡ್ಡ ಸೈನ್ಯಗಳ ಸಂಗಡ ಬರಲಿಲ್ಲ. ಅವರು ಕಾರ್ಮೇಘದಲ್ಲಿ ತೋರಿ ಮರೆಯಾಗುವ ಮಿಂಚಿನಂತೆ ಫಕ್ಕನೆ ಬಂದು ಫಕ್ಕನೆ ಹೋಗಿ ಬಿಡುವರು. ಆದರೂ ಅವರು ಹೀಗೆ ಬರುವ ಸಮಯಗಳಲ್ಲಿ ಎಲ್ಲಾ ವಿಧ ಕೇಡುಗಳನ್ನು ಮಾಡುವದರಿಂದ ಆ ದೇಶದಲ್ಲೆಲ್ಲಾ ಬಹಳ ದಿಗುಲು ಉಂಟಾಗುವದು. ಅವರು ಕರುಣೆ ಇಲ್ಲದ ಮೂರ್ಖರಾದ ವಿಗ್ರಹಾರಾಧಕರಾಗಿದ್ದದರಿಂದ ಕ್ರಿಸ್ತಮಾರ್ಗವೆಂಬ ಹೆಸರು ಸಹ ಅವರಿಗೆ ಅಸಹ್ಯವಾಗಿರುವದು. ಯುದ್ಧ ಮಾಡಿ ಕೊಳ್ಳೆ ಬಡಿಯುವದು ಅವರಿಗೆ ವಿಹಿತವಾದ ಕೆಲಸವಾಗಿತ್ತು.

(Egbert) ಎಗ್ಬರ್ತ್ ಎಂಬ ಅರಸನು ಆಳಿದ ಕಾಲವೆಲ್ಲಾ ಈ ದೇ

ನಿಯರನ್ನು ಅವನು ಬಹು ಧೈರ್ಯದಿಂದಲೂ ಬಲದಿಂದಲೂ ಎದುರಿಸು ತ್ತಾ ಬಂದನು. ದೇನಿಯರು ಒಂದು ಕಾಲದಲ್ಲಿ (Cornwall) ಕೊರ್ನ್‌ವಾಲ್ ನಾಡಿನಲ್ಲಿ ಇದ್ದ ಬ್ರಿತಾನಿಯರ ಸಂಗಡ ಶೇರಿ ಕೊಂಡು, (Devonshire) ದೆವನ್‌ಷೀರ್ ನಾಡಿನಲ್ಲಿ ದಂಡೆತ್ತಿ ಕೊಂಡು ಬರುವಾಗ, ಆ ಅರಸನು ಅವರಿಗೆ ಎದುರಾಗಿ ಹೋಗಿ, ಅವರನ್ನು ಬಹು ತ್ವರೆಯಾಗಿ ಹಿಂಜರಿದು ಹೋಗ ಮಾಡಿದನು.

ಆ ಕಾಲದಲ್ಲಿ ಇಂಗ್ಲಾಂದ್ ದೇಶದವರಿಗೆ ಎಡೆ ಬಿಡದ ಜಗಳವೂ ಮನೋಚಿಂತೆಯೂ ಉಂಟಾಗಿತ್ತು. ಮತ್ತು ಕ್ರೂರರಾದ ಕಡಲರಸರ ಪತಸ್ತಂಭಗಳ ಕೊನೆಯಲ್ಲಿ ಹಾರುವ ಬಿರುದಿನ ಪತಗಳು ಯಾವಾಗ ಕಾಣಲ್ಪಡುವವೋ ಎಂದು ಆ ಜನರು ಸಮುದ್ರತೀರದಲ್ಲಿ ಭಯದಿಂದ ಕಾದಿರುವ ಕಾಲದಲ್ಲಿ, ಮಧ್ಯರಾತ್ರಿಯಲ್ಲಿ ಮಧ್ಯಕಾಡಿನಲ್ಲಿ ನಡಿಯುವವನು ಹಿಡಿದಿದ್ದ ದೀವಟಿಗೆ ಆರಿ ಹೋದ ಪ್ರಕಾರ, ಅವರು ನಂಬಿ ಇದ್ದ ಎಗ್ಬರ್ತ್ ಅರಸನು ಸತ್ತು ಹೋದನು. ತರುವಾಯ ಆತನ ಮಗನಾದ (Ethelwolf) ಎತೆಲ್‌ವೊಲ್ಫ್ ಎಂಬವನು ಪಟ್ಟಕ್ಕೆ ಬಂದನು. ಇವನು ಶೌರ್ಯವಿಲ್ಲದ ಶಾಂತ ಸ್ವಭಾವವುಳ್ಳವನಾಗಿದ್ದದರಿಂದ, "ಅರಸನ ನಿದ್ರೆ ಪ್ರಜೆಗುಪದ್ರ," ಎಂಬ ಗಾದೆಯ ಪ್ರಕಾರ, ಅವನ ಕಾಲದಲ್ಲಿ ಜನರಿಗೆ ನಾನಾ ಉಪದ್ರಗಳು ಸಂಭವಿಸಿದವು. ದೇನಿಯರು ನಾರ್ಕಿನಾರ್ಕಿಗೂ ದಂಡೆತ್ತಿ ಕೊಂಡು ಬರುವಾಗ, ಇಂಗ್ಲಾಂದ್ ದೇಶದವರು ಮುಂಚಿನ ಹಾಗೆ ಧೈರ್ಯವಾಗಿ ಎದುರಿಸಲಾರರೆಂದು ಕಂಡು, "ಇನ್ನು ಭಯವೇನು? ಈ ದ್ವೀಪದಲ್ಲಿ ನಿವಾಸಿಸ ಬಹುದೆಂದು," ಅಂದು ಕೊಂಡು, (Kent) ಕೆನ್ತ್ ನಾಡಿನ ಉತ್ತರ ಪೂರ್ವ ಥಡದ ಅಂಚಿನಲ್ಲಿ ಇರುವ (Thannet) ತಾನೆತ್ ದ್ವೀಪದಲ್ಲಿ ಮಳೆಗಾಲಕ್ಕೆ ತಕ್ಕ ಮನೆಗಳನ್ನು ಕಟ್ಟಿದರು. ಆ ಮೇಲೆ ಇಪ್ಪತ್ತು ವರುಷಗಳ ಮಟ್ಟಿಗೂ ದೇನಿಯರ ಲೆಖ್ಖವೂ ಧೈರ್ಯವೂ ಬಲವೂ ದಿನದಿನಕ್ಕೆ ಹೆಚ್ಚಿದವು. ಸಕ್ಸನರು ಅನೇಕ ಸಾರಿ ಅವರನ್ನು ಮುರಿಯ ಬಡಿದಿದ್ದಾಗ್ಯೂ ಅವರು ಬರಬರ ದೇಶವೆಲ್ಲಾ ಹರಡಿ ಕೊಂಡು, ಸಿಕ್ಕಿದ ಜನರನ್ನು ಕೊಂದು ಹಾಕಿ, ದೇಶವನ್ನು ಹಾಳು ಮಾಡಿ ಬಿಟ್ಟರು. ಒಂದು ದಿವಸ ಯುದ್ಧದಲ್ಲಿ ಅವರಲ್ಲಿ ಅನೇಕರು ಬಿ

ದ್ದು ಹೋದಾಗ್ಯೂ, ನೊಣಗಳು ಮುತ್ತಿ ಕೊಂಡು ಬರುವಂತೆ, ಆ ಚಂಡಾಲರು ಮಾರಣೆ ದಿವಸದಲ್ಲಿ ಗುಂಪುಗುಂಪುಗಳಾಗಿ ಹಡಗಗಳಿಂದ ಇಳಿದು ಬರುವರು. ಅದರಿಂದ (Ethelwolf) ಎತೆಲ್‌ವೊಲ್ಫ್ ಅರಸನು ಸಾಯಲಾಗಿ ಆತನ ಕುಮಾರರಾದ (Ethelbald) ಎತೆಲ್‌ಬಾಲ್ಡ್ (Ethelbert) ಎತೆಲ್‌ಬೆರ್ಟ್ (Ethelred) ಎತೆಲ್‌ರೆದ್ ಎಂಬ ಮೂವರೂ ವರಿಶೆಯಾಗಿ ಆಳಿದ ತರುವಾಯ ಅವರ ಚಿಕ್ಕ ಸಹೋದರನಾದ (Alfred) ಆಲ್ಫ್ರೆದ್ ಪಟ್ಟಕ್ಕೆ ಬರುವಾಗ್ಯೆ (Wessex) ವೆಸ್ಸೆಕ್ಸ್ ನಾಡಿನವರು ಹೊರ್ತು ಮಿಕ್ಕಾದವರೆಲ್ಲರೂ ದೇನಿಯರಿಗೆ ವಶವಾಗಿದ್ದರು. ಆಲ್ಫ್ರೆದ್ ಎಂಬವನು, "ವಿದ್ಯಾದದಾತಿ ವಿನಯಂ | ವಿನಯಾದ್ ಯಾತಿ ಪಾತ್ರತಾಂ | ಪಾತ್ರತ್ವಾದ್ ಧನಮ್ ಆಪ್ನೋತಿ | ಧನಾದ್ ಧರ್ಮ ತತಃಸುಖಂ" || ಎಂಬ ಶ್ಲೋಕದಂತೆ, ವಿದ್ಯದ ಮೇಲೆ ಬಹು ಪ್ರೀತಿಯುಳ್ಳವನಾಗಿದ್ದದರಿಂದ ತನಗೆ ಆ ರಾಜ್ಯವು ಅವಶ್ಯವಿಲ್ಲವೆಂದು ಹೇಳಿ ಬಿಟ್ಟನು. ಆದಾಗ್ಯೂ ತನ್ನ ದೇಶದವರಿಗೆ ಬಹು ಅವಸರ ಉಂಟಾದ ಕಾಲದಲ್ಲಿ ಅವರಿಗೆ ಸಹಾಯ ಮಾಡ ಬೇಕೆಂಬುವ ತಾತ್ಪರ್ಯದಿಂದ, ಜನರೆಲ್ಲರು ಕೇಳಿ ಕೊಂಡ ಪ್ರಕಾರ ತನ್ನ ಸಹೋದರನಾದ ಎತೆಲ್‌ಬೆರ್ಟ್ ಎಂಬವನ ಬಾಲ್ಯನಾದ ಮಗನಿಗೆ ಬದಲಾಗಿ ರಾಜ್ಯಭಾರ ಮಾಡ ಅಪರೂಪವಾಗಿ ಸಮ್ಮತಿಸಿದನು. ಅವನು ಸಿಂಹಾಸನದಲ್ಲಿ ಕುಳಿತಾಗಲೇ ಮೇಲೆ ಹೇಳಿದ ಶತ್ರುಗಳನ್ನು ಹೊರಡಿಸಿ ಬಿಡುವದಕ್ಕೆ ಬೇಕಾದ ಪ್ರಯತ್ನಗಳನ್ನು ಮಾಡ ಪ್ರಾರಂಭಿಸಿದನು. ಮೊದಲಲ್ಲಿ ಅವನ ಪ್ರಯತ್ನವು ಸಿದ್ಧಿಸಿತು. ದೇನಿಯರು ತಾವು ಆ ದೇಶದ ಉತ್ತರ ಕಡೆಯಲ್ಲಿ ಮಾತ್ರ ಆಳುವೆವೆಂದೂ, ದಕ್ಷಿಣ ಭಾಗದಲ್ಲಿ ಪ್ರವೇಶಿಸುವದೇ ಇಲ್ಲವೆಂದೂ ದೃಢವಾದ ಒಡಂಬಡಿಕೆಯನ್ನು ಮಾಡುವಂತೆ ಅವರನ್ನು ಬಲವಂತ ಮಾಡಿದನು.

ಆದಾಗ್ಯೂ ಸ್ವಲ್ಪ ಕಾಲದೊಳಗೆ ಆ ದೇನಿಯರು ಮಾಡಿದ ಒಡಂಬಡಿಕೆಯನ್ನು ಮೀರಿ, ಆಲ್ಫ್ರೆದ್ ಅರಸನನ್ನೂ ಅವನ ಪ್ರಜೆಗಳನ್ನೂ ತಿರಿಗಿ ಉಪದ್ರ ಪಡಿಸ ಪ್ರಾರಂಭಿಸಿದರು. ಮತ್ತು ಆ ಅರಸನು ಎಲ್ಲಾ ಸಮಾಧಾನ ಸೌಖ್ಯವಾಗಿರುವ ಕಾಲದಲ್ಲಿ ತಾನೇ ಗರ್ವ ಪಟ್ಟು, ಸ್ವಂತ ಆಧೀಕವನ್ನು ಹುಡುಕಿದನು. ಪಕ್ಷಪಾತವಿಲ್ಲದಂಥ ನೀತಿನ್ಯಾಯ ತಪ್ಪದಂ

ಥ ರಾಜ್ಯಚಾರ ಮಾಡುವದನ್ನು ಮರೆತು ಬಿಟ್ಟನು. ತನ್ನ ಸುತ್ತಲೂ ಇರುವವರು ತನಗೆ ಸಮಾನವಾಗಿ ವಿದ್ಯೆ ಕಲಿತವರಲ್ಲವೆಂದು ಅವರನ್ನು ಹೀನೈಸಿ, ಹೀಗೆ ಬುದ್ಧಿ ಮಟ್ಟಾಗಿ ನಡಿಯುತ್ತಾ ಬಂದದ್ದರಿಂದ, ಆ ದೇಶದವರು ಮುಂಚಿನ ಹಾಗೆ ಅವನನ್ನು ಅನುಸರಿಸಿ ಕೊಳ್ಳದೆ ಅವನು ಪ್ರೇರೇಪಿಸಿದಂತೆ ಯುದ್ಧ ಮಾಡುವದಿಲ್ಲವೆಂದು ಸುಮ್ಮನೇ ಇದ್ದರು. ಅಧದರಿಂದ ಶತ್ರುಗಳು, "ಒರಿಕಿಂಡಿಗೆ ತೋಳ ಹೊಕ್ಕಂತೆ," ಹೇರಾಳವಾಧ ಸೈನ್ಯಗಳನ್ನು ಕೂಡಿಸಿ ಕೊಂಡು ಯುದ್ಧಕ್ಕೆ ಕರೆದಾಗ, ಅವನ ಪ್ರಜೆಗಳು ತಮ್ಮ ಹಿರಿಯರು ಬಾಳಿದ ಸ್ಥಳವನ್ನೂ ದೇಶವನ್ನೂ ನಿಲ್ಲಿಸಿ ಕೊಳ್ಳಲಾರದೆ ಬಿಟ್ಟು ಬಿಟ್ಟು, ಕೆಲವರು ವೇಲ್‌ಸ್ ದೇಶಕ್ಕೂ ಕೆಲವರು ಫ್ರಾನ್‌ಸ್ ದೇಶಕ್ಕೂ ಓಡಿ ಹೋದರು. ಬೇರೆ ಕೆಲವರು, "ಅಂದಿಗೆ ಅದೇ ಸುಖ ಇಂದಿಗೆ ಇದೇ ಸುಖ," ಎಂಬುವ ಗಾದೆಯ ಪ್ರಕಾರ ತಮ್ಮ ಶತ್ರುಗಳಿಗೆ ಬೊಗ್ಗಿ ವಿಧೇಯರಾದರು.

ಹೀಗೆ ಅಪಾಯ ಬಂದ ಸಮಯದಲ್ಲಿ ಆಲ್ಫ್ರೆಡ್ ಅರಸನು ಒಬ್ಬ ಬಡ ರೈತನ ಮನೆಯಲ್ಲಿ ಬಚ್ಚಿಟ್ಟು ಕೊಂಡಿರ ಬೇಕಾಯಿತು. ಅವನು ಹೀಗೆ ಮಾರುವೇಷದಿಂದ ಆ ಬಡವರೊಳಗೆ ವಾಸಿಸುವ ಕಾಲದಲ್ಲಿ ಆ ರೈತನ ಹೆಂಡತಿಯು ತನ್ನ ಮನೆಯಲ್ಲಿ ಬಂದಿರುವವನು ಅರಸನೆಂದು ಎಷ್ಟು ಮಾತ್ರವೂ ತಿಳಿಯದೆ ಇದ್ದದರಿಂದ, ಒಂದು ದಿವಸ ಅವಳು ಒಲೆಯಲ್ಲಿ ಸುಡುತ್ತಾ ಇರುವ ರೊಟ್ಟಿಗಳನ್ನು ಸ್ವಲ್ಪ ನೋಡಿ ಕೊಂಡಿರು ಎಂದು ಹೇಳಿ ಬಿಟ್ಟು ಹೋದಳು. ಅರಸನು ತನ್ನ ರಾಜ್ಯದವರಿಗುಂಟಾದ ಬಹು ಇಕ್ಕಟ್ಟುಗಳನ್ನು ಕುರಿತು ತನ್ನ ಮನಸ್ಸಿನಲ್ಲಿ ಚಿಂತಿಸಿ ಕೊಂಡು, ಆ ರೊಟ್ಟಿಗಳ ಮೇಲೆ ಜ್ಞಾಪಕವಿಲ್ಲದೆ ಇದ್ದದರಿಂದ, ಅವಳು ತಿರಿಗಿ ಬರುವಾಗ್ಯೆ ಆ ರೊಟ್ಟಿಗಳೆಲ್ಲಾ ತೀದು ಹೋಗುವದನ್ನು ಕಂಡು, ಅವಳು ಬಹು ಕೋಪಗೊಂಡು, "ರೊಟ್ಟಿಗಳನ್ನು ತಿನ್ನುವದಕ್ಕೆ ನಿನಗೆ ಬಾಯಿ ಉಂಟು, ಒಲೆಯ ಕಡೆಗೆ ನೋಡುವದಕ್ಕೆ ಕಣ್ಣಿಲ್ಲವೋ?" ಎಂದು, ಅವನನ್ನು ಬೈದಳು. ಅವಳು ಹೀಗೆ ತನ್ನನ್ನು ಬೈದಾಗ್ಯೂ ಅವನು ಏನೂ ಕೋಪಿಸಿ ಕೊಳ್ಳದೆ ಮನ್ನಿಸ ಬೇಕೆಂದು ಅವಳನ್ನು ಬೇಡಿ ಕೊಂಡನು.

ಆಲ್ಫ್ರೆಡ್ ಎಂಬವನು ಮುಂಚೆ ತಪ್ಪು ಮಾಡಿದ್ದಾಗ್ಯೂ ಅವನಿಗೆ

## ಸಂಧಿ ೨. ಆಲ್ಫ್ರೆಡ್ ಅರಸನ ಇಕ್ಕಟ್ಟುಗಳು.

ಈಗ ವ್ಯಾಕುಲವೂ ಮೋಸವೂ ಸಂಭವಿಸಿದ ಕಾಲದಲ್ಲಿ "ಧೈರ್ಯಂ ಸರ್ವತ್ರ ಸಾಧನಂ" ಎಂಬ ವಾಕ್ಯದಂತೆ ಬಹು ಶೌರ್ಯವುಳ್ಳವನಾಗಿ ತನ್ನ ಮೇಲೆ ಬಂದವುಗಳನ್ನೆಲ್ಲಾ ತಾಳ್ಮೆಯಿಂದ ಸಹಿಸಿ ಕೊಂಡು, ಎಷ್ಟು ಮಾತ್ರ ಅಧೈರ್ಯ ಪಡದೆ ಇದ್ದನು. ಅಲ್ಲಿಲ್ಲಿ ಬಹು ದಟ್ಟವಾದ ಕಾಡುಗಳಲ್ಲಿ ತನ್ನ ಜನರನ್ನು ಕೂಡಿಸಿ ಕೊಂಡು, ಅವರನ್ನು ಧೈರ್ಯ ಪಡಿಸಿ, ಶತ್ರುಗಳನ್ನು ಜಯಿಸ ತಕ್ಕ ಎಲ್ಲಾ ಯತ್ನಗಳನ್ನು ಮಾಡುತ್ತಾ ಬಂದನು. ಅವನು ಮುಖ್ಯವಾಗಿ (Somersetshire) ಸಮರ್‌ಸೆತ್‌ಷೈರ್ ಎಂಬ ನಾಡಿನಲ್ಲಿರುವ ಒಂದು ನದಿಯ ಮುಖದ್ವಾರದಲ್ಲಿರುವ (Athelney) ಅಥೆಲ್‌ನಿ ಎಂಬ ದ್ವೀಪದಲ್ಲಿ ಅಡಗಿ ಕೊಳ್ಳುವನು. ಅಲ್ಲಿಂದಲೇ ಅನೇಕ ಸಾರಿ ದೇನಿಯರ ಮೇಲೆ ತಗಲಿದನು.

ಆ ತರುವಾಯ ಸ್ವಲ್ಪ ಕಾಲದಲ್ಲಿ ದೇನಿಯರ ಮುಖ್ಯ ಸೈನ್ಯವನ್ನು ಎದುರಿಸುವದಕ್ಕೆ ಎಲ್ಲಾ ಮುಸ್ತೀಪು ಮಾಡಿ ಕೊಂಡನು. ಆ ಕಾಲದಲ್ಲಿ ಒಂದು ದಿವಸ ಉದಯ ಯಾರೋ ಒಬ್ಬ ಯೌವನಸ್ಥನು ಆ ಬಡಗ ಶೀಮೆಯವರ ಗುಡಾರಗಳ ಬಳಿಗೆ ಬಂದು, ಕೈಯಲ್ಲಿರುವ ವೀಣೆಯನ್ನು ಬಾರಿಸಿ ಕೊಂಡು, "ಅಪ್ಪಣೆ ಕೊಟ್ಟರೆ ನಿಮಗೆ ಇಂಪಾದ ಅನೇಕ ಹಾಡುಗಳನ್ನು ಹಾಡುವದಕ್ಕೆ ನನಗೆ ತಿಳಿಯುತ್ತದೆ, ಕೇಳುವದಕ್ಕೆ ಮನಸ್ಸುಂಟೋ?" ಅಂದನು. ಆ ಒರಟು ಮನುಷ್ಯರು ಎಲ್ಲರೂ ಮೆತ್ತಗಿರುವ ಕೆಂಗೂದಲುಳ್ಳ ಸಕ್ಸನ್ ಜಾತಿಯವನಾದ ಆ ಯೌವನಸ್ಥನ ಸುತ್ತಲೂ ಬಂದು ನಿಂತು, ತಾವು ಹಿಡಿದಿದ್ದ ಎರಡು ಕಡೆ ಹದವುಳ್ಳ ದೊಡ್ಡ ಪಟ್ಟಾ ಕತ್ತಿಗಳನ್ನು ಊರಿ ಕೊಂಡು, ಮಹಾ ಸಂತೋಷದಿಂದ ಆ ಹಾಡುಗಳನ್ನು ಕೇಳುತ್ತಿರಲು, ಅವರ ಸೈನ್ಯಾಧಿಪತಿ ಇದನ್ನು ಕೇಳಿ, ತಾನೂ ಆ ಗೀತಗಳನ್ನು ಕೇಳ ಬೇಕೆಂದು, ಆ ಯೌವನಸ್ಥನನ್ನು ತನ್ನ ಬಳಿಗೆ ಕರೆಸಿ ಕೊಂಡನು. ಹಾಗೆಯೇ ಆ ಯೌವನಸ್ಥನು ಮೂರು ದಿವಸಗಳ ಪರ್ಯಂತರ ದೇನಿಯರ ದಂಡಿನಲ್ಲಿ ತನಗೆ ಇಷ್ಟವಿದ್ದ ಕಡೆಯಲ್ಲೆಲ್ಲಾ ಸಂಚರಿಸಿ, ಅವರ ಮರ್ಮಗಳನ್ನೆಲ್ಲಾ ಕಂಡು ಕೊಂಡು, ತರುವಾಯ ಸಕ್ಸನರು ಬಚ್ಚಿಟ್ಟು ಕೊಂಡಿದ್ದ ಕಾಡುಗಳಿಗೆ ಹೋಗಿ ಶೇರಿದನು. ಅವನು ಬರುವದನ್ನು ಸಕ್ಸನರು ಕಂಡು, ಇಗೋ ಬರುತ್ತಾನಲ್ಲಾ, ಈ ವೀಣೆಗಾರನು ಯಾರು?

ಎಂದು ನೋಡುವಲ್ಲಿ, ಕೆಲವು ದಿವಸ ತಮ್ಮನ್ನು ಬಿಟ್ಟು ಅಗಲಿ ಇದ್ದ ತಮ್ಮ ಅರಸನೆಂದು ತಿಳಿದು, ಬಹು ಸಂತೋಷ ಪಟ್ಟರು. ಈ ಮೇರೆಗೆ, "ಚತುರೋಪಾಯವನ್ನರಿತು. ಶತ್ರುಮಥನ ಮಾಳ್ಪದೆ ಕ್ಷತ್ರಿಯ ಧರ್ಮ," ಎಂಬ ವಾಕ್ಯದಂತೆ, ಇವನು ಶತ್ರುಗಳ ನೆಲೆಯನ್ನು ಹೊಂಚಿ ನೋಡಿ ಕಂಡು ಕೊಂಡದ್ದರಿಂದ ಆ ಶತ್ರುಗಳ ದಂಡಿನಲ್ಲಿ ಯಾವ ಕಡೆ ಬಂದೋಬಸ್ತು ಇಲ್ಲದೆ ಇತ್ತೋ ಆ ಕಡೆಯಲ್ಲಿ ತನ್ನ ಸೈನ್ಯವೆಲ್ಲಾ ನುಗ್ಗಿ ಹೊಡಿಯ ದಿಟ್ಟ ಮಾಡಿ ಕೊಂಡು, ಸಂಗಡಲೇ ದೇನಿಯರ ಮೇಲೆ ಯುದ್ಧ ತೊಡಗಿದನು. ಹಾಗೆಯೇ ಅವರನ್ನು ಪೂರ್ಣವಾಗಿ ಸೋಲಿಸಿ, ಅವರ ಸೈನ್ಯವನ್ನು ಹಿಡಿದು, ಅವರಲ್ಲಿ ಬಹು ಮಂದಿಯನ್ನು ಸಂಹರಿಸಿದನು. ಮಿಕ್ಕಾದವರು ತಮ್ಮ ಯಜಮಾನನಾದ (Guthrum) ಗುತ್ರೂಮ್ ಎಂಬವನೊಡನೆ ಓಡಿ ಹೋಗಿ, ಬೇರೊಂದು ಸ್ಥಳದಲ್ಲಿ ಚಿಕ್ಕ ದಂಡಾಗಿ ಕೂಡಿ ಕೊಂಡು, ಕೂಡುವಷ್ಟು ಕಾವಲು ಮಾಡಿ ಕೊಂಡರು. ಆ ಸ್ಥಳಕ್ಕೆ ಆಲ್ಫ್ರೆದ್ ಎಂಬವನು ಸಂಗಡಲೇ ಹೋಗಿ, ಮುತ್ತಿಗೆ ಹಾಕಿದ್ದರಿಂದ, ಅವರು ಹಸಿವೆಯಿಂದ ಬಹಳ ಕಷ್ಟ ಪಟ್ಟು, ಸಕ್ಸನರ ಅರಸನಿಗೆ ಒಳಪಟ್ಟು ಬರಲು, ಅವನು, "ಜಯವೀರರಿಗೆ ಕನಿಕರವೇ ಬಿರುದಿನ ಆಭರಣವೆಂದು," ನೆನಸಿ ಕೊಂಡು, ಅವರನ್ನು ದಯದಿಂದ ಅಂಗೀಕರಿಸಿ, ಮನಸ್ಸುಳ್ಳವರು ತಮ್ಮ ಸ್ವಂತ ದೇಶಕ್ಕೆ ಸುಖವಾಗಿ ತಿರಿಗಿ ಹೋಗ ಬಹುದೆಂದು ಕಳುಹಿಸಿ ಬಿಟ್ಟು, ಮಿಕ್ಕಾದವರಿಗೆ ಯುದ್ಧಗಳಿಂದ ಒಕ್ಕಲಿಲ್ಲದೆ ಹಾಳಾಗಿ ಬಿದ್ದಿದ್ದ (East Anglia) ಕೆಳಗಿನ ಅಂಗ್ಲ (Northumbria) ನೊರ್ತಂಬ್ರಿಯ ಎಂಬ ಶೀಮೆಗಳನ್ನು ಇನಾಮಾಗಿ ಕೊಟ್ಟು, ಕ್ರಿಸ್ತನ ಮಾರ್ಗದಲ್ಲಿ ಶೇರಿದರೆ ಅಲ್ಲಿ ಒಕ್ಕಲುತನ ಮಾಡಿ ಕೊಂಡಿರ ಬಹುದೆಂದು ಅಪ್ಪಣೆ ಕೊಟ್ಟನು. ಆ ಅಪ್ಪಣೆಯ ಪ್ರಕಾರವೇ ಗುತ್ರೂಮ್ ಎಂಬವನೂ ಅವನಿಗೆ ಶೇರಿದ ಅನೇಕರೂ ಬಾಪ್ತಿಸ್ಮ ಹೊಂದಿ, ಇಂಗ್ಲಾಂಡಿನ ಉತ್ತರ ಭಾಗದಲ್ಲಿ ನಿವಾಸ ಮಾಡಿದರು. ಆಲ್ಫ್ರೆದ್ ಆಳುತ್ತಿದ್ದ ಕಾಲದ ಮಟ್ಟಿಗೂ, ಆ ದೇನಿಯರು ಕಲಹವೇನೂ ಮಾಡಲಿಲ್ಲ. ಅವನು ದಕ್ಷಿಣದಲ್ಲಿ ಅಧಿಕಾರ ಮಾಡುವನು. ಉತ್ತರ ಕಡೆಯಲ್ಲಿ (Northumberland) ನೊರ್ತಂಬರ್ಲಾಂದ್ ಸೈನ್ಯದವರೆಂದು ಕರೆಯಲ್ಪಟ್ಟ ಆ ದೇನಿಯರ ಗುಂಪು ತ

ಮ್ಮ ಇಷ್ಟದ ಪ್ರಕಾರ ವಾಸ ಮಾಡಿ ಕೊಂಡಿದ್ದರು. ಇವರಿಂದ ಆಲ್ಫ್ರೆಡ್ ಅರಸನ ತರುವಾಯ ಬಂದ ಅರಸರಿಗೆ ಯಾವಾಗ್ಯೂ ತೊಂದ್ರೆ ಉಂಟಾಗಿತ್ತು.

ಇದರ ತರುವಾಯ ಅನೇಕ ವರುಷಕಾಲ ಆ ದೇಶದಲ್ಲಿ ಯಾವದೊಂದೂ ಕಲಹವಿರಲಿಲ್ಲ. ಆದದರಿಂದ ಆಲ್ಫ್ರೆಡ್ ತನ್ನ ದೇಶದವರಿಗೆ ಹ್ಯಾಗೆ ಮೇಲು ಮಾಡ ಬಹುದೆಂದು ಯೋಚಿಸಿ, ಶೀಮೆಯನ್ನು ನೆಟ್ಟಗೆ ಆಳುವದಕ್ಕೆ ತಕ್ಕ ಉಪಾಯಗಳನ್ನು ಮಾಡಿ ಕೊಂಡು ಬರುತ್ತಾ ಇದ್ದನು. ಬೇರೆ ಯಾವ ಚಿಂತೆಯೂ ಅವನಿಗೆ ಇರಲಿಲ್ಲ. ತನ್ನ ರಾಜ್ಯವನ್ನು ಕಾಯುವ ಹಾಗೆ ತನ್ನ ಪ್ರಜೆಗಳಿಗೆಲ್ಲಾ ಆಯುಧಸಾಧನೆ ಮಾಡಿಸಿ, ಅವರನ್ನು ಆಯಾ ಸ್ಥಳಗಳಲ್ಲಿ ಕಾಯುವದಕ್ಕೆ ಕಾವಲಿಸೈನ್ಯಗಳಾಗಿ ಇರಿಸಿದನು. ಮತ್ತು ಸಮುದ್ರತೀರಗಳನ್ನು ಕಾಯುವದಕ್ಕೆ ಅನೇಕ ಯುದ್ಧದ ಹಡಗಗಳನ್ನು ಕಟ್ಟಿಸಿ, ಈ ಮುಂತಾದ ಪ್ರಯತ್ನಗಳಿಂದ ಶತ್ರುಭಯವನ್ನು ನಿವರ್ತಿ ಮಾಡಿದನು. ಮತ್ತು ಪ್ರಜೆಗಳಿಗೆ ನೀತಿನ್ಯಾಯಗಳು ನಡಿಯುವ ಹಾಗೆ ಎಲ್ಲಾ ಕ್ರಮಗಳನ್ನು ನಿರ್ಮಿಸಿ, ಪ್ರಯೋಜನವಾದ ಅನೇಕ ಹೊಸ ಪ್ರಮಾಣಗಳನ್ನು ಕಲ್ಪಿಸಿ, ಹಳೇ ಪ್ರಮಾಣಗಳನ್ನು ತಿದ್ದಿ, ಪ್ರಜೆಗಳು ಮಾತ್ರವಲ್ಲ, ನ್ಯಾಯಸ್ಥಾನಗಳಲ್ಲಿ ನೀತಿಯನ್ನು ನಡಿಸುವದಕ್ಕೆ ಇರಿಸಲ್ಪಟ್ಟಿರುವ ನ್ಯಾಯಾಧಿಪತಿಗಳು ಸಹ ಆ ಕ್ರಮಗಳನ್ನೂ ಪ್ರಮಾಣಗಳನ್ನೂ ತಪ್ಪದೆ ಕೈಕೊಂಡು ನಡಿಯುವಂತೆ ಧಿಟ್ಟ ಮಾಡಿದನು. ದುಷ್ಟನಿಗ್ರಹ ಮಾಡುವದಕ್ಕೆ ಅವನು ತಕ್ಕ ನಿಬಂಧನೆಗಳನ್ನು ಮಾಡಿದ್ದರಿಂದ ಆ ಕಾಲದಲ್ಲಿ ಸಾಲುಬೀದಿಗಳಲ್ಲಿ ಚಿನ್ನದ ಒಡವೆಗಳನ್ನು ಜೋಲ ಕಟ್ಟಿದಾಗ್ಯೂ ಯಾವ ಕಳ್ಳನಾದರೂ ಅವುಗಳನ್ನು ಮುಟ್ಟುವದಕ್ಕೆ ಧೈರ್ಯ ಮಾಡನು, ಎಂದು ಹೇಳುವರು. ಆ ಒಳ್ಳೇ ಅರಸನಿಂದ ದೇಶವೆಲ್ಲೆಲ್ಲಿಯೂ ಅಷ್ಟು ಸೌಖ್ಯವೂ ಒಳ್ಳೇ ಕ್ರಮವೂ ಉಂಟಾದವು. ಬಹಳ ದಿವಸಗಳ ಮಟ್ಟಿಗೂ ಅವನಿಗೆ ಕಠಿಣವಾದ ರೋಗ ಉಂಟಾಗಿದ್ದಾಗ್ಯೂ, “ಅನ್ಯರ ಸುಖ ದುಃಖಗಳ ವಿಚಾರಿಸುವ ಅರಸನರಿದು,” ಎಂಬುವ ಪ್ರಕಾರ ಮುಂಚೆ ಯಾವ ಅರಸನಾದರೂ ಜನರಿಗೆ ಮಾಡದಂಥಾ ಉಪಕಾರವನ್ನೆಲ್ಲಾ ಮಾಡಿದನು. ಯುದ್ಧಕಲಹಗಳಿಂದ ದೌರ್ಭಾಗ್ಯ

ಸ್ಥಿತಿಯುಳ್ಳ ಶೀಮೆಯಲ್ಲಿ ಸಮಾಧಾನವನ್ನೂ ಒಳ್ಳೇ ಕ್ರಮವನ್ನೂ ಉಂಟು ಮಾಡಿದನು. ದೇನಿಯರನ್ನು ಸೋಲಿಸಿ, ಎಲ್ಲಾ ಶತ್ರುಗಳನ್ನು ನಿವರ್ಿ ಮಾಡಿ, ದೇಶವನ್ನು ಕಾದು ಕೊಂಡನು. ಬಾಲಕರಿಗೋಸ್ಕರ ಬೇರೆ ಬೇರೆ ಅನೇಕ ವಿದ್ಯಶಾಲೆಗಳನ್ನು ಸ್ಥಾಪಿಸಿದನು. ಮತ್ತು (Oxford) ಒಕ್ಸ್‌ಫೋರ್ಡ್ ಪಟ್ಣದಲ್ಲಿರುವ ಸಕಲ ವಿದ್ಯಾಶಾಲೆಯನ್ನು ಸಹಾ ಅವನೇ ಸ್ಥಾಪಿಸಿದನೆಂದು ಹೇಳುವರು. ಜನರಿಗೆ ಉಪಯೋಗವಾದ ಅನೇಕ ಪುಸ್ತಕಗಳನ್ನು ಉಂಟು ಮಾಡಿದನು. ಮತ್ತು ತಾನು ಕಲಿತ ವಿದ್ಯದಿಂದ ಮತ್ತೊಬ್ಬರಿಗೆ ಮೇಲು ಉಂಟಾಗ ಬೇಕೆಂದು ಅಪೇಕ್ಷಿಸಿ, (Greek) ಗ್ರೀಕ್, (Latin) ಲಾಟಿನ್ ಭಾಷೆಗಳಲ್ಲಿ ಮಾಡಲ್ಪಟ್ಟ ಅಪರೂಪವಾದ ಕೆಲವು ಗ್ರಂಥಗಳನ್ನು ಇಂಗ್ಲಿಷ್ ಭಾಷೆಯಲ್ಲಿ ಭಾಷಾಂತರ ಮಾಡಿ ಕೊಟ್ಟನು. “ಸರ್ವಾಲಂಕಾರಗಳಲ್ಲಿ ವಿದ್ಯಾಲಂಕಾರವೇ ಶ್ರೇಷ್ಠ” ಎಂಬುವ ವಾಕ್ಯದ ಪ್ರಕಾರ ಅವನು ಇಂಗ್ಲಾಂಡ್ ದೇಶದವರು ವಿದ್ಯವನ್ನು ಅಪೇಕ್ಷಿಸುವಂತೆ ಮಾಡಿದ್ದರಿಂದ, ಆ ವಿದ್ಯವು ತಲತಲಾಂತರಗಳಲ್ಲಿ ಆ ದೇಶದವರಿಗೆ ಮೇಲೂ ಘನವೂ ಆಗಿತ್ತು. ಅವನು ತಾನು ಮಾಡ ಬೇಕಾದ ಕೆಲಸಕ್ಕೆ ಒಂದು ಪಾಲೂ, ಓದುವದಕ್ಕೂ ಜಪಧ್ಯಾನಕ್ಕೂ ಒಂದು ಪಾಲೂ, ಭೋಜನಕ್ಕೂ ಶರೀರ ಅಭ್ಯಾಸಕ್ಕೂ ನಿದ್ರೆಗೂ ಒಂದು ಪಾಲೂ, ಹೀಗೆ ಒಂದೊಂದು ದಿವಸವನ್ನು ಮೂರು ಸಮಪಾಲುಗಳಾಗಿ ಭಾಗಿಸಿ ಕೊಂಡನು. ಆ ಕಾಲದಲ್ಲಿ ತಾಸುಹೊತ್ತನ್ನು ತೋರಿಸುವ ಘಡಿಯಾರ ಮೊದಲಾದವುಗಳು ಇಲ್ಲದ್ದರಿಂದ, ಅದಕ್ಕೊಂದು ಉಪಾಯ ಮಾಡಿದನು; ಏನಂದರೆ, ಸಮ ಉದ್ದವುಳ್ಳ ಮೇಣದ ಬತ್ತಿಗಳನ್ನು ಮಾಡಿಸಿ, ಗಾಳಿಯಿಂದ ಅಲ್ಲಾಡದೆ ಸರಿಯಾಗಿ ಉರಿಯುವಂತೆ ಅವುಗಳನ್ನು ತೆಳುವಾಗಿ ಚೀವಿದ ಕೊಂಬಿನ ತಗಡುಗಳಿಂದ ಮಾಡಲ್ಪಟ್ಟ ದೀಪದ ಗೂಡುಗಳಲ್ಲಿ ಆ ಬತ್ತಿಗಳನ್ನು ಹತ್ತಿಸಿ, ಒಂದು ತಾಸುಹೊತ್ತಿಗೆ ಒಂದು ಬತ್ತಿಯಲ್ಲಿ ಇಷ್ಟು ಉರಿಯುವದೆಂದು ಶೋಧಿಸಿ, ಅದೇ ಮೇರೆಗೆ ತಾಸಿನ ದಿಟ್ಟವನ್ನು ನಿಧಾನಿಸಿ ಕೊಳ್ಳುವನು. ಆ ಕಾಲದಲ್ಲಿ ಅರಮನೆ ಮುಂತಾದ ದೊಡ್ಡವರ ಮನೆಗಳಲ್ಲಿ ಸಹ ಉಪಯೋಗವೂ ವಿನೋದವೂ ಆದ ಸಾಮಾನುಗಳೊಂದೂ ಇಲ್ಲದ್ದರಿಂದ ಹಾಗೆ ಉಪಾಯ ಮಾಡ ಬೇಕಾಗಿತ್ತು.

ಅವನು ಆಳಿದ ಕಡೇ ದಿನಗಳಲ್ಲಿ ದೇನಿಯರು ಸಮುದ್ರಪ್ರಾಂತ್ಯದ ದೇಶಗಳಿಂದ ಆಗಾಗ್ಯೆ ದಂಡೆತ್ತಿ ಕೊಂಡು ಬರುವದರಿಂದ ಅವನು ತನಗೆ ಇಷ್ಟವಾದ ಕೆಲಸಗಳನ್ನು ಬಿಟ್ಟು ಬಿಟ್ಟು, ಅವರನ್ನು ಎದುರಿಸಿ, ಹೊರಡಿಸ ಬೇಕಾಗಿತ್ತು. ಹಾಗೆ ಮಾಡಿದಕಾಲದಲ್ಲಿ ಒಂದು ದಿವಸ (Hastings) ಹೇಸ್ಟಿಂಗ್ಸ್ ಎಂಬ ಒಬ್ಬ ಹಡಗದ ಕಳ್ಳನೂ, ಅವನ ಹೆಂಡತಿ ಮಕ್ಕಳೂ ಅವನ ಕೈಯಲ್ಲಿ ಶಿಕ್ಕಿದಾಗ, ಅವನು ಆ ಕಾಲದ ಬಳಿಕೆಯ ಹಾಗೆ ಅವರನ್ನು ಶ್ರಮೆ ಪಡಿಸದೆ, ಬಹು ದಯದಿಂದ ಪರಾಮರಿಸಿ, ಸಮಯ ದೊರಕಿದಾಗ ಅವರನ್ನು ತಮ್ಮ ಶೀಮೆಗೆ ತಿರಿಗಿ ಕಳುಹಿಸಿ ಬಿಟ್ಟನು.

ಅವನು ಈ ಪ್ರಕಾರ ಇಪ್ಪತ್ತೊಂಬತ್ತು ವರುಷದ ಮಟ್ಟಿಗೂ ಘನದಿಂದಲೂ ಭಾಗ್ಯದಿಂದಲೂ ರಾಜ್ಯಭಾರ ಮಾಡಿ ಮರಣ ಹೊಂದುವ ಕಾಲದಲ್ಲಿ ದೇಶವೆಲ್ಲಾ ಶಾಂತಿಯಾಗಿರಲು, ಪ್ರಜೆಗಳೆಲ್ಲಾ ಚನ್ನಾಗಿ ಬದುಕಿ ಭಾಗ್ಯವುಳ್ಳವರಾಗಿರಲು, ಉತ್ತರ ದಿಕ್ಕಿನಲ್ಲಿ ವಾಸಿಸಿದ್ದ ದೇನಿಯರಲ್ಲಿ ಸಹ ಬಹಳ ಮಂದಿ ಚುರುಕುಳ್ಳವರಾಗಿಯೂ ಮರ್ಯಾದಸ್ಥರಾಗಿಯೂ ಪೈರಿಟ್ಟು ಜೀವನ ಮಾಡಿ ಕೊಂಡಿದ್ದರು.

ಆಲ್ಫ್ರೆಡ್ ಸತ್ತ ತರುವಾಯ ಮುಂಚೆ ಆಳಿದ ಒಬ್ಬ ಅರಸನ ಮಗನು ತನಗೆ ಪಟ್ಟವಾಗ ಬೇಕೆಂದು ವ್ಯಾಜ್ಯ ಮಾಡಿದನು. ಆದಾಗ್ಯೂ ಅಲ್ಫ್ರೆಡ್ ಎಂಬವನ ಕುಮಾರನಾದ (Edward) ಎಡ್ವರ್ಡ್ ಎಂಬವನಿಗೆ ಪಟ್ಟ ಧರಿಸಲ್ಪಟ್ಟಿತು. ಇವನ ಕಾಲದಲ್ಲಿ ರಾಜ್ಯದ ಒಳಗೂ ಹೊರಗೂ ಇರುವ ದೇನಿಯರು ಸಾರ್ತಿಸಾರ್ತಿಗೆ ಯುದ್ಧ ಮಾಡುತ್ತಾ ಬಂದಾಗ್ಯೂ ಈ ಅರಸನು ಅವರನ್ನು ಬಹು ಪೌರುಷವಾಗಿ ಎದುರಿಸಿ ಜಯಿಸಿ ಬಿಟ್ಟನು. ಅವನು ಮಹಾ ಸಾಮರ್ಥ್ಯವುಳ್ಳ ಯುದ್ಧವೀರನಾಗಿ ದೇಶವನ್ನು ಕಾಯುವದಕ್ಕಾಗಿ ಬೇಕಾದ ಪ್ರಯತ್ನಗಳನ್ನೆಲ್ಲಾ ಬಹು ಯುಕ್ತಿ ವಿವೇಕಗಳೊಡನೆ ಮಾಡುತ್ತಾ ಬಂದನು.

ಅವನು ಇಪ್ಪತ್ತೈದು ವರುಷದ ಮಟ್ಟಿಗೂ ರಾಜ್ಯವಾಳಿ ಸತ್ತ ತರುವಾಯ (Athelstan) ಅಥೆಲ್‌ಸ್ತನ್ ಎಂಬವನಿಗೆ ಪಟ್ಟ ಧರಿಸಿದರು. ಇವನು ಮುಂಚಿನ ಅರಸನ ಪಟ್ಟದ ಹೆಂಡತಿಯ ಮಗನಲ್ಲ. ಆದಾಗ್ಯೂ ಪಟ್ಟದರಸಿಯ ಕುಮಾರರೆಲ್ಲರೂ ಚಿಕ್ಕ ವಯಸ್ಸುಳ್ಳವರಾಗಿದ್ದದರಿಂದ, ದೇ

ಶವನ್ನು ಕಾಯುವದಕ್ಕೆ ತಕ್ಕ ತೇರಿದ ವೀರನಾದ ಇವನೇ ನಮ್ಮನ್ನು ಆಳ ಬೇಕೆಂದು ದೇಶದವರು ಅಪೇಕ್ಷಿಸಿದರು. ಅದು ಒಳ್ಳೇ ಕೋರಿಕೆ ಎಂದು ಇವನ ನಡತೆಯಿಂದ ಸ್ಪಷ್ಟವಾಗಿ ತೋರುವದು. ಹ್ಯಾಗಂದರೆ — ಆ ಒರಟು ದೇನಿಯರನ್ನು ಬೊಗ್ಗಿಸುವದಕ್ಕೆ ಬೇಕಾದ ಯುಕ್ತಿಯೂ ಬಲವೂ ಸಾಮರ್ಥ್ಯವೂ ಆ ಅರಸನಿಗೆ ಉಂಟಾಗಿತ್ತು.

ಆ ಕಾಲದಲ್ಲಿ ಉತ್ತರ ದೇಶಗಳಿಂದ ದಿನದಿನಕ್ಕೆ ಆ ದೇನಿಯರಿಗೆ ಸಹಾಯವಾಗಿ ಹಡಗದವರು ಬರುವದರಿಂದ ಜನರಿಗೆ ಶಾಂತಿ ಇರಲಿಲ್ಲ. ಇದಲ್ಲದೆ ಒಂದು ದಿವಸ (Northumbria) ನೊರ್ಥಂಬ್ರಿಯ ನಾಡನ್ನು ಬಿಟ್ಟು ಹೊರಡಿಸಲ್ಪಟ್ಟಿದ್ದ (Anlaf) ಅನ್ಲಾಫ್ ಎಂಬ ಒಬ್ಬ ದೇನಿಯರ ಪ್ರಭುವೂ, (Scotland) ಸ್ಕೊತ್ಲಾಂದ್ ಅರಸನೂ ಇಂಗ್ಲಾಂದಿನಲ್ಲಿದ್ದ ದೇನಿಯರೂ ಸಹ ಏಕೀಭವಿಸಿ ಬಂದು ದೇಶವನ್ನೆಲ್ಲಾ ವಶ ಮಾಡಿ ಕೊಳ್ಳ ಬೇಕೆಂದು ಯುದ್ಧ ಮಾಡ ತೊಡಗಿದಾಗ, (Athelstan) ಅಥೆಲ್‌ಸ್ತನ್ ಎಂಬ ಅರಸನು ಅವರ ಸಂಗಡ ಬಹಳ ಹೊತ್ತು ಬಹು ಘೋರವಾಗಿ ಯುದ್ಧ ಮಾಡಿ, ಅವರನ್ನು ಮುರಿಯ ಬಡಿದು ಓಡಿಸಿ ಬಿಟ್ಟನು. ಆ ಯುದ್ಧ ನಡಿದ ಊರಿಗೆ (Brunsbury) ಬ್ರನ್ಸ್‌ಬರಿ ಎಂಬ ಹೆಸರು. ಸಕ್ಸನರೊಳಗೆ ಬಳಿಕೆಯಾಗಿರುವ ಕಥೆಗಳಲ್ಲಿಯೂ ಕಾವ್ಯಗಳಲ್ಲಿಯೂ ಆ ಯುದ್ಧವನ್ನು ಕುರಿತು ಬಹುಶಾ ಕೊಂಡಾಡಿ ಇದೆ.

ಅಥೆಲ್‌ಸ್ತನ್ ಯುದ್ಧದಲ್ಲಿ ಜಯ ಹೊಂದಿದ್ದು ಮಾತ್ರವಲ್ಲದೆ ರಾಜ್ಯಭಾರಕ್ಕೆ ತಕ್ಕ ಮಿಕ್ಕಾದ ಕಾರ್ಯಗಳನ್ನು ಸಹ ಜಾಗ್ರತೆಯಾಗಿ ನಡಿಸುತ್ತಾ ಬಂದನು. ರಾಜ್ಯತಂತ್ರಗಳನ್ನೆಲ್ಲಾ ಶೋಧಿಸಿ ತಿಳಿದು, ಧೊರೆತನ ಮಾಡಿದವನೆಂದು, ಚರಿತ್ರಗಾರರು ಇವನನ್ನು ಬಹಳವಾಗಿ ಹೊಗಳಿದ್ದಾರೆ. ಇವನು ಏರ್ಪಡಿಸಿದ ಅನೇಕ ಒಳ್ಳೇ ಪ್ರಮಾಣಗಳಲ್ಲಿ ಒಂದು ಮಾತ್ರ ತೋರಿಸುತ್ತೇವೆ. ಏನಂದರೆ, —

"ಸಮುದ್ರಯಾತ್ರೆಯಾದರೂ ಮಾಡಿ
ಸುಮುದ್ರೆ ಹಣವ ಸಂಪಾದಿಸು,"

ಎಂಬ ನ್ಯಾಯದ ಪ್ರಕಾರ, ಒಬ್ಬನು ನಾನಾ ದೇಶಗಳನ್ನು ಸಂಚರಿಸಿ ವ್ಯಾಪಾರ ಮಾಡುವದು ಆ ವರ್ತಕನಿಗೆ ಮಾತ್ರವಲ್ಲ, ಸ್ವದೇಶದವರಿ

ಗೂ ಅನ್ಯ ದೇಶದವರಿಗೂ ಸಹ ಲಾಭಕರವಾದ ಕಾರ್ಯವೆಂದು ಅರಸನು ನಿಧಾನಿಸಿ, ಮೂರು ಸಾರಿ ಅನ್ಯ ದೇಶಕ್ಕೆ ವ್ಯಾಪಾರದ ನಿಮಿತ್ತ ಯಾತ್ರೆ ಮಾಡಿ ಬಂದವನಿಗೆ (Thane) ಶೇಯಿನ್ ಎಂಬುವ ಪ್ರಭುಪಟ್ಟವು ದೊರಕುವದೆಂದು ನೇಮಕ ಮಾಡಿದನು.

ಇವನ ತರುವಾಯ ಇವನ ಸಹೋದರನಾದ (Edmund) ಎದ್ಮೊಂದ್ ಎಂಬುವ ಪಟ್ಟದರಸಿಯ ಮಗನು ರಾಜ್ಯ ಪರಿಪಾಲನೆ ಮಾಡಿದನು. ಇವನು ಬೇರೆ ಅರಸರಂತೆ ದೇನಿಯರ ಸಂಗಡ ಹಲವು ಸಾರಿ ಹೋರಾಡಿದ ತರುವಾಯ ಒಂದು ದಿವಸ ಯಾರೋ ಒಬ್ಬ ದುರ್ಜನನು ಅವನ ಅರಮನೆಯ ಔತನಶಾಲೆಯಲ್ಲಿ ಅಪ್ಪಣೆ ಇಲ್ಲದೆ ಬರುವದನ್ನು ಕಂಡು, ಅರಸನು ಸಂಗಡಲೇ ಹೊರಗೆ ಹೋಗೆಂದು ಅವನಿಗೆ ಅಪ್ಪಣೆ ಮಾಡಿದಾಗ, ಅವನು ಹೋಗುವದಿಲ್ಲವೆಂದು ಬೈದದರಿಂದ ಕಲಹವಾದ ಕಾರಣ ಅರಸನು ಭಯಂಕರವಾದ ಘಾಯ ಪಟ್ಟು ಬಿದ್ದನು.

ಇವನ ಕುಮಾರರೆಲ್ಲರೂ ಸಣ್ಣ ವಯಸ್ಸಿನವರಾಗಿದ್ದದರಿಂದ, ಪ್ರಾಯ ಹೋದವನಾದ (Edred) ಎದ್ರೆದ್ ಎಂಬ ಅವನ ಸಹೋದರನನ್ನು ಜನರು ತಮಗೆ ಅರಸನಾಗಿರ ಕೋರಿದರು. ಇವನು ಪಟ್ಟಕ್ಕೆ ಬಂದ ಸ್ವಲ್ಪ ಕಾಲದೊಳಗೆ ದೇನಿಯರು ಮತ್ತೂ ಕಲಹ ಮಾಡಿದ್ದರಿಂದ ಎದ್ರೆದ್ ಅವರನ್ನು ಅಣಗಿಸಿ ಬಿಟ್ಟ ತರುವಾಯ ದೇನಿಯರು ಕಟ್ಟಿದ ಪಟ್ಣಗಳಲ್ಲೆಲ್ಲಾ ಸಕ್ಸನರಾದ ಕಾವಲಿಸೈನ್ಯದವರನ್ನು ನಿಲ್ಲಿಸಿ, ಒಂದೊಂದು ಪಟ್ಣದಲ್ಲಿಯೂ ಸಕ್ಸನ್ ಜಾತಿಯ ಧೊರೆಯನ್ನು ಸಹ ಇರಿಸಿದ್ದರಿಂದ ಅವರು ತರುವಾಯ ಕಲಹ ಮಾಡುವದಕ್ಕೆ ಆಸ್ಪದವಿಕಲಿಲ್ಲ.

ಎದ್ರೆದ್ ಆಳಿದ ಕಾಲದಲ್ಲಿ ಸ್ವದೇಶಸ್ಥರೊಳಗೆ ಕೆಲವು ತೊಂದರೆಗಳೂ ವಿರೋಧಗಳೂ ಉಂಟಾಗಲಾರಂಭಿಸಿದವು. ಅವುಗಳ ಕಾರಣವನ್ನು ಇಲ್ಲಿ ಸ್ವಲ್ಪ ವಿವರಿಸ ಬೇಕಾಗಿದೆ. ಏನಂದರೆ, ಕ್ರಿಸ್ತನ ಮಾರ್ಗವು ಮುನ್ನೂರು ನಾನೂರು ವರುಷಗಳ ಮಟ್ಟಿಗೂ ಕೆಲವು ದೇಶಗಳಲ್ಲಿ ಪ್ರಬಲವಾದ ತರುವಾಯ ಒಂದು ವಾಡಿಕೆ ಉಂಟಾಯಿತು; ಅದೇನಂದರೆ, ಅಯಾ ಸ್ಥಳಗಳಲ್ಲಿ ದೇವಭಕ್ತಿಯುಳ್ಳ ಮನುಷ್ಯರು ಲೋಕದ ಕೆಲಸಗಳನ್ನೆಲ್ಲಾ ಬಿಟ್ಟು, ತಮ್ಮನ್ನು ಪ್ರತ್ಯೇಕಿಸಿ ಕೊಂಡು, ಜನಸಂಚಾರವಿಲ್ಲದ ಸ್ಥ

ಳಗಳಲ್ಲಿ ಒಂದಾಗಿ ಕೂಡಿ ಕೊಂಡು, ಎಡೆ ಬಿಡದೆ, ಜಪ ಧ್ಯಾನ ಮಾಡಿ, ದೇವರ ವಾಕ್ಯವನ್ನು ಓದಿ ಕೊಂಡು, ದೇವಾರಾಧನೆ ಮಾಡುವ ನಿಮಿತ್ತ ತಮಗೆ ಮಠಗಳನ್ನು ಕಟ್ಟಿ ಕೊಂಡರು. ಆರಂಭದಲ್ಲಿ ಈ ಕಾರ್ಯದಿಂದ ಬಹಳ ಪ್ರಯೋಜನ ಉಂಟಾಯಿತು. ಹ್ಯಾಗಂದರೆ, ಆ ಮಠಗಳಲ್ಲಿ ವಿದ್ವಾಂಸರಾದ ದೇವಭಕ್ತರು ಅನೇಕರು ಶೇರಿ ಕೊಂಡು, ಆ ಕಾಲದಲ್ಲಿದ್ದ ಮೂರ್ಖರಿಂದ ತೊಂದರೆ ಹೊಂದದೆ, ಶಾಸ್ತ್ರಗಳನ್ನು ಶೋಧಿಸಿ, ನಾನಾ ವಿದ್ಯಗಳನ್ನು ಕಲಿತು ಕೊಂಡದ್ದರಿಂದ ಪರರಿಗೆ ಸಹ ಮೇಲು ಉಂಟಾಗುವದಕ್ಕೆ ಹೇತುವೆಯಾಯಿತು. ಹೀಗಿದ್ದಾಗ್ಯೂ ಬೇರೆ ಮನುಷ್ಯರ ಸಂಗಡ ಕಲೆಯದೆ, ಒಂದು ಮಠದಲ್ಲಿ ವಾಸ ಮಾಡಿ ಕೊಂಡಿರುವವರಿಗೆ ಸಹ ಲೋಕದ ಆಶೆಗಳನ್ನೆಲ್ಲಾ ಬಿಟ್ಟು ಅಗಲಿ ಇರುವದು ಅಪರೂಪವೇ. ಆದ ಕಾರಣ ಅನೇಕ ಮುಖಾಂತ್ರಗಳಿಂದ ಆ ಮಠಗಳು ಬಹು ಶೀಘ್ರದಲ್ಲಿ ಕೆಟ್ಟು ಹೋದವು. ಇದಲ್ಲದೆ ಬರಬರ ಅಂಥಾ ಮಠಗಳಲ್ಲಿರುವವರು ಮದುವೆ ಮಾಡಿ ಕೊಳ್ಳ ಬಾರದೆಂದೂ, ಯಾವ ವಿಧವಾದ ಸಂತೋಷಗಳನ್ನಾದರೂ ಮರ್ಯಾದೆಗಳನ್ನಾದರೂ ಅಸಹ್ಯಿಸಿ ಮರೆತು ಬಿಡ ಬೇಕೆಂದೂ, ಅನೇಕರು ಹೇಳುತ್ತಾ ಬಂದರು. ಮತ್ತು ವಿಧವಿಧವಾದ ತಪಸ್ಸುಗಳನ್ನು ಮಾಡಿ, ಮಹಾ ನೋಂಪುಗಳನ್ನು ನೋತವರನ್ನು ಘನವಾಗಿ ಭಾವಿಸಿ ಕೊಂಡು, ಇದೇ ಒಳ್ಳೇ ಮಾರ್ಗವೆಂದು ಆ ಕಾಲದಲ್ಲಿ ಕೆಲವರು ಅಂದು ಕೊಳ್ಳ ಪ್ರಾರಂಭಿಸಿದರು. ಮತ್ತು (Bishop of Rome) ರೋಮಾಪುರೀ ಬಿಷಪ್ ಎಂಬುವ ಅಧ್ಯಕ್ಷಗುರುವು, ಬೇರೆ ಬೇರೆ ದೇಶಗಳಲ್ಲಿರುವ ಮಿಕ್ಕಾದ ಅಧ್ಯಕ್ಷರ ಮೇಲೆ, ತನಗೆ ಹೆಚ್ಚಾದ ಅಧಿಕಾರ ಉಂಟೆಂದು ಸ್ಥಾಪಿಸಿ, ಮೇಲೆ ಹೇಳಿದ ತಪ್ಪಾದ ಯೋಚನೆಗಳಿಗೆ ಅನುಕೂಲ ಮಾಡುತ್ತಾ ಬಂದನು.

ಇಂಗ್ಲಾಂಡ್ ದೇಶದವರು ಸುವಾರ್ತೆಯನ್ನು ಅಂಗೀಕರಿಸಿದ ತರುವಾಯ್ಯ ಅಂಥಾ ಅನೇಕ ಮಠಗಳು ಆ ದೇಶದಲ್ಲಿ ಸ್ಥಿರವಾಗಿ ಸ್ಥಾಪಿಸಲ್ಪಟ್ಟವು. ಆ ಜನರಿಗೆ ದೊಡ್ಡ ಉಪಕಾರ ಉಂಟಾದದ್ದು ಹ್ಯಾಗಂದರೆ, ಆ ಮಠಗಳಲ್ಲಿ ಇದ್ದ ಶುದ್ಧರು ಬಹು ಮಂದಿ ಮದುವೆ ಮಾಡಿ ಕೊಂಡು, ಮಿಕ್ಕಾದವರ ಸಂಗಡ ಪ್ರೀತಿಯನ್ನು ಅನುಸರಿಸಿ, ಗೃಹಸ್ಥಾಶ್ರಮದ ಮ

ರ್ಯಾದೆಗಳನ್ನೆಲ್ಲಾ ತಮಗೂ ಮಿಕ್ಕಾದವರಿಗೂ ಪ್ರಾಪ್ತಿ ಉಂಟಾಗು ವಂತೆ ಸರಿಯಾಗಿ ನಡಿಸುತ್ತಾ ಬಂದರು. ಆದಾಗ್ಯೂ ಎಡ್ರೆಡ್ ಎಂಬ ವನ ಕಾಲದಲ್ಲಿ ಮೇಲೆ ಹೇಳಿದ ನೂತನ ಅಭಿಪ್ರಾಯಗಳುಳ್ಳವರು ಅ ನೇಕರು ಇಂಗ್ಲಾಂಡಿಗೆ ಬಂದರು. ಇವರ ಯೋಚನೆಗಳೆಲ್ಲಾ ಸರಿ ಇಲ್ಲ ದೆ ಇದ್ದಾಗ್ಯೂ, ಇವರಲ್ಲಿ ಕೆಲವರು ಒಳ್ಳೇ ದೇವಭಕ್ತಿಯುಳ್ಳವರಾಗಿದ್ದರು.

ಹೀಗಿರಲಾಗಿ ವಿರಕ್ತರೆಂದು ಕರೆಯಲ್ಪಟ್ಟ ಸರ್ವಸಂಗಪರಿತ್ಯಾಗಿಗಳಿ ಗೂ, ಗೃಹಸ್ಥಾಶ್ರಮಗುರುಗಳೆಂದು ಕರೆಯಲ್ಪಟ್ಟ ಸಂಸಾರಿಗಳಿಗೂ ಬರಬರ ಬಹಳ ಹಗೆಯುಂಟಾಯಿತು. ಎಡ್ರೆಡ್ ಎಂಬ ಅರಸನು ವಿ ರಕ್ತರ ಪಕ್ಷದಲ್ಲಿ ಶೇರಿ ಕೊಂಡು, ತನ್ನಿಂದಾಗುವಷ್ಟು ಅವರನ್ನು ಆದರಿಸಿ ಬಲ ಪಡಿಸ ನೋಡಿದನು. ಆ ಕಾಲದಲ್ಲಿ ಮಹಾ ತಪಸ್ಸು ಮಾಡಿದ್ದ ರಿಂದ ಇಂಗ್ಲಾಂಡ್ ದೇಶದವರಿಂದ ಮಹಾಮುನಿ ಎಂದು ಎಣಿಸಲ್ಪಟ್ಟ (Dunstan) ದನ್‌ಸ್ತನ್ ಎಂಬ ಒಬ್ಬ ವಿರಕ್ತನು ಅರಸನ ಸಭೆಯಲ್ಲಿ ದೊಡ್ಡವನಾಗಿದ್ದನು. ಅರಸನು ಇವನ ಮಾತಿನ ಪ್ರಕಾರವೇ ದೇಶವನ್ನು ಆಳಿದನು. ಮತ್ತು ಅರಸನ ದ್ರವ್ಯವೆಲ್ಲಾ ಇವನ ವಶದಲ್ಲಿಯೇ ಇರಿಸ ಲ್ಪಟ್ಟಿತ್ತು.

ಈ ದನ್‌ಸ್ತನ್ ಎಂಬ ಮಹಾಮುನಿಯೂ (Canterbury) ಕಾಂತ ರ್ಬರಿ ಪಟ್ಣದಲ್ಲಿ ಇದ್ದ ಶ್ರೇಷ್ಠ ಅಧ್ಯಕ್ಷನಾದ (Odo) ಓದೋ ಎಂಬವ ನೂ ಅವರಿಗೆ ಸಹಾಯವಾಗಿದ್ದದರಿಂದ ಎಡ್ರೆಡ್ ಆಳಿದ ಕಾಲದಲ್ಲಿ ವಿ ರಕ್ತರಿಗೆ ಮಾತ್ರ ಬಹಳ ಅನುಕೂಲ ಉಂಟಾಗಿತ್ತು. ಮತ್ತು ಮಠಗಳೆ ಲ್ಲಾ ಇವರ ಆಧೀನ ಮಾಡಲ್ಪಟ್ಟವು. ಆದಾಗ್ಯೂ ಇವನ ತರುವಾಯ ಆಳಿದ (Edwy) ಎಡ್ವಿ ಎಂಬವನು ಎಳೇ ಪ್ರಾಯದವನೂ ಸೌಂದ ರ್ಯವುಳ್ಳವನೂ ಆಗಿದ್ದದರಿಂದ ತನ್ನನ್ನೂ ತನ್ನ ದೇಶದವರನ್ನೂ ಬಹು ಖಂಡಿತವಾಗಿ ಆಳಿ ಕೊಂಡು ಮಾರ್ಗ ನಡಿಸ ಬೇಕೆಂದಿದ್ದ ಆ ವಿರಕ್ತರನ್ನು ಹಗೆ ಮಾಡಿ, ಅವರನ್ನು ಎದುರಿಸಿದನು. ಇವನು ಪಟ್ಟಕ್ಕೆ ಬಂದ ಮೊದ ಲಲ್ಲಿ ತನಗೆ ಬಹು ಪ್ರಿಯಳಾದ ನಾದಿನಿಯಾಗಿದ್ದ (Elgiva) ಎಲ್ಜೀವ ಎಂಬವಳನ್ನು ಮದುವೆ ಮಾಡಿ ಕೊಂಡನು. ದನ್‌ಸ್ತನ್ ಓದೋ ಎಂಬ ವರು ಅರಸನಿಗೂ ಎಲ್ಜೀವ ಎಂಬವಳಿಗೂ ಸಮೀಪ ಬಂಧುತ್ವ ಉಂಟಾ

ಗಿರುವವರಿಂದ ಆ ಮದುವೆಗೆ ಖಂಡಿತವಾಗಿ ಅಡ್ಡಿ ಮಾಡ ಬೇಕೆಂದು ಯತ್ನ ಮಾಡಿದರು. ಮತ್ತು ದನ್‌ಸ್ತನ್ ಎಂಬವನೂ ಮಿಕ್ಕಾದ ರಾಜಸಭೆಯವರೂ ಔತಣದಲ್ಲಿದ್ದ ಒಂದು ದಿವಸದಲ್ಲಿ ಅರಸನು ಔತಣಶಾಲೆಯನ್ನು ಬಿಟ್ಟು, ಎಲ್ಜೀವ ಎಂಬವಳೂ ಅವಳ ತಾಯಿಯೂ ಇದ್ದ ಅಂತಃಪುರಕ್ಕೆ ಹೋಗುವ ನಿಮಿತ್ತ ಎದ್ದಾಗ, ದನ್‌ಸ್ತನ್ ಎಂಬವನು ಅರಸನನ್ನೂ ಅರಸಿಯನ್ನೂ ಕುರಿತು ಕೆಲವು ಅಮರ್ಯಾದೆಯಾದ ಮಾತುಗಳನ್ನು ಹೇಳಿದನೆಂದು ಚರಿತ್ರಗಾರರು ಬರೆದಿದ್ದಾರೆ.

ತರುವಾಯ ಎದ್ವಿ ಎಂಬವನು ದನ್‌ಸ್ತನ್ ಎಂಬವನನ್ನು ಕರೆಸಿ, ನನ್ನ ತಂದೆಯು ನಿನ್ನ ಕೈಯಲ್ಲಿ ಒಪ್ಪಿಸಿದ ದ್ರವ್ಯಕ್ಕೆ ಈಗ ನೀನು ಲೆಖ್ಖ ಕೊಡ ಬೇಕೆಂದು ಕೇಳಲು, ಅವನು ಸರಿಯಾಗಿ ಲೆಖ್ಖ ಒಪ್ಪಿಸಲಾರದೆ ಹೋದದರಿಂದ, ಅವನನ್ನು ಗಡೀ ಪಾರು ಮಾಡಿಸಿದನು. ಅದರಿಂದ ರಾಜ್ಯದವರೊಳಗೆ ಸ್ವದೇಶಯುದ್ಧ ಹುಟ್ಟಿ, ದನ್‌ಸ್ತನಿನ ಪಕ್ಷದವರು ಅರಸನನ್ನು ತಳ್ಳಿ ಬಿಟ್ಟು, ಅವನ ತಮ್ಮನಾದ (Edgar) ಎಡ್ಗರ್ ಎಂಬವನನ್ನು ಅರಸನಾಗ ಮಾಡುವದಕ್ಕೆ ಜನರಿಗೆ ದುರ್ಬೋಧನೆ ಮಾಡಿ ಎಬ್ಬಿಸಿದರು. ದನ್‌ಸ್ತನ್ ತಾನು ಸಹ ಕಲಹಗಾರರಿಗೆ ಸಹಾಯ ಮಾಡುವ ನಿಮಿತ್ತ ಅನ್ಯ ದೇಶದಿಂದ ತಿರಿಗಿ ಬಂದನು. ಈ ಪ್ರಕಾರ ಉಂಟಾದ ಕಲಹದಲ್ಲಿ ಕಲಹಗಾರರಿಗೆ ಜಯವುಂಟಾಗಲು, ಎದ್ವಿಯು ತನ್ನ ಸಹೋದರನಿಗೆ ಅರ್ಧ ರಾಜ್ಯವನ್ನು ಕೊಟ್ಟು ಬಿಡ ಬೇಕಾಗಿತ್ತು.

ಸ್ವಲ್ಪ ಕಾಲದೊಳಗೆ ಎದ್ವಿ ಮರಣ ಹೊಂದಲು ಎಡ್ಗರ್ ಎಂಬವನು ಯಾವ ತಡೆಯೂ ಇಲ್ಲದೆ ದೇಶವನ್ನೆಲ್ಲಾ ಆಳುತ್ತಾ ಬಂದನು. ಇವನು ಎಲ್ಲಾ ವಿಧಗಳಲ್ಲಿಯೂ ವಿರಕ್ತರನ್ನು ಆದರಿಸಿ, ಉತ್ಸಾಹ ಪಡಿಸಿ, (Odo) ಓದೋ ಎಂಬವನು ಸಾಯುವಾಗ ಆ ವಿರಕ್ತರಿಗೆ ಮುಖ್ಯನಾಗಿದ್ದ ದನ್‌ಸ್ತನ್ ಎಂಬವನನ್ನು (Canterbury) ಕಾಂತರ್‌ಬರಿ ಪಟ್ಟಿದ ಶ್ರೇಷ್ಠ ಅಧ್ಯಕ್ಷನಾಗಿ ಸ್ಥಾಪಿಸಿದನು. ಅದರಿಂದ ವಿರಕ್ತರ ಪಕ್ಷವಾಗಿದ್ದ ಚರಿತ್ರಗಾರರೆಲ್ಲರು ಇವನನ್ನು ಬಹಳ ಒಳ್ಳೆಯವನೆಂದು ಹೊಗಳಿದ್ದಾರೆ. ಆದಾಗ್ಯೂ ಇವನು ಮಹಾ ಕೆಟ್ಟ ದುರ್ಮಾರ್ಗತನವನ್ನು ನಡಿಸಿದ ಅರಸನು. ಅದಕ್ಕೆ ದೃಷ್ಟಾಂತವೇನಂದರೆ, ಒಂದು ದಿವಸ ಬಹು ಘನವಂತರಾ

ದ ತನ್ನ ಪ್ರಭುಗಳಲ್ಲಿ ಒಬ್ಬನ ಕುಮಾರ್ತೆಯು ಮಹಾ ಸೌಂದರ್ಯವ ತಿ ಎಂದು ಕೇಳಿ, ಅವಳು ಸೌಂದರ್ಯವುಳ್ಳವಳೋ ಅಲ್ಲವೋ ಎಂದು ನೋಡಿ ಕೊಂಡು ಬರುವ ನಿಮಿತ್ತ ತನಗೆ ಪ್ರಿಯನಾದ ಒಬ್ಬ ಮಂತ್ರಿಯ ನ್ನು ರಹಸ್ಯವಾಗಿ ಕಳುಹಿಸಿದನು. ಆ ಮಂತ್ರಿಯು ಆ ಹೆಣ್ಣಿನ ತಂದೆ ಯ ಅರಮನೆಗೆ ಹೋಗಿ, ಆ ಕನ್ನಿಕೆಯನ್ನು ಕಂಡು, ಅವಳು ಬಹು ರೂಪ ವತಿಯಾಗಿದ್ದದರಿಂದ ಅವಳನ್ನು ತಾನೇ ಮದುವೆ ಮಾಡಿ ಕೊಳ್ಳ ಬೇಕೆಂದು ನಿಶ್ಚಯಿಸಿ ಕೊಂಡು, ಅರಸನ ಬಳಿಗೆ ಬಂದು, ಅವಳು ಅಷ್ಟು ಸೌಂದ ರ್ಯವತಿ ಅಲ್ಲ, ನಿಮಗೆ ತಕ್ಕಂಥವಳೂ ಅಲ್ಲ, ನಿಮ್ಮ ಅಪ್ಪಣೆಯಾದರೆ ಅವಳನ್ನು ನಾನೇ ಮದುವೆ ಮಾಡಿ ಕೊಳ್ಳುತ್ತೇನೆ, ಎಂದು ವಿಜ್ಞಾಪನೆ ಮಾಡಲು, ಅರಸನು ಅದಕ್ಕೆ ಒಳ್ಳೇದೆಂದು ಉತ್ತರ ಕೊಟ್ಟನು. ಆ ತರು ವಾಯ ಆ ಮಂತ್ರಿ ಹೇಳಿದ್ದೆಲ್ಲಾ ಸುಳ್ಳೆಂದೂ, ಅವಳು ಬಹು ಸೌಂದ ರ್ಯವುಳ್ಳವಳೆಂದೂ, ಅರಸನು ಕೇಳಿ, ಹ್ಯಾಗಾದರೂ ಆ ಹೆಣ್ಣನ್ನು ತಾನೇ ಕಾಣ ಬೇಕೆಂದು ಒಂದು ದಿವಸ ಮಂತ್ರಿಯ ಮನೆಗೆ ಹೋದನು. ಆ ಮಂ ತ್ರಿಯು ಅರಸನ ಮನೋಭಾವವನ್ನು ಮುಂದಾಗಿ ತಿಳುಕೊಂಡು, ತನ್ನ ಹೆಂಡತಿಯೊಡನೆ, ಅರಸನು ಈ ಹೊತ್ತು ಮನೆಗೆ ಬರುತ್ತಾನೆ; ಆತನು ನಿನ್ನನ್ನು ಸೌಂದರ್ಯವತಿ ಎಂದು ಕಂಡರೆ ಮೋಸ ಬರುವದು. ಆದದ ರಿಂದ ನಿನ್ನನ್ನು ನೀನು ಅಲಂಕರಿಸಿ ಕೊಳ್ಳದೆ ಇರು ಎಂದು ಹೇಳಿ, ಖಂಡಿತ ವಾಗಿ ಅಪ್ಪಣೆ ಮಾಡಿದನು. ಅವಳು ತನ್ನ ಪುರುಷನು ತನಗೆ ಮುಂಚೆ ಮಾಡಿದ ವಂಚನೆಯನ್ನು ತಿಳಿದು, ಮನಸ್ಸಿನಲ್ಲಿ ಬಹು ಕೋಪ ಉಳ್ಳವ ಳಾಗಿ, ಅರಸನು ಅಲ್ಲಿಗೆ ಬಂದಾಗ ತನ್ನ ಆಭರಣಗಳನ್ನೆಲ್ಲಾ ಧರಿಸಿ ಕೊಂ ಡು, ಅರಸನನ್ನು ಮೆಚ್ಚಿಸಿದ್ದರಿಂದ, ಅರಸನು ದುರೇಚ್ಛೆಯಿಂದ ಮರುಳಾ ಗಿ, ಅವಳ ಪುರುಷನನ್ನು ಕೊಲ್ಲಿಸಿ, ತರುವಾಯ ತಾನೇ ಅವಳನ್ನು ಮ ದುವೆ ಮಾಡಿ ಕೊಂಡನು. ಇವಳ ಹೆಸರು (Elfrida) ಎಲ್ಫ್ರಿದ. ಇದರಿಂ ದ, "ಕಾಮಾತುರಾಣಾಂ ನ ಭಯಂ ನ ಲಜ್ಜಾ," ಎಂಬ ಮಾತು ಈಡೇ ರಿತು.

ಮಿಕ್ಕಾದ ವಿಷಯಗಳಲ್ಲಿ ಎಡ್ಗರ್ ಬಹು ಸಾಮರ್ಥ್ಯವುಳ್ಳ ಅರಸ ನು. ಇವನು ಆಳಿದ ಕಾಲವೆಲ್ಲಾ ಯುದ್ಧ ಕಲಹಗಳು ಇಲ್ಲದೆ, ದೇಶವೆ

ಲ್ಲಾ ಬಹು ಶಾಂತವಾಗಿದ್ದದರಿಂದ ಆ ಅರಸನನ್ನು ಶಾಂತನೆಂದು ಕರೆದರು. ಇವನು ರಾಜ್ಯ ಪರಿಪಾಲನೆ ಮಾಡುವಾಗ ಸಕ್ಸನರ ಅಧಿಕಾರವು ಬಹಳ ಅಭಿವೃದ್ಧಿಯಾಯಿತು. ಆಗ ದೇಶವೆಲ್ಲಾ ಚನ್ನಾಗಿ ಕಾಪಾಡಲ್ಪಟ್ಟಿತು. ದೇನಿಯರು ಪೂರ್ಣವಾಗಿ ಅಣಗಿ ಹೋದರು. ಮತ್ತು ಅನೇಕ ಅನ್ಯ ದೇಶಸ್ಥರು ಇಂಗ್ಲಾಂದಿಗೆ ಬಂದು, ಆ ದೇಶದವರಿಗೆ ಬಹು ಉಪಯೋಗವಾದ ಅನೇಕ ಕೈಕೆಲಸಗಳನ್ನು ಕಲಿಸಿ ಕೊಟ್ಟರು. ಆ ಕಾಲದಲ್ಲಿ ಸುತ್ತಲಿದ್ದ ದೇಶಗಳ ಚಿಕ್ಕ ಅರಸುಗಳೆಲ್ಲರೂ ಇಂಗ್ಲಾಂದಿನ ಅರಸನಿಗೆ ವಿಧೇಯರಾಗಿ ಅತನ ಅಪ್ಪಣೆಯ ಪ್ರಕಾರ ನಡಿಯುವರು. ಯಾವ ಕಡೆಯಲ್ಲಾದರೂ ಹಗೆ ಮಾಡುವವರು ಯಾರೂ ಇರಲಿಲ್ಲ.

# CHAPTER III.

## DECLINE OF THE SAXON POWER.

FROM A. D. 975 TO A. D. 1066.

## 3 ಸಂಧಿ.

## ಸಕ್ಸನರ ಧೊರೆತನವು ತಗ್ಗಿ ಹೋದದ್ದು.

ಕ್ರಿ. ಶ. 975 ಮೊದಲು ಕ್ರಿ. ಶ. 1066 ವರೆಗೂ.

ಮುಖ್ಯ ತಾರೀಖುಗಳು: (Saxon Kings) ಸಕ್ಸನ್ ಅರಸರು. (Edward II) ಎರಡನೇ ಎಡ್ವರ್ಡ್ ಅರಸನಾದದ್ದು ಕ್ರಿ. ಶ. 975. (Ethelred II) ಎರಡನೇ ಎಥೆಲ್‌ರೆಡ್ ಕ್ರಿ. ಶ. 978—1012. ತಿರಿಗಿ 1015—1016. (Edmund Ironside) ಕಬ್ಬಿಣದೆಲುವಿನ ಪಕ್ಕೆ ಎಂಬ ಎಡ್ಮಂಡ್ ಕ್ರಿ. ಶ. 1016. (Danes) ದೇನಿಯರು: (Sweyn) ಸ್ವೇನ್ ಕ್ರಿ. ಶ. 1013—1014. (Canute) ಕನ್ಯೂತ್ ಕ್ರಿ. ಶ. 1014—1036. (Harold I) ಮೊದಲನೇ ಹರೊಲ್ಡ್ ಕ್ರಿ. ಶ. 1036—1039. (Hardicanute) ಹಾರ್ಡಿಕನ್ಯೂತ್ ಕ್ರಿ. ಶ. 1039—1041. (Saxons) ಸಕ್ಸನರು: (Edward III) ಮೂರನೇ ಎಡ್ವರ್ಡ ಇಲ್ಲವೇ ಅರಿಕೆ ಮಾಡುವವನೆಂಬ ಎಡ್ವರ್ಡ್ ಕ್ರಿ. ಶ. 1041—1065. (Harold II) ಎರಡನೇ ಹರೊಲ್ಡ್ ಕ್ರಿ. ಶ. 1066. ಅದೇ ಕಾಲದ ಇಂದ್ಯ ಚರಿತ್ರೆ: ಸುಲ್ತಾನ್ ಮಹಮ್ಮದನು ಹನ್ನೆರಡು ಸಾರಿ ಇಂದ್ಯದ ಮೇಲೆ ದಂಡೆತ್ತಿದ್ದು ಕ್ರಿ. ಶ. 1001—1026. ಸೋಮನಾಥನ್ನು ಹಿಡಿದು ಕೊಳ್ಳೆ ಇಟ್ಟದ್ದು ಕ್ರಿ. ಶ. 1024—1026. ಪುರಾಣಗಳ ಕಾಲವು. ಶ್ರೇಷ್ಠ ನಾಮ: ಪ್ರಧಾನ ಅಧ್ಯಕ್ಷನಾದ (Lanfranc) ಲಾಂಫ್ರಾನ್ (Canterbury) ಕಾಂತರ್ಬರಿ ಪ್ರಧಾನ ದೇವಾಲಯವನ್ನು ಕಟ್ಟಿಸಿದ್ದು ಕ್ರಿ. ಶ. 1008—1089.

ಎಡ್ಗರ್ ಆಳಿದ ತರುವಾಯ ಅವನ ಮಗನಾದ (Edward) ಎಡ್ವರ್ಡ್ ಪಟ್ಟ ಹೊಂದಿದನು. ಇವನು ಚಿಕ್ಕ ವಯಸ್ಸಿನಲ್ಲಿ ಹೊಂದಿದ ಕ್ರೂರ ಮರಣದಿಂದ "ರಕ್ತಸಾಕ್ಷಿ" ಎಂಬುವ ಘನವಾದ ಹೆಸರು ಹೊಂದಿದನು. ಇವನು ಮರಣ ಹೊಂಧಿದ್ದು ಹ್ಯಾಗಂದರೆ,—ಹಿಂದಿನ ಸಂಧಿ

ಯಲ್ಲಿ ಹೇಳಿದ ಪ್ರಕಾರ ಎದ್ಗರ್ ಅರಸನು (Elfrida) ಎಲ್ಫ್ರಿದ ಎಂ ಬವಳನ್ನು ಅನ್ಯಾಯವಾಗಿ ಶೇರಿಸಿ ಕೊಂಡು, ಅವಳ ಗಂಡನನ್ನು ಕೊಲೆ ಮಾಡಿದನೆಂದು ಕಂಡೆವಲ್ಲ? ಇವಳು ಎದ್ಗರ್ ಸತ್ತ ಕಾಲದಲ್ಲಿ ಏಳು ವ ರುಷಪ್ರಾಯವುಳ್ಳ ತನ್ನ ಕುಮಾರನನ್ನು ಅರಸನಾಗ ಮಾಡಿ, ಎದ್ಗರನ ಮುಂಚಿನ ಹೆಂಡತಿಯ ಕುಮಾರನಾದ ಈ ಎದ್ವರ್ದ್ ಎಂಬವನನ್ನು ತೆ ಗೆದು ಹಾಕ ಬೇಕೆಂದು ನಿಶ್ಚಯಿಸಿ, ಆ ಯೋಚನೆಯನ್ನು ಈಡೇರಿಸುವ ದಕ್ಕೆ ಸಮಯ ಹುಡುಕುತ್ತಾ ಇದ್ದಳು. ರೀಗಿರುವಲ್ಲಿ ಬಾಲ್ಯ ಅರಸ ನು ಒಂದು ದಿವಸ ಬೇಟೆಯಾಡ ಹೋಗುವ ಸಮಯದಲ್ಲಿ ತನ್ನ ಪರಿ ವಾರವನ್ನು ದೂರದಲ್ಲಿ ಇರಿಸಿ ಬಿಟ್ಟು, ಎಲ್ಫ್ರಿದ ಎಂಬ ತನ್ನ ಮಲತಾ ಯಿಯ ಮಗನಾಗಿಯೂ, ತನಗೆ ಬಹು ಪ್ರಿಯ ಸಹೋದರನಾಗಿಯೂ ಇದ್ದ (Ethelred) ಎತೆಲ್‌ರೆದ್ ಎಂಬವನನ್ನು ಕಂಡು ದರ್ಶಿಸುವ ನಿಮಿ ತ್ತ ಅವನ ಮನೆಯ ಬಾಗಲ ಬಳಿಗೆ ಬಂದು ನಿಂತು, ಕುದುರೆಯಿಂದ ಇ ಳಿಯದೆ, ಸ್ವಲ್ಪ ದ್ರಾಕ್ಷೇ ರಸವನ್ನು ತೆಗೆದು ಕೊಂಡು ಬರ ಹೇಳಿದನು. ಅ ವರು ತಂದು ಕೊಟ್ಟ ರಸವನ್ನು ಕುಡಿಯುವದಕ್ಕೆ ಅವನು ಪಾತ್ರೆಯನ್ನು ಕೈಗೆ ತಕ್ಕೊಂಡಾಗಲೇ ಎಲ್ಫ್ರಿದ ಎಂಬವಳ ಕಟ್ಟಳೆಯ ಮೇರೆಗೆ ಒಬ್ಬ ಸೇ ವಕನು ಹಿಂದುಗಡೆ ಬಂದು, ಅವನ ಬೆನ್ನಿನಲ್ಲಿ ತಿವಿದನು. ಅವನು ಸಂ ಗಡಲೇ ಕುದುರೆಯನ್ನು ಬಿಟ್ಟು ಕೊಂಡು ಓಡಿದನು. ಓಡುವಾಗ ಆ ಘಾಯದಿಂದ ಅವನು ಕಳೆ ಸೊಕ್ಕಿ ಕೆಳಗೆ ಬೀಳಲು, ಅವನ ಕಾಲು ರಿಕಾ ಬಿನಲ್ಲಿ ಶಿಕ್ಕಿ ಕೊಂಡು, ಕುದುರೆಯು ಅದೇ ಪ್ರಕಾರ ಅವನನ್ನು ಎಳಕೊಂ ಡು ಓಡಿದ್ದರಿಂದ ಸತ್ತು ಹೋದನು.

ಎಲ್ಫ್ರಿದ ಎಂಬವಳು ರೀಗೆ ಎದ್ವರ್ದನನ್ನು ಕೊಲೆ ಮಾಡಿದ ತರುವಾ ಯ ಅವಳ ಕುಮಾರನಾದ ಎತೆಲ್‌ರೆದ್ ಅರಸನಾದನು, ಇವನು ಸಕ್ಸನರಾದ ಎಲ್ಲಾ ಅರಸರಿಗಿಂತಲೂ ಹೆಚ್ಚಾದ ಕಾಲ ಆಳಿಕೆ ಮಾಡಿ, ಅಧಿಕ ಉಪದ್ರಗಳ ನ್ನು ಕಂಡ ಅರಸನು. ಇವನು ಶತ್ರುಗಳು ತನ್ನ ಮೇಲೆ ಬರುವಾಗಲೆಲ್ಲಾ ಅ ವರನ್ನು ಎದುರಿಸ ಶಿದ್ಧವಾಗದೆ ಇರುವದರಿಂದ ಇವನಿಗೆ "ಆಯತ್ತವಿಲ್ಲದ ವನು" ಎಂದು ಹೆಸರಿಟ್ಟರು. ಇದಲ್ಲದೆ ಶತ್ರುಗಳು ಆಕಸ್ಮಿಕವಾಗಿ ನಾಶ ಮಾ ಡ ಬಂದ ಒಂದು ಸಮಯದಲ್ಲಿ ಅವರು ಹೋಗುವಂತೆ ಮಾಡುವದಕ್ಕೆ

ಅವನು ಮಾಡಿದ ಉಪಾಯವು ಬಹು ಅಯುಕ್ತವಾದದ್ದು. ಹ್ಯಾಗಂದರೆ,—ಅದಕ್ಕೆ ಮುಂಚೆ ಕೆಲವು ಕಾಲದ ಪರ್ಯಂತರಕ್ಕೂ ಉತ್ತರ ದಿಕ್ಕಿನವರು ಯೂರೋಪಿನ ಮಿಕ್ಕಾದ ಅನೇಕ ದೇಶಗಳಲ್ಲಿ ದಂಡೆತ್ತಿ ಕೊಂಡು ಬಂದು ಕೊಳ್ಳೆ ಮಾಡುತ್ತಾ ಇದ್ದಾಗ್ಯೂ, ಇಂಗ್ಲಾಂದ್ ದೇಶವನ್ನು ಆಳುತ್ತಾ ಬಂದ ಅರಸರು ಬಹು ಪರಾಕ್ರಮಶಾಲಿಗಳೂ, ನಿದ್ರೆ ಮಾಡದೆ ಸದಾ ಯತ್ನೈಸುವವರೂ ಆದದರಿಂದ, ಅವರು ಆ ಕಾಲದಲ್ಲಿ ಆ ದೇಶಕ್ಕೆ ಬರ ಧೈರ್ಯ ಮಾಡಲಿಲ್ಲ. ಈಗ ಈ ಅರಸನು ಬಾಲ್ಯನೂ ವಿವೇಕವಿಲ್ಲದವನೂ ಆದದರಿಂದ, ಇಂಗ್ಲಾಂದಿನ ಮೇಲೆ ದಂಡೆತ್ತಿ ಕೊಂಡು ಬರುವದಕ್ಕೆ ಇದೇ ಸಮಯವೆಂದು ಅವರು ಯುದ್ಧಕ್ಕೆ ಪ್ರಾರಂಭಿಸಲಾಗಿ, ಇಂಗ್ಲಾಂದಿನಲ್ಲಿ ವಾಸವಾಗಿದ್ದ ಇವರ ಜಾತಿಯವರು ಸಹ ಇವರಿಗೆ ಸಹಾಯ ಮಾಡುವದಕ್ಕೆ ಸಿದ್ಧವಾದರು. ಅವರು ಹೀಗೆ ಬಂದಾಗ ಸಕ್ಸನರು ಅವರನ್ನು ಧೈರ್ಯವಾಗಿ ಎದುರಿಸದೆ, "ಸಾಮೋಪಾಯದಿಂದ ಈ ಅಪಾಯವನ್ನು ನಿವರ್ತಿಸ ಬಹುದು," ಎಂದು ಬುದ್ಧಿಹೀನವಾದ ಯೋಚನೆ ಮಾಡಿ, "ನೀವು ಸಮಾಧಾನವಾಗಿ ನಿಮ್ಮ ಶೀಮೆಗೆ ಹೋಗಿ ಬಿಟ್ಟರೆ, ನಿಮಗೆ ಬೇಕಾದ ಹಣ ಕೊಡುತ್ತೇವೆ," ಎಂದು ಅವರ ಸಂಗಡ ಒಡಂಬಡಿಕೆ ಮಾಡುವದಕ್ಕೆ ಹೋದರು. ಅವರು ಅದೇ ಪ್ರಕಾರ ಆ ಸಾರಿ ಹೋಗಿ ಬಿಟ್ಟು, ನೆನಸಿದ ಸಮಯಗಳಲ್ಲೆಲ್ಲಾ ತಿರಿಗಿ ತಿರಿಗಿ ಬಂದು, ಇನ್ನೂ ಅಧಿಕಾಧಿಕ ದ್ರವ್ಯವನ್ನು ತೆಗೆದು ಕೊಂಡು ಹೋಗುವರು. ತರುವಾಯ ಆ ಅರಸನು ಮಾಡಿದ ಮಹಾ ನೀಚವಾದ ಕ್ರೂರ ಪಾತಕದಿಂದ ಅವರು ಬಹಳ ಮೂರ್ಖಿತ್ವವನ್ನು ಹೊಂದಿ, ತಮ್ಮ ಎಲ್ಲಾ ರಾಣುವೆಯ ಬಲದಿಂದ ಬಂದು, ಸಕ್ಸನ್ ಅರಸನನ್ನು ತೆಗೆದು ಹಾಕಿ, ಅವನು ಆಳಿದ ರಾಜ್ಯವನ್ನೆಲ್ಲಾ ಕಟ್ಟಿ ಕೊಂಡರು. ಆ ಚರಿತ್ರೆಯನ್ನು ಈ ಕೆಳಗೆ ತೋರಿಸುತ್ತೇವೆ.

ಆ ವೃತ್ತಾಂತವೇನಂದರೆ,—ಸಕ್ಸನರಾದ ಮುಂದಿನ ಅರಸುಗಳು ಆಯಲ್ಪಟ್ಟ ಒಂದು ದೇನಿಯರ ದಂಡನ್ನು ಶೇರಿಸಿ, ಅವರನ್ನು ಆಯಾಸ್ಥಳಗಳಲ್ಲಿ ಕಾವಲುಸೈನ್ಯಗಳಾಗಿ ಇರಿಸಿ ಇದ್ದರು. ಅವರನ್ನು ಸಕ್ಸನರಾದ ಪ್ರಜೆಗಳು ಜನ್ಮಹಗೆಯಾಗಿ ಹಗೆ ಮಾಡಿದರು. ಯಾಕಂದರೆ ಅವರು

ಶೂರರಾಗಿ ಯುದ್ಧದ ಕೆಲಸದಲ್ಲಿ ಚನ್ನಾಗಿ ಅಭ್ಯಾಸಿಸಿದವರಾದಾಗ್ಯೂ, ತಮ್ಮ ಯಜಮಾನರಿಗೆ ದ್ರೋಹ ಮಾಡುವದು ಅವರಿಗೆ ಬಳಿಕೆಯಾಗಿತ್ತು. ಜನರೆಲ್ಲರು ಆ ರಾಣುವೆಯವರನ್ನು ಅಸಹ್ಯಿಸಿರುವದನ್ನು ಎತೆಲ್‌ರೆದ್ ಅರಸನು ಕಂಡು, ಅವರನ್ನೆಲ್ಲಾ ಕೊಂದು ಬಿಟ್ಟರೆ, ಇನ್ನು ಮೇಲೆ ಅವರು ದ್ರೋಹ ಮಾಡಿ ತಮ್ಮ ಜಾತಿಯವರಿಗೆ ಸಹಾಯ ಮಾಡ ಸ್ಥಳವಿಲ್ಲದೆ ಹೋಗುವದೆಂದು ಯೋಚಿಸಿ, ಅದೇ ಪ್ರಕಾರ ಅವರನ್ನು ಒಂದೇ ದಿವಸದಲ್ಲಿ ಸರ್ವಸಂಹಾರ ಮಾಡುವ ನಿಮಿತ್ತ ಜನರಿಗೆ ಅಪ್ಪಣೆ ಕೊಟ್ಟಿದ್ದನು. ಆದದರಿಂದ ಸಕ್ಸನರೆಲ್ಲರೂ ಏಕವಾಗಿ ಎದ್ದು, ಆ ಅನ್ಯ ದಂಡುಗಳನ್ನು ಮಾತ್ರವಲ್ಲ, ಅವರ ಜಾತಿಯವರಾದ ಅನೇಕ ಪುರುಷರನ್ನೂ ಸ್ತ್ರೀಯರನ್ನೂ ಸಣ್ಣ ಮಕ್ಕಳನ್ನೂ ನಿಷ್ಠೂರವಾಗಿ ಕೊಂದು ಹಾಕಿ ಬಿಟ್ಟರು. ಈ ಮಹಾ ಪಾತಕಕ್ಕೆ ತಕ್ಕ ದಂಡನೆ ಬಹು ಶೀಘ್ರವಾಗಿ ಬಂತು. ಹ್ಯಾಗಂದರೆ,—(Denmark) ದೆನ್‌ಮಾರ್ಕ್ ದೇಶದ ಅರಸನಾದ (Sweyn) ಸ್ವೇನ್ ಎಂಬವನ ಸಹೋದರಿ ಒಬ್ಬಳು ಆ ಕಾಲದಲ್ಲಿ ಮಿಕ್ಕಾದ ದೇನಿಯರ ಸಂಗಡ ಕೊಲ್ಲಲ್ಪಟ್ಟದ್ದರಿಂದ, ಆ ಅರಸನು ದೊಡ್ಡ ಸೈನ್ಯವನ್ನು ಕೂಡಿಸಿ, ಮುಯ್ಯಿಗೆ ಮುಯ್ಯಿ ತೀರಿಸ ಬೇಕೆಂದು ಇಂಗ್ಲಾಂಡ್ ದೇಶದ ಉತ್ತರ ತೀರದಲ್ಲಿ ಇಳಿದನು. ಹೀಗೆ ಬಂದ ಶತ್ರುಗಳನ್ನು ಎದುರಿಸುವದಕ್ಕೆ ಸಕ್ಸನರಿಗೆ ಶಕ್ತಿ ಇಲ್ಲದ್ದರಿಂದ, ಆ ದೇನಿಯರು ದೇಶದೊಳಗೆ ಹೊಕ್ಕು, ಬಹು ಭಯಂಕರವಾದ ಮಹಾ ಕೇಡು ಮಾಡುತ್ತಾ ಬರಲು, ಆ ದೇಶದವರೆಲ್ಲರೂ ಬಹು ಸಂಕಟ ಪಟ್ಟರು. ಮತ್ತು ಎತೆಲ್‌ರೆದ್ ಅರಸನು (Normandy) ನೊರ್ಮಂದಿ ಶೀಮೇ ಅಧಿಪತಿಯ ಸಹೋದರಿಯನ್ನು ಮದುವೆ ಮಾಡಿ ಕೊಂಡಿದ್ದ ಕಾರಣ ಆ ದೇಶಕ್ಕೆ ಆಶ್ರಯಕ್ಕಾಗಿ ಓಡಿ ಹೋಗಲು, ಸ್ವೇನ್ ಎಂಬವನು ಎದುರಿಸುವವರಿಲ್ಲದೆ ದೇಶಕ್ಕೆಲ್ಲಾ ಅಧಿಕಾರಿಯಾದನು.

ಆದಾಗ್ಯೂ ಸ್ವಲ್ಪ ಕಾಲದಲ್ಲಿಯೇ ಆ ಜಯವೀರನು ಸಾಯಲಾಗಿ, ಇಂಗ್ಲಾಂಡ್ ದೇಶದವರು ತಮ್ಮ ಮುಂಚಿನ ಅರಸನಾದ ಎತೆಲ್‌ರೆದ್ ಎಂಬವನನ್ನು ತಿರಿಗಿ ಕರೇ ಕಳುಹಿಸಿದ್ದರಿಂದ ಅವನು ಯಥಾಪ್ರಕಾರ ರಾಜ್ಯ ಹೊಂದುವದಕ್ಕೆ ಯುದ್ಧ ಪ್ರಾರಂಭಿಸಿದನು. ಆದರೂ ಸ್ವೇನ್

ಎಂಬವನ ಮಗನಾದ (Canute) ಕನ್ಯೂತ್ ಎಂಬವನು ತನ್ನ ತಂದೆಯ ಹಾಗೆ ವೀರನಾದದರಿಂದ ದೇಶವನ್ನು ಹಿಂತಿರುಗಿಸಿ ಕೊಳ್ಳುವದು ಸುಲಭವಾಗಿರಲಿಲ್ಲ. ಸಕ್ಸನ್ ರಾಜ್ಯಕ್ಕೆ ಪಟ್ಟದ ಧೊರೆಯಾದ (Edmund) ಎಡ್ಮುಂದ್ ಎಂಬವನು ಬಹು ಪರಾಕ್ರಮದಿಂದ ಹೋರಾಡಿದಾಗ್ಯೂ ಅವನು ಅನೇಕ ಸಾರಿ ಸೋತು ಹೋದನು.

ಎತೆಲ್‌ರೆದ್ ಸತ್ತಾಗ ಈ ಎಡ್ಮುಂದ್ ಅರಸನಾಗಿ ಹಿಂತೆಗಿಯದ ಸಾಧನೆಯಿಂದ ಯುದ್ಧ ನಡಿಸಿದನು. ಇವನು ಮನಸ್ಸು ಸಡ್ಲ ಬಿಡದೆ ದೃಢವಾಗಿ ಹೋರಾಡುತ್ತಾ ಬಂದ ನಿಮಿತ್ತ ಇವನಿಗೆ ಕಬ್ಬಿಣದೆಲುವಿನ ಪಕ್ಕೆ ಅರ್ಥವುಳ್ಳ (Ironside) ಐರನ್‌ಸೈದ್ ಎಂಬ ಬಿರುದಿನ ಹೆಸರು ಬಂತು. ಇವನಿಗೂ ಕನ್ಯೂತ್ ಎಂಬವನಿಗೂ ಉಂಟಾದ ಯುದ್ಧದಲ್ಲಿ ಉಭಯ ಪಕ್ಷದವರೂ ಬಹು ಧೈರ್ಯವಾಗಿ ಹೋರಾಡಿದ ಯುದ್ಧಗಳು ನಡೆದವು. ಆದಾಗ್ಯೂ ಸಕ್ಸನ್ ಅರಸನ ಸೈನ್ಯದಲ್ಲಿ ಕೆಟ್ಟ ದ್ರೋಹಿಗಳು ಕೆಲವರು ಇದ್ದರು. ಇವರಲ್ಲಿ ಮುಖ್ಯವಾದವನು (Edric) ಎದ್ರಿಕ್ ಎಂಬ ಪ್ರಭುವು. ಆಗ ಉಂಟಾದ ಮೊದಲನೇ ಯುದ್ಧದಲ್ಲಿ ಎಡ್ಮುಂದ್ ಅರಸನ ಮುಖದ ಹೋಲಿಕೆಯುಳ್ಳ ಒಬ್ಬ ಪ್ರಭುವು ಮಡಿದು ಹೋಗಲು, ಇವನು ಅವನ ತಲೆಯನ್ನು ತೆಗದು, ಈಟಿಯ ಮೊನೆಯಿಂದ ಎತ್ತಿ ಹಿಡಿದು, ಸ್ವದೇಶಸೈನ್ಯದವರಿಗೆ ತೋರಿಸಿ, "ಇಗೋ ಅರಸನು ಸತ್ತನು," ಎಂದು ಕೂಗಿದನು. ಅದನ್ನು ಕಂಡು ಸಕ್ಸನರೆಲ್ಲರೂ ಬಹು ವ್ಯಸನ ಪಟ್ಟು ಹಿಂತೆಗಿಯ ಪ್ರಾರಂಭಿಸಿದರು. ಅರಸನು ಅದು ಅಪದ್ಧವೆಂದು ತನ್ನ ರಾಣುವೆಯವರೆಲ್ಲರೂ ತಿಳುಕೊಳ್ಳುವದಕ್ಕೆ ಶಿರಸ್ತ್ರಾಣವನ್ನು ತೆಗದು ಬಿಟ್ಟು, ತನ್ನ ಮುಖವನ್ನು ಅವರಿಗೆ ತೋರಿಸಿದನು. ಅದರಿಂದ ಅರಸನು ಸಾಯಲಿಲ್ಲವೆಂದು ಎಲ್ಲರೂ ಬಹಳವಾಗಿ ಆರ್ಭಟಿಸಿ, ತಿರಿಗಿ ಯುದ್ಧ ತೊಡಗಿದರು. ಆದಾಗ್ಯೂ ಆ ದಿನ ಒಬ್ಬರಿಗೂ ಸ್ಥಿರವಾದ ಜಯವಾಗಲಿಲ್ಲ. ಮತ್ತೊಂದು ಯುದ್ಧದಲ್ಲಿ (Edric) ಎದ್ರಿಕ್ ಎಂಬ ದ್ರೋಹಿಯು ತಾನು ಸಕ್ಸನರಿಗೆ ಶೇರಿದವನೆಂದು ತೋರಿಸಿ, ಯುದ್ಧ ಪ್ರಾರಂಭಿಸಿದ ಸಂಗಡಲೇ ತನಗೆ ಶೇರಿದವರ ಸಂಗಡ ಓಡಿ ಹೋದದರಿಂದ ಕನ್ಯೂತ್ ಎಂಬ ಎದಿರಿಯಾದ ಅರಸನಿಗೆ ಜಯವಾಯಿತು.

## ಸಂಧಿ 3. ಕನ್ಯೂತ್ ಅರಸನಾದದ್ದು.

ಈ ಪ್ರಕಾರ ಬಹು ಕಾಲ ಯುದ್ಧ ಮಾಡಿದ ತರುವಾಯ ಕಡೆಯಲ್ಲಿ ಉಭಯ ಪಕ್ಷದವರ ಮುಖ್ಯಾಧಿಕಾರಿಗಳು ಕೂಡಿ ಬಂದು, ಆ ಅರಸರು ರಾಜ್ಯವನ್ನು ಎರಡು ಭಾಗ ಮಾಡಿ, ಎದ್ಮುಂದನು ದಕ್ಷಿಣ ಭಾಗವನ್ನು ಆಳುವಂತೆಯೂ, ಕನ್ಯೂತ್ ಉತ್ತರ ಭಾಗವನ್ನು ಆಳುವಂತೆಯೂ, ಒಬ್ಬನು ಸತ್ತರೆ ಮತ್ತೊಬ್ಬನು ತರುವಾಯ ದೇಶವನ್ನೆಲ್ಲಾ ಆಳುವಂತೆಯೂ, ಒಡಂಬಡಿಕೆ ಮಾಡಿ ಕೊಳ್ಳುವ ಹಾಗೆ ಮಾಡಿದರು. ಈ ಒಡಂಬಡಿಕೆಯಿಂದ ಇನ್ನೂರು ವರುಷಗಳಿಗಿಂತ ಅಧಿಕವಾಗಿ ದೇಶವನ್ನು ಹಾಳು ಮಾಡಿ ಅಪರಿಮಿತವಾದ ಕೇಡುಗಳಿಗೆ ಹೇತುವೆಯಾಗಿದ್ದ ದೇನಿಯರಿಗೂ ಸಕ್ಸನರಿಗೂ ಉಂಟಾದ ಯುದ್ಧವು ಮುಗಿಯಿತು.

ಇದರ ತರುವಾಯ ಸ್ವಲ್ಪ ಕಾಲದಲ್ಲಿ ಎದ್ಮುಂದ್ ತನ್ನ ರಾಜಸಭೆಗೆ ಶೇರಿದ ಒಬ್ಬನಿಂದ ಕೊಲ್ಲಲ್ಪಟ್ಟನು. ಆದದರಿಂದ ಮುಂಚೆ ಹೇಳಿದ ಒಡಂಬಡಿಕೆಯ ನಿಬಂಧನೆಯ ಪ್ರಕಾರ ಕನ್ಯೂತನು ಇಂಗ್ಲಾಂದ್ ದೇಶದ ರಾಜಪಟ್ಟವನ್ನು ಹೊಂದಿದನು. ಮತ್ತು ಇವನು (Norway) ನೋರ್ವೆ ದೇಶವನ್ನೂ (Denmark) ದೆನ್‌ಮಾರ್ಕ್ ದೇಶವನ್ನೂ ಆಳಿದ್ದರಿಂದ ಮೂರು ಶೀಮೆಗಳನ್ನು ಒಂದಾಗಿ ಆಳಿದ ಚಕ್ರವರ್ತಿಯಾದನು. ಎದ್ಮುಂದನ ಬಾಲಕುಮಾರರಾದ ಇಬ್ಬರೂ (Sweden) ಸ್ವೀಡೆನ್ ದೇಶದ ಅರಸನ ಬಳಿಗೆ ಮೊದಲಾಗಿ ಕಳುಹಿಸಲ್ಪಟ್ಟರು. ತರುವಾಯ (Hungary) ಹುಂಗರಿ ದೇಶಕ್ಕೆ ಕಳುಹಿಸಲ್ಪಟ್ಟರು. ಆ ದೇಶದಲ್ಲಿ ಅವರಲ್ಲಿ ಚಿಕ್ಕವನಾದ (Edward) ಎದ್ವರ್ದ್ ಎಂಬವನು ಮದುವೆ ಮಾಡಿ ಕೊಂಡು, ಮುಂದಾಗಿ ಹೇಳಲ್ಪಡುವ (Edgar Atheling) ಎದ್ಗರ್ ಅಥಿಲಿಂಗ್ ಎಂಬ ಕುಮಾರನನ್ನೂ (Scotland) ಸ್ಕೊತ್ಲಾಂದ್ ದೇಶದ ರಾಣಿಯಾದ (Margaret) ಮರ್ಗ್ರೆತ್ ಎಂಬ ಕುಮಾರ್ತೆಯನ್ನೂ ಹೆತ್ತನು.

ಕನ್ಯೂತ್ ಎಂಬವನು ಆಳಿದ ಮೊದಲಲ್ಲಿ ಯುದ್ಧಗಳೂ ಕಲಹಗಳೂ ನಡಿದ ಮುಂಚಿನ ಕಾಲದಲ್ಲಿ ಹ್ಯಾಗೋ ಹಾಗೆಯೇ ಕ್ರೂರವಾಗಿಯೂ ಭಯಂಕರವಾಗಿಯೂ ಆಳಿದನು. ಸಕ್ಸನರಾದ ಪ್ರಭುಗಳಲ್ಲಿ ಅನೇಕರನ್ನು ಕೊಲೆ ಮಾಡಿ, ಅವರ ಭೂಸ್ವಾಸ್ಥ್ಯಗಳನ್ನು ತನ್ನ ಕಡೆಯ ಬಲಶಾಲಿಗಳಾದ ಅಧಿಕಾರಿಗಳಿಗೆ ಹಂಚಿ ಕೊಟ್ಟನು. ತನಗೆ ಹೊಸದಾಗಿ

ಸಿಕ್ಕಿದ ರಾಜ್ಯದಲ್ಲಿರುವ ಜನವನ್ನು ಬಹು ಖಂಡಿತವಾಗಿ ನಡಿಸಿದ್ದರಿಂದ, ಅವರು ತನ್ನ ಅಧಿಕಾರವನ್ನು ಅಸಡ್ಡೆ ಮಾಡಿ ಕಲಹ ಮಾಡಲಾರರೆಂದು ನೆನಸಿ, ಅವರಿಗೆ ಜಯ ತೋರಿಸಿದನು.

ಆದಾಗ್ಯೂ ಆ ತರುವಾಯ ಅವನು ಶಾಂತ ಗುಣ ಉಳ್ಳವನಾಗಿ, ತನ್ನ ರಾಜ್ಯದವರು ತನಗೆ ಒಳ ಬೀಳುವದು ಮಾತ್ರವಲ್ಲದೆ, ತನ್ನನ್ನು ಅವರು ಸ್ನೇಹಿಸ ಬೇಕೆಂದು ಅಪೇಕ್ಷಿಸಿ, ನಯ ತೋರಿಸಿದನು. ಅವನು ತನಗೆ ಅವಶ್ಯವಿಲ್ಲದ ದೇಸಿಯರನ್ನು ತಮ್ಮ ದೇಶಕ್ಕೆ ಕಳುಹಿಸಿ ಬಿಟ್ಟನು. ಇದಲ್ಲದೆ ಸಕ್ಸನರ ಪ್ರಮಾಣಗಳನ್ನೂ ಮರ್ಯಾದೆಗಳನ್ನೂ ಬಹು ದೃಢವಾಗಿ ಕೈಕೊಳ್ಳುತ್ತಾ ಬಂದನು. ಅವನ ಯೌವನದ ಬಲವೂ ಮನೋತ್ಸಾಹವೂ ಕಳೆದು ಹೋದ ಪ್ರಕಾರವೇ ಅವನ ಕೆಟ್ಟತನವೂ ಮೂರ್ಖತ್ವವೂ ಕಳೆದು ಹೋದವು. ಮತ್ತು ಆ ಸಮಯದಲ್ಲಿ ಅವನು ದೇವಭಕ್ತನೆಂದನ್ನಿಸಿ ಕೊಂಡು, ಆ ಕಾಲದ ವ್ಯರ್ಥ ಭಕ್ತಿಯ ಆಚಾರಗಳ ಪ್ರಕಾರ, (Rome) ರೋಮಾಪುರಿಗೆ ಯಾತ್ರೆ ಮಾಡಿದನು. ಅಂಥಾ ಯಾತ್ರೆ ಮಾಡುವದಕ್ಕಿಂತ ಅಧಿಕವಾದ ಪುಣ್ಯಕ್ರಿಯೆಯು ಒಂದೂ ಇಲ್ಲವೆಂದು ಆ ಕಾಲದಲ್ಲಿ ಎಣಿಸಲ್ಪಟ್ಟಿತ್ತು. ಇದಲ್ಲದೆ ತನಗೆ ಹೊಸದಾಗಿ ಸಿಕ್ಕಿದ ರಾಜ್ಯದಲ್ಲಿ ತನ್ನನ್ನು ಇನ್ನೂ ಬಲ ಪಡಿಸಿ ಕೊಳ್ಳುವ ಹಾಗೆ, (Normandy) ನೋರ್ಮಂದಿ ದೇಶಾಧಿಪತಿಯ ಸಹೋದರಿಯಾಗಿಯೂ, ತನಗೆ ಮುಂಚೆ ಅರಸನಾಗಿದ್ದ ಎತೆಲ್‌ರೆಡ್ ಎಂಬವನ ವಿಧವೆಯಾಗಿಯೂ ಇದ್ದ (Emma) ಎಮ್ಮ ಎಂಬವಳನ್ನು ಮದುವೆ ಮಾಡಿ ಕೊಂಡನು.

ಇವನು ಮಹಾ ಅಪೂರ್ವವಾದ ಅಧಿಕಾರ ಉಳ್ಳವನಾಗಿ ಮೂರು ದೊಡ್ಡ ರಾಜ್ಯಗಳನ್ನು ಆಳಿದ್ದರಿಂದ ಅವನ ಪರಿವಾರದವರು ಅನೇಕ ಸಾರಿ ಅವನಿಗೆ ಇಚ್ಛಕ ವಾಕ್ಯಗಳಿಂದ ಮುಖಸ್ತುತಿ ಮಾಡುವರು. ಅವನು ಅವರನ್ನು ಗದರಿಸಿದ ವಿಧವನ್ನು ತೋರಿಸುವ ಒಂದು ಒಳ್ಳೇ ಚರಿತ್ರೆಯುಂಟು. ಏನಂದರೆ, — ಒಂದು ದಿವಸ ಅವನ ರಾಜಸಭೆಯವರಲ್ಲಿ ಕೆಲವರು ಅವನ ಸಮೀಪದಲ್ಲಿ "ಈ ಮಹಾ ಅರಸನಿಂದ ಆಗದ ಕಾರ್ಯ ಉಂಟೋ? ಇವನ ಚಿತ್ತದ ಪ್ರಕಾರ ಎಲ್ಲಾ ಆಗುತ್ತದಲ್ಲವೋ"? ಎಂದು ಹೇಳಿದರು. ಸಂಗಡಲೇ ಅವನು ಹತ್ರ ಇದ್ದ ಸಮುದ್ರತೀರದಲ್ಲಿ ತನಗೆ ಒಂದು

ಆಸನವನ್ನು ಇಳಿಸ ಹೇಳಿ, ತನ್ನ ಪರಿಜನರು ಸುತ್ತಲೂ ಬರಲು, ತಾನು ಅಲ್ಲಿಗೆ ಹೋಗಿ, ಆ ಆಸನದ ಮೇಲೆ ಕುಳಿತು ಕೊಂಡು, ಆ ಸಮಯದಲ್ಲಿ ಸಮುದ್ರ ಉಬ್ಬುತ್ತಾ ಇದ್ದದರಿಂದ ಹೆಚ್ಚುತ್ತಾ ಬರುವ ಸಮುದ್ರದ ತೆರೆಗಳನ್ನು ನೋಡಿ, "ನೀನು ನನ್ನ ಪಾದಗಳನ್ನು ನೆನೆಸದೆ ವಾರೆಯಾಗಿ ಹೋಗು," ಎಂದು ಅಧಿಕಾರದಿಂದ ಕಟ್ಟಳೆ ಮಾಡಿದನು. ಹೀಗಿರುವಲ್ಲಿ ಮನುಷ್ಯನು ಹೇಳುವ ಮಾತನ್ನು ಕೇಳದೆ ಸಮುದ್ರದ ಅಲೆಗಳು ಇನ್ನೂ ಹೆಚ್ಚಿ, ಅವನು ಕುಳಿತಿದ್ದ ಆಸನದ ಸುತ್ತಲೂ ಚಳಚಳನೆ ಓಡಿ ಬರುವಾಗ, ಆ ಅರಸನು ತನ್ನ ಪರಿವಾರವನ್ನು ನೋಡಿ, "ಈ ಮಟ್ಟಿಗೂ ನೀನು ಬರುವಿ, ಇದಕ್ಕೀಚೆ ಬರಲಾರಿ ಎಂದು ಸಮುದ್ರವನ್ನು ಸಹ ಕಟ್ಟುವದಕ್ಕೆ ಸ್ವಾಧೀನ ಬಲವು ಒಬ್ಬನಿಗೆ ಮಾತ್ರ ಉಂಟು," ಎಂದು ಮೃದುವಾಗಿ ಭಯಭಕ್ತಿಯಾದ ಶಬ್ದದಿಂದ ಹೇಳಿದನು. ಅವರೆಲ್ಲರು ನಾಚಿ ಮೌನವಾಗಿದ್ದರು.

ಕನ್ಯೂತನು ಹತ್ತೊಂಬತ್ತು ವರುಷ ರಾಜ್ಯವಾಳಿ ಸತ್ತ ತರುವಾಯ ಅವನ ಕುಮಾರನಾದ (Harold) ಹರೊಲ್ಡನು ಇಂಗ್ಲಾಂಡ್ ರಾಜ್ಯವನ್ನು ಹೊಂದಿದನು. ಕನ್ಯೂತನು (Emma) ಎಮ್ಮ ಅರಸಿಯಿಂದ ಹೆತ್ತ ಕುಮಾರನಾದ (Hardicanute) ಹಾರ್ಡಿಕನ್ಯೂತ್ ಎಂಬವನಿಗೆ ಪಟ್ಟ ಕಟ್ಟ ಮುಂದಾಗಿ ಯತ್ನ ಮಾಡಿದ್ದನು. ಆದಾಗ್ಯೂ ಅವನು ಡೆನ್‌ಮಾರ್ಕ ದೇಶಕ್ಕೆ ಹೋಗಿರುವಾಗ್ಯೆ ಅರಸನು ಸತ್ತದ್ದರಿಂದ ಸಮೀಪದಲ್ಲಿದ್ದ ಹರೊಲ್ಡ್ ಎಂಬವನಿಗೆ ಸಂಗಡಲೇ ಪಟ್ಟ ಧರಿಸಿದರು. ಆದದರಿಂದ ಸ್ವದೇಶಕಲಹ ಉಂಟಾಗದಂತೆ ಆ ಇಬ್ಬರಿಗೂ ದೇಶವನ್ನು ವಿಭಾಗಿಸಿ ಕೊಟ್ಟರು. ಅದರಲ್ಲಿ (Thames) ತೇಮ್ಸ್ ನದಿಗೆ ದಕ್ಷಿಣವಾಗಿರುವ ಶೀಮೆಗಳೆಲ್ಲಾ ಚಿಕ್ಕವನಿಗೆ ಸ್ವಾಸ್ಥ್ಯವಾಗಿ ಕೊಡಲ್ಪಟ್ಟವು.

ಹರೊಲ್ಡ್ ಎಂಬವನು ಅತಿ ವೇಗವಾಗಿ ಓಡುವವನಾದದರಿಂದ ಅವನಿಗೆ "ಶಶಪಾದ" ಎಂಬ ಅರ್ಥವುಳ್ಳ (Harefoot) ಹೇರ್‌ಫೂತ್ ಎಂಬ ಹೆಸರಿಟ್ಟರು. ಅವನು ಆಳಿದ ಕಾಲದಲ್ಲಿ (Ethelred) ಎತೆಲ್‌ರೆಡ್ ಎಂಬ ಅರಸನ ಕುಮಾರನಾದ (Alfred) ಆಲ್ಫ್ರೆಡ್ ತನ್ನ ತಾಯಿಯನ್ನು ದರ್ಶಿಸುವದಕ್ಕೆ ಇಂಗ್ಲಾಂಡಿಗೆ ಬಂದಿದ್ದಾಗ ಬಹು ಕ್ರೂರವಾಗಿ

ಕೊಲ್ಲಲ್ಪಟ್ಟನು. ಹರೊಲ್ಡನ ಕಾಲದಲ್ಲಿ ಬೇರೆ ವಿಶೇಷವಾದ ಕಾರ್ಯ ನಡಿಯಲಿಲ್ಲ. ಇವನು ಸ್ವಲ್ಪ ಕಾಲ ಮಾತ್ರ ರಾಜ್ಯಭಾರ ಮಾಡಿದ್ದೇ ಹೊರ್ತು ಉಪಯೋಗವಾದ ಯಾವದೊಂದು ಕಾರ್ಯವನ್ನು ಮಾಡ ಲಿಲ್ಲ. ಅವನ ತರುವಾಯ (Hardicanute) ಹಾರ್ಡಿಕನ್ಯೂತ್ ಪಟ್ಟವ ನ್ನು ಹೊಂದಿದನು. ಈ ಅರಸನು ಕುಡಿಯುವವನು. ಒಂದು ದಿವಸ ಮ ದುವೆಯ ಔತಣದಲ್ಲಿ ಮಿತಿ ಮೀರಿ ತಿಂದು ಕುಡಿದದರಿಂದ ರೋಗ ಬಂ ದು ಸತ್ತು ಹೋದನು.

ಇದರ ತರುವಾಯ ಪಟ್ಟಕ್ಕೆ ಸ್ವತಂತ್ರಿಕರಾದ ಸಕ್ಸನ್ ರಾಜವಂಶದ ವರಿಗೆ ಪಟ್ಟವಾದದರಿಂದ ಆ ಜಾತಿಯ ಜನರೆಲ್ಲಾ (Ethelred) ಎತೆ ಲ್‌ರೆದ್ (Emma) ಎಮ್ಮ ಎಂಬಿವರ ಕುಮಾರನಾದ (Edward) ಎದ್ವ ರ್ಡ್ ರಾಜ್ಯವನ್ನು ಹೊಂದಿದಾಗ ಬಹಳ ಸಂತೋಷ ಪಟ್ಟರು. ಇವ ನು ಆಳಿದ ಕಾಲದಲ್ಲಿ ದೇನಿಯರಿಗೂ ಸಕ್ಸನರಿಗೂ ಉಂಟಾಗಿದ್ದ ಜಗಳ ಗಳು ನಿವರ್ತಿಯಾದವು. ಕನ್ಯೂತ್ ಎಂಬವನ ಕುಮಾರರಲ್ಲಿ ಒಬ್ಬನು ಮಾತ್ರ ಇನ್ನೂ ಜೀವದಿಂದಿದ್ದನು. ಇವನಿಗೆ ದೆನ್‌ಮಾರ್ಕ್ ದೇಶದಲ್ಲಿ ಉಂಟಾದ ಕಲಹಗಳಿಂದ ಇಂಗ್ಲಾಂಡಿನ ಮೇಲೆ ದಂಡೆತ್ತಿ ಕೊಂಡು ಬರು ವದಕ್ಕೆ ಸಮಯವಾಗಲಿಲ್ಲ. ಇಂಗ್ಲಾಂಡಿನಲ್ಲಿದ್ದ ದೇನಿಯರು ಅಮರಿಕೆ ಯಾಗಿ ನಾನಾ ಉದ್ಯೋಗಗಳಲ್ಲಿ ಅಮರಿ ಕೊಂಡರು. ಇದಲ್ಲದೆ ಕೆಲ ವರುಷಗಳ ತರುವಾಯ (Normans) ನೊರ್ಮನ್ನರು ಬಂದು ಇವರ ನ್ನೂ, ತಲತಲಾಂತ್ರಗಳಾಗಿ ಇವರ ಸಂಗಡ ಯುದ್ಧ ಮಾಡುತ್ತಾ ಬಂ ದ ಸಕ್ಸನರನ್ನೂ ವಿಧೇಯರಾಗ ಮಾಡಿ ಕೊಂಡರು.

ಈಗ್ಯೆ ಕಿರೀಟ ಧರಿಸಿದ ಅರಸನು ವೈದೀಕ ಗ್ರಂಥಗಳಲ್ಲಿ ಬಹಳ ತೇ ರಿದವನೂ ಬಹು ದೇವಭಕ್ತಿಯುಳ್ಳವನೂ ಆಗಿದ್ದನು. ಅವನು ಬಹುಶಾ ಅಂಥಾ ಕಾರ್ಯಗಳ ಮೇಲೆ ಮನಸ್ಸನ್ನು ಸಲ್ಲಿಸಿದ್ದರಿಂದ ವಿರಕ್ತರ ಮಠ ದಲ್ಲಿ ಇರ ತಕ್ಕವನೇ ಹೊರ್ತು ಸಿಂಹಾಸನದ ಮೇಲೆ ಕೂಡ್ರ ತಕ್ಕವನಲ್ಲ ವೆಂದು ಹೇಳ ಬಹುದು. ಆದಾಗ್ಯೂ ಅವನು ಬಹು ಶಾಂತನಾಗಿದ್ದು, ನೀತಿ ನ್ಯಾಯ ತಪ್ಪದೆ ಆಳಿದ್ದರಿಂದ, ಬಹು ಕಾಲದ ಮಟ್ಟಿಗೂ ಸಕ್ಸನರು ಅವನ ಆಳಿಕೆಯನ್ನು ಸಂತೋಷದಿಂದ ನೆನಸಿ ಕೊಳ್ಳುವರು. ನೊರ್ಮನ್ನ

ರು ಬಂದು ಆ ದೇಶದವರನ್ನು ಬಹಳ ಇಕ್ಕಟ್ಟು ಪಡಿಸಿ ಶ್ರಮೆ ಪಡಿಸಿದ ಕಾಲದಲ್ಲಿ, ಜನರೆಲ್ಲರೂ (Edward) ಎದ್ವರ್ದನು ಏರ್ಪಡಿಸಿದ ಪ್ರಮಾಣಗಳನ್ನೂ ಕೊಟ್ಟ ಮಾನ ಘನಗಳನ್ನೂ ಮನಸ್ಸಿನಲ್ಲಿ ನೆನಸಿ ಕೊಂಡು, ಈ ಕಾಲದಲ್ಲಿ ಹಾಗೆ ಒಬ್ಬನೂ ಮೇಲು ಮಾಡುವದಿಲ್ಲ, ನ್ಯಾಯ ವಿಚಾರಿಸುವದೂ ಇಲ್ಲ ಎಂದು ನಿಟ್ಟುಸುರು ಬಿಟ್ಟು ವ್ಯಸನ ಪಡುವರು.

(Edward) ಎದ್ವರ್ದ್ ಪಟ್ಟವನ್ನು ಹೊಂದಿದ ವಿಧ ಹ್ಯಾಗಂದರೆ,— (Godwin) ಗೊಡ್ವಿನ್ ಎಂಬ ಒಬ್ಬ ಪ್ರಭುವಿನ ಸಹಾಯದಿಂದ ಆ ಪಟ್ಟವು ಅವನಿಗೆ ದೊರಕಿತು. ಆ ಗೊಡ್ವಿನನು ಮುಂಚೆ ಬಡ ಒಕ್ಕಲಿಗನಾಗಿದ್ದು, ತರುವಾಯ ಬಹಳ ಅಧಿಕಾರವನ್ನೂ ಘನವನ್ನೂ ಹೊಂದಿದ್ದು ಮಾತ್ರವಲ್ಲದೆ, ಬೇರೆ ಜನರೆಲ್ಲರೂ ಅವನ ಮೇಲೆ ಅಧಿಕ ವಿಶ್ವಾಸವಾಗಿದ್ದರು. ಅವನು ಮೊದಲಲ್ಲಿ ಎದ್ವರ್ದನಿಗೆ ಸಹಾಯವಾಗಿದ್ದನು. ಸ್ವಲ್ಪ ಕಾಲದಲ್ಲಿಯೇ ಅವರ ಐಕ್ಯಕ್ಕೆ ವಿಘಾತ ಉಂಟಾಯಿತು. ಹ್ಯಾಗಂದರೆ, ತನ್ನ ಸಹೋದರನಾದ ಅಲ್ಫ್ರೆದನು ಕೊಲ್ಲಲ್ಪಟ್ಟದ್ದಕ್ಕೆ (Godwin) ಗೊಡ್ವಿನ್ ಕಾರಣವಾಗಿದ್ದನೆಂದು ಅರಸನು ಅನುಮಾನ ಪಟ್ಟು, ಇದರ ನಿಮಿತ್ತ ಅವನನ್ನು ಹಗೆ ಮಾಡಿದಾಗ್ಯೂ, ಅವನು ಬಹು ಬಲಶಾಲಿಯಾದದರಿಂದ ಅವನಿಗೆ ಜಯ ಪಡುತ್ತಾ ಇದ್ದನು.

ಇದಲ್ಲದೆ ಆ ರಾಜ್ಯದಲ್ಲಿದ್ದ ಬಲಶಾಲಿಗಳಾದ ಪ್ರಭುಗಳಿಗೆ ಸಕ್ಸನ್ ಅರಸರು ದೊಡ್ಡ ಶೀಮೆಗಳನ್ನು ಆಳುವಂತೆ ಒಪ್ಪಿಸುವದು ಬಹಳ ದಿವಸಗಳಿಂದ ಬಳಿಕೆಯಾಗಿತ್ತು. ಇಂಥಾ ಪ್ರಭುಗಳು ಬಹಳ ಅಧಿಕಾರವೂ ಮಾತುಚಾರಿಯೂ ಉಳ್ಳವರಾದದರಿಂದ ಅರಸನನ್ನು ಸಹ ತಮ್ಮ ಮನಸ್ಸಿನ ಪ್ರಕಾರ ನಡಿಸುವರು. ಸಕ್ಸನ್ ಅರಸರು ಆಳಿದ ಕಡೇ ಕಾಲಗಳಲ್ಲಿ ಈ ವಾಡಿಕೆಯಿಂದ ಅನೇಕ ಕೇಡುಗಳು ಬೆಳದವು. ಹ್ಯಾಗಂದರೆ, ಆ ಪ್ರಭುಗಳಲ್ಲಿ ಕೆಲಹರು ಮಾಡಿದ ದ್ರೋಹದಿಂದ ದೇನಿಯರು ಆ ದೇಶದಲ್ಲಿ ಒಂದು ಭಾಗವನ್ನು ಕಟ್ಟಿ ಕೊಂಡಿದ್ದರು. ಮತ್ತು ಎದ್ವರ್ದ್ ಅರಸನು ಆಳಿದ ಕಾಲದಲ್ಲಿ ಅವನಿಗೆ ಅರಸನೆಂಬ ಹೆಸರು ಮಾತ್ರವೇ ಹೊರ್ತು ಯಥಾಸ್ಥಿತಿಯಾಗಿ ಗೊಡ್ವಿನ್ ಎಂಬವನೂ ಅವನ ಕುಟುಂಬ

ದವರೂ ಹೆಚ್ಚು ಕಡಿಮೆ ದೇಶದ ಮೇಲೆಲ್ಲಾ ಅಧಿಕಾರ ನಡಿಸುತ್ತಾ ಬಂದರು.

ಆ ಅರಸನು ಬಹು ಇಂಪಾದ ಗುಣ ಲಕ್ಷಣಗಳುಳ್ಳವಳಾದ (Godwin) ಗೊಡ್ವಿನನ ಕುಮಾರ್ತೆಯನ್ನು ಮದುವೆ ಮಾಡಿ ಕೊಂಡು, ಅವಳನ್ನು ಬಹು ಅಸಡ್ಡೆ ಮಾಡುತ್ತಾ ಬಂದನು. ಇದರಿಂದ ಅವನಿಗೂ ಗೊಡ್ವಿನನಿಗೂ ಉಂಟಾಗಿದ್ದ ಛೇದವು ಬಹಳ ಹೆಚ್ಚಿತು. ಅದರ ತರುವಾಯ ಬೇರೊಂದು ವಿಘಾತವೂ ಸಂಭವಿಸಿತು. ಅದೇನಂದರೆ, — ಅರಸನು ನೊರ್ಮಂದಿ ದೇಶದಲ್ಲಿ ಬಹಳ ದಿವಸ ನಿವಾಸವಾಗಿದ್ದದರಿಂದ ಆ ದೇಶದವರ ಮೇಲೆ ಬಹಳ ಪ್ರೀತಿ ಪಟ್ಟು, ಅವರಲ್ಲಿ ಅನೇಕರನ್ನು ಇಂಗ್ಲಾಂದಿಗೆ ಬರ ಮಾಡಿ, ಅವರಿಗೆ ಮುಖ್ಯವಾದ ಉದ್ಯೋಗಗಳನ್ನು ಕೊಟ್ಟದ್ದು ಸ್ವದೇಶಪ್ರಜೆಗಳಿಗೆ ಬಹು ವ್ಯಸನವಾಗಿತ್ತು. ಮತ್ತು ಮುಖ್ಯವಾಗಿ ಗೊಡ್ವಿನನಿಗೆ ಅದು ತಾಳ ಕೂಡದ ಕಾರ್ಯವಾಗಿತ್ತು. ಹೀಗಿರಲಾಗಿ ಒಂದು ದಿವಸ (Norman) ನೊರ್ಮಾನ್ಯ ಪ್ರಭುವಿನ ಪರಿವಾರದವರಿಗೂ (Dover) ದೋವೆರ್ ಪಟ್ಣದವರಿಗೂ ಜಗಳ ಉಂಟಾದಾಗ, ಅರಸನು ಗೊಡ್ವಿನನನ್ನು ಕರೆಸಿ, ತನ್ನ ದೇಶದಲ್ಲಿರುವ ಆ ಪಟ್ಣದವರನ್ನು ಶಿಕ್ಷಿಸ ಅಪ್ಪಣೆ ಮಾಡಿದನು. ಇವನು ಅರಸನ ಕಟ್ಟಳೆಯನ್ನು ಶಿರಸ್ಕರಿಸಿ, ಸಂಗಡಲೇ ಬಹಿರಂಗವಾಗಿ ಕಲಹ ಮಾಡ ಯತ್ನೈಸಿದನು. ಹೀಗೆ ಉಂಟಾದ ಯುದ್ಧದಲ್ಲಿ ಅರಸನು ಅವನನ್ನು ಮುರಿಯ ಬಡಿದದರಿಂದ ಅವನು (Flanders) ಫ್ಲಾಂದೆರ್ಸ್ ದೇಶಕ್ಕೆ ಓಡಿ ಹೋದನು.

ಆದಾಗ್ಯೂ ಸ್ವಲ್ಪ ಕಾಲದೊಳಗೆ ಅವನು ದೊಡ್ಡ ಸೈನ್ಯವನ್ನು ಕೂಡಿಸಿ ಕೊಂಡು ತಿರಿಗಿ ಬಂದು, (London) ಲಂಡನ್ ಪಟ್ಣದ ಮಟ್ಟಿಗೂ ದಂಡುಗಳನ್ನು ವಿಭಾಗಿಸಿ ಇರಿಸಿ, ಅರಸನ ಸಂಗಡ ಯುದ್ಧ ಮಾಡ ಯತ್ನವಾಗಿರುವಾಗ, ಅರಸನು ಅವನ ಸಂಗಡ ಸಮಾಧಾನದ ಒಡಂಬಡಿಕೆ ಮಾತಾಡಿದ್ದರಿಂದ, ಇನ್ನು ಮೇಲೆ ಅವನು ಯಥಾರ್ಥವಾಗಿ ಅರಸನಿಗೆ ಒಳ ಪಟ್ಟು ಇರುವಂತೆಯೂ, ಅರಸನು ಅವನಿಗೆ ಮುಂಚೆ ಇದ್ದ ಮಾನ ಧನಗಳನ್ನೆಲ್ಲಾ ತಿರಿಗಿ ಕೊಡುವಂತೆಯೂ ತೀರ್ಮಾನ ಮಾಡಿ, ಗೊಡ್ವಿನ್ ತಾನು ಅಮರಿಕೆಯಾಗಿ ನಡಿಯುವದಕ್ಕೆ ಸ್ಥಾಪನೆಯಾಗಿ ತನ್ನ ಕುಮಾ

ರರಲ್ಲಿ ಒಬ್ಬನನ್ನೂ ತನ್ನ ಚಾವಮೈದುನನನ್ನೂ ಗಿರಿವಿ ಇಟ್ಟನು. ಅರಸನು ಇವರನ್ನು (Normandy) ನೊರ್ಮಂದಿ ಶೀಮೆಗೆ ಕಳುಹಿಸಿದ ತರುವಾಯ ದ್ರೋಹಚಿಂತೆಯುಳ್ಳ ಆ ಪ್ರಭುವಿನಿಂದ ಉಂಟಾದ ಕಲಹಗಳಿಗೂ ತೊಂದರೆಗಳಿಗೂ ಅಂತ್ಯ ಉಂಟಾಯಿತು. ಕೆಲವು ದಿವಸಗಳ ತರುವಾಯ ಅವನು ಅರಸನ ಸಂಗಡ ಪಙ್ತಿಯಲ್ಲಿರುವಾಗ ಫಕ್ಕನೆ ಬಿದ್ದು ಸತ್ತನು. ಇವನ ತರುವಾಯ ಇವನ ಮಗನಾದ (Harold) ಘರೋಲ್ಡ್ ಎಂಬವನು ಇವನ ಶೀಮೆಗಳನ್ನೆಲ್ಲಾ ಹೊಂದಿದನು. ಇವನು ತನ್ನ ತಂದೆಯ ಹಾಗೆ ಗರ್ವಿಷ್ಠನಾಗಿ ನಡಿಯದೆ ಎಲ್ಲರಿಗೂ ಶಕ್ಯವನಾಗಿದ್ದು ಮರ್ಯಾದೆಯಿಂದ ನಡಿಯುತ್ತಾ ಬಂದನು. ಮತ್ತು ಅರಸನಿಗೆ ಮಕ್ಕಳಿಲ್ಲದ್ದರಿಂದ ಇವನು ಅರಸುಪಟ್ಟವನ್ನು ತಾನು ಹೊಂದ ಬೇಕೆಂದು ತನ್ನಿಂದಲಾದ ಪ್ರಯತ್ನಗಳನ್ನೆಲ್ಲಾ ಮಾಡಿದನು.

ಆದಾಗ್ಯೂ (Edward) ಎದ್ವರ್ದ್ ಅರಸನು ಗೊಡ್ವಿನನ ಕುಟುಂಬದವರೆಲ್ಲರನ್ನು ಜನ್ಮಹಗೆಯಾಗಿ ಹಗೆ ಮಾಡಿದ್ದರಿಂದ ಇವನಿಗೆ ಪಟ್ಟವು ಶಿಕ್ಕದಂತೆ, ತನ್ನ ನೆಂಟನಾದ (William) ಉಲ್ಲಿಯಮ್ ಎಂಬ ನೊರ್ಮಂದಿ ಶೀಮೆಯ ಪತಿಯು ತನ್ನನ್ನು ಸಂದರ್ಶಿಸ ಬಂದ ಕಾಲದಲ್ಲಿ, "ನನ್ನ ತರುವಾಯ ಈ ಪಟ್ಟವು ನಿನಗೆ ಆಗ ಬೇಕು," ಎಂದು ವಾಗ್ದತ್ತ ಮಾಡಿದನಂತ ಚರಿತ್ರಗಾರರು ಹೇಳುವರು.

ಆ ಕಾಲದಲ್ಲಿ ಯೂರೋಪಿನ ಎಲ್ಲಾ ದೇಶಗಳವರಿಗಿಂತ ನೊರ್ಮಂದಿ ದೇಶದವರು ಅಧಿಕ ಘನವುಳ್ಳವರು. ಇವರ ವೃತ್ತಾಂತವೇನಂದರೆ, ಅನೇಕ ಸಾರಿ ಇಂಗ್ಲಾಂದ್ ದೇಶದ ಮೇಲೆ ದಂಡೆತ್ತಿ ಕೊಂಡು ಬಂದ ನಾವಿಕಚೋರರಾದ ದೇನಿಯರು (France) ಫ್ರಾನ್ಸ್ ದೇಶದ ಸಮುದ್ರತೀರದ ಶೀಮೆಗಳಲ್ಲಿ ನಾಶ ಮಾಡ ಹೋದಾಗ, ಆ ದೇನಿಯರಿಗೆ ಮುಖ್ಯಸ್ಥನಾದ (Rollo) ರೊಲ್ಲೊ ಎಂಬ ಮಹಾ ವೀರನಾದ ಸೈನ್ಯಾಧಿಪತಿಯು ಫ್ರಾನ್ಸ್ ದೇಶದ ಮೇಲೆ ದಂಡೆತ್ತಿ ಕೊಂಡು ಹೋಗಿ, ಅಲ್ಲಿ ಆಳಿ ಕೊಂಡಿದ್ದ ಅಧೈರ್ಯಶಾಲಿಯಾದ ಅರಸನನ್ನು ಜಯಿಸಿ, ಉತ್ತರ ಪಶ್ಚಿಮ ದಿಕ್ಕಿನಲ್ಲಿ ಇರುವ ಬಹು ಫಲಭರಿತವಾದ ಒಂದು ಶೀಮೆಯನ್ನು ತನಗೆ ಕೊಟ್ಟು ಬಿಡುವಂತೆ ಕಡ್ಡಾಯ ಮಾಡಿದನು. ಆ ತರುವಾಯ

ತಾನೂ ತನ್ನನ್ನು ಶೇರಿದವರೂ ಉತ್ತರ ದೇಶದಿಂಧ ಬಂದವರಾದ ಕಾರಣ, ತಾನು ಕಟ್ಟಿ ಕೊಂಡ ಶೀಮೆಗೆ "ಉತ್ತರದವರ ಶೀಮೆ" ಎಂಬ ಅರ್ಥವಾಗುವ ನೊರ್ಮಂದಿ ಎಂಬ ಹೆಸರಿಟ್ಟನು. ಇದೆಲ್ಲಾ ಅಲ್ಫ್ರೆಡ್ ಇಂಗ್ಲಾಂದಿನಲ್ಲಿ ಆಳಿದ ಕಾಲದಲ್ಲಿ ನಡೆದ ವರ್ತಮಾನ. ಮಹಾ ಪರಾಕ್ರಮಶಾಲಿಯಾದಂಥ ಇವರ ಅಧಿಪತಿಗೆ ಎದ್ವರ್ದನು ತನ್ನ ರಾಜ್ಯವನ್ನು ಕೊಡುತ್ತೇನೆಂದು ಮಾತು ಕೊಟ್ಟ ತರುವಾಯ ತನ್ನ ಇಚ್ಛೆಯು ತನ್ನ ದೇಶದವರಿಗೆ ಪ್ರಿಯವಾಗಿರಲಾರದೆಂದು ಎಣಿಸಿ, ತನ್ನ ಸಹೋದರನ ಮಗನಾದ ಎದ್ವರ್ದ್ ಎಂಬವನನ್ನು ಇಂಗ್ಲಾಂದಿಗೆ ಕರೆಸಿದನು. ಆದಾಗ್ಯೂ ಇವನು ಬಂದು ಶೇರಿದ ಎರಡು ದಿವಸಗಳೊಳಗೆ ಸತ್ತು ಹೋದನು. ಇವನ ಕುಮಾರನಾದ ಎದ್ಗರ್ ಅಥಲಿಂಗ್ ಎಂಬವನು ಚಿಕ್ಕವನೂ ಬಲಹೀನನೂ ಆದದರಿಂದ ಇವನಿಗೆ ಪಟ್ಟ ಕಟ್ಟ ಕೂಡದೆ ಇತ್ತು.

ಹೀಗಿರುವ ಕಾಲದಲ್ಲಿ ಹರೊಲ್ದನಿಗೆ ಪಟ್ಟ ಕಟ್ಟ ಬೇಕೆಂದು ಬರ ಬರ ಎಲ್ಲರೂ ಒಪ್ಪಿ ಕೊಳ್ಳುವಂತೆ ಸಂಭವಿಸಿದಾಗ, ಇವನು ತನ್ನ ತಂದೆಯು ಗಿರಿವಿ ಇಟ್ಟ ತನ್ನ ನೆಂಟರು ನೊರ್ಮಂದಿ ದೇಶಕ್ಕೆ ಕಳುಹಿಸಲ್ಪಟ್ಟದ್ದರಿಂದ, ಅವರನ್ನು ಬಿಡಿಸಿ ಕೊಳ್ಳ ಬೇಕೆಂಬ ಯೋಚನೆಯಿಂದ ಆ ದೇಶಕ್ಕೆ ಯಾತ್ರೆ ಮಾಡಿದನು. ಅಷ್ಟರಲ್ಲಿ ನೊರ್ಮಂದಿ ಶೀಮೆಯ ಅಧಿಪತಿಯಾದ (William) ಉಲ್ಲಿಯಮ್ ಇವನನ್ನು ಹಿಡಿದು, ಇಂಗ್ಲಾಂದ್ ದೇಶದ ಅರಸನು ಮುಂಚೆ ಮಾಡಿದ್ದ ಒಡಂಬಡಿಕೆಯನ್ನು ಅವನಿಗೆ ತಿಳಿಸಿ, ಅವನು ತನಗೆ ಇಂಗ್ಲಾಂದ್ ರಾಜ್ಯದಲ್ಲಿ ಸ್ವತಂತ್ರವಿಲ್ಲವೆಂದೂ, ತಾನು ಉಲ್ಲಿಯಮನಿಗೆ ತನ್ನಿಂದಲಾಗುವಷ್ಟು ಸಹಾಯ ಮಾಡುತ್ತೇನೆಂದೂ ಪ್ರಮಾಣ ಮಾಡಿ ಕೊಡುವಂತೆ ಬಲವಂತ ಮಾಡಿದನು. ಅವನು ಆ ಶೆರೆಗೆ ತಪ್ಪಿಸಿ ಕೊಳ್ಳುವದಕ್ಕೆ ಬೇರೆ ಮಾರ್ಗವಿಲ್ಲವೆಂದು ಕಂಡು, ನೊರ್ಮನ್ಯರಾದ ಮುಖ್ಯಾಧಿಕಾರಸ್ಥರೆಲ್ಲರೂ ಕೂಡಿದ ಸಂಘದಲ್ಲಿ ಆ ಶೀಮೆಯ ಅಧಿಪತಿ ಹೇಳಿದಂತೆ ಸತ್ಯವೇದಪುಸ್ತಕವನ್ನು ಕೈಯಲ್ಲಿ ಹಿಡಿದು ಕೊಂಡು ಪ್ರಮಾಣ ಮಾಡಿ ಕೊಟ್ಟನು. ಹೀಗೆ ಪ್ರಮಾಣ ಮಾಡಿದ ಸಮಯದಲ್ಲಿ ಆ ಪುಸ್ತಕವು ಒಂದು ಪೆಟ್ಟಿಗೆಯ ಮೇಲೆ ಇಡಲ್ಪಟ್ಟಿತ್ತು. ಆ ಪೆಟ್ಟಿಗೆಯಲ್ಲಿ ಆ ಜನರೆಲ್ಲರೂ ಬಹು ಅಂಜಿಕೆಯಾಗಿ ಎಣಿಸಿ ಕೊಂ

ಟಿದ್ದ ಕೆಲವು ದಿವ್ಯ ಪದಾರ್ಥಗಳನ್ನು (William) ಉಲ್ಲಿಯಮ್ ರಹಸ್ಯವಾಗಿ ಇರಿಸಿದ್ದನು. ಇದನ್ನು ಅವನು ತಿಳಿಯದೆ, ಆ ದಿವ್ಯ ಪದಾರ್ಥಗಳನ್ನು ಇರಿಸಿದ್ದ ಪೆಟ್ಟಿಗೆಯ ಮೇಲಿನಿಂದ ಸತ್ಯವೇದಪುಸ್ತಕವನ್ನು ಎತ್ತಿಕೊಂಡು ಪ್ರಮಾಣ ಮಾಡಿದನು. ಆ ತರುವಾಯ ಅವರು ಆ ಪೆಟ್ಟಿಗೆಯನ್ನು ತೆರದು, ಆ ಪದಾರ್ಥಗಳನ್ನು ತೋರಿಸಿ, ಸತ್ಯವೇದದ ಮೇಲೆ ಮಾತ್ರವಲ್ಲ, ಅವುಗಳ ಮೇಲೆ ಸಹ ಪ್ರಮಾಣ ಮಾಡಿದ್ದೀ ಎಂದು ತಿಳಿಸುವಾಗ ಅವನು ದಿಗುಲು ಪಟ್ಟು ಬಹಳ ವ್ಯಸನ ಪಟ್ಟನು.

ಆದಾಗ್ಯೂ ಹರೊಲ್ಡನು, ಉಲ್ಲಿಯಮ್ ಮಾಡಿದ ಕಡ್ಡಾಯವನ್ನು ಕುರಿತು, ತಾನು ಮಾಡಿದ ಪ್ರಮಾಣ ವ್ಯರ್ಥ್ಯವೆಂದು ನೆನೆಸಿ, ಇಂಗ್ಲಾಂದಿಗೆ ತಿರಿಗಿ ಬಂದ ಕೂಡಲೇ ತನಗೆ ರಾಜ್ಯವಾಗ ಬೇಕೆಂದು, ಆ ದೇಶದವರೆಲ್ಲರೂ ತನ್ನನ್ನು ಹೊಂದಿ ಕೊಳ್ಳುವಂತೆ ಅವರಿಗೆ ಬಹಳ ನಯ ತೋರಿಸುತ್ತಾ ಬಂದನು. ಇದಲ್ಲದೆ (Wales) ವೇಲ್‍ಸ್ ದೇಶದವರು ಪೂರ್ವದಿಕ್ಕಿನ ಶೀಮೆಗಳಲ್ಲಿ ಯುದ್ಧ ಮಾಡಿ ಬಹಳ ಕೇಡು ಮಾಡಿದ್ದರಿಂದ, ಅವರನ್ನು ಎದುರಿಸಿ ಜಯಿಸಿ ಬಿಟ್ಟನು. ಮತ್ತು ತನ್ನ ಸಹೋದರನಾದ (Tosti) ತೊಸ್ತಿ ಎಂಬವನು ಅನ್ಯಾಯವಾಗಿ (Northumberland) ನೊರ್ತಂಬರ್‍ಲಾಂದ್ ಎಂಬುವ ನಾಡನ್ನು ಕಟ್ಟಿ ಕೊಂಡು, ಅಲ್ಲಿ ಬಹಳ ಅನೀತಿ ನಡಿಸುತ್ತಾ ಪ್ರಜೆಗಳು ತನ್ನನ್ನು ಅರೋಚಿಸುವಂತೆ ಆಳುತ್ತಾನೆಂದು ಕೇಳಿ, ಈ ವರ್ತಮಾನವನ್ನು ಅರಸನಿಗೆ ತಿಳಿಯ ಮಾಡಿ, ಆ ನಾಡನ್ನು ಅನ್ಯಾಯವಾಗಿ ತೆಗದು ಕೊಂಡ ತನ್ನ ಸಹೋದರನ ಕೈಯಿಂದ ಅದನ್ನು ಕಿತ್ತು ಕೊಂಡು ಸ್ವಾಂತಗಾರನಿಗೆ ಕೊಡುವಂತೆ ಮಾಡಿ, ಆ ಸ್ವಾಂತಗಾರನಿಗೆ ತನ್ನ ಬಾಧ್ಯರಲ್ಲಿ ಒಂದು ಹೆಣ್ಣನ್ನು ಮದುವೆ ಮಾಡಿ ಕೊಟ್ಟನು.

ಇತ್ಯಾದಿ ಸಂಗತಿಗಳಿಂದ ಜನರೆಲ್ಲರೂ ಹರೊಲ್ಡನು ನೀತಿಯೂ ವಿವೇಕವೂ ಉಳ್ಳವನೆಂದು ಕಂಡು, ಎದ್ವರ್ದ್ ಅರಸನು ಸತ್ತಾಗ, ಇವನನ್ನು ತಮಗೆ ಅರಸನಾಗಿ ಕೋರಿ ಕೊಂಡದ್ದರಿಂದ ಆ ದೇಶದ ಯಾವಜ್ಜನರ ಸಮ್ಮತಿಯ ಪ್ರಕಾರ ಈ ದೊಡ್ಡ ಪ್ರಭುವು ಸಿಂಹಾಸನದ ಮೇಲೆ ಕುಳಿತನು.

ಹೀಗಿರಲಾಗಿ (William) ಉಲ್ಲಿಯಮ್ ಎಂಬ ನೊರ್ಮಂದಿ ದೇ

ಶಾಧಿಪತಿಯು ತನಗೆ ಪಟ್ಟವಾಗ ಬೇಕೆಂದು ಕೇಳುವದಕ್ಕೆ ಒಬ್ಬ ಚಟ್ರವನನ್ನು ಆ ದೇಶಕ್ಕೆ ಕಳುಹಿಸಿದನು. ಹೀಗೆ ಕಳುಹಿಸಿದ್ದಕ್ಕೆ ಇಂಗ್ಲಾಂದಿನವರು, "ನಿನಗೆ ಈ ದೇಶವನ್ನು ಕುರಿತು ಸಮ್ಮಂಧವಿಲ್ಲ," ಎಂದು ಕೋಪದಿಂದ ಹೇಳಿ ಕಳುಹಿಸಲು, ಆ ಶೀಮೆಯಧಿಪತಿ ಯುದ್ಧಕ್ಕೆ ಯತ್ನ ಮಾಡಿದನು. ಇವನ ದೇಶದಲ್ಲಿ ಅನೇಕರು ಯುದ್ಧದಲ್ಲಿ ಪಳಗಿದ ವೀರರಿದ್ದರು. ಇದಲ್ಲದೆ ನೋರ್ಮನ್ನರ ಕೀರ್ತಿ ಪ್ರತಾಪವು ನಾಲ್ಕು ದಿಕ್ಕುಗಳಲ್ಲಿಯೂ ಹಬ್ಬಿ ಇದ್ದದರಿಂದ ಯುರೋಪಿನ ನಾನಾ ದೇಶಗಳವರು ಸಹಿತವಾಗಿ ಇಂಗ್ಲಾಂದನ್ನು ಕಟ್ಟಿ ಕೊಳ್ಳ ಬೇಕೆಂದು ಸಾಲ್ಗಟ್ಟಿ ಕೊಂಡು, ಬರುವವರ ಸಂಗಡ ಶೇರಿ ಕೊಂಡು, ಅವನ ಸೈನ್ಯದಲ್ಲಿ ಸೇವೆಗೆ ಹೊಂದಿ ಕೊಂಡರು.

ಅಷ್ಟರಲ್ಲಿ ಹರೊಲ್ಡನ ಸಹೋದರನಾದ (Tosti) ತೊಸ್ತಿ ಎಂಬವನು ಮುಂಚೆ ಹೇಳಿದ ಸಂಗತಿಯಿಂದ ಬಹಳ ಕ್ರೋಧವುಳ್ಳವನಾಗಿ, (Norway) ನೋರ್ವೆ ದೇಶಕ್ಕೆ ಹೋಗಿ, ಆ ದೇಶದ ಅರಸನ ಸಂಗಡ ಐಕ್ಯವಾಗಿ, ಇಂಗ್ಲಾಂದಿನ ಉತ್ತರ ಕಡೆ ದಂಡೆತ್ತಿ ಕೊಂಡು ಬಂದಿದ್ದನು. ಹರೊಲ್ಡನು ಇದನ್ನು ತಿಳಿದು ದಂಡೆತ್ತಿ ಕೊಂಡು ಅವನಿಗೆ ಎದುರಾಗಿ ವೇಗವಾಗಿ ಹೋಗಿ, (Stamford) ಸ್ಟಾಂಫೋರ್ಡ್ ಎಂಬ ಊರಿನ ಬಳಿಯಲ್ಲಿ ಇರುವ ಶೇತುವೆಯ ಹತ್ತರಕ್ಕೆ ಕಲತು ಅವನ ಸೈನ್ಯವನ್ನೆಲ್ಲಾ ಮುರಿಯ ಬಡಿದನು.

ಈ ಪ್ರಕಾರ ಜಯ ಹೊಂದಿ ಸ್ವಲ್ಪ ಸುಧಾರಿಸಿ ಕೊಳ್ಳ ಬೇಕೆಂದಿದ್ದ ಸಮಯದಲ್ಲಿ, (William) ಉಲ್ಲಿಯಮ್ ಎಂಬ ನೋರ್ಮಂದಿ ಶೀಮೆಯಧಿಪತಿಯು ಅರುವತ್ತು ಸಾವಿರ ಸೈನಿಕರೊಡನೆ (Sussex) ಸಸ್ಸೆಕ್ಸ್ ನಾಡಿನಲ್ಲಿ ಇಳಿದಿದ್ದಾನೆಂದು ವರ್ತಮಾನ ಬಂತು. ಆದದರಿಂದ ಅವನು ಹೊಸದಾಗಿ ಬಂದ ಆ ಶತ್ರುವನ್ನು ಎದುರಿಸ ಬೇಕೆಂದು ಸಂಗಡಲೇ ದಕ್ಷಿಣ ಕಡೆ ದಂಡೆತ್ತಿ ಕೊಂಡು ಹೊರಟನು. ಆ ಕಾಲದಲ್ಲಿ ಅವನ ಯುದ್ಧವೀರರಲ್ಲಿ ಅನೇಕರು ಆ ಯುದ್ಧರಂಗದಲ್ಲಿ ಮಡಿದು ಹೋದದ್ದು ಮಾತ್ರವಲ್ಲದೆ, ಕೊಳ್ಳೆಯ ಮೇಲೆ ಆಶೆ ಬಿದ್ದವರಿಗೆ ಅವನು ಸ್ವಲ್ಪವಾದರೂ ಸ್ಥಳ ಕೊಡದೆ ಹೋದದರಿಂದ ಅನೇಕರು ವ್ಯಸನ ಪಟ್ಟು, ಸೈನ್ಯವನ್ನು ಬಿ

ಟ್ಟು ಹೋಗಿದ್ದರು. ಹೀಗೆ ಅವನ ಸೈನ್ಯವು ಕಡಿಮೆಯಾಗಿರಲಾಗಿ, ಬೇರೆ ಅನೇಕ ಸಕ್ಸನರು ಬಹು ಭಕ್ತಿವಿಶ್ವಾಸದಿಂದ ಅವನ ಬಳಿಗೆ ಬಂದು, "ನೀನು ಅಪ್ಪಣೆ ಮಾಡುವದನ್ನು ಈಡೇರಿಸಲೂ ಯಾವದನ್ನಾದರೂ ತ್ವರೀಕರದಿಂದ ಮಾಡಲೂ ಇಗೋ ಆಯತ್ತವಾಗಿದ್ದೇವೆ; ನಾವು ಒಂದು ಕಾಲಕ್ಕೂ ಹಿಂತೆಗಿಯುವದಿಲ್ಲ," ಎಂದು ಶಪಥ ಮಾಡಿ, ಅವನ ಸೈನ್ಯದಲ್ಲಿ ಶೇರಿದರು.

ನೊರ್ಮನ್ನರು ಸಸ್ಸೆಕ್ಸ ನಾಡಿನಲ್ಲಿರುವ (Pevensey) ಪೆವೆನ್‌ಸೆ ಎಂಬ ಊರಿನ ರೇವಿನಲ್ಲಿ ಇಳಿದಿದ್ದರು. ಆದಾಗ್ಯೂ ಹರೊಲ್ಡನು ಎದುರಿಸಿ ಬರುತ್ತಾನೆಂದು ಕೇಳಿ, ಅವರು ಎದುಗೊಂಡು ಆ ಊರಿಗೆ ಎಂಟು ಮೈಲುಗಳ ದೂರದಲ್ಲಿರುವ (Hastings) ಹೇಸ್ಟಿಂಗ್‌ಸ್ ಪಟ್ಟದ ಬಳಿಗೆ ಬರಲು, ಆ ಊರಿನ ಸಮೀಪದಲ್ಲಿ ಉಭಯ ಸೈನ್ಯಗಳು ಎದುರುಬದುರಾಗಿ ದಂಡಿಳಿದರು. ಆ ಉಭಯ ಸೈನಿಕರೂ ಧೈರ್ಯವೂ ಉತ್ಸಾಹವೂ ವೀರಾವೇಶವೂ ಉಳ್ಳವರಾಗಿ, "ನಾವು ಯುದ್ಧ ಕಲಿತು ವೈರಿಗಳನ್ನು ಓಡಿಸುವದಕ್ಕೆ ಯಾವಾಗ ಬೆಳಗಾಗುವದೋ?" ಎಂದು ರಾತ್ರಿಯೆಲ್ಲಾ ಕಾದಿದ್ದರು. ಆದಾಗ್ಯೂ ಆ ಎರಡು ದಂಡುಗಳಲ್ಲಿಯೂ ಆ ರಾತ್ರಿಯಲ್ಲಿ ನಡೆದ ಕಾರ್ಯಗಳು ಒಂದೇ ವಿಧವಾದವುಗಳಲ್ಲ; ಹ್ಯಾಗಂದರೆ, ಸಕ್ಸನರ ಸೈನ್ಯದವರು ರಾತ್ರಿಯೆಲ್ಲಾ ಆಡಿ ಪಾಡಿ ಕುಡಿದು ಮತ್ತರಾಗಿದ್ದು ರಾತ್ರಿಯನ್ನು ಕಳೆದರು. ನೊರ್ಮನ್ನರು ಹಾಗೆ ಮಾಡದೆ ಕೀರ್ತನೆಗಳನ್ನು ಹಾಡಿ, ದೇವರ ವಾಕ್ಯವನ್ನು ಓದಿ, ಪ್ರಾರ್ಥಿಸುತ್ತಾ ರಾತ್ರಿಯನ್ನು ಕಳೆದರು. (October) ಒಕ್ಟೋಬರ್ ತಿಂಗಳು ಹದಿನಾಲ್ಕನೇ ತಾರೀಖಿನ ಅರುಣೋದಯದಲ್ಲಿ ಆ ಪ್ರಖ್ಯಾತಿಯಾದ ಯುದ್ಧಪ್ರಾರಂಭವಾಯಿತು.

ಅದು ಹ್ಯಾಗಂದರೆ, ಹರೊಲ್ಡ್ ಎಂಬುವ ಅರಸನು ನೊರ್ಮನ್ನ ಸೈನ್ಯದಲ್ಲಿ ಅನೇಕ ರಾಹುತ ಶ್ರೇಷ್ಠ ವೀರರು ಇರುವದನ್ನೂ, ಇವರನ್ನು ಎದುರಿಸ ತಕ್ಕ ರಾಹುತರು ತನ್ನ ಸೈನ್ಯದಲ್ಲಿ ಇಲ್ಲದ್ದನ್ನೂ ಕಂಡು, ಅಲ್ಲಿದ್ದ ಒಂದು ದಿನ್ನೆಯಲ್ಲಿ ತನ್ನ ಯುದ್ಧವೀರರೆಲ್ಲಾ ಏರಿ, ಸಾಲುಸಾಲಾಗಿ ಒತ್ತರಿಸಿ ಕೊಂಡು ನಿಲ್ಲಲೂ, ಸುತ್ತಲಾಗಿ ಒಂದು ಅಗಳ್ತೆಯನ್ನು

ಆಗಿಯಲೂ, ತನ್ನ ವೀರರ ಗುರಾಣಿಗಳಿಂದ ಒಂದು ಆವರಣವನ್ನುಂಟು ಮಾಡಲೂ ಕಟ್ಟೆ ಮಾಡಿದನು. ಇವರ ಮೇಲೆ ತಗುಲುವದಕ್ಕೆ ನೋರ್ಮ್ಯನ್ನರು ಸಂಗೀತ ಬಾರಿಸಿ ಕೊಂಡು ಸಾಲುಸಾಲಾಗಿ ನಡೆದರು. ಮೊದಲು ಶತ್ರುಗಳು ಎಸೆದ ಅಂಬುಗಳಿಂದ ಸಕ್ಸನರು ಬಹಳ ಕಷ್ಟ ಪಟ್ಟಾಗ್ಯೂ ಅವರ ಒತ್ತಾದ ಸಾಲುಗಳನ್ನು ಚದರಿಸುವಂತೆ ನೋರ್ಮ್ಯನ್ನರು ಬಹು ಪ್ರಯತ್ನ ಮಾಡಿದಾಗ್ಯೂ ಆಗಲಿಲ್ಲ. ಹೀಗೆಯೇ ಒಂದೆರಡು ಝಾವಗಳ ಮಟ್ಟಿಗೂ ಘೋರ ಯುದ್ಧ ಮಾಡಿದ ತರುವಾಯ ನೋರ್ಮ್ಯನ್ನರು ಹಿಂಜರಿದು ಹೋಗುವಂತೆ ತೋರಿಸುವದಕ್ಕೆ ಅವರ ಸೈನ್ಯಾಧಿಪತಿ ಅಪ್ಪಣೆ ಕೊಟ್ಟಿದ್ದರಿಂದ, ಅವರು ಯುದ್ಧ ಮಾಡುತ್ತಲೇ ಮುಂದಿಟ್ಟ ಕಾಲನ್ನು ಹಿಂತೆಗಿಯುತ್ತಾ ಬಂದರು. ಇದನ್ನು ಸಕ್ಸನರು ಕಂಡು, ತಾವು ನಿಂತಿದ್ದ ಒಳ್ಳೇ ಆವರಣವನ್ನು ಬಿಟ್ಟು, ಮೂರ್ಖ ಉರಿಗೊಂಡವರಾಗಿ ಅವರ ಮೇಲೆ ಬಿದ್ದು ಅಟ್ಟಿದರು. ಆದಾಗ್ಯೂ ನೋರ್ಮ್ಯನ್ನರು ಹಿಂತೆಗದದ್ದು ತಂತ್ರೋಪಾಯವೇ ಹೊರ್ತು ಬೇರೆ ಅಲ್ಲ. ಆದದರಿಂದ ಸಕ್ಸನರು ಬೆನ್ನಟ್ಟಿ ಬರುವದನ್ನು ಕಂಡು, ನೋರ್ಮ್ಯನ್ನರು ಚಗ್ಗನೆ ತಿರುಗಿ ಕೊಂಡು ಬಹು ಆರ್ಭಟದಿಂದ ಅವರ ಮೇಲೆ ಬಿದ್ದು ಹೊಡಿಯಲು, ಅವರು ಮುಂಚಿನಂತೆ ತಮ್ಮ ಆವರಣದೊಳಗೆ ಹೊಕ್ಕೊಂಡು ಚಲಿಸದೆ ನಿಂತರು. ನೋರ್ಮ್ಯನ್ನರು ಇನ್ನೊಂದು ಸಾರಿ ಅದೇ ಉಪಾಯ ಮಾಡಿದಾಗ ಮುಂಚಿನಂತೆಯೇ ಸಂಭವಿಸಿತು. ಸಕ್ಸನರೆಲ್ಲರೂ ತಮ್ಮ ಅರಸನನ್ನು ಬಳಸಿ ಕೊಂಡು, ಸಮೀಪದಲ್ಲಿ ನಿಂತು ಯುದ್ಧ ಮಾಡುವಲ್ಲಿ, ಈ ಮೇರೆಗೆ ಬಹು ಉಗ್ರವಾಗಿ ಹತ್ತಿದ ಯುದ್ಧದಲ್ಲಿ, ಹರೊಲ್ಡನೂ ಅವನ ಇಬ್ಬರು ಸಹೋದರರೂ ಕಾಲುನಡೆಯಾಗಿ ಯುದ್ಧರಂಗದಲ್ಲಿ ಇಲ್ಲಿಗೂ ಅಲ್ಲಿಗೂ ಹೋಗಿ, ರಾಣುವೆಯವರನ್ನು ಧೈರ್ಯ ಪಡಿಸುತ್ತಾ ಬರುವಲ್ಲಿ ಹರೊಲ್ಡನ ಕಣ್ಣಿಗೆ ಅಂಬು ತಗಲಿತು. ಆದಾಗ್ಯೂ ಅವನು ಹಿಂತೆಗಿಯದೆ ಆ ಘೋರ ಯುದ್ಧದಲ್ಲಿ ಹೋರಾಡಿದ ಎಲ್ಲಾ ವೀರರಲ್ಲಿ ಬಹು ಶೂರನಾಗಿ ಹೋರಾಡುತ್ತಾ ನಿಂತನು. (Normandy) ನೋರ್ಮಂದಿ ದೇಶಾಧಿಪತಿಯಾದ (William) ಉಲ್ಲಿಯಮ್ ಎಂಬವನು ಸಹ ಯುದ್ಧದ ಮುಖದಲ್ಲಿ ಹೋರಾಡುವಾಗ ಅವನು ಹತ್ತಿದ್ದ ಮೂರು ಕುದುರೆಗಳು ಬಿದ್ದು ಸತ್ತಾ,

ಗ್ಯೂ ಅವನಿಗೆ ಘಾಯವಾಗಲಿಲ್ಲ. ಹೀಗೆಯೇ ಬಹಳ ಹೊತ್ತು ಯುದ್ಧವಾದ ತರುವಾಯ ಸೂರ್ಯನು ಅಸ್ತಮಿಸುವ ಸಮಯದಲ್ಲಿ ಹರೊಲ್ಡನಿಗೆ ಅಂಬು ತಗಲಿ ಬಿದ್ದನು. ಮತ್ತು ಅವನ ಸಹೋದರರೂ ಅಧಿಕ ಧೈರ್ಯ ಉಳ್ಳ ಪ್ರಭುಗಳೂ ಅವನ ಸುತ್ತಲೂ ನಿಂತು, ಅತಿ ಪರಾಕ್ರಮದಿಂದ ಯುದ್ಧ ಮಾಡುತ್ತಲೇ ಬಿದ್ದರು. ಅದರಿಂದ ನಾಲ್ಕು ಕಡೆಗಳಲ್ಲಿಯೂ ಮುಂದಿಟ್ಟ ಹೆಜ್ಜೆಯನ್ನು ಹಿಂತೆಗದು ತಿರುಗಲು, ಶತ್ರುಗಳು ಬಹಳ ಆರ್ಭಟಿಸಿ ಕೊಂಡು, ಅವರನ್ನು ಸಮೀಪಿಸಿ, ಹಿಂದಟ್ಟುತ್ತಾ ಬಂದರು. ಆದಾಗ್ಯೂ ಅಲ್ಲಿ ಇಲ್ಲಿ ಕೆಲವರು ಆ ಸಮಯದಲ್ಲಿ ಓಡಿದ ಓಟದಲ್ಲಿ ಹಿಂತಿರುಗಿ ಕೊಂಡು, ತಮ್ಮನ್ನು ಬೆನ್ನಟ್ಟಿ ಬರುವ ಶತ್ರುಗಳನ್ನು ಎದುರಿಸಿ, ಪ್ರಾಣ ಹೋಗುವ ಮಟ್ಟಿಗೂ ಯುದ್ಧ ಮಾಡಿದ್ದುಂಟು. ಹೀಗಾದ ಯುದ್ಧದಲ್ಲಿ ನೊರ್ಮನ್ನ ಸೈನ್ಯದಲ್ಲಿ ಹದಿನೈದು ಸಾವಿರ ಮಂದಿ ಮಡಿದು ಹೋದರು. ಆದಾಗ್ಯೂ ಅವರಲ್ಲಿ ಉಳಿದವರು, ತಮ್ಮನ್ನು ಎದುರಿಸಿದ ಎಲ್ಲರೂ ಬೆನ್ನು ತೋರಿಸಿ ಓಡಿದ್ದರಿಂದ, ಜಯ ಹೊಂದಿದವರಾಗಿ ಯುದ್ಧರಂಗದಲ್ಲಿ ದಂಡಿಳಿದರು. ಕೆಲವು ಕಾಲದ ತರುವಾಯ ಆ ಕ್ರೂರ ಯುದ್ಧದ ಜ್ಞಾಪಕಕ್ಕಾಗಿ ಆ ಬೈಲಿನಲ್ಲಿ ಬಹು ಅಲಂಕಾರವಾದ ವಿಸ್ತಾರ ಮಠವನ್ನು ಕಟ್ಟಿಸಿ, ಅದಕ್ಕೆ (Battle Abbey) "ಯುದ್ಧಮಠವೆಂದು" ಹೆಸರಿಟ್ಟರು. ಹೀಗೆ ಸಕ್ಸನ್ ಅರಸರಲ್ಲಿ ಕಡೆಯಾಗಿ ಬಂದವನು, ತನ್ನ ರಾಜ್ಯವನ್ನು ಕಾಪಾಡಿ ಕೊಳ್ಳ ಬೇಕೆಂದು ಮಾಡಿದ ಯತ್ನದಿಂದ, ರಣರಂಗದಲ್ಲಿ ಮಡಿದು ಹೋಗಲಾಗಿ, ಆ ರಾಜ್ಯವು ನೊರ್ಮಂದಿ ದೇಶಾಧಿಪತಿಯಾದ (William) ಉಲ್ಲಿಯಮ್ ಎಂಬವನ ವಶವಾಯಿತು.

# CHAPTER IV.

## THE NORMAN CONQUEST.

### FROM A. D. 1066 TO A. D. 1100.

## 4 ಸಂಧಿ.

## ನೊರ್ಮನ್ನರು ಇಂಗ್ಲಾಂಡ್ ದೇಶವನ್ನು ವಶ ಮಾಡಿದ್ದು.

### ಕ್ರಿ. ಶ. 1066 ಮೊದಲು ಕ್ರಿ. ಶ. 1100 ವರೆಗೂ.

ಮುಖ್ಯ ತಾರೀಖುಗಳು: ಜಯಶಾಲಿಯಾದ ಉಲ್ಲಿಯಮನು ಹುಟ್ಟಿದ್ದು ಕ್ರಿ. ಶ. 1027. ಪಟ್ಟಾಭಿಷೇಕ ಹೊಂದಿದ್ದು ಕ್ರಿ. ಶ. 1066. ತೀರಿ ಹೋದದ್ದು ಕ್ರಿ. ಶ. 1087. (William II) 2ನೇ ಉಲ್ಲಿಯಮನು ಹುಟ್ಟಿದ್ದು ಕ್ರಿ. ಶ. 1057. ಪಟ್ಟಾಭಿಷೇಕ ಹೊಂದಿದ್ದು ಕ್ರಿ. ಶ. 1087. ತೀರಿ ಹೋದದ್ದು ಕ್ರಿ. ಶ. 1100. ಅದೇ ಕಾಲದ ಇಂದ್ಯ ಚರಿತ್ರೆ: ಪೂರ್ವ ಮಹಂಮದಿನವರು ಜಯಿಸಿ ಆಳಿದ ಕಾಲ. ಶ್ರೇಷ್ಠ ನಾಮ: (Peter the Hermit) ಸನ್ಯಾಸಿಯಾದ ಪೇತರನು. ಈತನು ಶಿಲುಬೆಯುದ್ಧಗಳಿಗೆ ಹೋಗಿ, (Palestine) ಪೆಲೆಸ್ತಿನ್ ದೇಶದಲ್ಲಿ ಸತ್ತನು. ಕ್ರಿ. ಶ. 1115.

ಹೇಸ್ಟಿಂಗ್ಸ್ (Hastings) ಊರಿನ ಯುದ್ಧದಲ್ಲಿ ಸೋತು ಹೋದದರಿಂದಲೂ, ಸಕ್ಸನರ ಅರಸನು ಮಡಿದು ಹೋದದರಿಂದಲೂ, ಸಕ್ಸನರು ಪೂರ್ಣವಾಗಿ ತಗ್ಗಿ ಮನಸೋತು ಹೋದರು. ದಂಡೆತ್ತಿ ಕೊಂಡು ಬಂದ ನೊರ್ಮನ್ನ ದೇಶಾಧಿಪತಿಯನ್ನು ಎದುರಿಸ ತಕ್ಕ ಸಾಮರ್ಥ್ಯವೂ ಬಲವೂ ಉಳ್ಳವನು ಒಬ್ಬನೂ ಅವರಲ್ಲಿ ಇರಲಿಲ್ಲ. ಮತ್ತು ಸಕ್ಸನ್ ಪ್ರಭುಗಳು ಒಬ್ಬರಿಗೊಬ್ಬರು ಬಹು ನೀಚತನವಾಗಿ ವಾಗ್ವಾದ ಮಾಡುತ್ತಾ ಬಂದರು. ಅರಸನು ಸತ್ತದರಿಂದ (Canterbury) ಕಾಂತರ್‌ಬರಿ ಪಟ್ಟಣದ ಶ್ರೇಷ್ಠ ಅಧ್ಯಕ್ಷನು (Edgar Atheling) ಎಡ್ಗರ್ ಅಥಲಿಂಗ್ ಎಂಬವನನ್ನು ಅರಸನಾಗಿ ಏರ್ಪಡಿಸಿದನು.

## ಸಂಧಿ 4. ಉಲ್ಲಿಯಮನು ಲಂದನ್ ಪಟ್ಣಕ್ಕೆ ಹೋದದ್ದು.

ಆದಾಗ್ಯೂ ಇವನು ಬಹು ದೀನನೂ ಮನೋ ಚಂಚಲನೂ ಆದದರಿಂದ ಅಂಥಾ ಕಲಾಪನೆಗಳನ್ನು ಅಣಗಿಸ ತಕ್ಕವನಲ್ಲ. ಇದಲ್ಲದೆ (Northumbria) ನೊರ್ತಂಬ್ರಿಯ ನಾಡಿನ ಅಧಿಪತಿಯಾದ (Edwin) ಎದ್ವಿನ್ ಎಂಬವನೂ, (Mercia) ಮೆರ್ಶಿಯ ನಾಡಿನ ಅಧಿಪತಿಯಾದ (Morcar) ಮೋರ್ಕಾರ್ ಎಂಬವನೂ ಬಹು ಬಲಶಾಲಿಗಳಾದದರಿಂದ ರಾಜ್ಯಾಧಿಕಾರವು ತಮಗೆ ಆಗ ಬೇಕೆಂದು ಎಣಿಸಿ ಕೊಂಡು, ದೇಶವನ್ನು ಕಾಯುವದಕ್ಕೆ ಬೇರೆ ಪ್ರಭುಗಳೊಡನೆ ಶೇರಿ ಕೊಳ್ಳದೆ, ಏನೂ ಪ್ರಯತ್ನ ಮಾಡದೆ, ಮನಸ್ಸಿನಲ್ಲಿ ಬಹು ಉರಿಯುಳ್ಳವರಾಗಿ ಉತ್ತರದಲ್ಲಿದ್ದ ತಮ್ಮ ನಾಡುಗಳಿಗೆ ಹೋಗಿ, ಅವುಗಳನ್ನು ಮಾತ್ರ ಕಾಯುವೆವೆಂದು ತೀರ್ಮಾನ ಮಾಡಿ ಕೊಂಡು, ತಮ್ಮೊಳಗಿದ್ದ ವ್ಯರ್ಥ ಆಶೆಯಿಂದಲೂ, ಭೇದಗಳಿಂದಲೂ ಸಕ್ಸನರ ಕಾರ್ಯವನ್ನು ಕೆಡಿಸಿ ಬಿಟ್ಟರು.

(William) ಉಲ್ಲಿಯಮನು (Hastings) ಹೇಸ್ಟಿಂಗ್ಸ್ ಊರಿನ ಯುದ್ಧದಲ್ಲಿ ಜಯ ಹೊಂದಿದ ತರುವಾಯ ಬಹಳ ವಿವೇಕವಾಗಿಯೂ ನಿಧಾನವಾಗಿಯೂ ನಡಕೊಂಡನು. ಹ್ಯಾಗಂದರೆ ಇನ್ನು ಮೇಲೆ ಒಳ ದೇಶದಲ್ಲಿ ದಂಡೆತ್ತಿ ಕೊಂಡು ಹೋಗುವಾಗ ಅಪಜಯವಾದರೆ, ತನ್ನ ಸೈನ್ಯವು ಹಿಂತೆಗದು ಬಂದು ಹೊಕ್ಕೊಳ್ಳ ತಕ್ಕ ಕೋಟೆಗಳು ಬೇಕೆಂದು ಆಲೋಚಿಸಿ, ಮೊದಲು ಸಮುದ್ರತೀರದಲ್ಲಿರುವ ಕೆಲವು ಪಟ್ಣಗಳನ್ನು ಹಿಡುಕೊಂಡನು. ತರುವಾಯ ರಾಜಧಾನಿಪಟ್ಣಕ್ಕೆ ಎದುರಾಗಿ ದಂಡೆತ್ತಿ ಕೊಂಡು ಹೊರಟನು. ಅವನು ಆ ಪಟ್ಣಕ್ಕೆ ಸಮೀಪಿಸಿ ಬರುವಾಗ (Canterbury) ಕಾಂತರ್‌ಬರಿ ಪಟ್ಣದ ಶ್ರೇಷ್ಠ ಅಧ್ಯಕ್ಷನಾದ (Stigand) ಸ್ಟಿಗಾಂಡ್ ಎಂಬವನೂ ಇವನು ಅರಸನಾಗಿ ನೇಮಿಸಿದ್ದ (Edgar Atheling) ಎಡ್ಗರ್ ಅಥಲಿಂಗ್ ಎಂಬವನೂ ಇನ್ನೂ ಸಕ್ಸನರಾದ ಅನೇಕ ಮುಖ್ಯ ಪ್ರಭುಗಳೂ ಎದುರ್ಗೊಂಡು ಬಂದು, ತಾವು ಅವನ ಅಧಿಕಾರಕ್ಕೆ ಒಳ ಪಟ್ಟಿರುತ್ತೇವೆಂದು ಹೇಳಿ, ರಾಜ್ಯವನ್ನು ಪರಿಪಾಲನೆ ಮಾಡ ಬೇಕೆಂದು ಅವನನ್ನು ಬೇಡಿ ಕೊಂಡರು. ಅದಕ್ಕೆ ಅವನು ಸ್ವಲ್ಪ ಹೊತ್ತು ಎರಡು ಮನಸ್ಸುಳ್ಳವನಂತೆ ತೋರಿಸಿ, ತರುವಾಯ, "ನೀವು ಬೇಡಿ ಕೊಂಡ ಪ್ರಕಾರ ನನಗೆ ಸಮ್ಮತಿ ಉಂಟು," ಎಂದು ಹೇಳಿದ್ದರಿಂದ, ಅವರು ಅವನಿಗೆ ಲಂ

ದನ್ ಪಟ್ಣದ ದೊಡ್ಡ ಬಾಗಲುಗಳನ್ನು ತೆರೆದು ಬಿಟ್ಟರು. ಅವನು ಸಂಗಡಲೇ ಪಟ್ಣದಲ್ಲಿ ಪ್ರವೇಶಿಸದೆ ಅಲ್ಲಿ ಬಲವಾದ ಒಂದು ಆವರಣವನ್ನು ಕಟ್ಟಿ, ಅದರಲ್ಲಿ ತನ್ನ ರಾಣುವೆಯವರಾದ ಕೆಲವರನ್ನು ಇರಿಸಿದ ಮೇಲೆ ಪಟ್ಣದಲ್ಲಿ ಪ್ರವೇಶಿಸಿದನು. ತರುವಾಯ ಲಂದನ್ ಪಟ್ಣದ ಕೋಟೆಯು (Tower of London) ಆ ಆವರಣವಿದ್ದ ಸ್ಥಳದಲ್ಲಿ ಕಟ್ಟಲ್ಪಟ್ಟಿತು. ಅವನಿಗೆ (Westminster) ವೆಸ್ಟ್‌ಮಿನ್‌ಸ್ತರ್ ಎಂಬ ಮಂದಿರದಲ್ಲಿ (Christmas day) ಕ್ರಿಸ್ತನು ಹುಟ್ಟಿದ ಹಬ್ಬದಲ್ಲಿ ಪಟ್ಟಾಭಿಷೇಕದ ಆಚರಣೆಗಳೆಲ್ಲಾ ಮಾಡಲ್ಪಟ್ಟವು. ಅದರಲ್ಲಿ ಸಕ್ಸನ್ ಅರಸರ ಪದ್ಧತಿಯ ಪ್ರಕಾರ ಅವನು, ತನಗೆ ಹೊಸದಾಗಿ ಒಳ ಪಟ್ಟು ಬಂದ ಪ್ರಜೆಗಳ ಸ್ವಾತಂತ್ರ್ಯ ಗೌರವಗಳನ್ನು ಎಲ್ಲಾ ಸ್ಥಿರ ಪಡಿಸುವಂತೆಯೂ ನೀತಿ ನ್ಯಾಯ ತಪ್ಪದೆ ಶಾಂತದಿಂದ ಆಳುವಂತೆಯೂ, ಪ್ರಮಾಣ ಮಾಡಿದನು. ಇದೆಲ್ಲಾ ಆ ರೀತಿಯಾಗಿ ನಡೆದದರಿಂದ ತಾನು ಸಿಂಹಾಸನ ಹತ್ತಿದ್ದು ಇಂಗ್ಲಾಂಡ್ ದೇಶಸ್ಥರ ಕೋರಿಕೆಯಿಂದ ಆಯಿತೆಂದು ತೋರಿಸಿದನು. ಆದದರಿಂದ ಮುಂಚಿನ ಕಾಲಗಳಲ್ಲಿ ಅನ್ಯರಾದ ದೇನಿಯರು ಆ ದೇಶವನ್ನು ಆಳಿದ ಪ್ರಕಾರವೂ, ರಾಜವಂಶದವನಲ್ಲದ ಹರೊಲ್ಡನು ಮುಂಚೆ ಪಟ್ಟ ಹೊಂದಿದ ಪ್ರಕಾರವೂ, ಇವನು ಸಹ ತನಗೆ ಬಾಧ್ಯವಲ್ಲದ ರಾಜ್ಯಪಟ್ಟವನ್ನು ಹೊಂದಿದ್ದು ಅಷ್ಟು ಅನೀತಿಯಾದ ಕಾರ್ಯವಲ್ಲವೆಂದು ಅನೇಕರು ಎಣಿಸಿ, ಅವನಿಗೆ ಸಮ್ಮತಿಯಾಗಿ ನಡಿಯುವದಕ್ಕೆ ಹೇತುವೆಯಾಯಿತು. ಆದಾಗ್ಯೂ ಅವನಿಗೆ ಪಟ್ಟಾಭಿಷೇಕವಾದ ದಿನವೇ ಒಂದು ವಿಪರೀತ ನಡಿಯಿತು. ಅದು ಬಹು ದಿವಸ ಸಕ್ಸನರಿಗೂ ನೋರ್ಮನ್ನರಿಗೂ ಹೋರಾಟ ಉಂಟಾಗುವದಕ್ಕೆ ಕಾರಣವಾಯಿತು. ಅದೇನಂದರೆ, ಆ ದೊಡ್ಡ ದೇವಾಲಯದಲ್ಲಿ ಸಂಘವು ಕೂಡಿದಾಗ, "ಉಲ್ಲಿಯಮನು ಅರಸನಾಗುವದು ನಿಮಗೆ ಸಮ್ಮತಿಯೋ? ಇಲ್ಲವೋ?" ಎಂದು ಪದ್ಧತಿಯ ಪ್ರಕಾರ ಕೋಲುಕಾರನು ಸಾರಿದಾಗ, ಎಲ್ಲರೂ "ನಮಗೆ ಸಮ್ಮತವೇ" ಎಂದು ಆರ್ಭಟಿಸಿದರು. ಆ ಶಬ್ದವನ್ನು ಹೊರಗೆ ಕಾದಿದ್ದ ನೋರ್ಮನ್ನ ಯುದ್ಧವೀರರು ಕೇಳಿ, ನಮ್ಮ ಸೈನ್ಯಾಧಿಪತಿಯನ್ನು ಕೊಲ್ಲುವದಕ್ಕಾಗಿ ಹೀಗೆ ಆರ್ಭಟಿಸುತ್ತಾರೆಂದು ನೆನಸಿ, ಸಂಗಡಲೇ ಗು

ಬಾರು ಮಾಡಿ, ಆ ದೇವಾಲಯದ ಸುತ್ತಲೂ ಇದ್ದ ಅನೇಕ ಮರದ ಮನೆಗಳನ್ನು ಸುಟ್ಟು ಬಿಟ್ಟರು. ಆ ಗದ್ದಲದಿಂದ ಬಹು ಪ್ರಾಣನಷ್ಟ ಉಂಟಾಯಿತು. ಮತ್ತು ಅದನ್ನು ಶಾಂತ ಪಡಿಸುವದು ಅಧಿಕ ಪ್ರಯಾಸವಾಗಿತ್ತು.

ಇದೆಲ್ಲಾ ನಡದಾಗ್ಯೂ ಉಲ್ಲಿಯಮನು ಸಕ್ಸನರಾದ ತನ್ನ ಪ್ರಜೆಗಳನ್ನು ಬಹು ಪ್ರೀತಿಯಿಂದಲೂ ಕನಿಕರದಿಂದಲೂ ಆಳ ಮನಸ್ಸುಂಟಾದವನಂತೆ ತೋರಿತು. ಮುಖ್ಯವಾದ ಪ್ರಭುಗಳಿಗೆಲ್ಲಾ ಅವರ ಭೂಸ್ಥಿತಿಗಳನ್ನು ಅವರಿಗೆ ಸ್ಥಿರ ಪಡಿಸಿದನು. ಮುಂಚೆ ಏರ್ಪಡಿಸಿದ್ದ ಪ್ರಮಾಣಗಳ ಪ್ರಕಾರ ಆಳಿಕೆ ಮಾಡ ಮನಸ್ಸುಳ್ಳವನಂತೆ ನಡಿದನು. ಪಟ್ಟಾಭಿಷೇಕದ ದಿವಸ ಮಾಡಿದ ಪ್ರಮಾಣವನ್ನು ಈಡೇರಿಸ ತನ್ನಿಂದಲಾಗುವಷ್ಟು ಯತ್ನ ಮಾಡುವವನಂತೆ ತೋರಿಸಿದನು.

ಇದರಿಂದ ದೇಶದಲ್ಲೆಲ್ಲಿಯೂ ಸಮಾಧಾನ ಸೌಖ್ಯವುಂಟಾದದರಿಂದ ಅವನು ಮಾರಣೆ ವರುಷದ ಮೊದಲಲ್ಲಿ ತನ್ನ ಸ್ವದೇಶಕ್ಕೆ ತಿರುಗಿ ಹೋಗ ನಿಶ್ಚಯಿಸಿ (Bayeux) ಬೇಯೋ ಎಂಬ ಊರಿನಲ್ಲಿ ಅಧ್ಯಕ್ಷನಾಗಿಯೂ ಯುದ್ಧವೀರನಾಗಿಯೂ ಇದ್ದ ತನ್ನ ಸಹೋದರನಾದ (Odo) ಓದೋ ಎಂಬವನನ್ನೂ (William Fitz Ozborn) ಉಲ್ಲಿಯಮ್ ಫಿತ್ ಜ್ ಆಜ್ಬರನ್ ಎಂಬ ನಂಬಿಕೆಯುಳ್ಳ ಒಬ್ಬ ಪ್ರಭುವನ್ನೂ ತನಗೆ ದೊರಕಿದ ಹೊಸ ರಾಜ್ಯವನ್ನು ಪ್ರತಿ ಅರಸರಾಗಿ ಆಳುವಂತೆ ನೇಮಿಸಿ ಹೋದನು. ಈ ಇಬ್ಬರೂ ಬಹು ಖಂಡಿತಗಾರರೂ ಕಠಿಣರೂ ಆಗಿದ್ದರು. ಹೀಗಿರಲಾಗಿ ಅವನು ಹೋದ ಕೂಡ್ಲೇ ನೋರ್ಮನ್ನ ರಾಣುವೆಯವರು ಸಕ್ಸನರನ್ನು ಬಹಳ ನಿಂದಿಸಿದಾಗ ಅಧಿಕಾರಸ್ತರು ಪರಾಙ್ಮುಖವಾಗಿದ್ದದರಿಂದ ಸಕ್ಸನರು ಕಲಹ ಮಾಡಿದರೆ ನ್ಯಾಯವಿಚಾರಣೆಯಾಗುವದೆಂದು ಹೇಳಿ ವಿಕೋಪಿಸಿ ಎದ್ದರು.

ಈ ಪ್ರಕಾರ ಆ ಎರಡು ಜಾತಿಗಳವರು ಮಾಡ ಯತ್ನೈಸಿದ ಝಗಳವು (John) ಯೋಹಾನ್ ಎಂಬ ಅರಸನ ಕಾಲದಲ್ಲಿಯೂ ಅವನ ತರುವಾಯ ಆಳಿದ (Henry III) ಮೂರನೇ ಹೆನ್ರಿ ಆಳಿದ ಕಾಲದಲ್ಲಿಯೂ ಸ್ವಲ್ಪ ಶಮಣೆಯಾಯಿತೇ ಹೊರ್ತು ಅದು ವರೆಗೂ ಪೂರ್ಣ

ಸಮಾಧಾನವಿರಲಿಲ್ಲ. ಆ ಕಾಲದಲ್ಲಿ ನೊರ್ಮನ್ನರು ಸಕ್ಸನರನ್ನು ಅಸಂಹಿಸುವರು. ಸಕ್ಸನರು ಸಹ ನೊರ್ಮನ್ನರನ್ನು ಜನ್ಮವಿರೋಧಿಗಳಂತೆ ಹಗೆ ಮಾಡುವರು. ನೊರ್ಮನ್ನ ಪ್ರಭುಗಳು ತಮಗೆ ಸೇರಿದ ಸಕ್ಸನ್ ಪ್ರಜೆಗಳನ್ನು ಬಹು ಇಕ್ಕಟ್ಟು ಪಡಿಸಿ, ಅವರನ್ನು ತಾತ್ಸಾರ ಮಾಡಿ, ನಾನಾ ವಿಧವಾಗಿ ನಿಂದಿಸಿ ದೂಷಿಸುವರು. ಆದದರಿಂದ ಸಕ್ಸನರು ಪೂರ್ಣ ಮನಸ್ಸಿನಿಂದ ನೊರ್ಮನ್ನರನ್ನು ಅರೋಚಿಸಿ, ಯಾರಾದರೂ ಒಬ್ಬ ನೊರ್ಮನ್ನನು ತನ್ನ ಕೋಟೆಯನ್ನು ಬಿಟ್ಟು ಹಳ್ಳಿಕಾಡಿಗೆ ಬಂದರೆ, ಸಂಗಡಲೇ ಅಲ್ಲಿರುವ ಸಕ್ಸನರು ಅವನನ್ನು ಕೊಲ್ಲುವರು. ಮತ್ತು ಆ ಕಠಿಣರಾದ ಅನ್ಯದೇಶದವರ ಸಂಗಡ ಯಾರಾದರೂ ಒಬ್ಬ ಸಕ್ಸನನು ಸಹವಾಸ ಮಾಡಿದರೆ, ಅವನನ್ನು ನೀಚನೆಂದು ಹೇಳಿ, ಮಿಕ್ಕಾದವರು ಅವನನ್ನು ಬಹಿಷ್ಕಾರ ಮಾಡುವರು. ದಿನಪರಿಯಲ್ಲಿ ಈ ಹಗೆಯು ಸ್ವಲ್ಪ ಶಾಂತವಾಯಿತು. ಮೊದಲು ವಿರೋಧಿಗಳಾಗಿದ್ದ ಆ ಎರಡು ಜಾತಿಯವರೂ ಬರಬರ ಬಂಧುತ್ವ ಮಾಡಿ, ತರುವಾಯ ಒಂದೇ ಜಾತಿಯಾಗಿ ಕಲತು ಹೋದದರಿಂದ, ಇಂಗ್ಲಾಂಡ್‌ರೆಂಬ ಸ್ಥೈರ್ಯ ಶೌರ್ಯಗಳುಳ್ಳ ಜಾತಿ ಉಂಟಾಯಿತು.

ಉಲ್ಲಿಯಮ್ ತಾನು ಇಲ್ಲದ ಕಾಲದಲ್ಲಿ ಉಂಟಾದ ಕಲಹಗಳನ್ನು ಕುರಿತ ಸಮಾಚಾರವನ್ನು ಕೇಳಿದ ಸಂಗಡಲೇ ನೊರ್ಮಂದಿ ದೇಶದಿಂದ ಹಿಂತಿರುಗಿ ಬಂದು, ಬಹು ಶೀಘ್ರವಾಗಿ ಆ ಗುಬಾರನ್ನೆಲ್ಲಾ ಅಣಗಿಸಿದನು. ಆದಾಗ್ಯೂ ಅಂದಿನಿಂದ ತನ್ನ ರಾಜ್ಯದಲ್ಲಿರುವವರು ತನ್ನ ಅಧಿಕಾರಕ್ಕೆ ಅಂಜಿ ಒಳಪಟ್ಟು ನಡಿಯುವಂತೆ ಅವನು ಆ ದೇಶವನ್ನು ಕ್ರೂರ ಚಿತ್ತದಿಂದ ಆಳುತ್ತಾ ಬಂದನು. ಹ್ಯಾಗಂದರೆ, ತರುವಾಯ ತಾನು ಜಯಿಸಿದ ಜನರಿಗೆ ಅವನು ದಯ ತೋರಿಸದೆ, ಅವರನ್ನು ಬಹು ಖಂಡಿತವಾಗಿ ನಡಿಸಿ, ನಯದಿಂದ ಆ ಜನರು ತನ್ನನ್ನು ಸ್ನೇಹಿಸುವಂತೆ ಮಾಡ ಯತ್ನೈಸದೆ, ಸ್ವಲ್ಪವಾದರೂ ಕನಿಕರವಿಲ್ಲದೆ ಅವರನ್ನು ಇಕ್ಕಟ್ಟು ಪಡಿಸುವದರಿಂದ ಅವರನ್ನು ಪೂರ್ಣವಾಗಿ ಅಣಗಿಸ ಯತ್ನೈಸಿದನು. ಇದರಿಂದ ಆ ಪ್ರಜೆಗಳನ್ನು ತನ್ನ ಪ್ರಜೆ ಎಂದು ಎಣಿಸದೆ ತನ್ನ ಹಗೆಯವರೆಂದು ಎಣಿಸಿದ ಹಾಗಾಯಿತು.

## ಸಂಧಿ 4. ಶ್ರೇಷ್ಠನಾದ ಹೆರಿವಾರ್ಡನು.

ಅವನು ನೊರ್ಮಂದಿ ದೇಶದಲ್ಲಿ ಇರುವಾಗ ಉಂಟಾದ ಕಲಹಗಳು ಶೀಘ್ರವಾಗಿ ಶಾಂತವಾದಾಗ್ಯೂ, ಸಂಗಡಲೇ ಬೇರೆ ಗುಬಾರುಗಳೂ ಕಲಹಗಳೂ ಉಂಟಾದವು. ಹ್ಯಾಗಂದರೆ, ಎದ್ಗರ್ ಅಥಲಿಂಗ್ ಎಂಬವನು ಉಲ್ಲಿಯಮ್ ಎಂಬವನನ್ನು ಅರಸನೆಂದು ಅಂಗೀಕರಿಸಿ, ಅವನ ಶರಣು ಹೊಕ್ಕಿದ್ದಾಗ್ಯೂ, ತರುವಾಯ ಸ್ಕೊತ್ಲಾಂದಿಗೆ ಓಡಿ ಹೋಗಿ, ಆ ದೇಶದ ಅರಸನ ಬಳಿಯಲ್ಲಿ ಆಶ್ರಯ ಹೊಂದಿದನು. ಇದಲ್ಲದೆ (Edwin) ಎದ್ವಿನ್ (Morcar) ಮೊರ್ಕಾರ್ ಎಂಬ ಇಬ್ಬರು ಪ್ರಭುಗಳೂ ಜಯಶಾಲಿಯಿಂದ ಬಹಳ ದಯವಾಗಿ ನಡಿಸಲ್ಪಟ್ಟಿದ್ದಾಗ್ಯೂ ಉತ್ತರ ಭಾಗದಲ್ಲಿರುವ ತಮ್ಮ ಪ್ರಜೆಗಳು ಕಲಹ ಮಾಡುವಂತೆ ಎಬ್ಬಿಸಿ ಬಿಟ್ಟರು. ಈ ಕಲಹಗಾರರಿಗೆ ವೇಲ್ಸ್ ದೇಶದವರು ಸಹಾಯ ಮಾಡಿದರು. ಮತ್ತು ದೆನ್ಮಾರ್ಕ್ ದೇಶದ ಅರಸನು ಸಹ ಅವರಿಗೆ ಸಹಾಯವಾಗಿ ದೊಡ್ಡ ಸೈನ್ಯವನ್ನು ಕಳುಹಿಸಿದನು. ಆ ಅರಸನಿಗೆ ಉಲ್ಲಿಯಮನು ಬಹಳ ಹಣವನ್ನು ಕೊಟ್ಟದ್ದರಿಂದ ಅವನು ಆ ಸೈನ್ಯವನ್ನು ಹಿಂದಕ್ಕೆ ಕರಿಸಿ ಕೊಂಡನು.

ಇದೆಲ್ಲಾದರ ಹೊರ್ತು (Hereward) ಹೆರಿವಾರ್ಡ್ ಎಂಬ ಪರಾಕ್ರಮಿಯಾದ ಸಕ್ಸನ್ ಪ್ರಭುವು ಸಕ್ಸನರಾದ ಬೇರೆ ಅನೇಕ ಮುಖ್ಯಸ್ಥರನ್ನು ಶೇರಿಸಿ ಕೊಂಡು, (Ely) ಈಲೈ ಎಂಬ ಪಟ್ಟದ ಸುತ್ತಲಿರುವ ಆಸರೆಯಾದ ಸ್ಥಳಗಳಲ್ಲಿ ಬಚ್ಚಿಟ್ಟು ಕೊಂಡು, ಜಯಶಾಲಿಯು ಮಾಡಿದ ಯಾವ ಪ್ರಯತ್ನಗಳಿಂದಲಾದರೂ ಒಳ ಪಟ್ಟು ಬಾರದೆ, ಬಹು ದಿವಸಗಳು ಧೈರ್ಯವಾಗಿ ಆ ಸ್ಥಳದಲ್ಲಿ ತನ್ನನ್ನು ಕಾದು ಕೊಂಡನು. ಕಡೆಯಲ್ಲಿ ಅವನಿಗೆ ಶೇರಿದ ಕೆಲಬರು ಮನಸ್ಸು ಸಡ್ಲವಾಗಿ, ಅವನನ್ನು ಹಿಡಿದು ಅರಸನಿಗೆ ಒಪ್ಪಿಸುವಂತೆ ವಂಚನೆ ಮಾಡಿದರು. ಆದದರಿಂದ ಅವನ ಪರಿಜನರಲ್ಲಿ ಬಹು ಮಂದಿ ಹಿಡಿಯಲ್ಪಟ್ಟರು. ಅವನು ಸಮುದ್ರಮಾರ್ಗವಾಗಿ ತಪ್ಪಿಸಿ ಕೊಂಡು ಓಡಿ ಹೋಗಿ, ಸಮಯಾಸಮಯಗಳಲ್ಲಿ ಸಮುದ್ರತೀರದ ಪ್ರದೇಶಗಳ ಮೇಲೆ ದಂಡೆತ್ತಿ ಕೊಂಡು ಬರುವನು. ಹೀಗಿದ್ದಾಗ್ಯೂ ಜಯಶಾಲಿಯು ದೊಡ್ಡಸ್ತಿಕೆಯುಳ್ಳವನಾದದರಿಂದ, ಅವನು ಹೆರಿವಾರ್ಡನು ಮಾಡಿದ ಅಪರಾಧವನ್ನು ಮನ್ನಿಸಿ ಬಿಟ್ಟು, ಅವನ ಭೂಮಿ ಆಸ್ತಿ ಮೊದಲಾದವುಗಳನ್ನು ತಿರಿಗಿ ಅವನಿಗೆ ಕೊಟ್ಟನು. ಆ

ಕಾಲದಲ್ಲಿ ಸಕ್ಸನರೊಳಗೆ ಆ ಪ್ರಭುವಿನಂತೆ ಇನ್ನೂ ಕೆಲವರಿದ್ದರೆ ನೊರ್ಮ ನ್ನರು ಇಂಗ್ಲಾಂದ್ ದೇಶವನ್ನು ಬಹಳ ದಿವಸಗಳು ಆಳಲಾರರು.

ಮುಂಚೆ ಹೇಳಿದ ಪ್ರಕಾರ ಉಲ್ಲಿಯಮನು ಸಕ್ಸನ್ ಪ್ರಭುಗಳಲ್ಲಿ ಕೆಲವರಿಗೆ ಬಹು ಕರುಣೆ ತೋರಿಸಿದಾಗ್ಯೂ ಅವರ ಪರಿವಾರದವರನ್ನು ಕನಿಕರವಿಲ್ಲದೆ ದಂಡಿಸಿದನು. ನೊರ್ತಂಬ್ರಿಯಾ ನಾಡಿನಲ್ಲಿ ಉಂಟಾದ ಕಲಹವನ್ನು ಶಾಂತ ಪಡಿಸಿದ ತರುವಾಯ, ಆ ನಾಡನ್ನೆಲ್ಲಾ ಕೊಳ್ಳೆ ಇಡ ಬಹುದೆಂದು ಅವನು ತನ್ನ ರಾಣುವೆಯವರಿಗೆ ಅಪ್ಪಣೆ ಕೊಡಲಾಗಿ, ಅವರು ಒಂದೊಂದು ಮನೆಯನ್ನು ಸಹ ಕೆಡವಿ, ಪ್ರತಿ ಹೊಲವನ್ನೂ ಹಾಳು ಮಾಡಿ, ವ್ಯವಸಾಯದ ಸಾಮಾನುಗಳನ್ನು ಸಹ ನಾಶನ ಮಾಡಿದ್ದರಿಂದ, (Humber) ಹಂಬರ್ ನದಿ ಮೊದಲು ಗೊಂಡು (Tyne) ತೈನ್ ನದೀ ವರೆಗೂ ಇರುವ ಶೀಮೆಯಲ್ಲಿ ಆಗ ಬರದಿಂದಲೂ ಕತ್ತಿಯಿಂದಲೂ ಒಂದು ಲಕ್ಷ ಜನಕ್ಕಿಂತ ಹೆಚ್ಚಾಗಿ ಸತ್ತರೆಂದು ಚರಿತ್ರಗಾರರು ಹೇಳುವರು.

ಇದಲ್ಲದೆ ಆ ದೇಶದಲ್ಲಿದ್ದ ಬೇರೆ ಶೀಮೆಗಳಲ್ಲಿಯೂ ಅಂಥಾ ಅನ್ಯಾಯಗಳು ಮಾಡಲ್ಪಟ್ಟವು. ಸಕ್ಸನ್ ಪ್ರಭುಗಳ ಮಿರಾಶಿಗಳನ್ನು ಬಹುಶಾ ನೊರ್ಮನ್ನರಿಗೆ ಕೊಟ್ಟು ಬಿಟ್ಟನು. ನೊರ್ಮನ್ನ ಮುಖ್ಯಸ್ಥರಿಗೆ ಮಾತ್ರ ದೊಡ್ಡ ಉದ್ಯೋಗಗಳು ಕೊಡಲ್ಪಟ್ಟವು. ಸಕ್ಸನರಾದ ಅಧ್ಯಕ್ಷರನ್ನು ತೆಗೆದು ಹಾಕಿ, ನೊರ್ಮನ್ನರಿಗೆ ಆ ಶ್ರೇಷ್ಠಾಧಿಕಾರವನ್ನು ಕೊಟ್ಟನು. ಮತ್ತು "ಮಿರಾಶಿಗಳ ಪ್ರಮಾಣ" ಎಂಬ ಹೊಸ ಕ್ರಮವನ್ನು ಇಂಗ್ಲಾಂದಿನಲ್ಲಿ ಸ್ಥಾಪಿಸಿದನು. ಆ ಪ್ರಮಾಣದ ಮುಖ್ಯ ನಿಬಂಧನೆಗಳು ಯಾವವಂದರೆ,—(ಮೊದಲನೇದು) ಭೂಮಿಗಳೆಲ್ಲಾ ಅರಸನಿಗೆ ಶೇರುವವು ಎಂದೂ, (ಎರಡನೇದು) ಅರಸನು ತನ್ನ ದೊಡ್ಡ ಅಧಿಕಾರಸ್ಥರಿಗೆ ಆ ಭೂಮಿಗಳನ್ನು ಹಂಚಿ ಕೊಡಲು, ಅವರು ತಾವು ಹೊಂದಿದ ಮಾನ್ಯಗಳಿಗಾಗಿ ಅರಸನಿಗೆ ಮಾನ ಮರ್ಯಾದೆ ಮಾಡಿ ಕೊಂಡು, ಆತನು ದಂಡೆತ್ತಿ ಕೊಂಡು ಹೋಗುವ ಯಾವ ಸ್ಥಳಕ್ಕಾದರೂ ತಮ್ಮ ಪರಿವಾರದವರೊಡನೆ ಆತನನ್ನು ಹಿಂಬಾಲಿಸ ಬೇಕೆಂದೂ, (ಮೂರನೇದು) ಉಂಬಳಿಗೆ ಗ್ರಾಮಗಳನ್ನು ಹೊಂದಿದ್ದ ಆ ಆ ದೊಡ್ಡ ಪ್ರಭುಗಳು ಕೆಳಗಿನ ಅಧಿಕಾರಸ್ಥರಿಗೆ ಆ ಗ್ರಾಮಗಳನ್ನು ಹಂಚಿ ಕೊಡಲು, ದೊಡ್ಡ ಪ್ರಭುಗಳು

ಅರಸನಿಗೆ ಪ್ರಮಾಣ ಮಾಡಿ ಕೊಟ್ಟ ಪ್ರಕಾರವೇ ಅವರು ಸಹ ಆ ಪ್ರಭು ಗಳಿಗೆ ತಾವು ಪೂರ್ಣವಾಗಿ ಅಣಗಿದ್ದು ಸೇವೆ ಮಾಡಿ ಕೊಂಡು ಅವರ ಯುದ್ಧಗಳಿಗೆ ಸಹಾಯವಾಗಿ ಬರ ಕರೆಯುವಾಗಲೆಲ್ಲಾ ಸಂಗಡಲೇ ಬ ರುವಂತೆ ಪ್ರಮಾಣ ಮಾಡಿ ಕೊಡ ಬೇಕೆಂದೂ, ಏರ್ಪಡಿಸಿ ಇತ್ತು. ಈ ವಿಧವಾದ ಪ್ರಮಾಣವನ್ನು ಏರ್ಪಡಿಸಿದ್ದರಿಂದ .ದೇಶವೆಲ್ಲಾ ವಿಸ್ತಾರ ವಾದ ಉಜ್ಜುಗುಂಡಿನ ಹಾಗಾಯಿತು. ನೊರ್ಮನ್ನರು ಈ ವಿಧವಾ ದ ಬಲವುಳ್ಳ ನಿಬಂಧನೆ ಮಾಡಿದ್ದರಿಂದ ಇನ್ನು ಮೇಲೆ ಸಕ್ಸನರು ತಮ್ಮ ನ್ನು ಜಯಿಸಿದವರನ್ನು ಎದುರಿಸಿ ನಿಲ್ಲುವದಕ್ಕೆ ಎಷ್ಟು ಮಾತ್ರ ಸ್ಥಳವಿಲ್ಲ ದೆ ಹೋಯಿತು.

ತನ್ನ ಹೊಸ ರಾಜ್ಯದವರು ಎಲ್ಲರೂ ತನಗೆ ಹೊಂದಿ ಕೊಂಡಿರುವದ ನ್ನು ಕಂಡು, ಉಲ್ಲಿಯಮ್ ಎಂಬ ಅರಸನು ಸ್ಕೊತ್ಲಾಂದ್ ದೇಶದ ಅರಸನ ನ್ನು ಶಿಕ್ಷಿಸ ಬೇಕೆಂದು ಆ ದೇಶದ ಮೇಲೆ ಯುದ್ಧ ತೊಡಗಿದನು. ಅದಕ್ಕೆ ಕಾರಣವೇನಂದರೆ, ಆ ಅರಸನು ಎದ್ಗರಿಗೆ ಆಶ್ರಯ ಕೊಟ್ಟು, ಉತ್ತರ ಕಡೆ ಯಲ್ಲಿ ಕಲಹ ಮಾಡಿದ ಸಕ್ಸನರಿಗೆ ಸಹಾಯ ಮಾಡಿದ್ದೇ ಅದಕ್ಕೆ ಕಾರಣ ವಾಗಿತ್ತು. ಸ್ವಲ್ಪ ಕಾಲದೊಳಗಾಗಿಯೇ ಸ್ಕೊತ್ಲಾಂದ್ ಅರಸನು ಸಮಾ ಧಾನವನ್ನು ಕೋರಿ, ಉಲ್ಲಿಯಮನಿಗೆ ವಿಧೇಯನಾಗಿ ಬಂದದ್ದು ಮಾತ್ರ ವಲ್ಲದೆ, ಎದ್ಗರ್ ಅಥಲಿಂಗನು ಸಹ "ಆತನ ಸಂಗಡ ನಾನು ಹೋರ್ಯಾ ಡ ತಕ್ಕವನಲ್ಲ" ಎಂದು ಹೇಳಿ, ಎರಡನೇ ಸಾರಿ ಅವನಿಗೆ ಶರಣಾಗತ ನಾದನು. ಅದಕ್ಕೆ ಉಲ್ಲಿಯಮನು ದೊಡ್ಡ ಮನಸ್ಸು ಮಾಡಿ, ದೈನ್ಯನೂ ಅಶಕ್ತನೂ ಆದ ಆ ಪ್ರಭುವನ್ನು ದಯವಾಗಿ ಅಂಗೀಕರಿಸಿ, ತಕ್ಕ ಉಪಕಾ ರಸಂಬಳ ಕೊಟ್ಟು ಇರಿಸಿದ್ದರಿಂದ, ಅವನು ಸಂತೋಷವಾಗಿ ತನಗೆ ಬಹು ಪ್ರೀತಿಯಾಗಿದ್ದ ಕುದುರೆಗಳನ್ನೂ ನಾಯಿಗಳನ್ನೂ ವಿಚಾರಿಸಿ ಕೊಂಡು, ತನ್ನ ಆಯುಸ್ಸು ಇದ್ದ ಮಟ್ಟಿಗೂ ಸುಖವಾಗಿದ್ದನು.

ಉಲ್ಲಿಯಮ್ ತನ್ನ ಹೊಸ ರಾಜ್ಯದಲ್ಲಿ ಉಂಟಾದ ಕಲಹಗಳನ್ನೆ ಲ್ಲಾ ಅಣಗಿಸಿ. ಹಗೆಯವರನ್ನೆಲ್ಲಾ ಇರಿಕಿಸಿ, ದೇಶವನ್ನೆಲ್ಲಾ ಕೈವಶ ಮಾ ಡಿ ಕೊಂಡ ತರುವಾಯ ತನ್ನ ಸ್ವಂತ ರಾಜ್ಯವಾದ ನೊರ್ಮಂದಿ ಧೇಶದ ಲ್ಲಿ ಕಲಹ ಉಂಟಾಯಿತೆಂದು ಕೇಳಿ, ಅಲ್ಲಿಗೆ ಹೋಗುವದಕ್ಕೆ ಹೊರಟ

ನು. ಅವನು ಅಲ್ಲಿಗೆ ಹೋದದರಿಂದ ಇಂಗ್ಲಾಂದ್ ದೇಶದಲ್ಲಿ ತಿರಿಗಿ ಕಲಹ ಉಂಟಾಯಿತು. ಅದು ಉಂಟಾದದ್ದು ಹ್ಯಾಗಂದರೆ, ನೊರ್ಮ್ಯನ್ಯ ಪ್ರಭುಗಳು "ಅರಸನು ನಮ್ಮನ್ನು ಬಹು ಖಂಡಿತವಾಗಿ ನಡಿಸುತ್ತಾನೆ" ಎಂದು ಕೆಲವು ದಿವಸಗಳಿಂದ ಗುಣುಗುಟ್ಟ ಪ್ರಾರಂಭಿಸಿ ಇದ್ದರು. ಇವರು ಬಹು ಗರ್ವಿಷ್ಠರಾದದರಿಂದ ಯಾರಿಗಾದರೂ ಬೊಗ್ಗಿ ನಡಿಯುವದು ಇವರಿಗೆ ಎಷ್ಟು ಮಾತ್ರವು ಪ್ರೀತಿ ಇಲ್ಲ. ಇವರಿಗೆ ಅಂಥಾ ಮನೋಕೊರತೆ ಬಹು ದಿವಸಗಳಿಂದ ಉಂಟಾಗಿದ್ದು ಉಲ್ಲಿಯಮನಿಗೆ ಬಹು ಇಷ್ಟವಾಗಿದ್ದ ಒಬ್ಬ ಮಂತ್ರಿಯ ಕುಮಾರನಾದ (Hereford) ಹೆರಿಫೋರ್ಡ್ ಪಟ್ಟದ ಅಧಿಕಾರಿಯಾದವನು ಮೊದಲು ಬಹಿರಂಗವಾಗಿ ಅರಸನ ಮೇಲೆ ವೈರ ಇಡಲಾರಂಭಿಸಿದವನು. ಈ ಯೌವನಸ್ಥನಾದ ಪ್ರಭುವು (Norfolk) ನೊರ್ಫೋಲ್ಕು ಸೀಮೆಯ ಅಧಿಕಾರಿಯ ಕುಮಾರ್ತೆಗೆ ನೇಮಿಸಲ್ಪಟ್ಟದರಿಂದ "ಅವಳನ್ನು ನಾನು ಮದುವೆ ಮಾಡಿ ಕೊಳ್ಳ ಬೇಕೆಂದು" ಜಯವೀರನನ್ನು ಅಪ್ಪಣೆ ಕೇಳಿದಾಗ, ಆ ಮದುವೆಗೆ ಅವನು ಅಪ್ಪಣೆ ಕೊಡಲಿಲ್ಲ. ಹಾಗಿದ್ದಾಗ್ಯೂ ಅವರು ಮದುವೆ ಮಾಡಿ ಮುಗಿಸಿಕೊಂಡು, ಆ ಮದುವೇ ಔತಣಕ್ಕೆ ಅನೇಕರು ಕೂಡಿ ಬಂದಿದ್ದ ಕಾಲದಲ್ಲಿ ಮೇಲೆ ಹೇಳಿದ ಪ್ರಭುಗಳಿಬ್ಬರೂ ಜಯವೀರನ ಅಧಿಕಾರವನ್ನು ತೆಗದು ಹಾಕ ಬೇಕೆಂದು ರಹಸ್ಯವಾಗಿ ಒಡಂಬಡಿಕೆ ಮಾಡಿ ಕೊಂಡರು. ಆ ಕೂಟದಲ್ಲಿ (Waltheof) ವಾಲ್‌ದೇಯೋವ್ ಎಂಬ ಒಬ್ಬ ಸಕ್ಸನ್ ಪ್ರಭುವು ಸೇರಿ ಇದ್ದನು. ಇವನು ಉಲ್ಲಿಯಮನ ಸಹೋದರಿಯ ಮಗಳನ್ನು ಮದುವೆ ಮಾಡಿ ಕೊಂಡಿದ್ದನು. ಅವನ ಹೆಂಡತಿ ಈ ಒಡಂಬಡಿಕೆಯನ್ನು ಕುರಿತು ಅನುಮಾನ ಪಟ್ಟು ಅರಸನಿಗೆ ತಿಳಿಸಿದಳು. ಅರಸನು ಸುಲಭವಾಗಿ ಆ ಕಲಹವನ್ನು ಶಾಂತಿ ಪಡಿಸಿ, ಸಕ್ಸನರೂ ನೊರ್ಮ್ಯನ್ನರೂ ಆದ ಸಮಸ್ತರೂ ಬಹುಶಾ ಎಣಿಸಿ ಕೊಂಡಿದ್ದ ಆ ಪ್ರಭುವನ್ನು ಕೊಲ್ಲಿಸಿದನು. ಜಯಿಸಲ್ಪಟ್ಟಿದ್ದ ಜಾತಿಯಲ್ಲಿ ಇವನೇ ಕಡೇ ಪ್ರಭುವು.

ಇದರ ತರುವಾಯ ಅರಸನು ನೊರ್ಮ್ಯಂದಿ ದೇಶಕ್ಕೆ ಹೋಗಿ, ತಾನು ಬದುಕಿ ಇದ್ದ ಮಟ್ಟಿಗೂ ಅಲ್ಲಿಯೇ ಇದ್ದನು. ಅವನು ಯಾವ ತೊಂದರೆಗೂ ತಗಲದೆ ಸುಖದಿಂದ ವಿಶ್ರಮಿಸಿ ಕೊಳ್ಳ ಬೇಕೆಂದಿರುವಾಗ, ಅವನ

ಕುಟುಂಬದಲ್ಲಿ ಉಂಟಾದ ಭೇದಗಳಿಂದಲೂ ನೊರ್ಮಂಡಿ ದೇಶದವರು ಮಾಡಿದ ಕಲಹಗಳಿಂದಲೂ ನಿತ್ಯವೂ ಅವನಿಗೆ ಮನೋವ್ಯಸನ ಉಂಟಾಯಿತು. ಅದು ಹ್ಯಾಗೆಂದರೆ, ಅವನಿಗೆ ಮೂರು ಮಂದಿ ಕುಮಾರರಿದ್ದರು. ಅವರಲ್ಲಿ ದೊಡ್ಡವನಾದ ರೋಬರ್ತ್ ಗಿಡ್ಡನಾದದರಿಂದ (Curthose) ಕುರ್ತ್ಹೋಸ್ *ಎಂದು ಕರೆಯಲ್ಪಟ್ಟನು. ಎರಡನೇ ಕುಮಾರನು ತನ್ನ ತಂದೆಯ ತರುವಾಯ ಇಂಗ್ಲಾಂಡ್ ರಾಜ್ಯವನ್ನಾಳಿದ ಎರಡನೇ ಉಲ್ಲಿಯಮನು. ಚಿಕ್ಕವನು ಅವನ ತರುವಾಯ ಇಂಗ್ಲಾಂಡ್ ರಾಜ್ಯವನ್ನಾಳಿದ (Henry I) ಮೊದಲನೇ ಹೆನ್ರಿ ಎಂಬ ಅರಸನು. ರೋಬರ್ತ್ ಎಂಬವನು ಆತುರಗಾರನೂ ಮುಂಗೋಪಿಯೂ ಆಗಿದ್ದಾಗ್ಯೂ, ಬಹು ದಯಾಳನೂ ಉದಾರತ್ವ ಉಳ್ಳವನೂ ಆಗಿದ್ದದರಿಂದ ನೊರ್ಮಂಡಿ ದೇಶದಲ್ಲಿದ್ದ ಯೌವನಸ್ಥರಾದ ಪ್ರಜುಗಳೆಲ್ಲರೂ ಅವನನ್ನು ಅಧಿಕವಾಗಿ ಸ್ನೇಹಿಸುತ್ತಿದ್ದರು. ಅವನ ತಂದೆಯು ಅವನಿಗೆ ನೊರ್ಮಂಡಿ ದೇಶವನ್ನು ಸ್ವತಂತ್ರವಾಗಿ ಕೊಟ್ಟು ಬಿಡುತ್ತೇನೆಂದು ಮಾತು ಕೊಟ್ಟಿದ್ದಾಗ್ಯೂ, ತರುವಾಯ ಅದನ್ನು ಕೊಡದೆ ಹೋದದರಿಂದ ಅವನು ಬಹಳ ವ್ಯಸನ ಪಟ್ಟನು. ಮತ್ತು ತನ್ನ ತಂದೆಯು ಮಿಕ್ಕಾದ ಇಬ್ಬರು ಕುಮಾರರಿಗೆ ಬಹಳ ಪ್ರೀತಿ ತೋರಿಸಿದ್ದರಿಂದ ಅವನು ಬಹಳ ಹೊಟ್ಟೇ ಕಿಚ್ಚು ಪಟ್ಟನು. ಹೀಗಿರುವಲ್ಲಿ ಒಂದು ದಿನ ಕಿರಿಯರು ಇಬ್ಬರೂ ತಾವು ವಾಸ ಮಾಡಿಕೊಂಡಿದ್ದ ಉಪ್ಪರಿಗೆಯಲ್ಲಿರಲಾಗಿ ಕೆಳಗೆ ಇದ್ದ ಒಂದು ವಸಾರೆಯಲ್ಲಿ (Robert) ರೋಬರ್ತ್ ಎಂಬ ತಮ್ಮ ಹಿರಿಯ ಸಹೋದರನು ಬರುವದನ್ನು ಕಂಡು, ಆಟಕ್ಕಾಗಿ ಅವನ ಮೇಲೆ ಒಂದು ಕೊಡನೀರನ್ನು ಹುಯಿದು ಬಿಟ್ಟರು. ಆದದರಿಂದ ಅವನು ಅಧಿಕ ಮೂರ್ಖ ಕೋಪಗೊಂಡು ಸಂಗಡಲೇ ಪಾವಟಿಗೆಗಳ ಮೇಲೆ ಏರಿ, ಅವರನ್ನು ತಿವಿಯುವಂತೆ ಹಿರಿದ ಕತ್ತಿಯಿಂದ ಅವರು ಇದ್ದ ಕೊಠಡಿಯೊಳಗೆ ಪ್ರವೇಶಿಸಿದನು. ಅವರ ತಂದೆಯಾದ ಅರಸನು ಆ ಸಂಗತಿಯನ್ನು ಕೇಳಿ, ಆ ಸ್ಥಳಕ್ಕೆ ಬಂದು, ಅವನನ್ನು ಗದರಿ ಕೊಂಡದ್ದರಿಂದ, ಅವನು ತನ್ನ ತಂದೆಯ ಮೇಲೆಯೂ, ಸಹೋದರರ ಮೇಲೆಯೂ, ಬಹು ಕೋಪಗೊಂಡವನಾಗಿ, ಅರಮನೆಯನ್ನು

*Curthose=ಗಿಡ್ಡ ಇಜಾರು.

ಬಿಟ್ಟು ಓಡಿ ಹೋಗಿ, ಬಲಶಾಲಿಯಾದ ಒಬ್ಬ ಪ್ರಭುವಿನ ಕೋಟೆಯಲ್ಲಿ ಶೇರಿ, ತನ್ನ ತಂದೆಗೆ ವಿರೋಧವಾಗಿ ಯುದ್ಧ ತೊಡಗಿದನು. ನೊರ್ಮಂದಿ ದೇಶದವರಾದ ಯುದ್ಧವೀರರು ಅನೇಕರು ಅವನನ್ನು ಶೇರಿ ಕೊಂಡರು. ಮತ್ತು ಅವನ ಮೇಲೆ ಬಹು ಪ್ರೀತಿಯಾಗಿದ್ದ ಅವನ ತಾಯಿ ಸಹ ರಹಸ್ಯವಾಗಿ ಅವನಿಗೆ ಸಹಾಯ ಮಾಡಿದಳು.

ಈ ವಿಪರೀತವಾದ ಯುದ್ಧವು ಶೀಘ್ರವಾಗಿ ಮುಗಿದು ಹೋಯಿತು; ಹ್ಯಾಗಂದರೆ, ತನ್ನ ಮಗನು ಹೋಗಿ ಶೇರಿದ ಕೋಟೆಗೆ ಅರಸನು ಮುತ್ತಿಗೆ ಹಾಕಿದನು. ಮುತ್ತಿಗೆಯಲ್ಲಿ ದಿನದಿನ ಆ ಕೋಟೆಯ ಅಲಂಗದ ಹತ್ತರ ಸಣ್ಣ ಯುದ್ಧಗಳೂ ಜಗಳಗಳೂ ನಡಿಯುವವು. ಹೀಗಿರುವಲ್ಲಿ ಒಂದು ದಿನ (Robert) ರೋಬರ್‍ತ್ ಪ್ರಭುವು ಯುದ್ಧ ಮಾಡ ಹೊರಡುವಾಗ ಅವನ ಹಾಗೆಯೇ ಸರ್ವಾಂಗದಲ್ಲಿಯೂ ಕವಚವನ್ನೂ ಆಯುಧಗಳನ್ನೂ ಧರಿಸಿ ಕೊಂಡ ರಾಹುತಶ್ರೇಷ್ಠನೊಬ್ಬನು ಅವನ ಎದುರಿಗೆ ಬಂದನು. ಹೀಗೆ ಬಂದವನನ್ನು ಎದುರಿಸಿದ್ದರಿಂದ ಇಬ್ಬರೂ ಬಹಳ ಹೊತ್ತು ಬಹು ಮೂರ್ಖವಾಗಿ ಯುದ್ಧ ಮಾಡಿದರು. ಇಬ್ಬರೂ ಬಹು ವೈರವೂ ಸಾಮರ್ಥ್ಯವೂ ಉಳ್ಳವರಾಗಿ ಬಹು ಧೈರ್ಯದಿಂದ ಹೋರಾಡಿದರು. ಕಡೆಯಲ್ಲಿ ಶಿರಸ್ತ್ರಾಣದಿಂದ ಮುಖವನ್ನು ಮರೆ ಮಾಡಿ ಕೊಂಡ, ಹೆಸರು ತಿಳಿಯದ, ಎದುರಿಯು ಘಾಯ ಪಟ್ಟು, ತಾನು ಹತ್ತಿದ ಕುದುರೆಯಿಂದ ವೇಗವಾಗಿ ನೆಲದ ಮೇಲೆ ಬಿದ್ದು, ಏಳುವದಕ್ಕೆ ಶಕ್ತಿ ಇಲ್ಲದೆ "ಅಚಯ ಅಚಯ" ಎಂದು ಮೊರೆ ಇಟ್ಟನು. ರೋಬರ್ತನು ಆ ಧ್ವನಿಯನ್ನು ಕೇಳಿ ಕಳವಳ ಪಟ್ಟು, ಅಯ್ಯಯೋ ಇದು ನನ್ನ ತಂದೆಯ ಶಬ್ದವು; ನಾನು ಅರಿಯದೆ ನನ್ನ ತಂದೆಯನ್ನು ಕೊಲೆ ಮಾಡುವಂತೆ ಪ್ರಾಪ್ತಿಸಿತ್ತಲ್ಲಾ? ಎಂದು ಹೇಳಿ, ಸಂಗಡಲೇ ಕುದುರೆಯಿಂದಿಳಿದು, ತಂದೆಯ ಬಳಿಯಲ್ಲಿ ಸಾಷ್ಟಾಂಗವಾಗಿ ಬಿದ್ದು, ನಾನು ಮಾಡಿದ ಅಪರಾಧವನ್ನು ನೀನು ಮನ್ನಿಸ ಬೇಕೆಂದು ಬಹು ವಾಂಛೆಯಿಂದ ಬೇಡಿ ಕೊಂಡನು. ಅರಸನು ಬಹು ಕೋಪಗೊಂಡು ಇದನ್ನು ಒಂದು ಕಾಲಕ್ಕೂ ನಾನು ಮನ್ನಿಸುವದಿಲ್ಲ, ಅಂದನು. ಆದಾಗ್ಯೂ ಸ್ವಲ್ಪ ಕಾಲದಲ್ಲಿ ಅರಸನು ಅವನಿಗೆ ಮನ್ನಣೆ ಕೊಟ್ಟು, ಸ್ಕೊತ್ಲಾಂದ್ ದೇಶಕ್ಕೆ ಕಳುಹಿಸಲ್ಪಟ್ಟ

ರಾಣುವೆಯನ್ನು ನಡಿಸುವ ಹಾಗೆ ಅವನನ್ನು ಸೈನ್ಯಾಧಿಪತಿಯಾಗಿ ನೇಮಿಸಿದನು.

ಕ್ರಿ. ಶ. 1083ನೇ ವರುಷದಲ್ಲಿ ಅವನಿಗೆ ಬಹು ಪ್ರೀತಿಯುಳ್ಳ ಅರಸಿಯಾದ (Matilda) ಮತಿಲ್ಡ ಎಂಬವಳು ಸತ್ತದ್ದರಿಂದ ಜಯವೀರನು ಬಹಳ ದುಃಖ ಪಟ್ಟನು. ಅದರ ತರುವಾಯ ನಾಲ್ಕನೇ ವರುಷದಲ್ಲಿ ಅವನು ಸಹ ಸತ್ತು ಹೋದನು. ಹ್ಯಾಗಂದರೆ, ಅವನು ಕೆಲವು ತಿಂಗಳುಗಳು ರೋಗದಲ್ಲಿ ಬಿದ್ದಿದ್ದ ಸಮಯದಲ್ಲಿ, (France) ಫ್ರಾನ್ಸ್ ದೇಶದ ಅರಸನು ಅದನ್ನು ಕೇಳಿ, ಅವನು ಹೊಂದಿದ ವ್ಯಾಧಿಯನ್ನು ಕುರಿತು ವಿನೋದ ಗೇಲಿ ಮಾಡಿದನು. ಇದನ್ನು ಅವನು ತಿಳಿದು ಕೋಪಗೊಂಡು, ತನಗೆ ಆ ವ್ಯಾಧಿ ತೀರಿದ ಸಂಗಡಲೇ ಆ ಅರಸನು ಹಾಸ್ಯ ಮಾಡಿದ್ದನ್ನು ಕುರಿತು ತಾನು ಮುಯ್ಯಿಗೆ ಮುಯ್ಯಿ ತೀರಿಸುವೆನೆಂದು ಶಪಥ ಮಾಡಿಕೊಂಡನು. ಆದದರಿಂದ ಅವನಿಗೆ ಸ್ವಲ್ಪ ಗುಣವಾದ ಕೂಡಲೇ ಫ್ರಾನ್ಸ್ ಅರಸನು ಆಳಿದ ಸೀಮೆಗಳ ಮೇಲೆ ಯುದ್ಧಕ್ಕೆ ಹೋಗಿ, ಹೊಲಗಳನ್ನೂ ಗ್ರಾಮಗಳನ್ನೂ ಊರುಗಳನ್ನೂ ಹಾಳು ಮಾಡಿ ಬಿಟ್ಟು, ತನ್ನ ಸೈನ್ಯದವರು ಸಹ ತಮ್ಮ ಇಷ್ಟದಂತೆ ಕೇಡು ಮಾಡ ಅಪ್ಪಣೆ ಕೊಟ್ಟನು. ಹಾಗೆ ಮಾಡುತ್ತಾ ಬರುವಾಗ ಒಂದು ದಿನ (Mantes) ಮಾಂತೆಸ್ ಎಂಬ ಪಟ್ಟಣವನ್ನು ಹಿಡಿದು, ಅದಕ್ಕೆ ಬೆಂಕಿ ಹತ್ತಿಸಿ ಬಿಟ್ಟು, ಅದರ ಬೀದಿಗಳಲ್ಲೆಲ್ಲಾ ಸ್ವಾರಿ ಹೋಗಿ, ತನ್ನ ಸೈನಿಕರು ಮಾಡಿದ ನಾಶನವನ್ನು ಕಂಡು ಸಂತೋಷ ಪಡುತ್ತಿರುವಲ್ಲಿ, ಅವನು ಹತ್ತಿದ್ದ ಕುದುರೆಯು ಅಲ್ಲಿದ್ದ ಕೆಂಡಗಳಲ್ಲಿ ಎಡವಿ ಬೆದರಿದ್ದರಿಂದ ಅವನು ಕೋಗೀರಿನಿಂದ ಬಿದ್ದು ಘಾಯ ಪಟ್ಟದರಿಂದ ಎರಡು ಮೂರು ದಿನಗಳಲ್ಲಿ ಸತ್ತು ಹೋದನು. ಅವನು ಕೆಲವು ದಿವಸಗಳ ವರಿಗೂ ಬಹಳ ಕಷ್ಟ ಪಡುವದರಿಂದ ತಾನು ಮುಂಚೆ ನಡಿಸಿದ ಕ್ರೂರತ್ವಗಳನ್ನೂ ಅನ್ಯಾಯಗಳನ್ನೂ ಕುರಿತು ಬಹು ಮನಸ್ತಾಪ ಪಟ್ಟು, ತಾನು ಮಾಡಿದ ಪಾಪದೋಷಗಳೆಲ್ಲಾ ಹ್ಯಾಗೆ ತೀರುವವೆಂದು ಬಹು ಚಿಂತೆ ಪಟ್ಟು, ವಿರಕ್ತರ ಮಠಗಳಿಗೂ ಗುಡಿಗಳಿಗೂ ಬಹಳ ಹಣ ಕೊಡುವದರಿಂದ ತನ್ನ ಮನಸ್ಸಾಕ್ಷಿಯನ್ನು ಸಮಾಧಾನ ಪಡಿಸ ನೋಡಿದನು. ಪ್ರಾಣ ಹೋದ ಸಂಗಡಲೇ ಅವನ ರಾಜಸಭೆಯವ

ರಾದ ದೊಡ್ಡ ಪ್ರಭುಗಳೆಲ್ಲರೂ ಅವನು ಸತ್ತ ಕೊಠಡಿಯನ್ನು ಬಿಟ್ಟು, ತಮ್ಮ ಸ್ವಂತ ಕಾರ್ಯಗಳನ್ನು ನೋಡಿ ಕೊಳ್ಳ ಹೊರಟು ಹೋದರು. ಅವನ ಬಳಿಯಲ್ಲಿದ್ದ ಚಿಕ್ಕ ಉದ್ಯೋಗಸ್ಥರು ಸಹ ಅವನ ಆಯುಧ, ಕವಚ, ವಸ್ತ್ರ, ಆಭರಣಗಳನ್ನು ತೆಗದು ಕೊಂಡು, ಅವನ ಹೆಣವನ್ನು ಅಮರ್ಯಾದೆಯಾಗಿ ನೆಲದ ಮೇಲೆ ಹಾಕಿ ಬಿಟ್ಟು ಹೋದರು. ಮತ್ತು ಆ ಹೆಣವನ್ನು ಹೂಣಿಡುವದಕ್ಕೆ ಎತ್ತುವಾಗ ಯಾರೋ ಒಬ್ಬನು ಆ ಸಭೆಯಲ್ಲಿ ಎದ್ದು ನಿಂತು, "ಸತ್ತು ಹೋದ ಈ ಅರಸನು ಅನ್ಯಾಯವಾಗಿ ನನ್ನ ಆಸ್ತಿಗಳನ್ನು ಅಪಹರಿಸಿದ್ದು ಅಲ್ಲದೆ ಈ ಸಭೆಯು ಕೂಡಿರುವ ಈ ಸ್ಥಳವು ಸಹ ನನ್ನದೆಂದು ನಾನು ರುಜುವು ಮಾಡುತ್ತೇನೆ. ನನ್ನ ನ್ಯಾಯವನ್ನು ವಿಚಾರಿಸಿ ತರುವಾಯ ಈ ಹೆಣವನ್ನು ಹೂಣಿಡಿರಿ," ಎಂದು ಮೊರೆ ಇಟ್ಟು, ತನಗೆ ನ್ಯಾಯವಾಗುವ ಮಟ್ಟಿಗೂ ಸಂಸ್ಕಾರ ಮಾಡ ಕೂಡದೆಂದು ಅಡ್ಡಿ ಮಾಡಿದನು. ಆದದರಿಂದ ಆ ಸಭೆಯವರು ಅವನಿಗೆ ನ್ಯಾಯ ಮಾಡಿದ ತರುವಾಯ ಮಹಾ ಪರಾಕ್ರಮಶಾಲಿಯಾದ ಜಯಶೂರನ ಹೆಣವನ್ನು ನೆಲದಲ್ಲಿ ಹೂಣಿಟ್ಟರು. ಅವನು ಸತ್ತಾಗಲೂ ಅವನನ್ನು ಹೂಣಿಟ್ಟಾಗಲೂ ಇಂಥಾ ಸಂಗತಿಗಳು ನಡೆದದರಿಂದ ಅವನ ಜನರು ಅವನನ್ನು ಕುರಿತು ಯಾವ ಪ್ರಕಾರ ಎಣಿಸಿದರೆಂದು ತಿಳಿಯ ಬಹುದು.

"ಮೊದಲನೇ ಉಲ್ಲಿಯಮ್" ಎಂದು ಹೆಸರು ಹೊಂದಿದ ಈ ಅರಸನು ಬಹು ಸಾಮರ್ಥ್ಯವುಳ್ಳ ಸೈನ್ಯಾಧಿಪತಿಯಾಗಿಯೂ ಸಾಮರ್ಥ್ಯವುಳ್ಳ ಅಧಿಕಾರಿಯಾಗಿಯೂ ಇದ್ದನು. ಇವನಿಗೆ ಸೂಕ್ಷ್ಮ ಬುದ್ಧಿಯೂ, ಕೋಪಗುಣವೂ, ಬೊಗ್ಗದ ಚಿತ್ತವೂ ಉಂಟಾಗಿದ್ದವು. ತನ್ನನ್ನು ಹಗೆ ಮಾಡಿದವರಿಗೆ ಅವನು ಕೆಲ ಸಮಯಗಳಲ್ಲಿ ದೊಡ್ಡ ಮನಸ್ಸು ಮಾಡಿ ತಾಳ್ಮೆಯನ್ನು ತೋರಿಸಿದ್ದುಂಟು. ಆದಾಗ್ಯೂ ಅವನನ್ನು ವೈರವೂ ಕ್ರೂರತ್ವವೂ ಖಂಡಿತವೂ ಉಳ್ಳ ಸ್ವಭಾವದವನೆಂದು ಹೇಳ ಬೇಕೇ ಹೊರ್ತು ಅವನನ್ನು ಹೊಗಳುವದಕ್ಕೆ ಹೇತುವೆ ಇಲ್ಲ. ಅವನು ಬಡವರನ್ನೂ ಬಲಿದವರನ್ನೂ ಸಮವಾಗಿ ಎಣಿಸ ಬೇಕಾದ ನ್ಯಾಯವನ್ನು ನೆನಸದೆ ಪ್ರಜೆಗಳ ನ್ಯಾಯವನ್ನು ಎಣಿಸದೆ ಇದ್ದನು. ಕರುಣೆ ಇಲ್ಲದೆ ತಾನು ಹಿಡಿದ ಕಾರ್ಯವನ್ನು ಮಾಡಿ ಮುಗಿಸಿದ್ದಕ್ಕೆ ಒಂದು ದೃಷ್ಟಾಂತ ಉಂಟು.

ಅದೇನಂದರೆ, — (Hampshire) ಹಾಂಪ್‌ಷೀರ್ ಎಂಬ ನಾಡಿನಲ್ಲಿ ಮೂವತ್ತು ಮೈಲುಗಳ ಚಚ್ಚೌಕಕ್ಕೆ ಅವನು ಹೊಲಗಳನ್ನೂ ಗ್ರಾಮಗಳನ್ನೂ ನಾಶ ಮಾಡಿ, ತಾನು ಬೇಟೆಯಾಡುವದಕ್ಕೆ ಆ ಸ್ಥಳದಲ್ಲೆಲ್ಲಾ ಮರಗಳನ್ನು ನಾಟಿ, ಅಡವಿಯಾಗ ಮಾಡಿದನು. ಆ ಸ್ಥಳಕ್ಕೆ ಹೊಸ ಕಾಡು ಎಂದು ಹೆಸರಾಯಿತು. ಆ ಕಾಲದಲ್ಲಿ ಅರಸನು ಬೇಟೆಗೋಸ್ಕರ ಇರಿಸಿದ್ದ ಒಂದು ಮೃಗವನ್ನು ಒಬ್ಬನು ಕೊಂದರೆ, ಮನುಷ್ಯಪ್ರಾಣ ತೆಗೆದವನಿಗೆ ವಿಧಿಸುವ ಶಿಕ್ಷೆಗಿಂತ ಅವನಿಗೆ ಅಧಿಕ ಭಾರವಾದ ಶಿಕ್ಷೆಯನ್ನು ವಿಧಿಸುವರು. ಅವನು ರಾಜ್ಯಭಾರ ಮಾಡಿದ ವಿವರವು ಪೂರ್ವೀಕವಾದ ಒಂದು ಪುಸ್ತಕದಲ್ಲಿ ಬರೆಯಲ್ಪಟ್ಟದೆ. (Doomsday) ದುಮ್ಸ್‌ದೇ ಎಂಬುವದು ಆ ಪುಸ್ತಕದ ಹೆಸರು. ಅದಕ್ಕರ್ಥ ನ್ಯಾಯತೀರ್ವಿಕೇ ಪುಸ್ತಕ ಎಂಬುವದು. ಅದರಲ್ಲಿ ಉಲ್ಲಿಯಮ್ ಎಂಬವನಿಗೆ ಹೊಸದಾಗಿ ಸ್ವೈವಶವಾಧ ರಾಜ್ಯದಲ್ಲಿರುವ ಭೂಮಿಯನ್ನೂ ಪ್ರಜೆಗಳನ್ನೂ ಕುರಿತ ವಿವರ ಉಂಟು.

ಸದರಿ ಅರಸನು ಮರಣಸಮಯದಲ್ಲಿ ನೊರ್ಮಂದಿ ದೇಶವನ್ನು ತನ್ನ ಹಿರಿಯ ಮಗನಿಗೆ ಕೊಟ್ಟನು: ಹೆನ್ರಿ ಎಂಬುವ ತನ್ನ ಕಿರಿಯ ಮಗನಿಗೆ ಒಂದು ಒಟ್ಟು ಹಣವನ್ನು ಕೊಡಲಾಜ್ಞಾಪಿಸಿದನು; ತನ್ನ ಎರಡನೇ ಕುಮಾರನಾದ ಉಲ್ಲಿಯಮನು ತನ್ನ ತರುವಾಯ ಇಂಗ್ಲಾಂಡ್ ದೇಶವನ್ನು ಆಳುವದು ತನ್ನ ಅಪೇಕ್ಷೆ ಎಂದು ತಿಳಿಸಿದನು. ಈ ಎರಡನೇ ಉಲ್ಲಿಯಮನು ತನ್ನ ತಂದೆಯು ಸಾಯುವದಕ್ಕಿಂತ ಮುಂಚೆ ಅವನನ್ನು ಬಿಟ್ಟು, ಇಂಗ್ಲಾಂದಿಗೆ ಬಂದು, ತಾನು ಅಡ್ಡಿ ಇಲ್ಲದೆ ಸಿಂಹಾಸನ ಹತ್ತುವದಕ್ಕೆ ಬೇಕಾದ ಪ್ರಯತ್ನ ಮಾಡಿ ಇದ್ದಾಗ್ಯೂ, ಅರಸನು ಸತ್ತ ಕೂಡ್ಲೆ ಪ್ರಭುಗಳಲ್ಲಿ ಅನೇಕರು ಕಲಹ ಮಾಡಿದರು. ಅದಕ್ಕೆ ಕಾರಣವೇನಂದರೆ, ಅವರಲ್ಲಿ ಅನೇಕರಿಗೆ ನೊರ್ಮಂದಿ ದೇಶದಲ್ಲಿಯೂ, ಇಂಗ್ಲಾಂಡ್ ದೇಶದಲ್ಲಿಯೂ ಮಾನ್ಯಭೂಮಿಗಳು ಉಂಟಾಗಿದ್ದದರಿಂದ, ಆ ಎರಡು ರಾಜ್ಯಗಳೂ ಭೇದವಾಗಿದ್ದರೆ, ತಮಗೆ ನಷ್ಟ ಸಂಭವಿಸುವದೆಂದೂ, ರೋಬರ್ತ್ ಎಂಬವನು ಒಬ್ಬರನ್ನೂ ಖಂಡಿಸಲಾರದ ಮೃದುವೂ ಅಸ್ಥಿರವಾದ ಸ್ವಭಾವವೂ ಉಳ್ಳವನಾಗಿರುವದರಿಂದ ಅವನೇ ತಮಗೆ ಅರಸನಾಗ ಬೇಕೆಂದೂ ಹೇಳಿ ಕೊಂಡರು. ಈ ಪ್ರಕಾರ ಸ್ವಲ್ಪ ಹೆಚ್ಚು ಕಡಿಮೆ ನೊರ್ಮ-

ನ್ಯರೆಲ್ಲರೂ ತನ್ನನ್ನು ಬಿಟ್ಟು ವಿಪರ್ಶಿಯಾದರೆಂದು ಕಂಡು, ಅಂಗ್ಲೋ ಸಕ್ಸನರಲ್ಲಿ ಕೆಲವರನ್ನು ಉಲ್ಲಿಯಮನು ಕರೆಯ ಕಳುಹಿಸಿ, ಅವರನ್ನು ತಾನು ಅಧಿಕ ದಯವಾಗಿ ನಡಿಸುವೆನೆಂದು ನಯ ಮಾತಾಡಿ, ಅವರು ತನ್ನನ್ನು ಕೂಡಿ ಕೊಳ್ಳುವ ಹಾಗೆ ಮಾಡಿ, ಅವರ ಸಹಾಯದಿಂದ ಸುಲಭವಾಗಿ ಆ ಕಲಹಗಾರರನ್ನು ವಿಧೇಯವಾಗ ಮಾಡಿದನು.

ತರುವಾಯ ಅವನು ಸಕ್ಸನರಿಗೆ ಕೊಟ್ಟ ವಾಗ್ದತ್ತವನ್ನು ವಿನೂ ಈಡೇರಿಸಲಿಲ್ಲ. ಅವರು ಮುಂಚೆ ಸಲ್ಲಿಸುತ್ತಿದ್ದದ್ದಕ್ಕೆ ಹೆಚ್ಚಾದ ಸುಂಕ ಮುಂತಾದ ಶೀರ್ವೆಗಳನ್ನು ಅವರ ಬಳಿಯಲ್ಲಿ ತೆಗದು ಕೊಂಡು, ಅನ್ಯಾಯವಾಗಿ ತೆರಿಗೆ ವಿಧಿಸಿದ್ದರಿಂದ ಅವನು ಆಳಿದ ಕಾಲವೆಲ್ಲಾ ಅವನ ಪ್ರಜೆಗಳು ಅವನನ್ನು ಸ್ನೇಹಿಸಲಿಲ್ಲ; ಘನವಾಗಿ ಎಣಿಸಲಿಲ್ಲ.

ಅವನು ಇಂಗ್ಲಾಂಡಿನಲ್ಲಿ ಉಂಟಾದ ಕಲಹಗಳನ್ನು ಶಾಂತಿ ಪಡಿಸಿದ ತರುವಾಯ ತನ್ನ ತಂದೆಯು ಆಳಿದ ದೇಶಗಳನ್ನೆಲ್ಲಾ ತಾನು ಆಳಬೇಕೆಂದು ಇಚ್ಛೈಸಿ, ತನ್ನ ಸಹೋದರನ ರಾಜ್ಯವನ್ನು ಕಿತ್ತು ಕೊಳ್ಳ ಪ್ರಯತ್ನ ಮಾಡಿದನು. ಈ ಅಭಿಪ್ರಾಯದಿಂದ ಅವನು (British Channel) ಬ್ರಿಟಿಷ್ ಕಾಲುವೆ ಎಂದು ಕರೆಯಲ್ಪಡುವ ಚಿಕ್ಕ ಕಡಲನ್ನು ದೊಡ್ಡ ಸೈನ್ಯದೊಡನೆ ದಾಟಿ ಹೋಗಿ, ಈ ಅನುಚಿತವಾದ ಯುದ್ಧ ತೊಡಗುವ ಕಾಲದಲ್ಲಿ, ಆ ಆ ಪಕ್ಷದವರಾದ ಕೆಲವು ಮುಖ್ಯಾಧಿಕಾರಿಗಳು ಕೂಡಿ ಬಂದು, ಮುಂಚೆ ಅರಸನು ಶೀರ್ಮಾನಿಸಿದ್ದ ಪ್ರಕಾರವೇ ಆ ಎರಡು ದೇಶಗಳೂ ಈಗ್ಯೆ ಭೇದವಾಗಿಯೇ ಇರ ಬೇಕೆಂದೂ, ಆ ಇಬ್ಬರು ಅರಸುಕುಮಾರರಲ್ಲಿ ಯಾವನು ಮುಂಚೆ ಸಾಯುತ್ತಾನೋ ಅವನ ರಾಜ್ಯವನ್ನು ಮತ್ತೊಬ್ಬನು ತನ್ನ ರಾಜ್ಯಕ್ಕೆ ಶೇರಿಸಿ ಕೊಂಡು ಆಳ ಬೇಕು ಎಂದೂ ಆಲೋಚನೆ ಹೇಳಲಾಗಿ, ಆ ಇಬ್ಬರು ಅರಸುಗಳೂ ಸಮ್ಮತಿ ಪಟ್ಟು, ಸಮಾಧಾನದ ಒಡಂಬಡಿಕೆ ಮಾಡಿ ಕೊಂಡು, ತಮ್ಮ ತಮ್ಮ ಶೀಮೆಗಳಿಗೆ ಹೋಗಿ ಬಿಟ್ಟರು.

ಹೆನ್ರಿ ಎಂಬ ರಾಜಪುತ್ರನು ತನ್ನ ಇಬ್ಬರು ಸಹೋದರರು ಮಾಡಿ ಕೊಂಡ ಒಡಂಬಡಿಕೆಯಲ್ಲಿ ತನಗೆ ಒಂದು ಶೀಮೆಯೂ ದೊರಕಲಿಲ್ಲವೆಂದು ವ್ಯಸನ ಪಟ್ಟು, ತನ್ನ ತಂದೆಯಿಂದ ಕೊಡಲ್ಪಟ್ಟ ಸ್ಥಳಗಳಾದ (St. Michael's Mount) ಸಾಂತು ಮಿಕೇಲನ ಬೆಟ್ಟ ಎಂಬ ಒಂದು ದೊಡ್ಡ

ಕೋಟೆಯಲ್ಲಿ ರಾಣುವೆಯ ಸಹಿತವಾಗಿ ಶೇರಿ, ತನ್ನ ಸಹೋದರರನ್ನು ಯುದ್ಧಕ್ಕೆ ಕರೆದದರಿಂದ ಅವರು ಸಂಗಡಲೇ ಆ ಕೋಟೆಯನ್ನು ಸುತ್ತಿಕೊಂಡು ಮುತ್ತಿಗೆ ಹಾಕಿದ್ದರಿಂದ ಅವನು ಅದನ್ನು ತೆರೆದು ಬಿಟ್ಟು ಒಳಪಟ್ಟು ಬರ ಬೇಕಾಯಿತು.

ಯೂರೋಪಿನ ಎಲ್ಲಾ ದೇಶಗಳವರೂ ಒಡಂಬಟ್ಟು ನಡೆಸಿದ ಒಂದು ದೊಡ್ಡ ಯುದ್ಧವು ಆ ಕಾಲದಲ್ಲಿ ಉಂಟಾದದರಿಂದ, ಈ ವಿಧವಾದ ಸಣ್ಣ ಯುದ್ಧಗಳನ್ನು ಎಲ್ಲರು ಶೀಘ್ರವಾಗಿ ಮರೆತು ಬಿಡುವದಕ್ಕೆ ಹೇತುವೆಯಾಯಿತು. ಆ ದೊಡ್ಡ ಯುದ್ಧದ ಕಾರಣವನ್ನು ಕೆಳಗೆ ವಿವರಿಸುವೆವು. ಏನಂದರೆ, ಆ ಕಾಲದಲ್ಲಿ ಅನೇಕರು ತಮಗಿದ್ದ ಮತವೈರಾಗ್ಯಕ್ಕೆ ದೃಷ್ಟಾಂತವಾಗಿಯೂ, ಪುಣ್ಯವನ್ನು ಸಂಪಾದಿಸುವದಕ್ಕೆ ಹೇತುವೆಯಾಗಿಯೂ (Palestine) ಪೆಲಿಸ್ತಿನ್ ದೇಶಕ್ಕೆ ಯಾತ್ರೆ ಮಾಡುವರು. ಅದು ಬಹಳ ದೂರವಾಗಿದ್ದದರಿಂದಲೂ ದಾರಿಯಲ್ಲಿ ಅನೇಕ ಆಟಂಕಗಳು ಇದ್ದದರಿಂದಲೂ, ಆ ಸ್ಥಳ ಶೇರುವದಕ್ಕೆ ಬಹು ಕಷ್ಟವಾಗಿರುವದು. ಆ ದಿವ್ಯ ದೇಶವು ಆ ಕಾಲದಲ್ಲಿ ತುರುಕರು ಸರಸೇನರು ಎಂಬ ಜಾತಿಗಳವರ ವಶದಲ್ಲಿ ಇದ್ದದರಿಂದ ಅವರು ಆ ಸ್ಥಳಕ್ಕೆ ಬಂದ ಪರದೇಶಿಗಳನ್ನು ಬಹು ಕ್ರೂರವಾಗಿ ಹಿಂಸೆ ಪಡಿಸಿದ್ದನ್ನು ಆ ಸ್ಥಳಕ್ಕೆ ಹೋಗಿ ಬಂದ (Peter the Hermit) ಪೇತರನೆಂಬ ಒಬ್ಬ ವನವಾಸಿಯು ಕಂಡು, ಯೂರೋಪಿಗೆ ತಿರಿಗಿ ಬಂದಾಗ ತಾನು ಕಂಡ ಪರಿತಾಪವುಳ್ಳ ಸಂಗತಿಗಳನ್ನು ಕೆಲವರ ಸಂಗಡ ಹೇಳಲು, ಅವರು ಇದನ್ನು ಕುರಿತು ಬಹಳ ಮನಸ್ಸು ಕರಗಿ, ಅಂಥಾ ಅನ್ಯಾಯಗಳನ್ನು ಹ್ಯಾಗಾದರೂ ನಿಲ್ಲಿಸಿ ಬಿಡ ಬೇಕು ಎಂದು ಹೇಳಿದ್ದರಿಂದ, ಅವನು ಎಲ್ಲೆಲ್ಲಿಯೂ ಹೋಗಿ, ಸತ್ಯವೇದದ ವಿಷಯಗಳನ್ನು ಘನವಾಗಿ ಎಣಿಸಿದ ಎಲ್ಲರೂ ಸಂಗಡಲೇ ಆಯುಧಗಳನ್ನು ಧರಿಸಿ ಕೊಂಡು, ಆ ಪರಿಶುದ್ಧ ದೇಶಕ್ಕೆ ಹೋಗಿ, ಭಕ್ತಿ ಇಲ್ಲದ ಜಾತಿಯವರ ಕೈಯಿಂದ ಅದನ್ನು ಕಿತ್ತು ಕೊಳ್ಳುವ ಹಾಗೆ ಕೂಡಿ ಬರ ಬೇಕೆಂದು ಕರೆಯುತ್ತಾ ಬಂದನು. ಇವನು ಮಾಡಿದ ಪ್ರಸಂಗವನ್ನು ಕೇಳಿದ ಲೆಖ್ಖವಿಲ್ಲದ ಜನರು ಇವನ ಅಭಿಪ್ರಾಯಕ್ಕೆ ಒಪ್ಪಿದ್ದರಿಂದ ಯೂರೋಪು ಖಂಡವೆಲ್ಲೆಲ್ಲಿಯೂ ಇಂಥಾ ಮತವೈರಾಗ್ಯವು ತುಂಬಿತು. ಶಕ್ತಿಯನ್ನು

ಬಳಿಸ ಶಿಳಿದವರೆಲ್ಲರೂ, ಈ ಪುಣ್ಯಯುದ್ಧಕ್ಕೆ ಹೋಗ ಬೇಕೆಂಬುವ ಆಸಕ್ತಿ ಯಿಂದ, ಹೊರಟರು. ಆ ಗುರಿಯಿಂದ ಬಡವರು ಬಲವಾದ ಪ್ರಭುಗ ಳನ್ನು ಶೇರಿ ಕೊಂಡರು. ಐಶ್ವರ್ಯವಂತರು ತಮ್ಮ ಪರಿಜನರನ್ನು ಶೇರಿಸಿ ಕೊಂಡರು. ಬಲಹೀನರು ದ್ರವ್ಯವನ್ನು ಕೊಟ್ಟು, ಯುದ್ಧಕ್ಕೆ ಹೋಗುವವ ರಿಗೆ ಆಶೀರ್ವಾದ ಕೊಟ್ಟರು. ಮೂರು ಲಕ್ಷ ಮಂದಿಯ ವರೆಗೂ ಬಲಭು ಜದಲ್ಲಿ ಶಿಲುಬೆಯ ಗುರುತನ್ನು ಧರಿಸಿ ಕೊಂಡವರಾಗಿ ಪೆಲೆಸ್ತೈನ್ ದೇ ಶಕ್ಕೆ ಹೊರಟು ಹೋದರು. ಆ ಯುದ್ಧವೀರರೆಲ್ಲರೂ ಆ ಗುರುತನ್ನು ಭುಜದಲ್ಲಿ ಧರಿಸಿದ್ದರಿಂದ ಆ ಯುದ್ಧವು "ಶಿಲುಬೆಯುದ್ಧ"ವೆಂದು ಹೇಳ ಲ್ಪಟ್ಟಿತು. ಆ ಕಾಲದಲ್ಲಿ ರೋಬರ್ಟ್ ಎಂಬ ನೊರ್ಮಂದಿ ದೇಶದ ಅರ ಸನು ಕೂಡ, ತನ್ನ ರಾಜ್ಯವನ್ನು ತನ್ನ ಸಹೋದರನಾದ ಉಲ್ಲಿಯಮನಿಗೆ ಅಡಪಿಟ್ಟು, ಆ ದ್ರವ್ಯದಿಂದ ಸೈನ್ಯವನ್ನು ಕೂಡಿಸಿ, ಮುಸ್ತೀಪು ಮಾಡಿ, ಶಿಲುಬೆಯುದ್ಧಸ್ತರ ಸಂಗಡ ಕೂಡಿ ಕೊಂಡು ಹೋದನು.

ಇದರ ತರುವಾಯ ಉಲ್ಲಿಯಮ್ ಎಂಬವನು ತಾನು ಆಶಿಸಿದ ಪ್ರ ಕಾರವೇ ಆ ಎರಡು ರಾಜ್ಯಗಳನ್ನು ಹೊಂದಿ ಎದುರಿಸುವವರಿಲ್ಲದೆ ಆಳಿ ಕೊಂಡು, ತನ್ನ ಪ್ರಜೆಗಳನ್ನು ಕಷ್ಟ ಪಡಿಸುವದೂ, ಆಸ್ತಿಯನ್ನು ಕೂಡಿಸು ವದೂ, ಗುರುಗಳ ಸಂಗಡ ವಾಗ್ವಾದ ಮಾಡುವದೂ, ಇವುಗಳ ಹೊ ರ್ತು ಬೇರೆ ಏನೂ ಮಾಡಲಿಲ್ಲ. "ಮೊದಲನೇ ಉಲ್ಲಿಯಮನು" (Canterbury) ಕಾಂತರ್‌ಬರಿ ಪಟ್ಣಕ್ಕೆ ಶ್ರೇಷ್ಠ ಅಧ್ಯಕ್ಷನಾಗಿ ಇಟ್ಟಿದ್ದ (Lanfranc) ಲಾಂಫ್ರಾನ್ ಎಂಬವನು ಈ ಅರಸನು ಆಳಿದ ಮೊದ ಲಲ್ಲಿ ಸತ್ತು ಹೋದನು. ಜಯಶೂರನು ಮಿಕ್ಕಾದ ಮಂತ್ರಿಗಳ ಆಲೋ ಚನೆಯನ್ನು ಕೇಳದೆ ಇದ್ದಾಗ್ಯೂ ಈ ಲಾಂಫ್ರಾನ್ ಎಂಬ ಗುರುವಿನ ಮಾತನ್ನು ತಳ್ಳಿ ಬಿಡಲಿಲ್ಲ. ಆ ಗುರುವು ಸತ್ತ ತರುವಾಯ ಅರಸನು ಐದು ವರುಷಗಳ ಮಟ್ಟಿಗೂ ಆ ಶೇವೆಗೆ ಬೇರೊಬ್ಬನನ್ನು ನೇಮಿಸ ಗೊ ಡಿಸದೆ, ತಾನೇ ಆ ಗುಡಿಯ ಆಧಿಕ್ಯವನ್ನು ಅನುಭವಿಸುತ್ತಾ ಬಂದನು. ಅದರ ತರುವಾಯ ಒಂದು ದಿವಸ ಅವನಿಗೆ ಕಠಿಣವಾದ ವ್ಯಾಧಿ ಉಂ ಟಾದಾಗ (Anselm) ಆನ್‌ಸೆಲಂ ಎಂಬವನನ್ನು ಶ್ರೇಷ್ಠ ಅಧ್ಯಕ್ಷನಾಗಿ ನೇಮಿಸಿದನು. ಇವನು ದೇವಭಕ್ತಿಯೂ ಮತವೈರಾಗ್ಯವೂ ಉಳ್ಳವ

ನಾಗಿದ್ದಾಗ್ಯೂ ಬಹಳ ಎಚ್ಚರಿಕೆ ಇಲ್ಲದವನಾಗಿದ್ದನು. ಈ ಸಭೆಯ ಅಧಿಕಾರಿಯು, ಅರಸನು ದೇವಾಲಯದ ಆಧಿಕ್ಯಗಳನ್ನು ತನ್ನ ಇಷ್ಟದ ಹಾಗೆ ಖರ್ಚು ಮಾಡುವದನ್ನು ಕಂಡು, ಅದಕ್ಕೋಸ್ಕರ ಅವನನ್ನು ಗದರಿಸಿದ್ದರಿಂದ ಆ ಇಬ್ಬರಿಗೂ ಬಹು ಕ್ಲೇಶ ಉಂಟಾಯಿತು. ಅದಕ್ಕೋಸ್ಕರ ಆನ್ಸೆಲಂ ಎಂಬವನು ಇಂಗ್ಲಾಂಡನ್ನು ಬಿಟ್ಟು ಬೇರೊಂದು ದೇಶಕ್ಕೆ ತಾನೇ ಹೋಗಿ ಬಿಟ್ಟನು.

ಆ ಮೇಲೆ ಉಲ್ಲಿಯಮನು ನೊರ್ಮಂದಿ ದೇಶವನ್ನು ಸಂಪಾದಿಸಿಕೊಂಡದ್ದು ಸಾಲದೆಂದು ಎಣಿಸಿ, ಶಿಲುಬೆಯುದ್ಧಕ್ಕೆ ಹೋದ ಬೇರೆ ಅರಸರ ಬಳಿಯಲ್ಲಿ ಶೀಮೆಗಳನ್ನು ಹಣಕ್ಕೆ ಕೊಂಡು ಕೊಳ್ಳ ಯತ್ನೈಸುವಾಗ ಅವನು ಆಕಸ್ಮಿಕವಾಗಿ ಸಾಯಲಾಗಿ, ಅವನು ಅತ್ಯಾಶೆಯಿಂದ ಮತ್ತನಾಗಿ ನೆನಸಿ ಕೊಂಡದ್ದೆಲ್ಲಾ ಈಡೇರದೆ ಹೋಯಿತು. ಅವನು ಸತ್ತದ್ದು ಹ್ಯಾಗಂದರೆ, ಒಂದು ದಿವಸ ಮಧ್ಯಾನ್ಹದ ತರುವಾಯ ಅವನು ಹೊಸ ಕಾಡಿನಲ್ಲಿ ಬೇಟೆ ಆಡ ಹೋದಾಗ ತಾನು ಎಸೆದ ಅಂಬಿನಿಂದ ಘಾಯ ಪಟ್ಟ ಗಂಡುಜಿಂಕೆಯನ್ನು ಹಿಡಿದು ಕೊಳ್ಳ ಬೇಕೆಂದು ಅತಿ ವೇಗವಾಗಿ ಕುದುರೆಯನ್ನು ಬಿಟ್ಟು ಕೊಂಡು ಓಡುವಾಗಲು, ಯಾರೋ ಒಬ್ಬನು ಎಸೆದ ಅಂಬು ಅವನ ಎದೆಯಲ್ಲಿ ತೂರಿ ಸಂಗಡಲೇ ಸತ್ತು ಕುದುರೆಯ ಮೇಲಿನಿಂದ ಬಿದ್ದನು. ಹೆಣವು ಬಿದ್ದ ಸ್ಥಳದಲ್ಲಿಯೇ ಒಬ್ಬರಿಗೂ ತಿಳಿಯದೆ ಒಂದು ಝಾವದ ಮಟ್ಟಿಗೂ ಸುಮ್ಮನೆ ಬಿದ್ದಿತ್ತು. ತರುವಾಯ ಕೆಲವು ಊರುಜನರು ತಾವು ಬರುವ ದಾರಿಯಲ್ಲಿ ಆ ಹೆಣವು ಬಿದ್ದಿರುವದನ್ನು ಕಂಡು, ಅದನ್ನು ಒಂದು ಬಂಡಿಯಲ್ಲಿ ಹಾಕಿ, (Winchester) ವಿನ್‌ಚೆಸ್ತರ್ ಎಂಬ ಪಟ್ಟಣಕ್ಕೆ ತೆಗದು ಕೊಂಡು ಹೋದರು. ಅಲ್ಲಿ ರಾಜಸಭೆಯವರು ಅದನ್ನು ರಹಸ್ಯವಾಗಿ ಹೂಣಿಟ್ಟರು. ಆವಾಗ ಅಲ್ಲಿ ಅಳುವವರೂ ಇಲ್ಲ. ಸತ್ತವನನ್ನು ಕುರಿತು ಚಿಂತಿಸುವವರೂ ಇಲ್ಲ. ಆ ಅರಸನು ಘಾಯ ಪಟ್ಟ ಕಾಲದಲ್ಲಿ (Sir Walter Tyrrel) ಸರ್‌ವಾಲ್ತರ್ ತಿರ್ರೆಲ್ ಎಂಬ ಫ್ರಾನ್ಸ್ ದೇಶದ ರಾಹುತವೀರನೊಬ್ಬನು ಅರಸನ ಸಂಗಡ ಬೇಟೆಯಾಡಿ ಕೊಂಡಿದ್ದನೇ ಹೊರ್ತು ಬೇರೊಬ್ಬನೂ ಆ ಸ್ಥಳದಲ್ಲಿ ಇರಲಿಲ್ಲ. ಅರಸನು ಘಾಯ ಪಟ್ಟ ಕೂಡ್ಲೆ ಅವನು ಒಂದು ನಿಮಿಷವಾದರೂ ನಿಲ್ಲದೆ

ಸಮುದ್ರತೀರಕ್ಕೆ ಓಡಿ ಹಡಗವೇರಿ ತಪ್ಪಿಸಿ ಕೊಂಡನು. ಇದರಿಂದ ಅವನೇ ಕೈತಪ್ಪಾಗಿ ಅರಸನನ್ನು ಘಾಯ ಪಡಿಸಿದವನೆಂದು ಹೇಳಿದವರುಂಟು. ಆದಾಗ್ಯೂ ಹಾಗೆ ಹೇಳುವದಕ್ಕೆ ಕಾರಣವಿಲ್ಲ. ಅರಸನಿಗೆ ಘಾಯವುಂಟಾದ ವಿಧ ತನಗೆ ತಿಳಿಯಲಿಲ್ಲವೆಂದು ತರುವಾಯ ದೃಢವಾಗಿ ಹೇಳಿದನು. ಆದದರಿಂದ ಕಾರ್ಯವನ್ನು ಯೋಚಿಸುವಾಗ ಆ ಅರಸನಿಂದಾಗಲಿ ಅವನ ತಂದೆಯಿಂದಾಗಲಿ ಅಧಿಕ ಉಪದ್ರ ಪಟ್ಟಿದ್ದ ಅನೇಕರು ಆ ಕಾಡಿನಲ್ಲಿದ್ದರೆಂಬದು ನಿಜ. ಆದದರಿಂದ ಅಂಥವನೊಬ್ಬನು ಆ ಅರಸನನ್ನು ಕೊಂದನೆಂದು ನೆನಸ ಬೇಕು.

ಎರಡನೇ ಉಲ್ಲಿಯಮನಿಗೆ ಘನವಾಗಿ ಹೇಳ ತಕ್ಕ ಕಾರ್ಯವು ಯಾವದೂ ಇಲ್ಲ. ಅವನ ಗುಣ ಕೆಟ್ಟ ಗುಣವು. ಅಲ್ಪ ವಿಷಯಗಳಲ್ಲಿ ಅಧಿಕ ಖರ್ಚು ಮಾಡುವನು. ದೊಡ್ಡ ಕಾರ್ಯಗಳಲ್ಲಿ ಲೋಭತ್ವವನ್ನು ತೋರಿಸುವನು. ತನ್ನ ರಾಜ್ಯದವರನ್ನು ಬಹು ಕ್ರೂರವಾಗಿ ಆಳಿದನು. ತನಗೆ ಇಚ್ಛಕ ಮಾತುಗಳನ್ನು ಹೇಳಿದ ರಾಜಸಭೆಯವರಿಗೆ ಮಾತ್ರ ದಯ ತೋರಿಸುವನು. ಮಿಕ್ಕಾದವರಿಗೆ ಎಷ್ಟು ಮಾತ್ರ ಭಯ ಪಡದೆ ಅವರನ್ನು ಅಲ್ಪವಾಗಿ ಎಣಿಸುವನು. ಮತ್ತು ತನ್ನನ್ನು ಸೃಷ್ಟಿಸಿದ ದೇವರಿಗೆ ಸಹ ಭಯ ಪಡದೆ ಇದ್ದನು.

## CHAPTER V.

### THE REIGN OF HENRY THE FIRST, AND CIVIL WAR IN ENGLAND.

FROM A. D. 1100 TO A. D. 1154.

## 5 ಸಂಧಿ.

### ಮೊದಲನೇ ಹೆನ್ರಿ ರಾಜ್ಯವಾಳಿದ್ದು; ಮತ್ತು ಸ್ವದೇಶಯುದ್ಧ.

ಕ್ರಿ. ಶ. 1100 ಮೊದಲು ಕ್ರಿ. ಶ. 1154 ವರೆಗೂ.

ಮುಖ್ಯ ತಾರೀಖುಗಳು: (Henry I) 1ನೇ ಹೆನ್ರಿ ಕ್ರಿ. ಶ. 1070ನೇ ವರುಷದಲ್ಲಿ ಹುಟ್ಟಿ, ಕ್ರಿ. ಶ. 1100—1135 ವರೆಗೂ ಆಳಿದ್ದು. (Stephen) ಸ್ತೀಫನನು ಕ್ರಿ.ಶ. 1105 ವರುಷದಲ್ಲಿ ಹುಟ್ಟಿ, ಕ್ರಿ. ಶ. 1135—1154 ವರೆಗೂ ಆಳಿದ್ದು. ಅದೇ ಕಾಲದ ಇಂದ್ಯ ಚರಿತ್ರೆ: ಪೂರ್ವಮಹಂಮದಿನವರು ಜಯಿಸಿ ಆಳಿದ ಕಾಲ. ಶ್ರೇಷ್ಠ ನಾಮಗಳು: (Canterbury) ಕಾಂತರ್‌ಬರಿಯ ಪ್ರದಾನ ಅಧ್ಯಕ್ಷನಾದ (Anselm) ಆನ್ಸ್ಲಂ ಕ್ರಿ. ಶ. 1033—1109. (Simeon of Durham) ದರ್ಹಾಮಿನವನಾದ ಸಿಮಿಯೋನು; ಈತನು ಬೀಜಗಣಿತ ಮುಂತಾದ ವಿದ್ಯೆಗಳಲ್ಲಿ ಘಟ್ಟಿಗನು. ಕ್ರಿ. ಶ. 1061—1131. (Geoffrey of Monmouth) ಮನ್ಮಥದವನಾದ ಜೆಫ್ರೆ. (William of Malmesbury) ಮಾಲ್‌ಮೆಸ್ಬರಿಯ ಉಲ್ಲಿಯಮನು 1067—1148, (Henry of Huntingdon) ಹಂತಿಗ್‌ದನಿನ ಹೆನ್ರಿ; ಇವರು ವಿದ್ಯಾವಂತರಾದ ಸನ್ಯಾಸಿಗಳು. ಇವರು ಬರೆದ ಪುಸ್ತಕಗಳಿಂದ (Normans) ನೊರ್ಮನ್ನ್ಯರು ಆಳಿದ ಕಾಲದ ವರ್ತಮಾನಗಳು ಬಹಳವಾಗಿ ತಿಳಿಯ ಬರುತ್ತವೆ.

ಹೆನ್ರಿ ಎಂಬವನು ಹೊಸ ಕಾಡಿನಲ್ಲಿ ತನ್ನ ಸಹೋದರನಾದ ಉಲ್ಲಿಯಮ್ ಎಂಬ ಅರಸನ ಸಂಗಡಲೂ ಬೇರೆ ಕೆಲವರ ಸಂಗಡಲೂ ಬೇಟೆಯಾಡುವಾಗ ಮುಂಚೆ ಹೇಳಿದ ಪ್ರಕಾರ ಅರಸನು ಮಿಕ್ಕಾದವರನ್ನು ಬಿ

ಟ್ಟು ಸ್ವಲ್ಪ ಹೊತ್ತು ಅಗಲಿ ಇದ್ದಾಗ ಆಕಸ್ಮಿಕವಾಗಿ ಕೊಲ್ಲಲ್ಪಟ್ಟನು. ಈ ಸಂಗತಿಯನ್ನು ಹೆನ್ರಿಯು ಕೇಳಿದ ಸಂಗಡಲೇ ದುಃಖವೂ ಆಶ್ಚರ್ಯವೂ ಪಡದೆ ಇದ್ದನು. ತಾನು ಹತ್ತಿದ ಕುದುರೆಯನ್ನು ತಿರುಗಿಸಿ ರಾಜಸಭೆ ಕೂಡಿದ ಸ್ಥಳವಾದ (Winchester) ವಿನ್‌ಚೆಸ್ತರ್ ಪಟ್ಟಣದಲ್ಲಿ ಇಟ್ಟಿದ್ದ ಅರಸನ ದ್ರವ್ಯವನ್ನು ಹಿಡಿದು ಕೊಳ್ಳ ಬೇಕೆಂಬುವ ಯೋಚನೆಯಿಂದ ಆ ಪಟ್ಟಣಕ್ಕೆ ಅತಿ ವೇಗವಾಗಿ ಹೋದನು. ಆ ಬೊಕ್ಕಸವನ್ನು ಕಾದು ಕೊಂಡಿದ್ದ ಅಧಿಕಾರಿಯು ಸಹ ಬೇಟೆಯಾಡ ಹೋಗಿದ್ದನು. ಇವನು ಹೆನ್ರಿಯ ಯೋಚನೆಯನ್ನು ತಿಳಿದು ತಡ ಮಾಡದೆ ಅವನನ್ನು ಹಿಂಬಾಲಿಸಿ, ಆ ಖಜಾನೆಯನ್ನು ಮುಟ್ಟ ಕೂಡದೆಂದೂ, ಹಿರಿಯನಿಗೆ ನ್ಯಾಯದ ಪ್ರಕಾರ ರಾಜ್ಯ ದೊರಕ ಬೇಕೆಂದೂ, ಸತ್ತ ಅರಸನು ಹಾಗೆಯೇ ಒಡಂಬಡಿಕೆ ಮಾಡಿ ಇದ್ದನೆಂದೂ, ಇದು ಎಲ್ಲರಿಗೂ ತಿಳಿಯುವದೆಂದೂ ಬುದ್ಧಿ ಹೇಳಿ ತಡೆಯ ನೋಡಿದನು. ಆದಾಗ್ಯೂ ಅಲ್ಲಿದ್ದ ಅಧಿಕಾರಿಗಳಲ್ಲಿ ಅಧಿಕವಾದ ಜನರು ಹೆನ್ರಿಯೇ ತಮಗೆ ಅರಸನಾಗ ಬೇಕೆಂದು ಹೇಳಿದ್ದರಿಂದ ಅರಸನ ದ್ರವ್ಯಗಳೆಲ್ಲಾ ಇವನ ವಶಕ್ಕೆ ಕೊಡಲ್ಪಟ್ಟವು. ಕೆಲವು ದಿವಸಗಳ ತರುವಾಯ ಇವನಿಗೆ ಇಂಗ್ಲಾಂಡ್ ಅರಸನೆಂಬ ಪಟ್ಟವು ಕಟ್ಟಲ್ಪಟ್ಟಿತು.

ಅವನು ಅರಸನಾದ ಕೆಲವು ದಿವಸಗಳ ತರುವಾಯ (Malcolm) ಮಲ್ಕೋಲ್‌ಮ್ ಎಂಬ (Scotland) ಸ್ಕೊತ್ಲಾಂಡ್ ಅರಸನ ಕುಮಾರ್ತೆಯಾಗಿಯೂ ಎಡ್ಗರ್ ಅಥಲಿಂಗನ ನಾದಿನಿಯಾಗಿಯೂ ಇದ್ದ (Matilda) ಮತಿಲ್ಡ ಎಂಬವಳನ್ನು ಮದುವೆ ಮಾಡಿ ಕೊಂಡನು. ಅವನ ರಾಜ್ಯದಲ್ಲಿ ಸಕ್ಸನರಾದವರು ಆ ಅರಸಿಯು ತಮ್ಮ ಪೂರ್ವ ರಾಜವಂಶದವಳಾದದರಿಂದ ಆ ಮದುವೆಯನ್ನು ಕುರಿತು ಅಧಿಕವಾಗಿ ಸಂತೋಷ ಪಟ್ಟರು.

ಪ್ರಾರಂಭದಲ್ಲಿ ಹೆನ್ರಿ ಚನ್ನಾಗಿ ರಾಜ್ಯವಾಳಿದನು. ತಾನು ರಾಜಪಟ್ಟವನ್ನು ನ್ಯಾಯವಾಗಿ ಹೊಂದಲಿಲ್ಲವೆಂದೂ, ತಾನು ಪೂರ್ಣ ಮನಸ್ಸಿನಿಂದ ದೃಢವಾಗಿ ಅಧಿಕಾರ ನಡಿಸಿದರೇ ಹೊರ್ತು ಬೇರೆ ವಿಧದಿಂದ ಜನವೆಲ್ಲಾ ಸಮ್ಮತಿ ಪಡುವದಿಲ್ಲವೆಂದೂ ತಿಳಿದು, ಅವನು ಆ ದೇಶದಲ್ಲೆಲ್ಲಾ ಉಂಟಾಗಿದ್ದ ನೀಚವಾದ ಕೆಲವು ಅಕ್ರಮವಾದ ಕಾರ್ಯಗಳ

ನ್ನೂ ಅನ್ಯಾಯಗಳನ್ನೂ ನೆಟ್ಟಗೆ ಮಾಡ ಬಹು ಸಾಧನೆ ಮಾಡುತ್ತಾ ಬಂದನು. ಅದಕ್ಕೆ ಮುಂಚೆ ಬಹು ಬಲಿಷ್ಠರಾದ ನೊರ್ಮನ್ನ ಪ್ರಭುಗಳು ಬಲವಾದ ಕೋಟೆಗಳನ್ನು ಕಟ್ಟಿ, ಬಂದೋಬಸ್ತು ಮಾಡಿ, ಸುತ್ತಲಿದ್ದ ಪ್ರಜೆಗಳನ್ನು ಇಕ್ಕಟ್ಟು ಪಡಿಸಿ, ಕೊಳ್ಳೆ ಮಾಡಿ ಕೊಂಡು ತಿರುಗುವದರಿಂದ ಅವರ ಸುತ್ತಲೂ ವಾಸ ಮಾಡುತ್ತಿದ್ದ ಬಡ ಜನರಿಗೆ ಅದು ಬಹು ಭಯಂಕರವೂ ಕೇಡೂ ಆಗಿತ್ತು. ಮತ್ತು ಅವರನ್ನು ಎದುರಿಸುವದಕ್ಕಾದರೂ ಶಿಕ್ಷಿಸುವದಕ್ಕಾದರೂ ಒಬ್ಬನಿಗೂ ಸಾಮರ್ಥ್ಯವಿಲ್ಲ.

ಹೆನ್ರಿ ಎಂಬವನು ಅರಸನಾದಾಗಲೇ ಮೇಲೆ ಹೇಳಿದ ಪ್ರಭುಗಳು ಮಾಡುತ್ತಾ ಬಂದ ಬಲಾತ್ಕಾರಕ್ಕೆ ಇನ್ನು ಮೇಲೆ ಸ್ಥಳ ಕೊಡುವದಿಲ್ಲವೆಂದು ದೃಢವಾದ ತೀರ್ಪು ಮಾಡಿ, ಬಹುಶಾ ಬೋಗ್ಗದವರಾದ ಆ ಪ್ರಭುಗಳನ್ನೆಲ್ಲಾ ನಯಭಯಗಳಿಂದ ಬರಬರ ತನಗೆ ವಿಧೇಯವಾಗ ಮಾಡಿದನು. ಇತ್ಯಾದಿ ಕ್ರಿಯೆಗಳಿಂದ ಅವನಿಗೆ (Lion of Justice) "ನೀತಿಸಿಂಹ"ವೆಂಬ ಹೆಸರಿಡಲ್ಪಟ್ಟಿತು. ಮತ್ತು ಅವನು ಆಳಿದ ದೇಶದಲ್ಲಿ ಮಾತ್ರವಲ್ಲ, ಅನ್ಯ ದೇಶಗಳಲ್ಲಿಯೂ ಅವನನ್ನು ಬಹು ಸಾಮರ್ಥ್ಯನೆಂದು ಎಲ್ಲರೂ ಹೊಗಳಿದರು. ಇದಲ್ಲದೆ "ಅರಿಕೆ ಮಾಡುವವನು" ಎಂದು ಕರೆಯಲ್ಪಟ್ಟ ಅರಸನಿಂದ ಏರ್ಪಡಿಸಲ್ಪಟ್ಟದ್ದಾಗಿಯೂ "ಜಯಶೂರನು" ಎಂದು ಕರೆಯಲ್ಪಟ್ಟ ಉಲ್ಲಿಯಮ್ ಎಂಬವನಿಂದ ಸ್ವಲ್ಪ ವಿಸ್ತರಿಸಲ್ಪಟ್ಟು ದೃಢ ಪಡಿಸಲ್ಪಟ್ಟದ್ದಾಗಿಯೂ ಇದ್ದ ನೀತಿಪ್ರಮಾಣಗಳನ್ನು ಸ್ಥಿರ ಪಡಿಸಿದನು. ಮತ್ತು ಪ್ರಜೆಗಳಿಗೆ ಸಲ್ಲ ಬೇಕಾದ ಅವರಿಗೆ ತಕ್ಕ ಮಾನ ಮರ್ಯಾದೆಗಳನ್ನು ಕುರಿತ ಸ್ವತಂತ್ರದ ಪತ್ರಿಕೆಯನ್ನು ಹುಟ್ಟಿಸಿದನು. ಆ ಪತ್ರಿಕೆಯು ತರುವಾಯ ಉಂಟಾದ (Great Charter) ಮಹಾಸ್ವತಂತ್ರಪತ್ರಿಕೆ ಎಂಧೇಳಲ್ಪಟ್ಟ ಪತ್ರಿಕೆಗೆ ಆಧಾರವಾಗಿತ್ತು. ಆ ಅರಸನು ಪ್ರಜೆಗಳಿಗೆ ಭಾರವಾದ ಕೆಲವು ತೆರಿಗೆಗಳನ್ನು ಏರ್ಪಡಿಸಿದಾಗ್ಯೂ, ರಾಜ್ಯವು ಅವನಿಗೆ ಸ್ಥಿರ ಮಾಡಲ್ಪಟ್ಟ ತರುವಾಯ ಅಷ್ಟು ಅಧಿಕ ಪಕ್ಷವಾಗಿ ಪ್ರಜೆಗಳನ್ನು ನಡಿಸದೆ ಹೋದಾಗ್ಯೂ ನೊರ್ಮನ್ನ ಅರಸರಲ್ಲಿ ಬೇರೆ ಒಬ್ಬನಾದರೂ ಇವನು ಮಾಡಿದ ಮೇಲುಗಳನ್ನು ಆ ದೇಶದವರಿಗೆ ಮಾಡಲಿಲ್ಲ.

ಸಂಧಿ 5. ರೋಬರ್ತನು ಅರಸನಾಗ ಬೇಕೆಂದು ಸಾಧಿಸಿದ್ದು.

ಇಷ್ಟರೊಳಗೆ (Robert) ರೋಬರ್ತ್ ಎಂಬವನು ಶಿಲುಬೆಯು ದ್ಧಸ್ತರ ಸೈನ್ಯದ ಸಂಗಡ ಕೂಡಿ ಕೊಂಡು, ಬಹು ಶೌರ್ಯವಾಗಿ ಯುದ್ಧ ಮಾಡಿ, ಯೆರೂಸಲೇಮನ್ನು ಹಿಡಿದ ದಂಡುಗಳ ಸಂಗಡ ಇದ್ದು ಎಲ್ಲರೂ ತನ್ನನ್ನು ಹೊಗಳುವಂತೆ ಹೋರ್‍ಯಾಡಿದ ತರುವಾಯ, ನೊರ್ಮಂದಿ ದೇಶಕ್ಕೆ ತಿರಿಗಿ ಬರ ಹೊರಟಿದ್ದನು. ಇವನು ತನ್ನ ತಂಮನಾದ (William Rufus) ಉಲ್ಲಿಯಮ್ ರೂಪಸ್ * ಸತ್ತ ಕಾಲದಲ್ಲಿ ಇತಲಿ ದೇಶದಲ್ಲಿ ಇದ್ದನು. ಅಲ್ಲಿ ಒಂದು ವರುಷಕ್ಕೆ ಅಧಿಕವಾಗಿ ತಂಗಿದ್ದು, ಮದುವೆ ಮಾಡಿ ಕೊಂಡಿದ್ದನು. ತನ್ನ ತಮ್ಮನು ಸತ್ತ ಸಮಾಚಾರವನ್ನು ಕೇಳಿದ ಕೂಡ್ಲೆ ಜನ್ಮಭೂಮಿಗೆ ತಿರಿಗಿ ಬಂದು, ಇಂಗ್ಲಾಂದಿಗೆ ದಂಡೆತ್ತಿ ಕೊಂಡು ಹೋಗ ಪ್ರಯತ್ನ ಮಾಡುತ್ತಾ ಬಂದನು. ಮತ್ತು ಅವನು ಯುದ್ಧರಂಗದಲ್ಲಿ ಮಾಡಿದ್ದ ಶೌರ್ಯವಾದ ಕ್ರಿಯೆಗಳನ್ನು ತಿಳಿದಿದ್ದ ಅನೇಕ ಯುದ್ಧವೀರರು ಅವನ ಸಂಗಡ ಕೂಡಿ ಕೊಂಡರು. ಹಾಗಿದ್ದಾಗ್ಯೂ (Portsmouth) ಪೋರ್ತ್‌ಸ್ಮೌತ್ ಎಂಬ ಪಟ್ಟಣದ ರೇವಿನಲ್ಲಿ ಇಳಿದಾಗ, ಆ ಸ್ಥಳದಲ್ಲಿ ಹೆನ್ರಿ ಎಂಬ ಅರಸನು ನಡಿಸಿದ ದೊಡ್ಡ ಸೈನ್ಯವು ತನಗೆದುರಾಗಿ ಸಾಲ್ಗಟ್ಟಿ ಕೊಂಡಿರುವದನ್ನು ಕಂಡನು. ಮತ್ತು ಇಂಗ್ಲಾಂದ್ ದೇಶದ ಪ್ರಭುಗಳೂ ಗುರುಗಳೂ ಅರಸನ ಪಕ್ಷವಾಗಿ ದೃಢವಾಗಿ ನಿಂತುರುವದಲ್ಲದೆ, ಮಿಕ್ಕ ಜನರೆಲ್ಲಾ ರೋಬರ್ತನನ್ನು ಯುದ್ಧವೀರನೆಂದು ಹೊಗಳಿದಾಗ್ಯೂ, ಅವನನ್ನು ಮನೋಸ್ಥಿರತ್ವವಿಲ್ಲದವನೆಂದು ತಿಳಿದು ಕೊಂಡದರಿಂದ ಅವನ ಸಂಗಡ ಕೂಡಿ ಕೊಳ್ಳ ಮನಸ್ಸಿಲ್ಲದೆ ಇದ್ದರು.

ಆದಾಗ್ಯೂ ಯುದ್ಧವೇನೂ ನಡಿಯಲಿಲ್ಲ. ಉಭಯ ಪಕ್ಷದವರಲ್ಲಿಯೂ ಪ್ರಧಾನಿಗಳು ಕೂಡಿ ಬಂದು ವಿರೋಧಿಗಳಾದ ಆ ಇಬ್ಬರು ಸಸಹೋದರರನ್ನು, ಮುಂಚೆ ಉಲ್ಲಿಯಮನ ಸಂಗಡ ಮಾಡಲ್ಪಟ್ಟ ಒಡಂಬಡಿಕೆಯ ಮೇರೆಗೆ, ಸಮಾಧಾನದ ಒಡಂಬಡಿಕೆ ಮಾಡಿ, ಸಮಾಧಾನವಾಗುವಂತೆ ಸಮ್ಮತಿಸ ಮಾಡಿದರು. ಹಾಗೆಯೇ ಅವರು ಆ ಕಾಲದಲ್ಲಿ

* ರೂಪಸ್ ಅಂದರೆ ಕೆಂಪಾದವನು. ಎರಡನೇ ಉಲ್ಲಿಯಮ್ ಎಂಬ ಅರಸನ ತಲೆಗೂದಲು ಕೆಂಪಾಗಿದ್ದದರಿಂದ ಅವನಿಗೆ ಈ ಹೆಸರು ಬಂತು.

ಯಥಾರ್ಥವಾಗಿ ಸ್ನೇಹ ಮಾಡಿದಂತೆ ಕಾಣ ಬಂತು. ರೋಬರ್ತನು ಎರಡು ತಿಂಗಳ ವರೆಗೂ ತನ್ನ ಸಹೋದರನ ಬಳಿಯಲ್ಲಿ ತಂಗಿ ಇದ್ದು, ತರುವಾಯ ನೊರ್ಮಂದಿ ದೇಶಕ್ಕೆ ತಿರಿಗಿ ಹೋದನು.

ಆದಾಗ್ಯೂ ಈ ಪ್ರಕಾರ ಮಾಡಿದ ಕ್ರಮವು ಬಹು ದಿವಸ ನಿಲ್ಲಲಿಲ್ಲ. ಅದು ಹ್ಯಾಗಂದರೆ, ರೋಬರ್ತ್ ಎಂಬವನಿಗೆ ತನ್ನ ರಾಜ್ಯವನ್ನು ನೆಟ್ಟಗೆ ಆಳುವದಕ್ಕೆ ಸಾಮರ್ಥ್ಯವಿಲ್ಲ. ರಣರಂಗದಲ್ಲಿ ಬಂಡೆಯೋಪಾದಿಯಾಗಿ ದೃಢವಾಗಿ ನಿಂತಿದ್ದ ಇವನು ಬೇರೆ ಸ್ಥಳಗಳಲ್ಲಿ ಮಣ್ಣಿನ ಮೇಟಿಗೆ ಸಮಾನವಾಗಿರುವನು. ಆದದರಿಂದ ನೊರ್ಮಂದಿ ದೇಶದ ಪ್ರಜೆಗಳು ಮಾಡಿದ ಕ್ರೂರವಾದ ಬಲಾತ್ಕಾರದಿಂದ ಆ ದೇಶವೆಲ್ಲಾ ತಾರುಮಾರಾಗಿತ್ತು. ಒಕ್ಕಲಿಗರು ತಮ್ಮ ಮನೆಗಳನ್ನು ಬಿಟ್ಟು ಓಡಿ ಹೋದರು. ಹೊಲಗಳೆಲ್ಲಾ ಹಾಳು ಬಿದ್ದವು. ದೇಶವೆಲ್ಲೆಲ್ಲಿಯೂ ದುಃಖವೇ. ಹೀಗೆ ನಡಿಯುವ ಕಾಲದಲ್ಲಿ ರೋಬರ್ತ್ ಎಂಬವನು ಆ ಪ್ರಜೆಗಳನ್ನು ಅಣಗಿಸಿ ಬಿಡುವಹಾಗೆ ಒಂದು ಪ್ರಯತ್ನವೂ ಮಾಡದೆ, ವ್ಯರ್ಥನಾಗಿ ತಿರುಗಿ ಬಹು ನೀಚತನವಾಗಿ ಕಾಲ ಕಳೆದನು.

ಆದದರಿಂದ ನೊರ್ಮಂದಿ ದೇಶದಲ್ಲಿರುವ ಮುಖ್ಯ ಪ್ರಜೆಗಳಲ್ಲಿ ಕೆಲವರು ಇಂಗ್ಲಾಂಡನ್ನು ಆಳಿದ ಹೆನ್ರಿಯು ತನ್ನ ಸಹೋದರನ ಹಾಗೆ ನಡಿಯದೆ, ಬಹು ಯುಕ್ತಿಯಿಂದಲೂ ನಿಧಾನದಿಂದಲೂ ಆಳುವದನ್ನು ಕಂಡು, ಅವನು ಬಂದು ತಮಗೆ ಸಹಾಯ ಮಾಡ ಬೇಕೆಂದು ಕೇಳಿ ಕೊಂಡರು. ಅವನು ಸಂಗಡಲೇ ಅವರ ಬಿನ್ನಹಕ್ಕೆ ಸಮ್ಮತಿಸಿ, ದೊಡ್ಡ ಸೈನ್ಯದ ಸಂಗಡ ನೊರ್ಮಂದಿ ದೇಶಕ್ಕೆ ಹೋಗಿ, ರೋಬರ್ತ್ ಎಂಬವನು ತನ್ನ ಸೀಮೆಯಲ್ಲಿ ಕೆಟ್ಟು ಹೋದದ್ದನ್ನೆಲ್ಲಾ ನೆಟ್ಟಗೆ ಮಾಡುತ್ತೇನೆಂದು ಆಗಲೇ ಮಾತು ಕೊಡುವಂತೆ ಮಾಡಿದನು. ಆದಾಗ್ಯೂ ಮಾರಣೆ ವರುಷದಲ್ಲಿ ಮುಂಚಿನ ಹಾಗೆಯೇ ಆ ದೇಶದಲ್ಲಿ ಎಲ್ಲರೂ ಕೆಟ್ಟು ಹೋದದ್ದನ್ನು ಕಂಡು, ಹೆನ್ರಿಯು ಮತ್ತೂ ಆ ಸೈನ್ಯವನ್ನು ಅಲ್ಲಿಗೆ ನಡಿಸಿ ಕೊಂಡು ಹೋದನು. ಆ ಸಮಯದಲ್ಲಿ (Tenchebray) ತೆನ್‌ಶಿಬ್ರೆ ಎಂಬ ಸ್ಥಳದಲ್ಲಿ ಯುದ್ಧವುಂಟಾದಾಗ ರೋಬರ್ತನು ನಡಿಸಿದ ಸೈನ್ಯವು ಪೂರ್ಣವಾಗಿ ಸೋತು ಹೋಯಿತು. ಮತ್ತು ಅವನು ಸೆರೆಯಲ್ಲಿ ಹಾಕಲ್ಪಟ್ಟಾಗ ಆ ರಾ

ಜ್ಯಾಧಿಕಾರವು ಹೆನ್ರಿಗೆ ಶಿಕ್ಕಿತು. ಅವನು ತನ್ನ ಸಹೋದರನನ್ನು (Cardiff) ಕಾರ್ಡಿಫ್ ಪಟ್ಟದ ಕೋಟೆಯಲ್ಲಿ ಅವನ ಜೀವಿತ ಕಾಲವೆಲ್ಲಾ ಶೆರೆಯಲ್ಲಿ ಇರಿಸಿದನು. ಆ ಶೆರೆಮನೆಯಲ್ಲಿ ಒಂದು ವಿಧವಾದ ಉಪಚಾರವನ್ನು ಅವನಿಗೆ ಮಾಡಿದನು. ಆದಾಗ್ಯೂ ಅನ್ಯಾಯವಾಗಿ ಅವನನ್ನು ಇಕ್ಕಟ್ಟು ಪಡಿಸಿದ್ದೂ, ಅವನ ಮಗನಾದ ಉಲ್ಲಿಯಮ್ ಎಂಬವನನ್ನು ಶೀರದ*ಹಗೆಯಾಗಿ ಹಗೆ ಮಾಡಿದ್ದೂ ಮೊದಲನೇ ಹೆನ್ರಿಗೆ ಅಪಕೀರ್ತಿಯಾದ ಕಾರ್ಯಗಳು. ಇವನು ಮೇಲೆ ಹೇಳಲ್ಪಟ್ಟ ಉಲ್ಲಿಯಮ್ ಎಂಬ ಸಣ್ಣ ಕೂಸನ್ನು ತನಗೆ ಒಪ್ಪಿಸಿ ಕೊಡ ಬೇಕೆಂದು, ಆ ಮಗುವನ್ನು ಇಟ್ಟು ಕೊಂಡಿದ್ದವರ ಬಳಿಯಲ್ಲಿ, ಕೇಳಿದನು. ಅವರು ಕೂಸಿಗೆ ಏನಾದರೂ ಮೋಸ ಸಂಭವಿಸುವದೆಂದು ಹೇಳಿ, ಭದ್ರವಾಗಿ ಬೇರೆ ಸ್ಥಳಕ್ಕೆ ತೆಗದು ಕೊಂಡು ಹೋಗಿ ಸಾಕಿದರು. ಆ ಬಾಲಕನಾದ ಪ್ರಭುವು ದೊಡ್ಡವನಾದಾಗ ಶೌರ್ಯವೂ ದೃಢವೂ ಉಳ್ಳವನಾಗಿದ್ದದರಿಂದ ನೊರ್ಮಂದಿ ದೇಶದಲ್ಲಿ ಮುಖ್ಯಸ್ಥರಾದವರು ಅನೇಕರು ಅವನನ್ನು ಅರಸನಾಗಿ ಏರ್ಪಡಿಸ ಬೇಕೆಂದು ಆಲೋಚಿಸಿದರು. ಆದಾಗ್ಯೂ ಹೆನ್ರಿಯು ಆ ಶೀಮೆಯನ್ನು ತನ್ನ ಸಹೋದರನ ಮಗನಿಗೆ ಕೊಡುವದು ನ್ಯಾಯವಾಗಿದ್ದಾಗ್ಯೂ ಅದನ್ನು ಕೊಡಲಿಲ್ಲ. ಆದದರಿಂದ ಅವನು ಆ ದೇಶವನ್ನು ಮಹಾ ಯುಕ್ತಿಯಿಂದ ಸ್ಥಿರವಾಗಿ ಆಳುತ್ತಾ ಬಂದು, ಅದನ್ನು ಸಮಾಧಾನವಾಗಿ ಇಟ್ಟು ಕೊಂಡಿದ್ದದ್ದು ಆ ದೇಶದವರಿಗೆ ದೊಡ್ಡ ಉಪಕಾರವೆಂದು ಹೇಳಿದಾಗ್ಯೂ, ಈ ವ್ಯಾಜ್ಯಗಳಲ್ಲಿ ಅವನು ದೊಡ್ಡ ಅನ್ಯಾಯ ಮಾಡಿದನೆಂದು ಎಲ್ಲರೂ ಒಪ್ಪಿ ಕೊಳ್ಳ ಬೇಕು. ಆ ದೇಶದ ಮೇಲೆ ಅವನು ಅತ್ಯಾಶೆ ಪಟ್ಟದ್ದರಿಂದ ತಾನು ಹಿಡಿದು ಕೊಂಡದ್ದನ್ನು ತಿರಿಗಿ ಬಿಡುವದಿಲ್ಲವೆಂದು ಸಾಧಿಸಿದನೇ ಹೊರ್ತು ಬೇರೆ ಕಾರಣವಿಲ್ಲ.

ಮೇಲೆ ಹೇಳಿದ ಉಲ್ಲಿಯಮ್ ಎಂಬವನಿಗೆ ಫ್ರಾನ್ಸ್ ದೇಶದ ಅರಸನಾದ (Louis) ಲೂವಿಸ್ ಸಹಾಯವಾಗಿದ್ದದರಿಂದ ಇವನಿಗೂ ಹೆನ್ರಿ ಎಂಬ ಅರಸನಿಗೂ ಯುದ್ಧ ಉಂಟಾಯಿತು. ಅದರಲ್ಲಿ ಉಭಯ ಪಕ್ಷದವರೂ ಬಲವಾಗಿ ಯುದ್ಧ ಮಾಡಿದ್ದರಿಂದ ಆಶ್ಚರ್ಯ ಪಡ ತಕ್ಕ ಒಂದೇ ವಿಶೇಷ ನಡಿಯಿತೇ ಹೊರ್ತು ಬೇರೆ ದೊಡ್ಡ ಕಾರ್ಯವೇನೂ ನಡಿ

ಯಲಿಲ್ಲ. ಅದು ಏನಂದರೆ, ಒಂದು ಏಕಾಂತ ಯುದ್ಧ ನಡಿಯಿತು. ಆ ಕಾಲದಲ್ಲಿ ಅದು ಯೂರೋಪು ಖಂಡದಲ್ಲಿ ಎಲ್ಲಿಯೂ ಬಹು ಪ್ರಬಲ ವಾಗಿತ್ತು. ಅದು ಆ ಜನದ ಆಚಾರಗಳನ್ನೂ ಬಳಿಕೆಗಳನ್ನೂ ಚನ್ನಾಗಿ ತೋರಿಸುವದರಿಂದ ಅದರ ವಿವರವನ್ನು ಇಲ್ಲಿ ಹೇಳ ಬೇಕು. ಹೆನ್ರಿ ಎಂಬವನು ತನ್ನ ರಾಣುವೆಗೆ ಶೇರಿದ ಐನೂರು ವೀರರಾಹುತರೊಡನೆ (Audelay) ಆದೆಲೇ ಎಂಬ ಸಣ್ಣ ಗ್ರಾಮದ ಬಳಿಯ ಒಂದು ದಿನ ಸವಾರಿ ಮಾಡಿದಾಗ, ಲೂವಿಸ್ ಎಂಬ ಅರಸನೂ ಅವನಿಗೆ ಶೇರಿದ ಫ್ರಾನ್ಸ್ ದೇಶದ ಪಟಾಳದಲ್ಲಿ ಆಯಲ್ಪಟ್ಟ ವೀರರಾದ ನಾನೂರು ಮಂದಿಯೂ ಸಮೀಪವಾಗಿ ಬಂದರು. ಆ ಇಬ್ಬರು ಅರಸರೂ, ಒಬ್ಬರು ಒಬ್ಬರ ಸಾಮರ್ಥ್ಯವನ್ನು ನೋಡುವದಕ್ಕೆ ಏಕಾಂತ ಯುದ್ಧ ಮಾಡ ಬೇಕೆಂಬ ಅಪೇಕ್ಷೆಯಿಂದ, ತಮ್ಮ ಪರಿವಾರದ ಸಹಿತವಾಗಿ ಸಮೀಪಿಸಿ ಬಂದು ಕೈಕಲಸಿದರು. ಈ ವೀರರೆಲ್ಲರೂ ಸರ್ವಾಂಗ ಆಯುಧ ಕವಚಗಳನ್ನು ಧರಿಸಿ ಕೊಂಡವರಾದದರಿಂದ ಯುದ್ಧವು ಬಹು ಕಠಿಣವಾಗಿದ್ದಾಗ್ಯೂ ಅಧಿಕ ಪ್ರಾಣನಷ್ಟ ಉಂಟಾಗಲಿಲ್ಲ. ಆ ರಾಹುತಶ್ರೇಷ್ಠ ವೀರರು, ಬಹು ಮರ್ಯಾದೆಯಾಗಿ ಯುದ್ಧ ಮಾಡ ಬೇಕೆಂಬುವ ಅವರ ಪ್ರಮಾಣದ ಪ್ರಕಾರ, ಎದುರಾಳಿಗಳನ್ನು ಕೊಲ್ಲುವದು ದೊಡ್ಡ ಕಾರ್ಯವೆಂದು ಎಣಿಸದೆ, ಶೆರೆ ಹಿಡಿಯ ಬೇಕೆಂದು ಮುಖ್ಯವಾಗಿ ಯತ್ನ ಮಾಡಿದರು. ಆ ಸಮಯದಲ್ಲಿ ಉಲ್ಲಿಯಮ್ ಎಂಬ ಅರಸುಕುಮಾರನು ಕೀರ್ತಿ ಹೊಂದ ಬೇಕೆಂಬುವ ಅಪೇಕ್ಷೆಯಿಂದ ಬಹು ಶೌರ್ಯವಾಗಿ ಹೋರಾಡಿದನು. ಆ ಯುದ್ಧದಲ್ಲಿ ಇಂಗ್ಲಾಂಡ್ ಅರಸನನ್ನು ಒಬ್ಬ ಎದುರಾಳಿಯು ಬಹು ಮೂರ್ಖವಾಗಿ ತಗಲಿದ್ದರಿಂದ ಅವನಿಗೆ ಅಪಾಯ ಉಂಟಾಗುವದಕ್ಕೆ ಸ್ವಲ್ಪ ತಪ್ಪಿತು. ಅವನು, ಆ ಎದುರಿಯನ್ನು ಹೊಡೆದು ಕುದುರೆಯಿಂದ ತಳ್ಳಿ ಬಿಟ್ಟು, ತಪ್ಪಿಸಿ ಕೊಂಡನು.

ಸ್ವಲ್ಪ ಕಾಲದ ತರುವಾಯ ರೋಮಾಪುರಿಯ ಪ್ರಧಾನ ಅಧ್ಯಕ್ಷನು ಆ ಇಬ್ಬರು ಅರಸರನ್ನೂ ಸಮಾಧಾನ ಪಡಿಸುವದಕ್ಕೆ ಪ್ರಯತ್ನ ಮಾಡಿದ್ದರಲ್ಲಿ ಅವರು ಉಲ್ಲಿಯಮ್ ಎಂಬ ವೀರನಾದ ಅರಸುಮಗನಿಗೆ ಅನ್ಯಾಯವಾಗುವಂತೆ ದಿಟ್ಟ ಮಾಡಿ ಸಮಾಧಾನದ ಒಡಂಬಡಿಕೆ ಮಾಡಿದರು.

## ಸಂಧಿ ೫. ಬಿಳೀ ಹಡಗವು ನೀರಿನಲ್ಲಿ ಮುಣುಗಿದ್ದು.

ಈ ಉಪಯೋಗವಿಲ್ಲದ ಯುದ್ಧವನ್ನು ಮುಗಿಸಿದ್ದರಿಂದ ಹೆನ್ರಿಯು ಸಂತೋಷದಿಂದ ಇಂಗ್ಲಾಂಡಿಗೆ ತಿರುಗುವಾಗ ಅವನ ಜೀವದ ಕಾಲವೆಲ್ಲಾ ಕಷ್ಟವನ್ನು ಕೊಟ್ಟ ಒಂದು ಕಾರ್ಯ ಸಂಭವಿಸಿತು. ಅದೇನಂದರೆ, ಅವನು ತನ್ನ ಪಟ್ಟದ ಅರಸಿಯಿಂದ ಹೆತ್ತ ಕುಮಾರನು ಒಬ್ಬನು ಮಾತ್ರ ಇದ್ದನು. ಅವನ ಹೆಸರು ಉಲ್ಲಿಯಮ್. ಅರಸನು ಅವನ ಮೇಲೆ ಬಹು ಪ್ರೀತಿ ಇಟ್ಟಿದ್ದನು. ಅವನನ್ನು ಬಹು ಪಕ್ಷವಾಗಿ ನಡಿಸಿ ಕೊಂಡು ಬಂದನು. ಅರಸನ ಸಂಗಡ ಮಗನು ಸಹ ನೊರ್ಮಂಡಿ ದೇಶಕ್ಕೆ ಹೋಗಿದ್ದನು. ಅವರು ತಿರಿಗಿ ಬರುವಾಗ ಬೇರೆ ಬೇರೆ ಹಡಗಗಳಲ್ಲಿ ಹತ್ತಿದರು. ಅರಸನು ಹತ್ತಿದ ಹಡಗದವರು ಮೊದಲು ಪಟಗಳನ್ನು ಬಿಚ್ಚಿ ಥಡ ಬಿಟ್ಟಿದ್ದನ್ನು ಅರಸುಮಗನು ಕಂಡು, ತಾನು ಹತ್ತಿದ ಹಡಗ ನಡಿಸುವವರನ್ನು ತ್ವರೆ ಪಡಿಸಿದನು. ಅವರು ದ್ರಾಕ್ಷೀ ರಸ ಕೊಂಡು ಕೊಳ್ಳುವದಕ್ಕೆ ಅವನ ಬಳಿಯಲ್ಲಿ ಹಣ ಕೇಳಿದ್ದರಿಂದ, ಅವನು, ಅವರು ಅತಿ ವೇಗವಾಗಿ ಹಡಗ ನಡಿಸಿ ಮುಂದಾಗಿ ಓಡಿದ ಹಡಗವನ್ನು ಬೆನ್ನಟ್ಟಿ ಹಿಡಿಯಬೇಕೆಂದು ಹೇಳಿ, ಅವರನ್ನು ಉತ್ಸಾಹ ಪಡಿಸುವದಕ್ಕೆ ಧಾರಾಳವಾಗಿ ಹಣ ಕೊಟ್ಟನು. ಅವರು ರಸವನ್ನು ಕೊಂಡು ಕೊಂಡು ಕುಡಿದು ಮತ್ತರಾಗಿ ಬುದ್ಧಿ ಮಯಕವಾದಾಗ ರೇವನ್ನು ಬಿಟ್ಟು, ಹಡಗ ನಡಿಸುವದರಲ್ಲಿ ಬಹು ಸಾಧನೆ ಮಾಡಿದ್ದರಿಂದ, ಬಿಳೀ ಹಡಗವೆಂದು ಕರೆಯಲ್ಪಟ್ಟ ಆ ಹಡಗವು ಬೇರೆ ಎಲ್ಲಾ ಹಡಗಗಳಿಗಿಂತ ಮುಂಚೆ ಓಡಿ, ಸುತ್ತಲೂ ಸುಳಿ ಇಟ್ಟು ಕೊಂಡು ಎದ್ದ ಅಲೆಗಳ ಮಾರ್ಗವಾಗಿ ಹಾರಿ ಹೋದ ಹಾಗೆ ಕಂಡಿತು. ಆ ರಾತ್ರಿ ಬೆಳದಿಂಗಳುಪ್ರಕಾಶವಾಗಿತ್ತು. ಮತ್ತು ಮೃದುವಾದ ದಕ್ಷಿಣ ತಂಘಾಳಿ ಬೀಸಲು, ಹಡಗದಲ್ಲಿ ಹತ್ತಿದವರೆಲ್ಲರೂ ಉಲ್ಲಾಸವಾಗಿ ನಗುತ್ತಾ ಇರಲು, ಆ ಹಡಗ ಓಡುವಾಗ ಚುಕ್ಕಾಣಿಯ ಕೆಳಗಿರುವವನು ಲಹರಿಯಿಂದ ಭ್ರಾಂತನಾಗಿ ಏನೂ ಯೋಚಿಸದೆ ಇದ್ದದರಿಂದ, ಅವರಿಗೆ ತಿಳಿಯದೆ ಸಮುದ್ರದಲ್ಲಿ ಮರೆಯಾಗಿದ್ದ ಬಂಡೆಯಲ್ಲಿ ಹಡಗ ಮೋದಿ ಒಡೆದು ಮುಣುಗಿ ಹೋಗ ಪ್ರಾರಂಭಿಸಿತು. ಸಂಗಡಲೇ ಅರಸುಮಗನೂ ಅವನ ಪರಿವಾರದವರು ಅನೇಕರೂ ಒಂದು ಚಿಕ್ಕ ದೋಣಿಯಲ್ಲಿ ಹತ್ತಿ ಕೊಂಡು ಓಡುವಾಗ, ಮುಣುಗುವ ಹಡಗದಲ್ಲಿದ್ದ ಅವನ

ಸಹೋದರಿಯು ತನ್ನನ್ನು ಸಹ ದೋಣಿಯಲ್ಲಿ ಹತ್ತಿಸಿ ಕೊಂಡು ರಕ್ಷಿಸ ಬೇಕೆಂದು ಕೂಗಿ ಅರಚಿದಳು. ಆ ಶಬ್ದವನ್ನು ಕೇಳಿ, ಅವಳನ್ನು ತಪ್ಪಿಸು ವದಕ್ಕೆ ಚಿಕ್ಕ ದೋಣಿಯನ್ನು ಶಿರುಗಿಸಿ ಹಡಗದ ಸಮೀಪಕ್ಕೆ ನಡಿಸಿದಾಗ, ಶಿಥಿಲವಾದ ಹಡಗದಲ್ಲಿದ್ದ ಅನೇಕರು ಪ್ರಾಣವನ್ನು ಕಾಪಾಡುವದಕ್ಕೆ ಬೇರೆ ಮಾರ್ಗವಿಲ್ಲವೆಂದು ನೆನಸಿ, ಆ ಸಣ್ಣ ದೋಣಿಯೊಳಗೆ ಬಿದ್ದದರಿಂದ, ಅದು ಮಗುಚಿ ಕೊಂಡು, ಸಂಗಡಲೇ ಮುಣುಗಿ ಹೋಯಿತು. ಅದರಲ್ಲಿ ಹತ್ತಿದವರೊಳಗೆ ಒಬ್ಬನು ಮಾತ್ರ ಒಂದು ಪಠಸ್ತಂಭವನ್ನು ಹಿಡಿದು ಕೊಂಡು ತಪ್ಪಿದನು. ಆ ಹಡಗ ನಡಿಸಿದ ಹಿರಿಯ ನಾವಿಕನು ಸಹ ಆಗ ಆ ಪಠಸ್ತಂಭವನ್ನು ಹಿಡಿದು ಕೊಂಡಿದ್ದನು. ಆದಾಗ್ಯೂ ಅರಸುಮಗನು ನಾಶವಾದದ್ದನ್ನು ಕಂಡು, ತಾನು ಹಿಡಿದಿದ್ದ ಮರವನ್ನು ಕೈಬಿಟ್ಟು, ಅಗಾಧದಲ್ಲಿ ಮುಣುಗಿ ಸತ್ತನು.

ಕೆಲವು ದಿವಸ ಮಟ್ಟಿಗೂ ರಾಜಸಭೆಯವರು ಈ ದುಃಖವಾದ ಸಮಾಚಾರವನ್ನು ಅರಸನಿಗೆ ತಿಳಿಸ ಧೈರ್ಯ ಪಡದೆ, ತರುವಾಯ ಅವನಿಗೆ ಅದನ್ನು ತಿಳಿಸುವದಕ್ಕೆ ಒಬ್ಬ ಚಿಕ್ಕ ಹುಡುಗನನ್ನು ಕಳುಹಿಸಿದರು. ಹೆನ್ರಿಯು ಅದನ್ನು ಕುರಿತು ಬಹಳ ದುಃಖ ಪಟ್ಟು, ಅದರ ತರುವಾಯ ಎಂದಿಗೂ ನಗಲಿಲ್ಲ. ಅವನ ಮುಖವು ಕಳೆಯಾಗಿರಲಿಲ್ಲ. ಮತ್ತು ಮುಣುಗಿ ಹೋದ ಆ ಹಡಗದಲ್ಲಿ ಮುಖ್ಯವಾದ ಪ್ರಭುಗಳ ಬಂಧುವುಗಳೂ ಸ್ನೇಹಿತರೂ ಮೊದಲಾದ ಅನೇಕ ಮಂದಿ ಸತ್ತದ್ದರಿಂದ ರಾಜಸಭೆಯವರೆಲ್ಲರೂ ದುಃಖಾಕ್ರಾಂತರಾಗಿದ್ದರು.

ಸ್ವಲ್ಪ ಕಾಲದ ತರುವಾಯ ಹೆನ್ರಿಯು ಎರಡನೇ ಸಾರಿ ಮದುವೆ ಮಾಡಿ ಕೊಂಡನು. ಆದಾಗ್ಯೂ ಅವನಿಗೆ ಮಗನು ಇಲ್ಲದ್ದರಿಂದ ತನ್ನ ಕುಮಾರ್ತೆಯಾದ ಮಟಿಲ್ಡ ತನ್ನ ತರುವಾಯ ರಾಜ್ಯಭಾರ ಮಾಡ ಬೇಕೆಂದು ಅಧಿಕವಾಗಿ ಅಪೇಕ್ಷಿಸಿದನು. ಆ ಮಟಿಲ್ಡ ಎಂಬವಳು ಐದನೇ ಹೆನ್ರಿ ಎಂಬ ಚಕ್ರವರ್ತಿಯನ್ನು ಮದುವೆ ಮಾಡಿ ಕೊಂಡು, ಅವನು ಸತ್ತ ತರುವಾಯ (Anjou) ಅಂಜೌ ನಾಡಿನ ಅಧಿಪತಿಯಾದ (Geoffrey) ಜೆಫ್ರೆ ಎಂಬವನಿಗೆ ಹೆಂಡತಿಯಾದಳು. ಹೆನ್ರಿ ಎಂಬ ಅರಸನು ನೊರ್ಮಂದಿ ದೇಶದಲ್ಲಿಯೂ ಇಂಗ್ಲಾಂಡ್ ದೇಶದಲ್ಲಿಯೂ ಇದ್ದ ಪ್ರಭುಗಳೆಲ್ಲರೂ

ಇವಳು ಪಟ್ಟಕ್ಕೆ ಬಾಧ್ಯಳೆಂದು ಇವಳಿಗೆ ವಂದನೆ ಮಾಡ ಆಜ್ಞಾಪಿಸಿದನು. ಅದರ ತರುವಾಯ ಒಂದು ದಿವಸ ಅವನು ತನಗೆ ಬಹು ಇಷ್ಟವಾದ ಒಂದು ವಿಧ ಸಣ್ಣ ಮೀನುಗಳನ್ನು ಅಧಿಕವಾಗಿ ಉಂಡದ್ದರಿಂದ ಕಡು ಜ್ವರವುಂಟಾಗಿ ಸತ್ತು ಹೋದನು.

ಹೆನ್ರಿ ಎಂಬರಸನು ಆ ಕಾಲದ ಅರಸರೆಲ್ಲರಿಗಿಂತ ವಿದ್ಯದಲ್ಲಿ ಹೆಚ್ಚಾಗಿದ್ದದರಿಂದ ಅವನಿಗೆ ತೇರಿದ ಪಂಡಿತನೆಂಬರ್ಥವುಳ್ಳ (Beauclerc) ಬೋಕ್ಲೇರ್ ಎಂಬ ಬಿರುದಿನ ಹೆಸರು ಹೇಳಲ್ಪಟ್ಟಿತು. ಅವನ ತಂದೆಯು ಅವನನ್ನು ಎಳೇ ಪ್ರಾಯದಲ್ಲಿ ತನ್ನಿಂದಲಾದ ಮಟ್ಟಿಗೂ ತೇರಿದ ಪಂಡಿತರಿಂದ ಓದಿಸಿ ಇದ್ದನು. ಮತ್ತು ಚಿಕ್ಕ ಪ್ರಾಯದಲ್ಲಿಯೇ ಅವನು ನಾನಾ ವಿಧ ಉಪದ್ರಗಳನ್ನು ಸಹಿಸಿ ದೀನ ಸ್ಥಿತಿಯಲ್ಲಿ ಇದ್ದದರಿಂದ, ವಿದ್ಯದ ಮೇಲೆ ಬಹಳ ಆಶೆ ಪಟ್ಟನು. ಅವನು ಅರಸನಾದ ತರುವಾಯ ಮಹಾ ಯುಕ್ತಿಯಿಂದ ಪ್ರಜೆಗಳನ್ನು ಬೊಗ್ಗಿಸಿ ಇಟ್ಟು ಕೊಂಡು, ತನ್ನ ದೇಶವನ್ನು ವಿವೇಕವಾಗಿ ಆಳಿ ಕೊಂಡದ್ದರಿಂದ ಅವನನ್ನು ಸಾಮರ್ಥ್ಯವುಳ್ಳ ಅರಸನೆಂದು ಹೇಳ ತಕ್ಕದ್ದು. ಆದಾಗ್ಯೂ ಅವನು ನಾಚಿಕೆ ಇಲ್ಲದೆ ದುರ್ಮಾರ್ಗವಾಗಿ ನಡೆದದರಿಂದಲೂ, ತನ್ನ ಸಹೋದರನನ್ನು ಇಕ್ಕಟ್ಟಿನ ಕಾಲದಲ್ಲಿ ಬಂಧಿತವಾಗಿ ನಡಿಸಿದ್ದರಿಂದಲೂ ಅವನಲ್ಲಿ ಯಥಾಸ್ಥಿತಿಯಾಗಿ ದೊಡ್ಡಸ್ತಿಕೆಯಾದ ಗುಣಗಳಿಲ್ಲವೆಂದು ಪ್ರತ್ಯಕ್ಷವಾಗಿ ತೋರುತ್ತದೆ. ಆದದರಿಂದ ಅವನು ಅತಿಶಯಿಸ ತಕ್ಕವನಲ್ಲವೆಂದು ಹೇಳ ಬೇಕು.

ಮೇಲೆ ಹೇಳಿದ ಪ್ರಕಾರ ಅರಸನು ಸತ್ತ ಕೂಡಲೇ ಅವನ ಸಹೋದರನ ಮಗನಾದ (Stephen) ಸ್ತೇಫನ್ ಇಂಗ್ಲಾಂದಿಗೆ ತ್ವರೆಯಾಗಿ ಬಂದು, ಸತ್ತ ಅರಸನು ತನಗೆ ತೋರಿಸಿದ ಪ್ರೀತಿಯನ್ನು ನೆನಸದೆ, ಮತಿಲ್ದ ಎಂಬವಳನ್ನು ಪಟ್ಟಕ್ಕೆ ಹಕ್ಕುದಾರಳೆಂದು ತಾನು ಮುಂಚೆ ವಂದಿಸಿದ್ದನ್ನು ಸಹ ಎಣಿಸದೆ, ವಿನ್‌ಚೆಸ್ತರ್ ಪಟ್ಟಣದ ಅಧ್ಯಕ್ಷನಾದಂಥ ತನ್ನ ಸಹೋದರನು ಮುಂತಾದ ಸಭೆಯ ಅಧಿಕಾರಿಗಳ ಸಹಾಯದಿಂದ ಅಧಿಕಾರಸ್ತರು ತನ್ನನ್ನು ಅರಸನಾಗಿ ನೇಮಿಸುವ ಹಾಗೆ ಮಾಡಿದನು. ಅವನಿಗೆ ವಾಡಿಕೆಯ ಪ್ರಕಾರ ಪಟ್ಟಾಭಿಷೇಕದ ಆಚರಣೆಗಳನ್ನೆಲ್ಲಾ ಮಾಡುವ ಸಮಯದಲ್ಲಿ ಅಲ್ಲಿದ್ದ ಪ್ರಜೆಗಳೆಲ್ಲರೂ ಮತಿಲ್ದ ಎಂಬವಳಿಗೆ ಕೊಟ್ಟಿದ್ದ ಪ್ರ

ಮಾಣವನ್ನು ಮೀರಿ ಅಂದಿಗೆ ಸ್ತೇಫನನಿಗೆ ವಂದನೆ ಮಾಡಿದರು. ಈ ಪ್ರಕಾರ ಅರಸನಾದ ಸ್ತೇಫನನು ಎಲ್ಲರಿಗೂ ಸಂತೋಷ ಉಂಟಾಗುವ ಹಾಗೆ ನಯವಾಗಿ ಮಾತಾಡಿ, ಜನರನ್ನು ಪ್ರೀತಿ ಪಡಿಸಿದ್ದರಿಂದ, ದೇಶದವರೆಲ್ಲರೂ ಅವನಿಗೆ ಪಟ್ಟವಾದದ್ದನ್ನು ಕುರಿತು ಅಧಿಕವಾಗಿ ಸಂತೋಷ ಪಟ್ಟರೆಂದು ತೋರುತ್ತದೆ. ಅವನಿಗೆ ರಾಜ್ಯ ದೊರಕಿದ್ದು ತಕ್ಕದ್ದೆಂದು ಎಲ್ಲರು ಒಪ್ಪಿದ್ದರಿಂದ ಒಬ್ಬರಾದರೂ ಅವನನ್ನು ಎದುರಿಸಲಿಲ್ಲ, ವಿರೋಧಿಸಲಿಲ್ಲ. ಆದದರಿಂದ ತನ್ನ ದೊಡ್ಡಪ್ಪನು ಆಳಿದ ರಾಜ್ಯವನ್ನು ಅವನು ಮೂರು ವರುಷಗಳ ವರೆಗೂ ಚನ್ನಾಗಿ ಆಳಿದನು. ಮತ್ತು ನೊರ್ಮನ್ಯರೂ ಸಕ್ಸನರೂ ಆದಂಥ ದೇಶದಲ್ಲಿದ್ದ ಎಲ್ಲಾ ತರಗಳವರೂ ಹೆಂಗಸು ತಮ್ಮನ್ನು ಆಳುವದಕ್ಕಿಂತ ಇವನೇ ರಾಜ್ಯ ಪರಿಪಾಲನೆ ಮಾಡುವದು ಒಳ್ಳೇದೆಂದು ಅವನನ್ನು ಅರಸನಾಗಿರ ಕೋರಿದರು.

ಹಾಗಿದ್ದಾಗ್ಯೂ ಸ್ತೇಫನ್ ಎಂಬವನು ಹೆನ್ರಿಯ ಹಾಗೆ ಸ್ಥಿರ ಮನಸುಳ್ಳವನಲ್ಲ. ಆದದರಿಂದ ಪ್ರಭುಗಳು ಮುಂಚಿನಂತೆ ಕೊಲೆ ಮಾಡಲೂ ಕೊಳ್ಳೆ ಇಡಲೂ ಪ್ರಾರಂಭಿಸಿದಾಗ, ಇವನು ತಾನು ಅನ್ಯಾಯವಾಗಿ ರಾಜ್ಯಾಧಿಕಾರ ತೆಗದು ಕೊಂಡವನಾದ್ದರಿಂದ ಅನ್ಯಾಯ ಮಾಡಿದ ಪ್ರಭುಗಳನ್ನು ಶಿಕ್ಷಿಸ ಕೂಡದೆ ಹೋಯಿತು. ಇದರಿಂದ ಪ್ರಜೆಗಳು ಅವನ ಮೇಲೆ ಅಧಿಕವಾಗಿ ದೂರಿ ಕೊಳ್ಳ ಪ್ರಾರಂಭಿಸಿದರು. ಆಗಲವನು ಅನ್ಯದೇಶಸ್ತರ ದೊಡ್ಡ ಸೈನ್ಯವನ್ನು ಕೂಡಿಸಿದನು. ಅವರು ಸಹ ಪ್ರಭುಗಳಂತೆಯೇ ಬಡ ಜನರನ್ನು ಇಕ್ಕಟ್ಟು ಪಡಿಸಿದ್ದರಿಂದ, ಜನರಿಗೆ ಬಹು ಬೇಸರಿಕೆಯುಂಟಾಗಿತ್ತು. ಈ ಕೇಡುಗಳಿಂದ ಬರಬರ ದೇಶವೆಲ್ಲಿಯೂ ಅಧಿಕವಾದ ಕಲಹ ಉಂಟಾಗುವ ಸಮಯದಲ್ಲಿ ಸ್ಕೊತ್ಲಾಂದ್ ಅರಸನು ತನ್ನ ನಾದಿನಿಯಾದ ಮತಿಲ್ಡ ಎಂಬವಳಿಗೆ ಇಂಗ್ಲಾಂದ್ ರಾಜ್ಯವು ದೊರಕ ಬೇಕೆಂದು ಆ ದೇಶದ ಉತ್ತರ ನಾಡುಗಳಲ್ಲಿ ದಂಡೆತ್ತಿ ಕೊಂಡು ಬಂದನು. ಸ್ತೇಫನ್ ಅವನನ್ನು ಎದುರಿಸಿ, (North Allerton) ಉತ್ತರ ಅಲ್ಲರ್ತನು ಎಂಬ ಸ್ಥಳದ ಸಮೀಪವಾಗಿ ಅವನ ಸಂಗಡ ಕೈಕಲಿತು ಸೋಲಿಸಿದನು. ಈ ಯುದ್ಧವನ್ನು ಧ್ವಜದ ಯುದ್ಧವೆಂದು ಹೇಳುವರು. ಮೂರಣೆ ವರುಷದಲ್ಲಿ ಚಕ್ರವರ್ತಿಯ ಹೆಂಡತಿಯಾದ ಮತಿಲ್ಡ ಎಂಬವಳೂ, (Gloucester) ಗ್ಲೋ

ಸ್ತುರ್ ಪಟ್ಟಣದ ಪ್ರಭುವಾದ ರೋಬರ್ತ್ ಎಂಬುವ ರಾಜಪುತ್ರನೂ, ನೂರೈವತ್ತು ರಾಹುತವೀರಶ್ರೇಷ್ಠರೂ (Sussex) ಸಸ್ಸೆಕ್ ನಾಡಿನಲ್ಲಿರುವ (Arundel) ಆರುಂದೆಲ್ ಎಂಬ ಊರಿನ ರೇವಿನಲ್ಲಿ ಇಳಿದರು. ಸ್ತೇಫನ್ ಎಂಬವನು ಇದನ್ನು ತಿಳಿದು, ಆ ಕಾಲದಲ್ಲಿ ಬಳಕೆಯಾಗಿದ್ದ ಉಪಚಾರದ ರೀತಿಯ ಹಾಗೆ ಅವಳನ್ನು ಅಭ್ಯಂತರಿಸಲಾರದೆ, (Bristol) ಬ್ರಿಸ್ತೊಲ್ ಎಂಬುವ ಪಟ್ಟಣದಲ್ಲಿದ್ದ ಅವಳ ಸಹೋದರನ ಕೋಟೆಯ ಮಟ್ಟಿಗೂ ಏನೂ ಅಡ್ಡಿ ಇಲ್ಲದೆ ಹೋಗುವಂತೆ ಸ್ಥಳ ಕೊಟ್ಟನು. ಆ ಸ್ಥಳದಲ್ಲಿ ಬಹು ಶೀಘ್ರವಾಗಿ ಅನೇಕರು ಅವಳ ರಾಣುವೆಯಲ್ಲಿ ಸೇರಿ ಕೊಂಡದ್ದರಿಂದ, ಅವಳ ಪಕ್ಷದಲ್ಲಿ ನಿಂತು ಯುದ್ಧ ಮಾಡುವದಕ್ಕೆ ಅಪಾರವಾದ ಸೈನ್ಯ ಕೂಡಿಸಲ್ಪಟ್ಟಿತು. ಆ ಸೈನ್ಯಕ್ಕೆಲ್ಲಾ ಗ್ಲೋಸ್ತರ್ ಪಟ್ಟಣದ ಪ್ರಭುವಾದ ರೋಬರ್ತನು ಮುಖ್ಯಸ್ಥನಾದನು.

ಅವರು ಮಾಡಿದ ಮೊದಲನೇ ಯುದ್ಧವು ಬಹು ಶೀಘ್ರವಾಗಿ ಮುಗಿಯಿತು. ಹ್ಯಾಗಂದರೆ, ಒಂದು ದಿವಸ ಎದುರಿಗಳಾದ ಇಬ್ಬರು ಮುಖ್ಯ ವೀರರು (Lincoln) ಲಿನ್‌ಕೊಲ್‌ನ್ ಊರಿನ ಕೋಟೆಯಲ್ಲಿದ್ದಾರೆಂದು ಸ್ತೇಫನನು ಕೇಳಿ, ಅವರನ್ನು ಹಿಡಿಯ ಬೇಕೆಂದು, ಆ ಕೋಟೆಯನ್ನು ಮುತ್ತಿ ಕೊಂಡಿರುವಾಗ, ರೋಬರ್ತ್ ಎಂಬವನು ಇದನ್ನು ತಿಳಿದು, ತನ್ನ ಸ್ನೇಹಿತರಿಗೆ ಸಹಾಯ ಮಾಡ ತ್ವರೆಯಾಗಿ ಬಂದನು. ಬರುವ ಮಾರ್ಗದಲ್ಲಿ ಅತಿ ವೇಗವಾಗಿ ಹರಿಯುವ ಆಳವಾದ (Trent) ತೆರೆಂತ ಎಂಬ ಒಂದು ನದಿಯ ಅಂಚಿಗೆ ಬಂದರು. ಅದನ್ನು ಹ್ಯಾಗೆ ದಾಟ ಬಹುದೆಂದು ಆಲೋಚಿಸುವಾಗ ಅವನು ತನ್ನ ಪರಿವಾರದವರನ್ನು ದೃಷ್ಟಿಸಿ, ನೀವು ಈಗಲೇ ನನ್ನನ್ನು ಹಿಂಬಾಲಿಸಿ ಧೈರ್ಯವಾಗಿ ಹೋರಾಡಿದರೆ ಪೂರ್ಣ ಜಯ ಹೊಂದುವದಕ್ಕೆ ಒಂದು ವಿಧ ಉಂಟು, ಬರುತ್ತಿರಾ? ಎಂದು ಅವರನ್ನು ಎಬ್ಬಿಸ ತಕ್ಕ ಒಂದು ಮಾತನ್ನು ಹೇಳಿದನು. ಅದನ್ನು ಕೇಳಿ, ಅವರೆಲ್ಲರೂ ಅರ್ಚಟಿಸಿ, ಆಯುಧಪಾಣಿಗಳಾಗಿ ನೀರಿನಲ್ಲಿ ದುಮುಕಿ, ಆಚೇ ದಡಕ್ಕೆ ಈಜಿ ಕೊಂಡು ಹೋದರು. ಆಗ ಅರಸನ ಬಳಿಯಲ್ಲಿ ಸ್ವಲ್ಪ ಮಂದಿ ಮಾತ್ರ ಇದ್ದಾಗ್ಯೂ ಅವರು ಬಹು ಶೌರ್ಯವಾಗಿ ಹೋರಾಡಿದರು. ಸ್ತೇಫನ್ ಎಂಬವನು ಯಾವ ಶ್ರೇಷ್ಠ ವೀರನಿಗೂ

ಹಿಂತೆಗೆಯದೆ ಧೈರ್ಯಶಾಲಿಯಾಗಿ, ತನ್ನ ಪರಿವಾರದವರೆಲ್ಲರೂ ಮುರಿದು ಓಡಿದಾಗ ಸಹ ಶೌರ್ಯದಿಂದ ನಿಂತು ಎದುರಿಗೆ ಬಂದ ಅನೇಕ ಶ್ರೇಷ್ಠ ವೀರರನ್ನು ತನ್ನ ಕೈಯಲ್ಲಿದ್ದ ಬಹು ಭಾರವಾದ ಪರಶುವಿನಿಂದ ಕೊಂದು ಬಿಟ್ಟು, ಬಹಳ ಹೊತ್ತು ಎದುರಾಳಿಗಳಲ್ಲಿ ಒಬ್ಬನನ್ನಾದರೂ ಸಮೀಪವಾಗಿ ಬರಗೊಡಿಸದೆ ಓಡಿಸಿ ಬಿಟ್ಟನು. ಕಡೆಯಲ್ಲಿ ಒಂದು ದೊಡ್ಡ ಕಲ್ಲು ಎದೆಗೆ ತಗಲಿದ್ದರಿಂದ ಅವನು ಭೂಮಿಯ ಮೇಲೆ ಬಿದ್ದು ಈ ಪ್ರಕಾರ ಶೆರೆಯಾದನು. ಅದರ ತರುವಾಯ ಮತಿಲ್ಡ ಎಂಬವಳು ವಿನ್‌ಚೆಸ್ಟರ್ ಪಟ್ಟಣದಲ್ಲಿ ಪಟ್ಟಾಭಿಷೇಕ ಮಾಡಲ್ಪಟ್ಟಳು.

ಗ್ಲೋಸ್ಟರ್ ಎಂಬ ಪಟ್ಟಣದ ಪ್ರಭುವು ಅವಳಿಗೆ ಮೊದಲನೇ ಮಂತ್ರಿಯಾಗಿದ್ದದರಿಂದ ದೇಶದಲ್ಲೆಲ್ಲಾ ಸ್ವಲ್ಪ ಹೆಚ್ಚು ಕಡಿಮೆ ಸಮಾಧಾನವೂ ಶಾಂತವೂ ದಿನದಿನ ಶಿರಿಗಿ ಉಂಟಾಗುತ್ತಾ ಬಂತು. ಆದಾಗ್ಯೂ ಯಥಾಸ್ಥಿತಿಯಾಗಿ ಪ್ರಜೆಗಳಿಗೆ ಆ ಸಮಯದಲ್ಲಿ ಅಧಿಕ ನಿರ್ಭಾಗ್ಯ ಸಂಭವಿಸಿತು. ಆ ಸ್ವದೇಶಯುದ್ಧದಿಂದ ಪ್ರಭುಗಳು ಜನರನ್ನು ಅಧಿಕವಾಗಿ ಕಷ್ಟ ಪಡಿಸುವದಕ್ಕೆ ಹೇತುವೆಯಾಯಿತು. ಮತ್ತು ಬರದಿಂದಲೂ, ಅನೇಕ ಜನರು ನಾಶವಾಗಿ ಹೋದದರಿಂದಲೂ, ಪ್ರಜೆಗಳು ಅಧಿಕವಾಗಿ ದುಖ್ಖ ಪಡುತ್ತಿದ್ದರು. ಅನೇಕ ಸ್ಥಳಗಳಲ್ಲಿ ನೆಲಗಳು ಹಾಳಾಗಿ ಬಿದ್ದಿದ್ದವು. ದೇಶವೆಲ್ಲಾ ಹಾಳಾಗಿ ಹೋಯಿತು. ಅನೇಕ ದೊಡ ಪಟ್ಟಣಗಳು ಸಹ ಪ್ರಜೆಗಳಿಲ್ಲದಂತೆ ನಾಶವಾಗಿ ಹೋಯಿತು.

ಮೇಲೆ ಹೇಳಿದ ಕೇಡುಗಳು ದಿನದಿನ ಹೆಚ್ಚುತ್ತಾ ಬಂದವು. ಮತಿಲ್ಡ ಎಂಬವಳು ಕ್ರೂರಳೂ ತಪ್ಪುಗಳನ್ನು ಸಹಿಸಲಾರದ ದುರ್ಗುಣವುಳ್ಳವಳೂ ಆಗಿದ್ದಳು. ಆದದರಿಂದ ಶೆರೆ ಪಟ್ಟಿದ್ದ ಸ್ಟೀಫನ್ ಎಂಬುವ ಅರಸನ ಹೆಂಡತಿ ತನ್ನ ಗಂಡನನ್ನು ಬಿಡುಗಡೆ ಮಾಡ ಬೇಕೆಂದು ರಾಣಿಯ ಬಳಿಯಲ್ಲಿ ಬೇಡಿ ಕೊಂಡಳು. ಮತ್ತು ಬೇರೆ ಅನೇಕ ಮಂದಿಯೂ ಹಾಗೆಯೇ ಬಿಡುಗಡೆ ಮಾಡ ಬೇಕೆಂದು ಬಹುಶಾ ಕೇಳಿ ಕೊಂಡಾಗ್ಯೂ ರಾಣಿಯು ಅವರ ವಿಜ್ಞಾಪನೆಗೆ ಕಿವಿ ಕೊಡಲಿಲ್ಲ. ಆದದರಿಂದ ಲಂಡನ್ ಪಟ್ಟಣದವರು ಸ್ಟೀಫನ್ ಎಂಬುವ ಅರಸನ ಮೇಲೆ ಬಹಳ ಪ್ರೀತಿ ಇಟ್ಟದ್ದರಿಂದ ಕಲಹ ಮಾಡಿ, ರಾಣಿಯನ್ನು ಅತಿ ತ್ವರೆಯಾಗಿ ಆ ಪಟ್ಟಣವ

ನ್ನು ಬಿಟ್ಟು ಓಡಿ ಹೋಗುವಂತೆ ಮಾಡಿದರು. ಇದನ್ನು ಕುರಿತು ಉಭಯ ಪಕ್ಷದವರೂ ಅಧಿಕ ವೈರಾಗ್ಯದಿಂದ ಮತ್ತೂ ಯುದ್ಧ ಮಾಡ ಪ್ರಾರಂಭಿಸಿದರು. ಅದರ ತರುವಾಯ ಗ್ಲೋಸ್ತರ್ ಪಟ್ಟದ ಪ್ರಭುವು ಶೆರೆ ಪಟ್ಟನು. ಇವನು ರಾಣಿಯ ಪ್ರಧಾನ ಮಂತ್ರಿಯಾದದರಿಂದ ಇವನನ್ನು ಬಿಡುಗಡೆ ಮಾಡಿದರೆ, ಸ್ತೀಫನ್ ಎಂಬುವ ಅರಸನನ್ನು ರಾಣಿಯು ಬಿಡುಗಡೆ ಮಾಡ ಬೇಕೆಂದು ಒಡಂಬಡಿಕೆ ಮಾಡಿದರು.

ಆಗ ಉಂಟಾದ ಯುದ್ಧಗಳಲ್ಲಿಯೂ, ಮುತ್ತಿಗೆಗಳಲ್ಲಿಯೂ ಮಟಿಲ್ಡ ಎಂಬವಳಿಗೆ ಅನೇಕ ಸಾರಿ ಅಪಾಯ ಸಂಭವಿಸುವದಕ್ಕೆ ಹೇತುವೆಯುಂಟಾಗಿತ್ತು. ಒಂದು ದಿವಸ ಅವಳು (Oxford) ಒಕ್ಸ್‌ಫೋರ್ಡ್ ಪಟ್ಟದ ಕೋಟೆಯಲ್ಲಿ ಇರುವಾಗ ಶತ್ರುಗಳು ಆ ಕೋಟೆಯನ್ನು ಮುತ್ತಿಕೊಳ್ಳುವಾಗ ಒಂದು ಉಪಾಯದಿಂದ ತಪ್ಪಿಸಿ ಕೊಂಡಳು. ಹ್ಯಾಗಂದರೆ, ಆಗ ಶೀತಗಾಲವಾದದರಿಂದ ದೇಶವೆಲ್ಲಿಯೂ ಗಡ್ಡೆ ಕಟ್ಟಿದ ಮಳೆ ಸುರಿದು ಹೊಲಗಳು ದಾರಿಗಳು ಎಲ್ಲಾ ಶುದ್ಧ ಬಿಳುಪಾಗಿರುವದನ್ನು ಕಂಡು, ಅವಳೂ ಅವಳ ಪರಿವಾರದವರಾದ ಒಬ್ಬಿಬ್ಬರೂ ಬಿಳೀ ವಸ್ತ್ರಗಳನ್ನು ಧರಿಸಿ ಕೊಂಡು, ಶತ್ರುಗಳ ಕಾವಲಿಸೈನ್ಯಕ್ಕೆ ತಿಳಿಯದೆ ಕೋಟೆಯನ್ನು ಬಿಟ್ಟು, ತಮ್ಮ ರಾಣುವೆಯ ಬಳಿಗೆ ಹೋಗಿ ಶೇರಿದರು.

ಆ ಕಾಲದಲ್ಲಿ ಗ್ಲೋಸ್ತರ್ ಪಟ್ಟದ ಪ್ರಭುವು ಮರಣ ಹೊಂದಿದ್ದರಿಂದ ಮಟಿಲ್ಡ ಎಂಬುವ ರಾಣಿಯು ಇನ್ನು ಮೇಲೆ ತನಗೆ ಜಯವಾಗುವದಿಲ್ಲವೆಂದು ನಿಶ್ಚಯಿಸಿ ಕೊಂಡು, ರಾಜ್ಯವನ್ನು ಎದುರಿಯಾದ ಸ್ತೀಫನನಿಗೆ ಬಿಟ್ಟು ಬಿಟ್ಟು, ಬೇರೆ ದೇಶಕ್ಕೆ ಹೋಗಿ ಬಿಟ್ಟಳು. ಕೆಲವು ವರುಷಗಳ ತರುವಾಯ ಅವಳ ಕುಮಾರನಾದ ಹೆನ್ರಿಯು ಹದಿನಾರು ವರುಷ ಪ್ರಾಯದವನಾದಾಗ ತಿರಿಗಿ ಯುದ್ಧ ಮಾಡ ಪ್ರಾರಂಭಿಸಿದನು. ಆದಾಗ್ಯೂ ಆಗ ಉಭಯ ಪಕ್ಷದವರಾದ ಹಿರಿಯರು ಆ ಯೌವನಸ್ಥನಾದ ಅರಸುಮಗನಿಗೂ ಸ್ತೀಫನನಿಗೂ ಸಮಾಧಾನ ಮಾಡಿದರು. ಅದು ಹ್ಯಾಗಂದರೆ, ಸ್ತೀಫನನು ಜೀವದಿಂದಿರುವ ಮಟ್ಟಿಗೂ ಆ ದೇಶವನ್ನು ಆಳಬೇಕೆಂದೂ, ಅವನ ತರುವಾಯ ಹೆನ್ರಿ ಎಂಬವನಿಗೆ ಪಟ್ಟ ಕಟ್ಟ ಬೇಕೆಂದೂ, ಸಮಾಧಾನವೊಡಂಬಡಿಕೆಯನ್ನು ನಿರ್ಣಯಿಸಿ, ಉಭಯ ಕಕ್ಷಿಯವ

ರಿಗೂ ಸಮಾಧಾನ ಮಾಡಿದರು. ಆ ಸಂಗತಿಗಳೆಲ್ಲಾ ಈ ಪ್ರಕಾರ ಚ ನ್ನಾಗಿ ಮುಗಿದದರಿಂದ ಹದಿನಾರು ವರುಷಗಳ ಮಟ್ಟಿಗೂ ನಡಿಯುತ್ತಾ ಇದ್ದ ಸ್ವದೇಶಯುದ್ಧವು ಮುಗಿಯಲಾಗಿ, ಪ್ರಜೆಗಳಿಗೆ ಸಮಾಧಾನ ಸೌ ಖ್ಯ ಉಂಟಾಯಿತು.

ಮೇಲೆ ಹೇಳಿದ ಒಡಂಬಡಿಕೆ ಮಾಡಿದ ವಾರ್ಣಿ ವರುಷದಲ್ಲಿ ಸ್ತೇ ಫನನು ಸತ್ತನು. ಅವನು ಆಳಿದ ಕಾಲವೆಲ್ಲಾ ಅವನಿಗೆ ಅಧಿಕ ಉಪದ್ರ ಗಳು ಸಂಭವಿಸಿದವು. ಅತ್ಯಾಶೆಯಿಂದ ಅನ್ಯಾಯವಾಗಿ ರಾಜ್ಯಾಧಿಕಾ ರವನ್ನು ತೆಗದು ಕೊಳ್ಳುವವನಿಗೆ ಆ ಅಧಿಕಾರದಿಂದ ದುಃಖವೂ ಚಿಂತೆಯೂ ಉಪದ್ರವೂ ಬೆಳೆಯುವವೇ ಹೊರ್ತು ಅವನಿಗೆ ಶಾಂತಿ ಇರಲಾರದೆಂ ದು ತನ್ನ ಅನುಭವದಿಂದ ಚನ್ನಾಗಿ ಗ್ರಹಿಸಿ ಕೊಂಡನು.

ಅವನು ನ್ಯಾಯದ ಪ್ರಕಾರ ಅರಸನಾಗಿ ಸಮಾಧಾನದಿಂದ ಆಳು ವದಕ್ಕೆ ಹೇತುವೆ ಇದ್ದರೆ, ಎಲ್ಲರೂ ಅವನನ್ನು ದೊಡ್ಡಸ್ತಿಕೆಯಾದ ಗುಣ ಗಳುಳ್ಳ ಅರಸನೆಂದೂ, ತಮ್ಮ ದೇಶಕ್ಕೆ ದೊಡ್ಡ ಉಪಕಾರಿ ಎಂದೂ ಹೊ ಗಳುವದಕ್ಕೆ ಸ್ಥಳವಿರುವದು. ಅದ್ಯಾಕ ಹ್ಯಾಗಂದರೆ, ಅವನು ದಯಾಳವೂ ಪಕ್ಷವೂ ಉಳ್ಳವನಾಗಿ, ನೀತಿ ನ್ಯಾಯ ತಪ್ಪದೆ ಆಳುವದಕ್ಕೆ ಅಪೇಕ್ಷೆಯಾ ಗಿದ್ದನು. ಆದಾಗ್ಯೂ ಅವನು ತಾನೇ ಅನ್ಯಾಯವಾಗಿ ಪಟ್ಟ ಹೊಂದಿ ದರಿಂದ ಅನ್ಯಾಯ ಮಾಡಿದವರನ್ನು ಖಂಡಿಸಲಾರದೆ ಅವರಿಗೆ ಸುಮ್ಮನಿ ರ ಬೇಕಾಯಿತು. ಅವನು ಅರಳಿದ ಮುಖದಿಂದ ಎಲ್ಲರಿಗೂ ನಯವಾ ಗಿ ಮಾತಾಡುವದರಿಂದ ತನ್ನ ಮನಸ್ಸಿನಂತೆ ತನ್ನ ಸುತ್ತಲಿರುವವರನ್ನು ತನಗೆ ಸಮ್ಮತಿಸ ಮಾಡುವನು. ಇದು ಒಳ್ಳೇ ಕಾರ್ಯವೇ ಅಂದಾಗ್ಯೂ, ಆ ಕಾಲದಲ್ಲಿ ಆಳಿದ ಅರಸರು ಭಯ ತೋರಿಸಿ, ಬಹು ಖಂಡಿತವಾಗಿ ಅ ಣಗದವರನ್ನು ಅಣಗಿಸಿ ಬಿಟ್ಟು ದಂಡನೆ ಮಾಡ ಬೇಕು. ಇದನ್ನು ಮಾ ಡ ಅವನಿಗೆ ಶಕ್ತಿ ಇಲ್ಲ. ಅವನು ದ್ರೋಹ ಮಾಡಿ ತಕ್ಕದ್ದಲ್ಲದ್ದನ್ನು ಮಾ ಡಿದ್ದರಿಂದ, ಪಡ ಬಾರದ್ದನ್ನು ಪಟ್ಟನು.

# CHAPTER VI.

## THE REIGN OF HENRY THE SECOND.

### FROM A. D. 1154 TO A. D. 1189.

## 6 ಸಂಧಿ.

## ಎರಡನೇ ಹೆನ್ರಿಯು ಆಳಿದ್ದು.

### ಕ್ರಿ. ಶ. 1154 ಮೊದಲು ಕ್ರಿ. ಶ. 1189 ವರೆಗೂ.

ಮುಖ್ಯ ತಾರೀಖುಗಳು: (Henry II) ಎರಡನೇ ಹೆನ್ರಿ ಹುಟ್ಟಿದ್ದು ಕ್ರಿ. ಶ. 1133. ರಾಜ್ಯಕ್ಕೆ ಬಂದದ್ದು ಕ್ರಿ. ಶ. 1154. ಶೀರಿ ಹೋದದ್ದು ಕ್ರಿ. ಶ. 1189. (Clarendon) ಕ್ಲಾರೆಂಡನ್ ಸಂಘವು ಕ್ರಿ. ಶ. 1164. (Thomas à Becket) ಥೋಮಾಸ್ ಏ ಬೆಕ್ಕೆತ್ ಕೊಲ್ಲಲ್ಪಟ್ಟದ್ದು ಕ್ರಿ. ಶ. 1170. (Ireland) ಐರ್ಲಾಂಡ್ (England) ಇಂಗ್ಲಾಂಡ್ ರಾಜ್ಯಕ್ಕೆ ಶೇರಿದ್ದು ಕ್ರಿ. ಶ. 1172. ಅದೇ ಕಾಲದ ಇಂದ್ಯ ಚರಿತ್ರೆ: ಘೋರ್ ಮಹಂಮದಿನವರು ಜಯಿಸಿ ಆಳಿದ ಕಾಲ. ಶ್ರೇಷ್ಠ ನಾಮಗಳು: (Becket) ಬೆಕ್ಕೆತ್ ಕ್ರಿ. ಶ. 1119—1170. (Strongbow) ಸ್ಟ್ರಾಂಗ್‌ಬೋ (Ireland) ಐರ್ಲಾಂಡಿನ ಯುದ್ಧದಲ್ಲಿ ಶ್ರೇಷ್ಠ ಸೇನಾಧಿಪತಿ. (Fitz Stephen) ಫೆತ್ಸ್ ಸ್ತೀಫನನು, ಇವನು (Becket) ಬೆಕ್ಕೆತ್ ಎಂಬವನ ಚರಿತ್ರೆಯನ್ನು ಬರೆದನು. ಕ್ರಿ. ಶ. 1191. ಶೀರಿ ಹೋದನು.

ಈ ಪ್ರಕಾರ ಸ್ತೀಫನನು ಸತ್ತ ತರುವಾಯ (Henry II) ಎರಡನೇ ಹೆನ್ರಿಯು ಪಟ್ಟಕ್ಕೆ ಬಂದನು. ಅವನ ತಂದೆಯು ತನ್ನ ಶಿರಸ್ತ್ರಾಣದಲ್ಲಿ ಒಂದು ವಿಧ ಗಿಡದ ಎಳೇ ಚಿಗುರನ್ನು ಹೇರಿದು ಹಾಕಿ ಕೊಳ್ಳುವದು ಬಳಿಕೆ. ಆ ಗಿಡಕ್ಕೆ (Plantagenet) ಪ್ಲಾಂತಜೆನೆತ್ ಎಂದು ಹೆಸರಿದ್ದದರಿಂದ, ಅವನಿಗೂ ಅವನ ಕುಟುಂಬದವರಿಗೂ ಅದೇ ಹೆಸರು ವಾಡಿಕೆಯಾಗಿ ಹೇಳಲ್ಪಡುತ್ತಾ ಬಂತು. ಅವನು ಪಟ್ಟಕ್ಕೆ ಬಂದ ಮೊದಲಲ್ಲಿ ಅವನಿಂದ ಪ್ರ

ಜೆಗಳಿಗೆ ಅಧಿಕ ಮೇಲು ಉಂಟಾಗುವದೆಂದು ಎಲ್ಲರೂ ನೆನಸುವದಕ್ಕೆ ಹೇತುವೆ ಇತ್ತು. ಅವನು ಇಂಗ್ಲಾಂದ್ ರಾಜ್ಯವನ್ನು ಹೊಂದುವದಕ್ಕೆ ಮುಂಚೆಯೇ ಆ ಕಾಲದ ಅರಸುಗಳಲ್ಲಿ ಮಹಾ ಘನವುಳ್ಳವನಾಗಿದ್ದನು. ಹ್ಯಾಗಂದರೆ, ಫ್ರಾನ್ಸ್ ದೇಶದಲ್ಲಿ ಮೂರರಲ್ಲೊಂದು ಭಾಗ ಅವನಿಗೆ ಶೇರಿತು. ಬಹು ಫಲಭರಿತವಾದ ಆ ದೇಶದಲ್ಲಿದ್ದ ಕೆಲವು ಮುಖ್ಯವಾದ ನಾಡುಗಳನ್ನು ಅವನ ಹೆತ್ತವರು ಅವನಿಗೆ ಸ್ವತಂತ್ರವಾಗಿ ಕೊಟ್ಟು ಬಿಟ್ಟಿದ್ದರು. ಇದಲ್ಲದೆ ಫ್ರಾನ್ಸ್ ದೇಶದ ಅರಸನಾದ (Louis) ಲೂವಿಸ್ ಎಂಬವನು ತನ್ನ ಹೆಂಡತಿಯಾದ (Eleanor) ಎಲೆನೋರ್ ಎಂಬವಳನ್ನು ತಳ್ಳಿ ಬಿಟ್ಟ ಮೇಲೆ, ಈ ಹೆನ್ರಿಯು ಅವಳನ್ನು ಮದುವೆ ಮಾಡಿ ಕೊಂಡದರಿಂದ, ಅವನಿಗೆ ಆ ದೇಶದಲ್ಲಿದ್ದ ಬೇರೆ ಕೆಲವು ಶೀಮೆಗಳು ದೊರಕಿದವು. ಈ ಶೀಮೆಗಳನ್ನು ಅವನು ಸ್ವಾಧೀನನಾಗಿ ಆಳದೆ, ಫ್ರಾನ್ಸ್ ದೇಶದಲ್ಲಿದ್ದ ಬೇರೆ ಪ್ರಭುಗಳ ಹಾಗೆಯೇ ಲೂವಿಸನಿಗೆ ಒಳ ಪಟ್ಟವನಾಗಿಯೂ ವಿಧೇಯನಾಗಿಯೂ ಆಳಿ ಕೊಂಡಿದ್ದನು. ಆದಾಗ್ಯೂ ಇಂಗ್ಲಾಂದ್ ರಾಜ್ಯವು ಅವನಿಗೆ ದೊರಕಿದ ಮೇಲೆ ತನ್ನನ್ನು ಮುಂಚೆ ಆಳಿದ ಅರಸನಿಗಿಂತ ಬಹು ಬಲಿಷ್ಠನಾದನು. ಈ ಪ್ರಕಾರ ಫ್ರಾನ್ಸ್ ದೇಶದಲ್ಲಿ ಅವನಿಗೆ ವಿಸ್ತಾರವಾದ ನಾಡುಗಳು ಸ್ವಂತವಾಗಿದ್ದಾಗ್ಯೂ, ಯುದ್ಧ ಮಾಡಿ ಬೇರೆ ಶೀಮೆಗಳನ್ನು ಕಟ್ಟಿ ಕೊಳ್ಳ ಎಷ್ಟು ಮಾತ್ರವೂ ಆಶೆ ಪಡದೆ ಸಮಾಧಾನದಿಂದ ಧೊರೆತನ ಮಾಡ ಅವನಿಗೆ ಮನಸ್ಸಿತ್ತು. ಫ್ರಾನ್ಸ್ ದೇಶಕ್ಕಿಂತ ಇಂಗ್ಲಾಂದ್ ದೇಶವು ಅವನಿಗೆ ಅಧಿಕ ಪ್ರಿಯವಾಗಿತ್ತು. ಇದಲ್ಲದೆ ಇಂಗ್ಲಾಂದರಿಗೆ ಸ್ವದೇಶಯುದ್ಧದಿಂದ ಉಂಟಾದ ಕಠಿಣವಾದ ಕೇಡುಗಳು ದಿನ ದಿನ ಮೆಲ್ಲಮೆಲ್ಲಗೆ ನಿವರ್ತಿಯಾಗಿ ಸ್ವಲ್ಪ ಸುಭಿಕ್ಷ ಉಂಟಾಗುತ್ತಾ ಬಂದದರಿಂದ ಆ ದೇಶದಲ್ಲಿಯೇ ಅವನಿಗೆ ನಿತ್ಯವೂ ಕೆಲಸವಿತ್ತು.

ಈ ಹೊಸ ಅರಸನು ಮೊದಲಲ್ಲಿ ತನ್ನ ತಾತನು ಮಾಡಿದ ಪ್ರಕಾರವೇ, ಪ್ರಜೆಗಳಿಗೆ ಉಪಯೋಗವಾದ ಅನೇಕ ಕಾರ್ಯಗಳನ್ನು ಮಾಡ ಪ್ರಯತ್ನ ಮಾಡಿದನು. ಸ್ತೇಫನನು ಕೂಡಿಸಿದ್ದ ಅನ್ಯ ಸೈನ್ಯಗಳು ದೇಶದವರಿಗೆ ಅಧಿಕ ಕೇಡು ಮಾಡಿ ಇದ್ದದರಿಂದ ಅವುಗಳನ್ನೆಲ್ಲಾ ತಳ್ಳಿ ಬಿಟ್ಟನು. ಮತ್ತು ಬಲಾತ್ಕಾರರೂ, ಅಣಗದವರೂ ಆದ ಪ್ರಭುಗಳನ್ನು ತ

ನ್ನಿಂದಲಾದ ಮಟ್ಟಿಗೂ ಅಣಗಿಸಿ ಬಿಡ ಪ್ರಯತ್ನ ಮಾಡಿ, ದಂಡಿಸ ಜಯ ಪಡದೆ, ತಮ್ಮ ಇಷ್ಟದ ಪ್ರಕಾರ ಕೇಡು ಮಾಡುವದಕ್ಕೋಸ್ಕರ ಆ ಪ್ರಭುಗಳು ಕಟ್ಟಿ ಇದ್ದ ಕೋಟೆಗಳನ್ನು ಕೆಡವಿ ಬಿಟ್ಟನು. ಇದಲ್ಲದೆ ಕೆಲವು ಮುಖ್ಯ ಪಟ್ಟಣಗಳಿಗೆ ಮಾನ ಮರ್ಯಾದೆಗಳನ್ನು ದಯ ಪಾಲಿಸಿದನು. ಮತ್ತು ಸಭೆಯ ಅಧಿಕಾರಿಗಳು ದೇಶವೆಲ್ಲೆಲ್ಲಿಯೂ ನಿತ್ಯವೂ ಹೆಚ್ಚೆಚ್ಚಾಗಿ ಅಧಿಕಾರ ಹೊಂದಿ ತಮ್ಮ ಮನಸ್ಸಿನ ಹಾಗೆಯೇ ದೇಶವನ್ನೆಲ್ಲಾ ಆಳುವದಕ್ಕೆ ನೋಡುತ್ತಾರೆಂದು ಕಂಡು ಅವರ ಬಲವನ್ನು ತಗ್ಗಿಸಿ ಬಿಡ ಬೇಕೆಂದು ಪ್ರಯತ್ನ ಮಾಡಿದನು. ಆ ಗುರುಗಳು ರಾಜ್ಯದಲ್ಲಿದ್ದ ಬೇರೆ ಎಲ್ಲಾ ತರಗಳವರಿಗೆ ತಮ್ಮನ್ನು ಪ್ರತ್ಯೇಕಿಸಿ ಕೊಂಡು, ವಿಶೇಷ ಸ್ವಾತಂತ್ರ್ಯಗಳನ್ನೂ ಉದ್ಯೋಗಗಳನ್ನೂ ಹೊಂದ ಬೇಕೆಂದು ಅಪೇಕ್ಷಿಸಿದರು. ಮತ್ತು ಹೀಗೆ ತಮ್ಮನ್ನು ಹೆಚ್ಚಿಸಿ ಕೊಳ್ಳುವದರಿಂದ ಸಭೆಗೆ ಘನವೂ ಉಪಯೋಗವೂ ಆಗುವದೆಂದು ಎಣಿಸಿದರೆ ಹೊರ್ತು, ಸಭೆಯಲ್ಲಿ ಗುರುಗಳು ಮಾತ್ರವೇ ಅಲ್ಲ, ಸಾಧಾರಣ ಸಭೆಯವರು ಸಹ ಶೇರಿ ಇರುವದರಿಂದ ಗುರುಗಳನ್ನು ಎಲ್ಲರಲ್ಲಿಯೂ ಘನ ಪಡಿಸುವದು ಸಭೆಗೆ ಯಥಾರ್ಥವಾದ ಮೇಲು ಅಲ್ಲವೆಂದು ಅವರು ಗ್ರಹಿಸಲಿಲ್ಲ. ಮುಂಚೆ ಹೇಳಿದ (Dunstan) ದನ್‌ಸ್ತನ್ ಎಂಬವನು ಸಭೆಯ ಅಧ್ಯಕ್ಷನಾದ ದಿವಸ ಮೊದಲುಗೊಂಡು ಈ ವಿಧವಾದ ಪ್ರಯತ್ನಗಳನ್ನು ಗುರುಗಳು ಮಾಡುತ್ತಾ ಬಂದದರಿಂದ ಅಂತರಂಗವಾಗಿ ಗುಣುಗುಟ್ಟುವಿಕೆ ಉಂಟಾಗಿತ್ತು. ಅದರಿಂದ ಈಗ ಪ್ರತ್ಯಕ್ಷವಾದ ಕಲಹ ಎದ್ದಿತು. ಮತ್ತು ಇಂಗ್ಲಾಂದಿನಲ್ಲಿದ್ದ ಸಭೆಯು ಅನೇಕ ವರುಷಗಳ ತರುವಾಯ ಶುದ್ಧವಾಟಾದ ಕಾಲದ ಮಟ್ಟಿಗೂ ಆ ವಿವಾದ ಮುಗಿಯಲಿಲ್ಲ.

ಹೆನ್ರಿ ಎಂಬ ಅರಸನು ಮೊದಲಾಗಿ ಕ್ರೂರವಾದ ಕೆಲವು ಕೇಡುಗಳನ್ನು ನಿವರ್ತಿ ಮಾಡ ಬೇಕೆಂದು ತೀರ್ಮಾನ ಮಾಡಿ ಕೊಂಡು, ತನ್ನ ಅಭಿಪ್ರಾಯವನ್ನು ಈಡೇರಿಸುವ ಬಗೆಯನ್ನು ತಿಳಿಯದೆ ಜಾರಿ ಹೋದನು. ತಾನು ಆಲೋಚಿಸಿದನ್ನು ಸ್ಥಿರ ಮನಸ್ಸಿನಿಂದ ಈಡೇರಿಸಿ, ನಿಧಾನದಿಂದಲೂ ಯುಕ್ತಿಯಿಂದಲೂ ಮಾಡಿದ್ದರೆ, ಅದು ಜನಕ್ಕೆ ದೊಡ್ಡ ಉಪಕಾರವಾಗಿರುವದು. ಆದಾಗ್ಯೂ ಅವನು ಮಿತಿ ಮೀರಿ ಶೀಘ್ರವಾಗಿ ಕೋಪ

ಹೊಂದಿ ತಾನು ನೆನಸಿದ್ದನ್ನು ಈಡೇರಿಸ ಪ್ರಯಾಸ ಪಟ್ಟದ್ದರಿಂದ ಅದು ದೇಶದವರಿಗೆ ಕೇಡಾಗಿಯೂ ತನಗೆ ದೌರ್ಭಾಗ್ಯವಾಗಿಯೂ ಕಲಹವನ್ನು ಉಂಟು ಮಾಡಿತು. ತಾನು ಯತ್ನೈಸಿದ ಕಾರ್ಯಗಳನ್ನು ಮಾಡಿ ಮುಗಿಸುವದಕ್ಕೆ ಶ್ರೇಷ್ಠ ನ್ಯಾಯಾಧಿಪತಿಯಾದ (Thomas á Becket) ಥೋಮಾಸ್ ಏ ಬೆಕ್ಕೆತ್ ಎಂಬವನು ಸಹಾಯವಾಗಿರುವನೆಂದು ನೆನಸಿ, ಆ ಗುರಿಯಿಂದ ಅವನನ್ನು (Canterbury) ಕಾಂತರ್‌ಬರಿ ಪಟ್ಟದ ಶ್ರೇಷ್ಠ ಅಧ್ಯಕ್ಷನಾಗಿ ನೇಮಿಸಿ ಇಟ್ಟನು. ಅವನ ಚರಿತ್ರೆಯನ್ನು ಮುಖ್ಯವಾಗಿ ಚಿಂತಿಸ ತಕ್ಕದ್ದು.

ಅವನು ಇಂಗ್ಲಾಂದ್ ದೇಶದವನು. ಮತ್ತು (Normans) ನೊರ್ಮನ್ನರು ಆ ದೇಶವನ್ನು ಜಯಿಸಿದ್ದು ಮೊದಲುಗೊಂಡು ಸಕ್ಸನನೊಬ್ಬನಿಗೂ ದೊಡ್ಡ ಉದ್ಯೋಗವನ್ನು ಕೊಡದೆ ಇರಲಾಗಿ ಸಕ್ಸನನಾದ ಇವನಿಗೆ ಮಾತ್ರ ಕೊಡಲ್ಪಟ್ಟಿತು. ಹೆನ್ರಿ ಆಳಿದ ಮೊದಲಲ್ಲಿ ಈ ಬೆಕ್ಕೆತ್ ಎಂಬವನ ಮೇಲೆ ಅಧಿಕ ಪ್ರೀತಿ ಇಟ್ಟು, ಇವನಿಗೆ ಅನೇಕ ಮುಖ್ಯವಾದ ಉದ್ಯೋಗಗಳನ್ನು ಕೊಟ್ಟು ಘನ ಪಡಿಸಿದನು. ತರುವಾಯ ಅವನನ್ನು ಇಂಗ್ಲಾಂದ್ ದೇಶದ ಶ್ರೇಷ್ಠ ನ್ಯಾಯಾಧಿಪತಿಯಾಗ ಮಾಡಿದನು. ಈ ಉದ್ಯೋಗ ಮಾಡುವದರಲ್ಲಿ ಬೆಕ್ಕೆತ್ ತನ್ನನ್ನು ಬಹು ಸಾಮರ್ಥ್ಯನೆಂದು ತೋರ ಮಾಡಿದನು. ಮತ್ತು ಅಣಗದವರನ್ನು ಅಣಗಿಸುವದಕ್ಕೂ ಎಲ್ಲವನ್ನು ನ್ಯಾಯನಿಬಂಧನೆಗಳ ಪ್ರಕಾರ ಖಂಡಿತವಾಗಿ ನಡಿಸುವದಕ್ಕೂ ಅರಸನು ಮಾಡಿದ ಎಲ್ಲಾ ಪ್ರಯತ್ನಗಳಲ್ಲಿಯೂ ಅವನು ಬಹು ಸಹಾಯವಾಗಿದ್ದನು.

ಇದಲ್ಲದೆ ಅವನು ಅನೇಕ ಸಾರಿ ಅರಸನನ್ನು ಪ್ರೀತಿ ಪಡಿಸಿ ಕೊಂಡದ್ದರಿಂದ ಅರಸನು ಅವನಿಗೆ ಬಹಿರಂಗವಾಗಿ ಬಹಳ ದಯ ತೋರಿಸುತ್ತಾ ಬಂದನು. ಅರಸನು ಸ್ವಾರಿ ಹೊರಡುವಾಗಲೂ ಔತಣಗಳಲ್ಲಿಯೂ ಬೇಟೆಯಾಡುವ ಸಮಯದಲ್ಲಿಯೂ ಅವನು ಸಂಗಡಲೇ ಇರುವನು. ಕೆಲವು ವೇಳೆಗಳಲ್ಲಿ ನಂದನವನಗಳಲ್ಲಿಯೂ ವನಾಂತರಗಳಲ್ಲಿಯೂ ಸ್ವಾರಿ ಹೋಗಿ ತಿರುಗುತ್ತಿರುವಾಗ, ಅರಸನು ಅವನ ಮಾಳಿಗೆಯ ಪ್ರಾಕಾರದಲ್ಲಿ ಕುದುರೆಯನ್ನು ನಡಿಸಿ, ಔತಣಶಾಲೆಯಲ್ಲಿ ಪ್ರವೇಶಿಸಿ ಅಲ್ಲಿ

ರುವ ಔತಣಕ್ಕೆ ಬಂದವರ ನಡುವೆ ಕುಳಿತು ಕೊಂಡು, ಉಲ್ಲಾಸವಾಗಿ ಕಾಲ ಹರಣ ಮಾಡುವನು. ಬೆಕ್ಕೆತ್ ಎಂಬವನು ಗುರುವಾಗಿದ್ದಾಗ್ಯೂ, ಆ ಕಾಲದಲ್ಲಿ ಅವನು ಬಹು ಉಲ್ಲಾಸವಾಗಿ ತಿರುಗುವನು. ಬೇಟೆಯಾಡುವದರಲ್ಲಿಯೂ ಗಿಡುಗಪಕ್ಷಿಯಿಂದ ಹಕ್ಕಿಗಳನ್ನು ಹಿಡಿಯುವದರಲ್ಲಿಯೂ ಅವನು ಬಹು ಸಾಮರ್ಥ್ಯನು. ಮತ್ತು ಅವನು ಧೈರ್ಯವುಳ್ಳ ಯುದ್ಧವೀರನಾಗಿದ್ದು ಒಂದೆರಡು ಸಾರಿ ರಣರಂಗದಲ್ಲಿ ತನ್ನ ಪರಿವಾರದವರನ್ನು ನಡಿಸಿ ಇದ್ದನು. ಅವನು ವಾಸಿಸುವ ಅರಮನೆಯಲ್ಲಿ ಹೇರಾಳವಾದ ಸೇವಕರು ಮುಂತಾದ ಪರಿಜನರು ಇರುವರು. ಅವನು ಹೋಗುವ ಸ್ಥಳಗಳಲ್ಲೆಲ್ಲಾ ಬಹು ಸಂಭ್ರಮವಾದ ಸಮೂಹವು ಅವನನ್ನು ಹಿಂಬಾಲಿಸುವದು. ಅವನು ಭೋಜನ ಮಾಡುವ ಮೇಜಿನಲ್ಲಿ ಚಿನ್ನ ಬೆಳ್ಳಿಪಾತ್ರೆಗಳು ಅನೇಕವಾಗಿ ಪ್ರಕಾಶಿಸುವವು. ತನ್ನನ್ನು ಪ್ರೀತಿ ಮಾಡಿದವರಿಗೆ ಬಹು ಅಮೂಲ್ಯವಾದ ಬಹುಮಾನ ಕೊಡುವನು. ಮುಖ್ಯವಾದ ಪ್ರಭುಗಳು ಸಹ ರಾಜಸಭೆಗೆ ತಕ್ಕ ಉಪಚಾರಕ್ರಮಗಳನ್ನು ಕಲಿತು ಕೊಳ್ಳುವ ಹಾಗೆ ತಮ್ಮ ಕುಮಾರರನ್ನು ಅವನ ಅರಮನೆಯಲ್ಲಿ ಸೇವೆ ಮಾಡ ಕಳುಹಿಸುವರು. ಈ ಪ್ರಕಾರ ಸಂಭ್ರಮವಾಗಿ ಬಾಳುತ್ತಾ, ದಯಾಳುವಾಗಿ ದಾನ ಮಾಡಿ, ಬಹು ಉಪಚಾರದಿಂದ ಎಲ್ಲರ ಬಳಿಯಲ್ಲಿಯೂ ನಯ ಮಾತಾಡಿ, ಎಲ್ಲರೂ ತನ್ನನ್ನು ಹೊಗಳಿ ಆತು ಕೊಳ್ಳುವಂತೆ ಮಾಡ ಪ್ರಯತ್ನ ಮಾಡುತ್ತಾ ಬಂದನು.

ಹೀಗೆ ಉಲ್ಲಾಸವಾಗಿ ತಿರುಗಿದಂಥವನನ್ನೇ ಅರಸನು ಕಾಂತರ್‍ಬರಿ ಪಟ್ಟದ ಶ್ರೇಷ್ಠ ಅಧ್ಯಕ್ಷನಾಗಿ ನೇಮಿಸಿ, ಅವನಿಂದ ಗುರುಗಳನ್ನು ತಿದ್ದುಪಾಟು ಮಾಡ ಬಹುದೆಂದು ನೆನಸಿ ಇದ್ದನು. ಬೆಕ್ಕೆತ್ ಎಂಬವನು ಪ್ರಾರಂಭದಲ್ಲಿ — ಆ ಶ್ರೇಷ್ಠ ಸ್ಥಾನದಲ್ಲಿ ನನ್ನನ್ನು ಇಟ್ಟರೆ, ನಾನು ಇನ್ನು ಮೇಲೆ ನಿನ್ನ ಸೇವಕನಲ್ಲ, ಸಭೆಗೆ ನಾನು ಸೇವಕನಾಗಿರ ಬೇಕೆಂದು ಹೇಳಿ, ಆ ಮೇಲಾದ ಅಧಿಕಾರ ತನಗೆ ಬೇಡ ಅಂದನು. ಅದೇ ಪ್ರಕಾರ ಅವನು ಶ್ರೇಷ್ಠ ಅಧ್ಯಕ್ಷನಾದ ಕೂಡ್ಲೆ ತನಗೆ ಸೇರಿದ್ದನ್ನೆಲ್ಲಾ ಪೂರ್ಣವಾಗಿ ತಿದ್ದುಪಾಟು ಮಾಡಿದನು. ಅವನು ಇನ್ನೂ ಅನೇಕ ಪರಿವಾರದವರನ್ನು ಕೂಡಿಸಿ ಇಟ್ಟು, ತನ್ನನ್ನು ಹೊಂದಿದವರೆಲ್ಲರೂ ಸಂಭ್ರಮವಾಗಿ ಬದುಕುವಂ

ತೆ ಬಿಟ್ಟನು. ತಾನು ಪೂರ್ಣವಾಗಿ ಹೊಸ ರೀತಿಯನ್ನು ಧರಿಸಿ ಕೊಂಡನು. ಮುಂಚೆ ಸೌಖ್ಯವುಳ್ಳ ರಾಜಸಚಿವನಾಗಿ ತಿರುಗಿದವನು ಈಗ ಸರ್ವಸಂಗಪರಿತ್ಯಾಗಿಯಾದ ಮೌನಿಯಾಗಿ ತಿರುಗಿದನು. ತನ್ನ ಅಂಗಿಯೊಳಗೆ ಗೋಣಿಯನ್ನು ಧರಿಸಿದನು. ರುಚಿ ಇಲ್ಲದ ಪದಾರ್ಥಗಳನ್ನು ಮಾತ್ರವೇ ಉಣ್ಣುವನು. ಅವನು ಎಡೆ ಬಿಡದೆ ರೋಗಿಷ್ಟರನ್ನೂ ವೃದ್ಧಾಪ್ಯರನ್ನೂ ದರ್ಶಿಸಿ ಆದರಣೆ ಮಾಡುವನು. ಹೀಗೆ ಅವನು ಯಥಾರ್ಥವಾಗಿ ಗುಣ ಪಟ್ಟನೆಂದು ನಂಬ ಬಹುದು. ಆದಾಗ್ಯೂ ಹೀಗೆ ಆಕಸ್ಮಿಕವಾಗಿ ಎಲ್ಲವನ್ನೂ ಮಾರ್ಪಡಿಸಿ ಕೊಂಡದ್ದರಲ್ಲಿ ಬೇರೊಬ್ಬರು ತನ್ನ ಧರ್ಮನಡತೆಯನ್ನು ನೋಡ ಬೇಕೆಂಬುವ ಡಂಬವು ಸಹ ಇತ್ತೆಂದು ತೋರುತ್ತದೆ.

ಇದಲ್ಲದೆ ಅವನು ಇನ್ನು ಮೇಲೆ ಅರಸನು ಏನು ಹೇಳಿದಾಗ್ಯೂ ತಾನು ತನ್ನ ತರದವರಾದ ಗುರುವುಗಳ ಅಧಿಕಾರವನ್ನು ಸ್ಥಿರ ಪಡಿಸ ಬೇಕೆಂದು ನಿರ್ಣಯಿಸಿ ಕೊಂಡನು. ಅದಕ್ಕೋಸ್ಕರ ಅವನು ಆ ಪರಿಯಂತರಕ್ಕೂ ಅರಸನಿಗೆ ತೋರಿಸಿದ ತನ್ನ ತಾಳ್ಮೆಯಾದ ನಡತೆಯನ್ನು ಮಾರ್ಪಡಿಸಿ, ಅಹಂಕಾರವಾಗಿ ನಡಿಯ ಪ್ರಾರಂಭಿಸಿದನು. ಶ್ರೇಷ್ಠ ಅಧ್ಯಕ್ಷತ್ವವು ತನಗೆ ದೊರಕಿದ ಕೂಡ್ಲೆ ಶ್ರೇಷ್ಠ ನ್ಯಾಯಾಧಿಪತಿಯ ಉದ್ಯೋಗಕ್ಕೆ ತಕ್ಕ ರೀತಿಗಳನ್ನು ಸರಿಯಾಗಿ ಈಡೇರಿಸುವದು ತನ್ನಿಂದಲಾಗದೆಂದು ಹೇಳಿ, ಆ ಉದ್ಯೋಗವನ್ನು ಬಿಟ್ಟು ಬಿಟ್ಟನು. ಆ ಎರಡು ಉದ್ಯೋಗಗಳನ್ನೂ ಒಬ್ಬನು ಸರಿಯಾಗಿ ಮಾಡುವದು ಕೂಡದ ಕಾರ್ಯ ನಿಜವೇ. ಆದಾಗ್ಯೂ ಅರಸನು ಅವನ ಅಭಿಪ್ರಾಯ ಇಂಥಾದ್ದೆಂದು ತಿಳಿದು, "ಬೇಲಿಗೆ ಹಾಕಿದ ಜಾಲಿ ಕಾಲಿಗೆ ಮುಪ್ಪಾಯಿತು" ಎಂದು ಬಹು ಕೋಪಗೊಂಡು, ಆ ಶ್ರೇಷ್ಠ ನ್ಯಾಯಾಧಿಪತ್ಯವನ್ನು ಅವನು ಬಿಟ್ಟದ್ದರಿಂದ ಅವನಿಗಿದ್ದ ಬೇರೊಂದು ಲೌಕಿಕ ಉದ್ಯೋಗವನ್ನು ಸಹ ತೆಗೆದು ಬಿಟ್ಟನು.

ಅದಕ್ಕಿಂತ ದೊಡ್ಡ ವಾಗ್ವಾದವು ಶೀಘ್ರದಲ್ಲಿ ಉಂಟಾಯಿತು. ಏನಂದರೆ, ನೊರ್ಮನ್ನರು ಇಂಗ್ಲಾಂಡ್ ದೇಶವನ್ನು ಕಟ್ಟಿ ಕೊಳ್ಳುವದಕ್ಕಿಂತ ಮುಂಚೆ ಗುರುವುಗಳು ಏನಾದರೂ ತಪ್ಪುಗಳನ್ನೂ ಅನೀತಿಗಳನ್ನೂ ನಡಿಸಿದ್ದರೆ, ಬಳಿಕೆಯಾದ ನ್ಯಾಯಸ್ಥಳಗಳಲ್ಲಿ ಆ ಸಂಗತಿಯನ್ನು ಕುರಿತು ವಿ

ಚಾರಣೆ ಆಗುವದು. ಮುಂಚಿನ (William) ಉಲ್ಲಿಯಮ್ ಇದನ್ನು ಮಾರ್ಪಡಿಸಿ, ಗುರುಗಳು ತಪ್ಪು ಮಾಡಿದರೆ ಬೇರೆ ಗುರುವುಗಳಿಂದ ಮಾತ್ರ ವಿಚಾರಿಸಲ್ಪಡ ಬೇಕೆಂದು ಅವರಿಗೆ ಸನ್ಮಾನ ಕೊಟ್ಟನು. ಅದರಿಂದ ದೊಡ್ಡ ಕೇಡು ಸಂಭವಿಸಿತು. ಹ್ಯಾಗಂದರೆ, ಅನೇಕ ಗುರುವುಗಳು ನಾನಾ ವಿಧ ಅಪರಾಧಗಳನ್ನು ಮಾಡಿದ್ದಾಗ್ಯೂ ಅನೇಕ ಸಾರಿ ಆ ಅಪರಾಧಗಳಿಗೆ ತಕ್ಕ ದಂಡನೆ ಆಗಲಿಲ್ಲ. ಅದದರಿಂದ ಆ ಮೇರೆಗೆ ಉಂಟಾದ ಅನ್ಯಾಯವೂ ಕೇಡೂ ಎಲ್ಲರಿಗೂ ಚನ್ನಾಗಿ ತಿಳಿದಿತ್ತು.

ಬೆಕೈತ್ ಎಂಬವನು ಶ್ರೇಷ್ಠ ಅಧ್ಯಕ್ಷನಾದ ಸ್ವಲ್ಪ ಕಾಲದ ತರುವಾಯ (Worcestershire) ಒರ್ಸ್ಟರ್‌ಶೈರ್ ಎಂಬ ನಾಡಿನಲ್ಲಿ ಇದ್ದ ಒಬ್ಬ ಗುರುವು ಎರಡು ಸಾರಿ ಬಹು ಅಸಹ್ಯವಾದ ಅಪರಾಧಗಳನ್ನು ಮಾಡಿ ಇದ್ದನು. ಆ ಸಂಗತಿ ನಾಲ್ಕು ಕಡೆಯಲ್ಲಿಯೂ ಬಹು ಪ್ರಸ್ತಾಪವಾಯಿತು. ಹಾಗಿರಲಾಗಿ ಆ ಅಪರಾಧಿಯನ್ನು ಗುರುಗಳಿಗೆ ತಕ್ಕ ಒಂದು ನ್ಯಾಯಸಭೆಯಲ್ಲಿ ತಪ್ಪು ವಿಚಾರಿಸ ಹೋದರು. ಅರಸನು ಅದನ್ನು ತಿಳಿದು, ಆ ಅಪರಾಧಗಳನ್ನು ಸಾಧಾರಣ ನ್ಯಾಯಸಭೆಯವರು ವಿಚಾರಿಸುವಂತೆ ಆ ಗುರುವನ್ನು ನೇಮಿಸಲ್ಪಟ್ಟ ಉದ್ಯೋಗಸ್ಥರ ಕೈಯಲ್ಲಿ ಒಪ್ಪಿಸ ಬೇಕೆಂದು ಆಜ್ಞಾಪಿಸಿದಾಗ, ಶ್ರೇಷ್ಠ ಅಧ್ಯಕ್ಷನು ಅವನನ್ನು ಒಪ್ಪಿಸುವದಿಲ್ಲವೆಂದು ಅಡ್ಡಿ ಮಾಡಿದನು. ಇದನ್ನು ತಿಳಿದು ಅರಸನು ಸಭೆಯ ಅಧ್ಯಕ್ಷರೆಲ್ಲರನ್ನು ತನ್ನ ಆಸ್ಥಾನಮಂಟಪಕ್ಕೆ ಕರೇ ಕಳುಹಿಸಿ "ಪೂರ್ವದಿಂದ ಈ ದೇಶದಲ್ಲಿ ಬಳಿಕೆಯಾಗಿದ್ದ ನಿಬಂಧನೆಗಳ ಪ್ರಕಾರ ನಡಿಯ ನಿಮಗೆ ಮನಸ್ಸುಂಟೋ"? ಎಂದು ಖಂಡಿತವಾಗಿ ಕೇಳಲು, ಒಬ್ಬನು ಹೊರ್ತು ಮಿಕ್ಕಾದವರೆಲ್ಲರೂ "ಗುರುವುಗಳ ಸನ್ಮಾನಕ್ಕೆ ವ್ಯತಿರಿಕ್ತವಾದ ಯಾವದೊಂದು ಕಾರ್ಯಕ್ಕೂ ಸಮ್ಮತಿಸಲಾರೆವು, ಬೇರೆ ನಿಬಂಧನೆಗಳನ್ನೆಲ್ಲಾ ಕೈಕೊಂಡು ನಡಿಯ ನಾವು ಸಮ್ಮತಿಸುವೆವು", ಅಂದರು.

ಈ ಪ್ರಕಾರ ಅವರು ದೇಶನಿಬಂಧನೆಗಳಿಗಿಂತಲೂ ತಮ್ಮ ತರದವರಿಗೆ ತಕ್ಕ ಸನ್ಮಾನವು ದೊಡ್ಡದೆಂದು ಎಣಿಸಿದ್ದರಿಂದ ಅರಸನಿಗೂ ಗುರುಗಳಿಗೂ ಬಹಿರಂಗವಾಗಿ ಭೇದವುಂಟಾಯಿತು. ಆದದರಿಂದ ಅರಸನು (Wiltshire) ವಿಲ್‌ತ್‌ಶೈರ್ ಎಂಬ ನಾಡಿನಲ್ಲಿರುವ (Clarendon) ಕ್ಲಾರೆಂದನ್ ಊ

ರಿನಲ್ಲಿ ಪ್ರಭುಗಳನ್ನು ಕೂಡಿಸಿದನು. ಆ ಸಂಘದವರು ಇಂಗ್ಲಾಂದ್ ದೇಶದಲ್ಲಿ ಮುಂಚೆ ವಾಡಿಕೆಯಾಗಿದ್ದ ನಿಬಂಧನೆಗಳನ್ನು ಪರಿಶೋಧಿಸಿ, ಕೆಲವನ್ನು ಶಿದ್ಧಿ, ಇನ್ನು ಮೇಲೆ ಗುರುಗಳು ಸಹ ಮತ್ತೊಬ್ಬರಂತೆ ಸಾಧಾರಣ ನ್ಯಾಯಸಭೆಗಳಿಗೆ ಒಳ ಪಟ್ಟಿರ ಬೇಕೆಂದು ತೀರ್ಪು ಮಾಡಿದರು. ಈ ತೀರ್ಪುಗಳು "ಕ್ಲಾರೆಂಧನ್ ಊರಿನ ನಿಬಂಧನೆಗಳು" ಎಂದು ಕರೆಯಲ್ಪಡುವವು. ಬೆಕ್ಕೆತ್ ಎಂಬವನು ಮೊದಲು ಆ ನಿಬಂಧನೆಗಳಿಗೆ ತಾನು ಸಮ್ಮತಿಸುವದೇ ಇಲ್ಲವೆಂದು ಒಂದೇ ತೀರ್ಮಾನವಾಗಿ ಹೇಳಿ ಬಿಟ್ಟನು. ಆದಾಗ್ಯೂ ಒಬ್ಬರಿಬ್ಬರ ಹೊರ್ತು ಮಿಕ್ಕಾದವರೆಲ್ಲರೂ ಅರಸನ ಪಕ್ಷವಾಗಿ ಇದ್ದಾರೆಂದು ಕಂಡು, ಆ ನಿಬಂಧನೆಗಳ ಪ್ರಕಾರ ತಾನು ಯಥಾರ್ಥವಾಗಿ ನಡೆದು ಕೊಳ್ಳುತ್ತೇನೆಂದು ಸಂಘದವರ ಮುಂದೆ ಮಾತು ಕೊಟ್ಟನು. ಅದರ ತರುವಾಯ ಅವನು ಮತ್ತೂ ಮನಸ್ಸಿನಲ್ಲಿ ಸಂಶಯ ಪಟ್ಟು, ಬೇರೆ ಅಧ್ಯಕ್ಷರೂ ಪ್ರಭುಗಳೂ ಆ ತೀರ್ಪುಗಳನ್ನು ಬರೆದಿದ್ದ ಪತ್ರಿಕೆಗೆ ಒಪ್ಪಿತ ಹಾಕುವ ಸಮಯದಲ್ಲಿ ತಾನು ಒಪ್ಪಿತ ಹಾಕುವದಿಲ್ಲವೆಂದು ಬೊಂಕಿದನು. ಇದಲ್ಲದೆ ಅವನು ಅರಸನ ಸನ್ನಿಧಿಯಲ್ಲಿ ಬಹಳ ಅಹಂಕಾರ ತೋರಿಸಿದ್ದರಿಂದ ಅರಸನು, "ಇವನು ವ್ಯರ್ಥವಾಗಿ ಕಲಹ ಮಾಡುತ್ತಾ ತಿರುಗುತ್ತಾನೆ", ಎಂದು ಹೇಳಿ, ಬಹು ಮನಸ್ಸು ನೊಂದು ಕೊಂಡು, ತನ್ನಿಂದಲಾದ ಮಟ್ಟಿಗೂ ಅವನನ್ನು ಬಂಧಿಸಿದನು. ದಿನಪರಿಯಲ್ಲಿ ಬೆಕ್ಕೆತನು ಅರಸನ ದಯವನ್ನು ತಿರಿಗಿ ಸಂಪಾದಿಸುವಂತೆ ನಾನಾ ಪ್ರಯತ್ನಗಳನ್ನು ಮಾಡಿದನು. ಮತ್ತು ಅವನು ಮಾಡಿದ ಕಾರ್ಯಗಳನ್ನು ಕುರಿತು ವಿಚಾರಣೆ ಮಾಡುವಂತೆ ಅರಸನು ಗುರುಗಳಲ್ಲದ ಕೆಲವು ನ್ಯಾಯಸಂಘದವರನ್ನು ನೇಮಿಸಿದಾಗ, ಅವನು ಆ ಸಂಘದವರ ಮುಂದೆ ಬಂದು ಅವರ ಅಧಿಕಾರಕ್ಕೆ ಒಳ ಪಟ್ಟು, ಅವರು ಕೇಳಿದ ಪ್ರಶ್ನೆಗಳಿಗೆಲ್ಲಾ ಉತ್ತರ ಕೊಟ್ಟನು. ಇದರಿಂದ ಕ್ಲಾರೆಂದನ್ ಊರಿನ ನಿಬಂಧನೆಗಳನ್ನು ತಾನು ಒಪ್ಪಿ ಕೊಂಡಿದ್ದೇನೆಂದು ತೋರಿಸಿದನು. ಅವನು ಹೀಗೆ ವಿಧೇಯನಾದಾಗ್ಯೂ ಅರಸನ ಕೋಪವು ಶಾಂತವಾಗಲಿಲ್ಲ. ತರುವಾಯ ಅವನು ಅನ್ಯ ದೇಶಕ್ಕೆ ಹೋಗ ತನಗೆ ಅಪ್ಪಣೆಯಾಗ ಬೇಕೆಂದು ಎರಡು ಸಾರ್ತಿ ಕೇಳಿದ್ದಕ್ಕೆ ಅರಸನು ಕೊಡದೆಂದು ತಡೆದನು. ಇದಲ್ಲದೆ ಹೆನ್ರಿ

ಯು ಅವನನ್ನು ಕರೇ ಕಳುಹಿಸಿ, ನೀನು ಶ್ರೇಷ್ಠ ನ್ಯಾಯಾಧಿಪತಿಯಾಗಿದ್ದು ಅಧಿಕಾರ ಮಾಡಿದಾಗ ನೀನು ಮಾಡಿದ ಕಾರ್ಯಗಳನ್ನು ಕುರಿತು ಲೆಖ್ಖ ಕೊಡ ಬೇಕೆಂದು ಆಜ್ಞಾಪಿಸಿದನು. ಇದು ಬಹು ಅನ್ಯಾಯ. ಹ್ಯಾಗಂದರೆ, ಅರಸನೇ ಅವನನ್ನು ಶ್ರೇಷ್ಠ ಅಧ್ಯಕ್ಷನಾಗಿ ನೇಮಿಸಿದ್ದಲ್ಲದೆ, ಇಷ್ಟು ಕಾಲ ಅವನ ಬಳಿಯಲ್ಲಿ ಲೆಖ್ಖ ಕೇಳದೆ ಇದ್ದದ್ದು, ಅವನು ಆ ಉದ್ಯೋಗದಲ್ಲಿ ನೀತಿ ತಪ್ಪದೆ ನಡೆದನೆಂದು ಅರಸನು ಅದು ವರೆಗೂ ನಂಬಿ ಕೊಂಡಿದ್ದನೆಂಬುವದಕ್ಕೆ ಒಳ್ಳೇ ದೃಷ್ಟಾಂತವಾಗಿದೆ. ಆದದರಿಂದ ಅರಸನು ಇನ್ನು ಮೇಲೆ ಬೆಕ್ಕೆತನ ಸಂಗಡ ಯಾವ ವಿಧದಲ್ಲಿಯೂ ಅನ್ಯೋನ್ಯವಾಗಲಾರನೆಂದೂ, ಒಂದು, ಅರಸನು ತನ್ನ ರಾಜ್ಯವನ್ನು ಬಿಟ್ಟು ನಿವರ್ತಿಯಾಗ ಬೇಕು, ಇನ್ನೊಂದು, ಬೆಕ್ಕೆತ್ ತಾನು ಹೊಂದಿದ ಶ್ರೇಷ್ಠತ್ವವನ್ನು ಬಿಟ್ಟು ನಿವರ್ತಿಯಾಗ ಬೇಕು. ಎಂದೂ ಪ್ರತ್ಯಕ್ಷವಾಯಿತು.

ಬೆಕ್ಕೆತನು ಅದನ್ನು ತಿಳುಕೊಂಡು, "ತಾಳಿದವನು ಬಾಳ್ಯಾನು," ಎಂಬ ಗಾದೆಯ ಮೇರೆಗೆ ತನ್ನ ಮೇಲೆ ಬಂದ ಉಪದ್ರಗಳನ್ನು ಸಹಿಸಿಕೊಳ್ಳುವದೇ ಕಾರ್ಯವೆಂದು, ತಾನು ಮುಂಚೆ ಮಾಡಿದ ಪ್ರಯತ್ನಗಳನ್ನೆಲ್ಲಾ ಬಿಟ್ಟು ಬಿಟ್ಟನು. ಅದಕ್ಕೆ ಮುಂಚೆ ವಿವೇಕಹೀನವಾಗಿಯೂ ಅಹಂಕಾರವಾಗಿಯೂ ನಡೆದು, ತನ್ನ ಅರಸನಿಗೆ ವಿರೋಧವಾಗಿ ಕಲಹ ಮಾಡಿ, ತನ್ನನ್ನು ಬಹು ದಯವಾಗಿ ನಡಿಸುತ್ತಾ ಬಂದ ಯಜಮಾನನನ್ನು ಎದುರಿಸಿದನೆಂಬುವದು ನಿಜವೇ. ಆದಾಗ್ಯೂ ಆ ಸಮಯದಲ್ಲಿ ಅವನು ದೃಢವಾಗಿಯೂ ಸ್ವಸ್ಥ ಬುದ್ಧಿಯಿಂದಲೂ ಇದ್ದು, ಅಪತ್ಕಾಲದಲ್ಲಿ ಮನಸ್ಸು ಸಡ್ಲವಾಗದೆ ನೆಲೆ ನಿಂತದ್ದರಿಂದ, ಅದನ್ನು ಕಂಡ ಜನರಿಗೆ ಅವನು ಜಯವೀರನಾಗಿ ತೋರಿದನು. ಒಂದು ದಿವಸ ಅವನು ದೇವಾಲಯಕ್ಕೆ ಬಂದು, ದೈವ ಊಳಿಗಕ್ಕೆ ತಕ್ಕ ಆಚಾರಣೆಗಳನ್ನು ಮಾಡಿದ ತರುವಾಯ ತನ್ನ ಆಚಾರ್ಯವಸ್ತ್ರಗಳನ್ನು ಧರಿಸಿದವನಾಗಿಯೂ, ತನ್ನ ಕೈಯ್ಯಲ್ಲಿ ಶುಭ್ರವಾದಂಥಾ ಬಹು ಅಲಂಕಾರವಾದಂಥಾ ಶಿಲುಬೆಯನ್ನು ಹಿಡಿದು ಕೊಂಡವನಾಗಿಯೂ, ಅರಸನ ಅರಮನೆಗೆ ಹೋಗಿ ಅರಸನ ಮುಂದೆ ನಿಂತು, ಮೇಲೆ ಹೇಳಿದ ವಿಷಯಗಳನ್ನು ಕುರಿತು ತನ್ನ ಮೇಲೆ ಅರಸನಿಗೆ ಏನೂ ಅಧಿಕಾರವಿಲ್ಲವೆಂದೂ, ತಾನು ರೋಮಾಪುರಿಯಲ್ಲಿರು

ವ ಶ್ರೇಷ್ಠ ಅಧ್ಯಕ್ಷನಾದ (Pope) "ಪಾಪು" ಎಂಬವನಿಗೆ ಮೊರೆ ಇಡು ತ್ತೇನೆಂದೂ, ಕ್ಲಾರೆಂಡನ್ ಊರಿನ ನಿಬಂಧನೆಗಳಿಗೆ ತಾನು ಮುಂಚೆ ಸ ಮ್ಮತಿಸಿದ್ದು ದೊಡ್ಡ ತಪ್ಪೆಂದೂ ಹೇಳಿ, ಅನ್ಯ ದೇಶಕ್ಕೆ ಹೋಗುವದಕ್ಕೆ ತ ನಗೆ ಅರಸನು ಅಪ್ಪಣೆ ಕೊಡ ಬೇಕೆಂದೂ ಕೇಳಿದನು. ಹೀಗೆ ಹೇಳಿದ ಮೇಲೆ ಆಕ್ಷೇಪಣೆ ಇಲ್ಲದೆ ರಾಜಸಭೆಯನ್ನು ಬಿಟ್ಟು ಹೋದನು.

ಅವನು ಆ ದೇಶವನ್ನು ಬಿಟ್ಟು ಹೋಗುವದಕ್ಕೆ ಅರಸನು ಒಂದು ಕಾಲಕ್ಕೂ ಅಪ್ಪಣೆ ಕೊಡಲಾರನು. ಆದರೆ ಅವನು ವೇಷ ಬದಲಾಯಿ ಸಿ ಕೊಂಡು, ಚಿಕ್ಕ ದೋಣಿಯಲ್ಲಿ ಹತ್ತಿ, (British Channel) ಬ್ರಿಶಿಷ್ ಗೊಂದಿ ಎಂಬ ಸಮುದ್ರವನ್ನು ದಾಟಿ, (Pontigny) ಪೊಂಶಿಗ್ನಿ ಎಂಬ ಸ್ಥಳದಲ್ಲಿರುವ ಮಠದಲ್ಲಿ ಶೇರಿ, ಆರು ವರುಷದ ಮಟ್ಟಿಗೂ ಅಲ್ಲಿ ತಂಗಿ ದನು. ಅವನು ಹೀಗೆ ಆಶ್ರಯ ಹೊಕ್ಕಿದಾಗ್ಯೂ ಇನ್ನೂ ಆ ಹೋರಾ ಟವನ್ನು ಬಿಡದೆ, ತನ್ನನ್ನು ಎದುರಿಸುವವರನ್ನು ಸಭೆಗೆ ಹೊರಗೆ ಮಾಡಿ, ತನ್ನ ಕಡೆ ಶೇರಿದವರಿಗೆ ಬಹು ವೈರಾಗ್ಯವುಳ್ಳ ನಿರೂಪಗಳನ್ನು ಬರೆದು, ಅ ವರನ್ನು ಧೈರ್ಯ ಪಡಿಸುತ್ತಾ ಬಂದನು.

ಹೀಗಿರಲಾಗಿ ಆರು ವರುಷಗಳ ತರುವಾಯ ಆ ಇಬ್ಬರೂ ಸಮಾ ಧಾನವಾದರು. ಆ ಮೇಲೆ ಇಂಗ್ಲಾಂಡ್ ದೇಶಕ್ಕೆ ತಿರಿಗಿ ಬರ ಬಹುದೆಂ ದು ಬೆಕ್ಕೆಶಿಗೆ ಅಪ್ಪಣೆಯಾಯಿತು. ಅವನು ಮನ್ನಣೆ ಕೇಳಿದ ಅಪರಾ ಧಿಯಂತೆ ಬಾರದೆ ಜಯಶಾಲಿಯಾದ ಅರಸನಂತೆ (Kent) ಕೆನ್ತ್ ನಾ ಡಿನಲ್ಲಿ ಇಳಿದು, ಆ ನಾಡಿನ ಮಾರ್ಗವಾಗಿ ಜಯಾಲಂಕಾರವಾಗಿ ಲಂ ದನ್ ಪಟ್ಟಣದ ಮಟ್ಟಿಗೂ ಸ್ವಾರಿ ಹೋದನು. (York) ಯೊರ್ಕ್ ಪ ಟ್ಟಣದ ಶ್ರೇಷ್ಠ ಅಧ್ಯಕ್ಷನೂ ಇನ್ನೂ ಇಬ್ಬರು ಅಧ್ಯಕ್ಷರೂ ಅವನು ಕೊಟ್ಟ ಕಟ್ಟಳೆಯ ಮೇರೆಗೆ ನಡಿಯದೆ ಇದ್ದದರಿಂದ, ಅವರನ್ನು ಸಭೆಗೆ ಹೊರ ಗೆ ಹಾಕಿದ್ದಲ್ಲದೆ, ಅನ್ಯ ದೇಶಕ್ಕೆ ಓಡಿ ಹೋಗುವದಕ್ಕಿಂತ ಮುಂಚೆ ಮಾಡಿ ದ ಅನಿಷ್ಟಗಳಿಗಿಂತ ಅಧಿಕವಾದ ಅನಿಷ್ಟ ಕಾರ್ಯಗಳನ್ನು ಮಾಡುತ್ತಾ ಬಂದನು.

ಸಭೆಯಿಂದ ತಳ್ಳಲ್ಪಟ್ಟ ಆ ಅಧ್ಯಕ್ಷರು ಸಂಗಡಲೇ ನೊರ್ಮಂಡಿ ದೇಶಕ್ಕೆ ಹೋಗಿ, ಬೆಕ್ಕೆತ್ ಎಂಬವನು ಮಾಡಿದ ಅನ್ಯಾಯಗಳನ್ನೂ ಅಹಂ

ಕಾರವಾದ ನಡತೆಯನ್ನೂ ಕುರಿತು ಆ ಕಾಲದಲ್ಲಿ ಅಲ್ಲಿ ವಾಸ ಮಾಡು ತ್ತಿದ್ದ ತಮ್ಮ ಅರಸನಿಗೆ ಮೊರೆ ಇಟ್ಟರು. ಅರಸನಾದ ಹೆನ್ರಿಯು ಬೆಕೆತ ನು ಹೀಗೆ ತನಗೆ ನಿಂದೆಯಾಗಿ ಮಾಡಿದ ಈ ವರ್ತಮಾನವನ್ನೆಲ್ಲಾ ಕೇ ಳಿದ ಸಂಗಡಲೇ ಬಹು ರೌದ್ರವುಳ್ಳವನಾಗಿ, "ನನ್ನ ಆಸ್ಥಾನದಲ್ಲಿ ಸುಮ್ಮ ನೆ ನಿಲ್ಲುವ ರಾಜಸಭೆಯಲ್ಲಿ ಒಬ್ಬನಾದರೂ ಈ ಚಂಡಿಖೋರನಾದ ಗುರುವನ್ನು ನಿವರ್ತಿ ಮಾಡ ತೃಣೀಕರಿಸನೋ? ನನ್ನ ಪಕ್ಷದಲ್ಲಿ ಒಬ್ಬ ನೂ ಇಲ್ಲವೋ?" ಎಂದು ಕೋಪದಿಂದ ಒಂದು ಮಾತು ಹೇಳಿದನು. ಈ ಮಾತನ್ನು ಆಸ್ಥಾನದಲ್ಲಿದ್ದ ನಾಲ್ಕು ಮಂದಿ ಕೇಳಿ, "ಶ್ರೇಷ್ಠ ಅಧ್ಯ ಕ್ಷನನ್ನು ಕೊಲ್ಲುವದು ನಮ್ಮ ಅರಸನಿಗೆ ಪ್ರೀತಿಯಾಗಿರುವದಲ್ಲವೋ? ಹಾಗೆಯೇ ಮಾಡುವ," ಎಂದು ರಹಸ್ಯವಾಗಿ ಮಾತಾಡಿ ಕೊಂಡು, ತ ರುವಾಯ ಸಂಗಡಲೇ ಹೊರಟು, ಬೇರೆ ಬೇರೆ ಮಾರ್ಗಗಳಾಗಿ ಇಂಗ್ಲಾಂ ದಿಗೆ ಹೋಗಿ ಸೇರಿ, ಕಾಂತರ್ಬರಿ ಪಟ್ಟಣದ ಬಳಿಯು ಒಂದಾಗಿ ಕೂಡಿ, ಶ್ರೇ ಷ್ಠಾಧ್ಯಕ್ಷನ ಮನೆಯೊಳಗೆ ಹೊಕ್ಕು, ಅವನನ್ನು ಕಂಡು, ನೀನು ಅರಸನಿಗೆ ವ್ಯತಿರಿಕ್ತನಾಗಿ ನಡೆದದ್ದೂ ಅಲ್ಲದೆ ಈ ಮೂರು ಮಂದಿ ಅಧ್ಯಕ್ಷರನ್ನು ಸಭೆಯಿಂದ ತಳ್ಳಿ ಬಿಟ್ಟಿಯೆ; ಅವರನ್ನು ಮತ್ತೂ ಸಭೆಯಲ್ಲಿ ಸೇರಿಸಿ ಕೊ ಳ್ಳದೆ ಇದ್ದರೆ, ನೀನು ಮಾಡಿದ ಅನೀತಿಗೆಲ್ಲಾ ನಿನಗೆ ಆಜ್ಞೆ ಬರುವದು ಎಂದು ಹೇಳಿ ಭಯ ಪಡಿಸಿದರು.

ಅವರು ಹೀಗೆ ಹೇಳಿ ಹೋಗಿ ಬಿಟ್ಟ ತರುವಾಯ, ಬೆಕೆತ್ ಎಷ್ಟು ಮಾತ್ರವೂ ಮನಸ್ಸು ಚಲಿಸದೆ ಮುಂಚಿನ ಹಾಗೆಯೇ ತನ್ನ ಅಂತಸ್ತಿಗೆ ತಕ್ಕ ಕೆಲಸಗಳನ್ನು ಮಾಡಿ, ಬಳಿಕೆಯ ಪ್ರಕಾರ ಸಾಯಂಕಾಲದ ಆರಾಧನೆ ಮಾಡುವ ವೇಳೆಯಲ್ಲಿ ಪ್ರಧಾನ ದೇವಾಲಯಕ್ಕೆ ಹೋದನು. ಹೀಗೆ ದೇವಾರಾಧನೆ ಮಾಡ ಪ್ರಾರಂಭಿಸಿದ ಸಮಯದಲ್ಲಿ ಶ್ರೇಷ್ಠ ಅಧ್ಯಕ್ಷನು ತನ್ನ ನಿಲುವಂಗಿ ಮೊದಲಾದ ಅಲಂಕಾರವಸ್ತ್ರಗಳನ್ನು ಧರಿಸಿ ಕೊಂಡವ ನಾಗಿ, ಬಲಿಪೀಠದ ಬಳಿಯಲ್ಲಿ ನಿಂತಿರಲು, ಸಂಗೀತಗಾರರು ದೇವಸ್ತುತಿ ಯನ್ನು ಹಾಡ ಪ್ರಾರಂಭಿಸಿ, ಆ ಮೃದುವಾದ ಕಂಠಧ್ವನಿಯು ದೇವಭ ಕ್ತರ ಮನಸ್ಸನ್ನು ಆಕರ್ಷಿಸಿ ಕೊಳ್ಳುವಂತೆ ಕಿವಿಯೊಳಗೆ ಹೋಗುವ ಸಮ ಯದಲ್ಲಿ, ಇಗೋ! ಸರ್ವಾಯುಧಕವಚವರ್ಗವನ್ನು ಧರಿಸಿ ಕೊಂಡ ಆ

ಸಂಧಿ 6. ಬೆಕ್ಕೆತ್ ಕೊಲ್ಲಲ್ಪಟ್ಟದ್ದೂ ಅರಸನು ದುಃಖ ಪಟ್ಟದ್ದೂ.

ನಾಲ್ಕು ಮಂದಿ ಯುದ್ಧವೀರರು ಗಂಟುಮುಖದಿಂದ ಬಲವಂತವಾಗಿ ದೇವಾಲಯದೊಳಗೆ ಪ್ರವೇಶಿಸಿ, ರಾಜದ್ರೋಹಿ ಎಲ್ಲಿ? ಎಂದು ಘಟ್ಟಿಯಾಗಿ ಕೂಗಿದರು. ಅದನ್ನು ಕೇಳಿ ದೇವಾಲಯದಲ್ಲಿದ್ದವರೆಲ್ಲರೂ ಮೌನವಾಗಿದ್ದರು. ತರುವಾಯ ಶ್ರೇಷ್ಠ ಅಧ್ಯಕ್ಷನು ಎಲ್ಲಿ? ಎಂದು ಕೂಗಿದರು. ಅದಕ್ಕೆ ಬೆಕ್ಕೆತ್—ರಾಜದ್ರೋಹಿ ಒಬ್ಬನೂ ಇಲ್ಲಿ ಇಲ್ಲ; ಶ್ರೇಷ್ಠ ಅಧ್ಯಕ್ಷನು, ಇಗೋ, ಇದ್ದಾನೆ ಅಂದನು. ಅವನು ಹಾಗೆ ಹೇಳಿದಾಗಲೇ ಅವರು ಸಮೀಪಿಸಿ ಬಂದು ಗುಬಾರು ಮಾಡ ಪ್ರಾರಂಭಿಸಿದ್ದರಿಂದ, ಅವನ ಪಕ್ಷದವರು ಬಂದು, ನೀನು ಈಗ ತೊಲಗಿ ಹೋಗಿ ಎಲ್ಲಿ ಆದರೂ ಸ್ವಲ್ಪ ಹೊತ್ತು ಅಡಗಿ ಕೊಂಡಿರ ಬೇಕೆಂದು ಅವನನ್ನು ಬಲವಂತ ಮಾಡಿದ್ದಕ್ಕೆ, ಅವನು ಹ್ಯಾಗೂ ನನ್ನನ್ನು ಕೊಲ್ಲುವದಕ್ಕೆ ಬಂದಿದ್ದಾರೆ; ನಾನು ಇಲ್ಲಿಯೇ ಇದ್ದು ಕೊಂಡು ಸಾಯುತ್ತೇನೆ, ಎಂದು ಒಂದೇ ಮನಸ್ಸಾಗಿ ಹೇಳಿದನು. ಆ ನಿಮಿಷದಲ್ಲಿಯೇ ಕೊಲೆಗಾರನು ಒಬ್ಬನು ಅವನನ್ನು ಒಂದು ದೆಬ್ಬೆ ಹೊಡಿಯಲಾಗಿ, ಅವನು ಕೆಳಗೆ ಬಿದ್ದನು. ಸಂಗಡಲೇ ಅವನು ಮೋಣಕಾಲು ಮೇಲೆ ನಿಂತು ಬಹು ಶಾಂತವಾಗಿ ತಲೆಯನ್ನು ಬೊಗ್ಗಿಸಿ ಪ್ರಾರ್ಥಿಸುತ್ತಾ ಇರುವಲ್ಲಿ, ಅವರು ಪೀಠದ ಮುಂದೆ ಅವನನ್ನು ಕತ್ತಿಯಿಂದ ಶಿಪಿಯಲು ಅವನು ಹಂಶಗಳ ಮೇಲೆ ಬಿದ್ದು ಸತ್ತನು.

ಅರಸನು ಈ ಕ್ರೂರವಾದ ಕೊಲೆಯನ್ನು ಕುರಿತು ವರ್ತಮಾನ ಕೇಳಿದ ಕೂಡ್ಲೆ ಬಹು ಕಳವಳ ಪಟ್ಟು, ಆ ಕೊಲೆಗಾರರು ಮಾಡಿದ ಮೋಸವು ತನಗೆ ಏನೂ ತಿಳಿಯದೆಂದೂ, ಅವರು ಮಾಡಿದ ಕಾರ್ಯವು ತನಗೆ ಬಹು ಮನಸ್ತಾಪವಾದದ್ದೆಂದೂ, ದೃಢವಾಗಿ ಹೇಳಿದ ಮೇಲೆ, ಪಾಪು ಎಂಬ ಶ್ರೇಷ್ಠ ಗುರುವು ಆ ಮಹಾ ಪಾತಕವು ಅರಸನ ಒಡಂಬಡಿಕೆಯಿಂದ ಮಾಡಲ್ಪಟ್ಟಿತೆಂಬ ಸಂಶಯ ನಿವರ್ತಿಯಾಗುವದಕ್ಕೆ ಕೊಲ್ಲಲ್ಪಟ್ಟ ಬೆಕ್ಕೆತನ ಸಮಾಧಿಯ ಬಳಿಯಲ್ಲಿ ತಪಸ್ಸು ಮಾಡ ಹೇಳಿ, ಪಾಪವಿಮೋಚನೆಯನ್ನು ಪ್ರಕಟ ಮಾಡಿದನು.

ಬೆಕ್ಕೆತ್ ಎಂಬವನ ಗುಣಾಗುಣಗಳನ್ನು ಕುರಿತು ಬಹಳ ಮಂದಿ ಬಹಳ ವಿಧಗಳಾಗಿ ಎಣಿಸಿ ಇದ್ದಾರೆ. ಕೆಲವರು ಅವನನ್ನು ಮಹಾ ಶುದ್ಧನೆಂದು ಅನ್ನುವರು. ಕೆಲವರು ಅವನನ್ನು ರಾಜದ್ರೋಹಿ ಅನ್ನುವರು.

ಬಹಳ ಮಂದಿ ಅವನ ಚರಿತ್ರೆಯನ್ನು ನಿಧಾನಿಸುವಾಗ ಅವನು ಕಪಟವಿಲ್ಲದೆ ತನ್ನ ಕೆಲಸಗಳನ್ನು ಈಡೇರಿಸ ಮನಸ್ಸು ಮಾಡಿದನೆಂದು ಒಪ್ಪಿಕೊಂಡಾಗ್ಯೂ, ಕಲಹ ಮಾಡುವದೂ, ಅಹಂಕಾರವಾಗಿ ನಡಿಯುವದೂ, ಕ್ರಿಸ್ತನ ಮಾರ್ಗದಲ್ಲಿ ಶೇರಿದವರಿಗೆ ಎಂದಿಗೂ ಸರಿಯಲ್ಲದವುಗಳಾದದರಿಂದ ಅವನನ್ನು ಶುದ್ಧನೆಂಬುವದು ತಕ್ಕದಲ್ಲ ಎಂದು ಹೇಳುತ್ತಾರೆ.

ಮೇಲೆ ಹೇಳಿದ ಸಂಗತಿಗಳ ತರುವಾಯ ಅರಸನು (Ireland) ಐರ್ಲಾಂದಿನ ಮೇಲೆ ದಂಡೆತ್ತಿ ಕೊಂಡು ಹೋದನು. ಅದಕ್ಕೆ ಕಾರಣವೇನಂದರೆ, ಆ ದ್ವೀಪದವರು ಆ ಕಾಲದಲ್ಲಿ ಅಧಿಕ ದುಷ್ಟ ಜನರಾಗಿದ್ದರು. ಐದನೇ ಶತಸಂವತ್ಸರದಲ್ಲಿ ಅವರು (St. Patrick) ಪಾತ್ರಿಕ್ ಎಂಬ ಮಹಾ ಮುನಿಯು ಮಾಡಿದ ಉಪದೇಶವನ್ನು ಕೇಳಿ, ಕ್ರಿಸ್ತನ ಮಾರ್ಗದಲ್ಲಿ ಶೇರಿದ್ದರಿಂದ ಆ ದೇಶವು ದೇವಭಕ್ತಿಯಿಂದಲೂ ವಿದ್ಯಾಸಾಮರ್ಥ್ಯದಿಂದಲೂ ಬಹಳ ಅಲಂಕಾರ ಹೊಂದಿತ್ತು. ತರುವಾಯ ಅದು ಮುಂಚಿನ ಸ್ಥಿತಿ ತಪ್ಪಿ ಕೆಟ್ಟು ಹೋದದರಿಂದ ಅಲ್ಲಿದ್ದವರು ಬಹು ಕೆಟ್ಟವರಾಗಿ ಒಬ್ಬರ ಸಂಗಡಲೊಬ್ಬರು ನಿತ್ಯವೂ ಸ್ವಲ್ಪ ಕಾರಣಕ್ಕೆಲ್ಲಾ ಜಗಳ ಮಾಡುತ್ತಾ ಬಂದರು. ಮತ್ತು ನಾಲ್ಕು ಕಡೆಯಲ್ಲಿಯೂ ಗಲಿಬಿಲಿಯಾಗಿತ್ತು. ಎರಡನೇ ಹೆನ್ರಿಯು ಆಳಿದ ಕಾಲದಲ್ಲಿ ಐರ್ಲಾಂದಿನಲ್ಲಿ (Dermot) ದೆರ್ಮೊತ್ ಎಂಬುವ ಚಿಕ್ಕ ಅರಸನೊಬ್ಬನು ತನ್ನ ಪ್ರಜೆಗಳಿಂದ ಹೊರಡಿಸಲ್ಪಟ್ಟಿದ್ದರಿಂದ ಇಂಗ್ಲಾಂದ್ ಅರಸನ ಬಳಿಯಲ್ಲಿ ಸಹಾಯ ಹುಡುಕ ಬಂದನು. ಹೆನ್ರಿಯು ತನ್ನ ರಾಜ್ಯದವರು ಅದೇ ಮೇರೆಗೆ ಅವನಿಗೆ ಸಹಾಯ ಮಾಡ ಬಹುದೆಂದು ಅಪ್ಪಣೆ ಕೊಡಲಾಗಿ (Pembroke) ಪೆಂಬ್ರೋಕ್ ಪಟ್ಟದ ಪ್ರಭುವಾದ (Strongbow) ಸ್ಟ್ರಾಂಗ್‌ಬೋ * ಎಂದು ಕರೆಯಲ್ಪಟ್ಟವನೂ, ಬೇರೆ ರಾಹುತವೀರಶ್ರೇಷ್ಠರೂ ಹೊರಡಿಸಲ್ಪಟ್ಟಿದ್ದ ಧೊರೆಗೆ ಸಹಾಯ ಮಾಡುವ ನಿಮಿತ್ತ ಅವನ ಸಂಗಡ ಐರ್ಲಾಂದಿಗೆ ಹೋದಾಗ ಇಂಗ್ಲಿಷಿನವರಾದ ಹನ್ನೆರಡು ಮಂದಿಯು ಐರ್ಲಾಂದಿನವರ ಸೈನ್ಯವನ್ನೆಲ್ಲಾ ಮುರಿಯ ಬಡಿದರು. ಈ ಪ್ರಕಾರ ದೆರ್ಮೊತ್ ಎಂಬ ಧೊರೆಯು ಮತ್ತೂ ತನ್ನ ಶೀಮೆಯನ್ನು ವ

* Strongbow=ಬಿಲ್ಲಿನಲ್ಲಿ ಸಮರ್ಥನು.

ಶ ಮಾಡಿ ಕೊಂಡನು. ಅದರ ತರುವಾಯ ಹೆನ್ರಿಯು ದೊಡ್ಡ ಸೈನ್ಯವನ್ನು ಕೂಡಿಸಿ, ಆ ಸ್ಥಳಕ್ಕೆ ಹೋಗಿ, ಸುಲಭವಾಗಿ ಅದನ್ನು ಕಟ್ಟಿ ಕೊಂಡು, ಕೆಲವು ನಾಡುಗಳನ್ನು ಸಂಚರಿಸಿ ನೋಡಿ ಕೊಂಡು, ತನ್ನ ಕಡೆಯವರಾದ ಕೆಲವರನ್ನು ಅಲ್ಲಿ ಅಧಿಕಾರಿಗಳಾಗಿ ಇರಿಸಿ, ನೊರ್ಮಂದಿ ದೇಶಕ್ಕೆ ತಿರಿಗಿ ಹೋದನು. ಈ ಪ್ರಕಾರ ಐರ್ಲಾಂಡ್ ಎಂಬ ದ್ವೀಪವು ಇಂಗ್ಲಾಂಡ್ ರಾಜ್ಯಕ್ಕೆ ಶೇರಿಸಲ್ಪಟ್ಟಿತು. ಆದಾಗ್ಯೂ (Elizabeth) ಇಲಿಸಬೇಥ್ ಎಂಬ ರಾಣಿಯು ಆಳಿದ ಕಾಲದಲ್ಲಿ ಯಥಾರ್ಥವಾಗಿ ಆ ದೇಶದವರು ಒಳ ಪಟ್ಟರೇ ಹೊರ್ತು ಅದಕ್ಕೆ ಮುಂಚೆ ಹೆಸರಿಗೆ ಮಾತ್ರ ಇಂಗ್ಲಾಂಡಿಯರಿಗೆ ಒಳ ಪಟ್ಟಿದ್ದರು.

ಹೆನ್ರಿ ಅರಸನ ಮೂವರು ಕುಮಾರರು ಮಾಡಿದ ಕಲಹದಿಂದ ಅವನು ಆಳಿದ ಕಡೇ ವರುಷಗಳಲ್ಲಿ ಅಧಿಕ ತೊಂದರೆ ಉಂಟಾಯಿತು. ಆ ಕುಮಾರರಲ್ಲಿ (Henry) ಹೆನ್ರಿ, (Richard) ರಿಚಾರ್ಡ್, (Geoffrey) ಜೆಫ್ರೆ ಎಂಬ ಹಿರೀ ಮಕ್ಕಳು ಅವನಿಗೆ ವಿರೋಧವಾಗಿ ಆಗಾಗ್ಯೆ ಕೇಡಾಲೋಚನೆ ಮಾಡಿದರು. ಅದಕ್ಕೆ ಫ್ರಾನ್ಸ್ ದೇಶದ ಅರಸನು ಅವರು ಮಾಡಿದ ಅನುಚಿತವಾದ ಪ್ರಯತ್ನಕ್ಕೆ ಸಹಾಯವಾಗಿದ್ದದಲ್ಲದೆ, ಅವರ ತಾಯಿ ಸಹ ಅವರನ್ನು ಕಲಹ ಮಾಡ ಎಬ್ಬಿಸಿ ಬಿಟ್ಟಳು.

ಮೇಲೆ ಹೇಳಿದ ಪ್ರಕಾರ ರಾಜಕುಮಾರರು ಗದ್ದಲ ಮಾಡುವಾಗ ಒಂದು ದಿವಸ ಹೆನ್ರಿ ಎಂಬ ರಾಜಕುಮಾರನು ಸತ್ತು ಹೋದನು. ಮರಣ ಸಮಯದಲ್ಲಿ ತನ್ನ ತಂದೆಗೆ ತಾನು ಮಾಡಿದ ಅಪಹಾರವನ್ನು ಕುರಿತು ನಿಶ್ಚಯವಾಗಿ ಮನಸ್ತಾಪ ಪಟ್ಟನು. ಆ ಸಂಗತಿಯ ತರುವಾಯ ಅರಸನು ಶಿಲುಬೆಯುದ್ಧಸ್ಥರ ಸಂಗಡ ಶೇರಿ ಕೊಂಡು, (Saladin) ಸಾಲದೀನ್ ಎಂಬ ಪರಾಕ್ರಮವುಳ್ಳ ಮಹಮ್ಮದಿಯರ ಅರಸನ ಕೈವಶದಲ್ಲಿದ್ದ (Jerusalem) ಯೆರೂಸಲೇಮು ಪಟ್ಣವನ್ನು ಹಿಡಿದು ಕೊಳ್ಳುವದಕ್ಕೆ ಯುರೋಪಿನ ಮುಖ್ಯವಾದ ಯುದ್ಧವೀರರ ಸಂಗಡ ಶೇರಿ ಕೊಂಡು ಹೋಗ ನಿಶ್ಚಯಿಸಿ ಕೊಂಡಿರುವ ಕಾಲದಲ್ಲಿ ರಿಚಾರ್ಡ್ ಎಂಬ ಪಟ್ಟದರಸನು ಅವನಿಗೆ ವಿರೋಧವಾಗಿ ಕಲಹ ಮಾಡಿದ್ದರಿಂದ ಅವನು ನೆನಸಿದ ಕಾರ್ಯಕ್ಕೆ ಅಡ್ಡಿಯಾಯಿತು. ಇದಲ್ಲದೆ ಅವನಿಗೆ ಬಹು ಪ್ರೀತಿಯುಳ್ಳವನಾದ (John) ಯೋ

ಹಾನನೆಂಬ ಚಿಕ್ಕ ಮಗನು ಸಹ ಕಲಹಗಾರರ ಸಂಗಡ ಶೇರಿ ಕೊಂಡನೆಂದು ಅವನಿಗೆ ಒಂದು ದಿವಸ ವರ್ತಮಾನ ಬಂದಾಗ, ಅವನ ಮನಸ್ಸು ಕರಿಯಾಗಿ ಬಹು ಕೋಪಗೊಂಡು, ಹೀಗೆ ತನಗೆ ಅಪಹಾರ ಮಾಡಿದ ಕುಮಾರರೆಲ್ಲರನ್ನು ಶಪಿಸಿದನು. ಅದರ ನಿಮಿತ್ತ ಉಂಟಾದ ಮನೋವ್ಯಸನದಿಂದ ಅವನಿಗೆ ಕಡು ಜ್ವರ ಉಂಟಾಗಿ ಎರಡು ಮೂರು ದಿನಗಳೊಳಗೆ ಸತ್ತು ಹೋದನು.

ಅವನು ಹೀಗೆ ಮರಣಾವಸ್ಥೆ ಪಡುವ ಸಮಯದಲ್ಲಿ ಪರಿಜನರೆಲ್ಲರೂ ಅವನನ್ನು ಬಿಟ್ಟು ಓಡಿ ಹೋದರು. ಮತ್ತು ಅವನು ಸತ್ತ ತರುವಾಯ ಅವನ ಹೆಣವನ್ನು ಒಬ್ಬರೂ ಲಕ್ಷ್ಯ ಮಾಡದೆ, ಸತ್ತ ಸ್ಥಳದಲ್ಲಿಯೇ ಬಿದ್ದಿರುವಂತೆ ಬಿಟ್ಟರು. ಇದರಿಂದ ಆ ಮಹಾ ಅರಸನಿಗೆ ಅಧಿಕ ಧನವೂ ಅಧಿಕಾರವೂ ಉಂಟಾಗಿದ್ದಾಗ್ಯೂ ಎಲ್ಲಾ ಪ್ರಾಣಿಗಳಿಗೂ ಪ್ರಾಣವಾಗಿರುವ ಪ್ರೀತಿ ಎಂಬುವದು ಅವನಲ್ಲಿ ಇರಲಿಲ್ಲವೆಂದು ಚನ್ನಾಗಿ ತೋರುತ್ತದೆ. ಆದಾಗ್ಯೂ ರಿಚಾರ್ಡ್ ಎಂಬ ಅರಸುಕುಮಾರನು ತನ್ನ ತಂದೆಯು ಸತ್ತ ವರ್ತಮಾನ ಕೇಳಿದ ಕೂಡಲೆ ಅವನ ಪ್ರೇತವು ಬಿದ್ದಿದ್ದ ಕೊಠಡಿಗೆ ತ್ವರೆಯಾಗಿ ಹೋಗಿ ಮಂಚದ ಬಳಿಯಲ್ಲಿ ಮೊಣಕಾಲಿನ ಮೇಲೆ ನಿಂತು ತನ್ನ ತಂದೆಗೆ ತಾನು ಬರ ಮಾಡಿದ ಉಪದ್ರಗಳನ್ನೆಲ್ಲಾ ನೆನಸಿ ಕೊಂಡು ಮನಸ್ತಾಪ ಪಟ್ಟು, ನನ್ನ ಕೆಟ್ಟ ನಡತೆಯಿಂದ ನನ್ನ ತಂದೆಯ ಹೃದಯವು ನಶಿಸಿ ಸತ್ತು ಹೋದನೆಂದು ಮನ ನೊಂದು ಅತ್ತನು.

# CHAPTER VII.

## RICHARD THE LION-HEARTED, AND COWARDLY KING JOHN.

FROM A. D. 1189 TO A. D. 1216.

## 7 ಸಂಧಿ.

## ಸಿಂಹದ ಹೃದಯವುಳ್ಳ ರಿಚಾರ್ಡ್, ಹೇಡಿತನವುಳ್ಳ ಯೋಹಾನನು, ಎಂಬ ಅರಸರ ಧೊರೆತನ.

ಕ್ರಿ. ಶ. 1189 ಮೊದಲು ಕ್ರಿ. ಶ. 1216 ವರೆಗೂ.

ಮುಖ್ಯ ತಾರೀಖುಗಳು: (Richard I) 1ನೇ ರಿಚಾರ್ಡ್ ಕ್ರಿ. ಶ. 1157 ಹುಟ್ಟಿದ್ದು; ಕ್ರಿ. ಶ. 1189—1199 ಆಳಿದ್ದು; ಶಿಲುಬೆಯುದ್ಧಕ್ಕೆ ಹೋದದ್ದು ಕ್ರಿ. ಶ. 1190; (John) ಯೋಹಾನನು ಕ್ರಿ. ಶ. 1166 ಹುಟ್ಟಿದ್ದು; ಕ್ರಿ. ಶ. 1199—1216 ಆಳಿದ್ದು; (Magna Charta) ಮಗ್ನಚಾರ್ತಕ್ಕೆ ರುಜು ಹಾಕಿದ್ದು 19 ಜೂನ್ 1215. ಅದೇ ಕಾಲದ ಇಂಧ್ಯ ಚರಿತ್ರೆ: ಪೂರ್ವದ ಮಹಮ್ಮದೀನವರು ಜಯಿಸಿದ್ದು. ಶ್ರೇಷ್ಟ ನಾಮಗಳು: ಸಾಲದೀನ್ ಕ್ರಿ. ಶ. 1137—1193; ಪ್ರಧಾನ ಅಧ್ಯಕ್ಷನಾದ (Langton) ಲಾಂಗ್ತನ್ ಕ್ರಿ. ಶ. 1151—1228, ಈತನು ಇಂಗ್ಲಿಷ್ (Bible) ಬೈಬಿಲ್ ಪುಸ್ತಕವನ್ನು ಸಂಧಿಗಳಾಗಿಯೂ ವಚನಗಳಾಗಿಯೂ ಭಾಗಿಸಿದನು.

ಹಿಂದಿನ ಸಂಧಿಯಲ್ಲಿ ಹೇಳಿದ ವರ್ತಮಾನಗಳ ತರುವಾಯ ಮೊದಲನೇ ರಿಚಾರ್ಡನು ಸಿಂಹಾಸನದ ಮೇಲೆ ಹತ್ತಿದನು. ಅವನು ಆ ಕಾಲದಲ್ಲಿದ್ದ ಎಲ್ಲರಿಗಿಂತಲೂ ವೀರಶ್ರೇಷ್ಠನಾಗಿ ಖ್ಯಾತಿ ಹೊಂದಿದ್ದನು. ಶಿಲುಬೆಯುದ್ಧಸ್ಥರಾದ ವೀರರೊಳಗೆ ಅವನು ಶ್ರೇಷ್ಠ ವೀರನಾಗಿದ್ದನು. ದೇಹಪ್ರಮಾಣದಲ್ಲಿ ಎಲ್ಲರಿಗಿಂತಲೂ ಎತ್ತರವಾದವನೂ ಯುದ್ಧದಲ್ಲಿ ಬಹು ವಾಂಛೆಯುಳ್ಳವನೂ ಬಹು ದಯಾಳ ಗುಣವುಳ್ಳವನೂ ಆಗಿದ್ದ

ನು. ಆದಾಗ್ಯೂ ಅವನು ಆತುರವೂ ತ್ವರಿತವೂ ಉಳ್ಳವನಾದದ ರಿಂದ, ಅವನು,

"ಯೋಚಿಸಿ ಕಾರ್ಯವ ಮಾಡಲದು ಜ್ಞಾನಂ
ಯೋಚಿಸದೆ ಮಾಡಿದರದು ಜ್ಞಾನಶೂನ್ಯಂ"

ಎಂಬುವದನ್ನು ನೆನಸದೆ ಅನೇಕ ಸಾರಿ ವಿವೇಕಹೀನವಾದ ಕಾರ್ಯಗಳನ್ನು ಮಾಡುವನು. ಧನುರ್ವಿದ್ಯೆದಲ್ಲಿ ಶೂರನಾಗಿದ್ದದ್ದು ಅಲ್ಲದೆ ಕವಿತ್ವ ಮಾಡಲೂ ಸಂಗೀತ ಹಾಡಲೂ ಬಲ್ಲವನಾಗಿದ್ದನು. ರಣರಂಗದಲ್ಲಿ ತುತೂರಿಯ ಧ್ವನಿ ಕೇಳಿದ ಸಂಗಡಲೇ ಎರಡು ಕಣ್ಣುಗಳಲ್ಲಿಯೂ ಉರಿ ಏಳುವಂತೆಯೂ ಮನ ಉಕ್ಕುವಂತೆಯೂ ಏಳುವನು. ಅರಮನೆಯಲ್ಲಿ ವೀಣೆಯ ಇಂಪಾದ ಶಬ್ದವನ್ನು ಕೇಳಿದ ಸಂಗಡಲೇ ಎರಡು ಕಂಣುಗಳಲ್ಲಿಯೂ ನೀರು ಸುರಿಯುವಂತೆ ಮನ ಕರಗುವನು. ಆ ಕಾಲದವರು ಅವನನ್ನು ಕುರಿತು, "ಸಿಂಹದ ಹೃದಯವುಳ್ಳ ಅರಸನು" ಎಂಬ ಹೆಸರನ್ನು ಕರೆಯುವದರಿಂದ ಅವನ ಗುಣಾತಿಶಯಗಳನ್ನು ಕುರಿತು ಅವರ ಅಭಿಪ್ರಾಯವು ವಿಶದವಾಗುತ್ತದೆ.

ಅವನು ಸಿಂಹಾಸನ ಹತ್ತಿದ್ದು ಮೊದಲ್ಗೊಂಡು (Palestine) ಪೆಲೆಸ್ತೈನ್ ದೇಶಕ್ಕೆ ಹೋಗ ಹೊರಡುತ್ತಿದ್ದ ಶಿಲುಬೆಯುದ್ಧಸ್ಥರ ಸಂಗಡ ತಾನೂ ಶೇರಿ ಕೊಳ್ಳ ಬೇಕೆಂದು ನೆನಸಿ ಕೊಂಡನು. ಬಹು ಆಡಂಬರದಿಂದ ಅವನಿಗೆ ಪಟ್ಟಾಭಿಷೇಕದ ಆಚರಣೆಗಳನ್ನು ಮಾಡಿದರು. ಆದಾಗ್ಯೂ (Westminster) ವೆಸ್ತ್‌ಮಿನ್‌ಸ್ತರ್ ಎಂಬ ದೊಡ್ಡ ದೇವಾಲಯದಲ್ಲಿ ಅವನಿಗೆ ಕಿರೀಟ ಧರಿಸಿದ ದಿವಸದಲ್ಲಿ ಕೂಡಿ ಬಂದಿದ್ದ ಜನರು ಎಲ್ಲರಿಂದ ಹಗೆ ಮಾಡಲ್ಪಟ್ಟಿದ್ದ ಯೆಹೂದ ಜಾತಿಯವರಾದ ಅನೇಕರನ್ನು ಸಂಹಾರ ಮಾಡಿದ್ದು ಬಹು ವ್ಯಸನಕರವಾದದ್ದು. ಅವರು ಹಾಗೆ ಮಾಡಿದ್ದು ಯಾತಕ್ಕೋ? ಒಂದು ಅಲ್ಪ ಕಾರಣದಿಂದ ಸಂಭವಿಸಿತು. ಆದಾಗ್ಯೂ ಆ ದಿನ ಮೊದಲ್ಗೊಂಡು ಸ್ವಲ್ಪ ಕಾಲದೊಳಗಾಗಿ ದೇಶದಲ್ಲಿ ಎಲ್ಲಿಯೂ ಆ ಜಾತಿಯವರನ್ನು ಬಹು ಕ್ರೂರವಾಗಿ ಹಿಂಸಿಸ ಪ್ರಾರಂಭಿಸಿದರು.

ರಿಚಾರ್ಡ್ ಎಂಬ ಅರಸನು ತನ್ನ ಯೋಚನೆಯನ್ನು ಈಡೇರಿಸುವದಕ್ಕೆ ಬೇಕಾದ ದ್ರವ್ಯವನ್ನು ಕೂಡಿಸಿದ ಸಂಗಡಲೇ ಪೆಲೆಸ್ತೈನ್ ದೇಶಕ್ಕೆ

ಹೋಗ ಬೇಕೆಂದು ಯತ್ನಯಿಸಿದನು. (Philip) ಫಿಲಿಪ್ಪ ಎಂಬ ಫ್ರಾನ್ಸ್ ದೇಶದ ಅರಸನು ಸಹ ಅಲ್ಲಿಗೆ ಹೋಗುವದಕ್ಕೆ ಮನಸ್ಸಾಗಿದ್ದದರಿಂದ ಆ ಇಬ್ಬರು ಅರಸರೂ (Burgundy) ಬರ್ಗುಂದಿ ದೇಶದಲ್ಲಿ ಒಬ್ಬರನ್ನೊಬ್ಬರು ಕಂಡು ಮಾತಾಡಿ, ತಾವು ಆ ಪುಣ್ಯಯುದ್ಧವನ್ನು ಮಾಡುವ ಕಾಲದ ಮಟ್ಟಿಗೂ ಒಬ್ಬರು ಮತ್ತೊಬ್ಬರ ರಾಜ್ಯದ ಮೇಲೆ ದಂಡೆತ್ತಿ ಬರಬಾರದೆಂದೂ, ಸಹೋದರೈಕ್ಯವಾಗಿ ತಾವು ಒಬ್ಬರಿಗೊಬ್ಬರು ಸಹಾಯ ಮಾಡ ಬೇಕೆಂದೂ, ಆ ಯುದ್ಧದಲ್ಲಿ ಪರಾಕ್ರಮದಿಂದ ಒಬ್ಬರನ್ನೊಬ್ಬರು ಮುಂಕೊಳ್ಳುವದೇ ಹೊರ್ತು ಮನಸ್ಸಿನಲ್ಲಿ ಬೇರೆ ವಿರೋಧವಾದ ನೆನವು ಇಟ್ಟು ಕೊಳ್ಳುವದಿಲ್ಲವೆಂದೂ ಚಯಚಕ್ತಿಯಿಂದ ಪ್ರಮಾಣ ಮಾಡಿ ಕೊಂಡರು. ಅವರಿಬ್ಬರೂ ಹಡಗುಮಾರ್ಗವಾಗಿ "ಪುಣ್ಯಭೂಮಿಗೆ" ಯಾತ್ರೆ ಮಾಡುವದರಿಂದ ಅಲ್ಲಿಗೆ ಶೇರುವ ಮಟ್ಟಿಗೂ ಇನ್ನು ಒಬ್ಬರನ್ನೊಬ್ಬರು ಕಾಣುವದಕ್ಕೆ ಕೂಡದೆಂದು ನೆನಸಿದ್ದಾಗ್ಯೂ, ಎದುರುಘಾಳಿ ಬೀಸಿದ್ದರಿಂದ ಅವರು ಹತ್ತಿದ ಹಡಗಗಳು (Sicily) ಸಿಸಿಲಿ ದ್ವೀಪದಲ್ಲಿರುವ (Messina) ಮೆಸ್ಸೀನ ಎಂಬ ರೇವಿನಲ್ಲಿ ಲಂಗರು ಹಾಕ ಬೇಕಾಗಿತ್ತು. ಆ ಊರಿನಲ್ಲಿಯೇ ಅವರ ಮಧ್ಯೆ ಕ್ರೋಧವೂ ಕಲಹವೂ ಉಂಟಾಗಲಾರಂಭಿಸಿತು. ಆ ಎರಡು ಸೈನ್ಯಗಳೂ ಆ ಮೇಲೆ ಯಾತ್ರೆ ಮಾಡುವದರಲ್ಲಿ ರಿಚಾರ್ಡನು ಸಮುದ್ರವು ಹಲ್ಲಕಲ್ಲೋಲವಾಗಿದ್ದದರಿಂದ (Cyprus) ಕುಪ್ರ ದ್ವೀಪದಲ್ಲಿ ಸ್ವಲ್ಪ ಕಾಲ ತಂಗಿದನು. ಆದದರಿಂದ ಫ್ರಾನ್ಸ್ ಜನರು ಮೊದಲು (Syria) ಸಿರಿಯ ದೇಶಕ್ಕೆ ಬಂದು ಶೇರಿದರು. ರಿಚಾರ್ಡನು ಕುಪ್ರ ದ್ವೀಪದಲ್ಲಿ (Berengaria) ಬೆರೆನ್‌ಗೇರಿಯ ಎಂಬ ಅಪರೂಪವಾದ ಗುಣ ಲಕ್ಷಣಗಳಿಂದ ಕೂಡಿದ ಒಬ್ಬ ಧೊರೆಯ ಮಗಳನ್ನು ಮದುವೆ ಮಾಡಿ ಕೊಂಡನು. ಅವಳು ಸಹ ಯುದ್ಧ ಸ್ಥಳದ ಮಟ್ಟಿಗೂ ವೀರಶೂರನಾದ ತನ್ನ ಗಂಡನ ಸಂಗಡ ಹೋದಳು.

ಇಂಗ್ಲಿಷ್ ಸೈನ್ಯವು ಆ ಸ್ಥಳಕ್ಕೆ ಶೇರುವಾಗ ಶಿಲುಬೆಯುದ್ಧಸ್ಥರು (Acre) ಏಕರ್ ಎಂಬ ಪಟ್ಣಕ್ಕೆ ಮುತ್ತಿಗೆ ಹಾಕಿದ್ದರು. ಆ ಸ್ಥಳದಲ್ಲಿ ರಿಚಾರ್ಡನಿಗೂ ಫಿಲಿಪ್ಪನಿಗೂ ಮತ್ತೂ ಭೇದವುಂಟಾಯಿತು. ಹ್ಯಾಗಂದರೆ, ಮೊದಲಿನ ಶಿಲುಬೆಯುದ್ಧಸ್ಥರು ಯೆರೂಸಲೇಮು ಪಟ್ಣಕ್ಕೆ ಒಬ್ಬನನ್ನು ಅರಸನಾಗಿ ನೇಮಿಸಿದ್ದರು. ಆ ಅರಸನಿಗೆ ಬದಲಾಗಿ ಈಗ ಬೇರೊಬ್ಬನನ್ನು

ನೇಮಿಸ ಬೇಕಾದದರಿಂದ ಫ್ರಾನ್ಸ್ ಅರಸನೂ ಇಂಗ್ಲಾಂಡ್ ಅರಸನೂ ತಮಗೆ ಆ ಪಟ್ಟವು ಆಗ ಬೇಕೆಂದು ವಾಗ್ವಾದ ಮಾಡ ಪ್ರಾರಂಭಿಸಿದರು.

ಇಂಗ್ಲಿಷ್ ಸೈನ್ಯವು ಆ ಸ್ಥಳಕ್ಕೆ ಸೇರಿದ ಕೆಲವು ದಿವಸಗಳ ತರುವಾಯ ಏಕರ್ ಎಂಬ ಊರು ಹಿಡಿಯಲ್ಪಟ್ಟಿತು. ಆ ಸ್ಥಳದಲ್ಲಿ ಇಂಗ್ಲಿಷ್ ಯುದ್ಧವೀರರು ತಮ್ಮನ್ನು ನಡಿಸಿದ ಶೌರ್ಯವುಳ್ಳ ಸೈನ್ಯಾಧಿಪತಿಯು ಮಾಡಿದ ಪರಾಕ್ರಮವನ್ನು ಕಂಡು ತಾವೂ ಬಹು ಪರಾಕ್ರಮವಾಗಿ ಯುದ್ಧ ಮಾಡಿದರು. ಮತ್ತು ಅರಸನು ಪದಾತಿಗಳ ವರಿಶೆಯಲ್ಲಿ ನಿಂತು ಅಪಾಯವನ್ನೂ ಆಯಾಸವನ್ನೂ ಎಣಿಸದೆ ಎಲ್ಲರನ್ನೂ ಧೈರ್ಯ ಪಡಿಸಿ ಯುದ್ಧಮುಖದಲ್ಲಿ ನಿಂತು ಯುದ್ಧ ಮಾಡಿದನು. ಫಿಲಿಪ್ಪನು, ಮನಸ್ಸು ಬೇಸತ್ತು ತನ್ನನ್ನೂ ರಿಚಾರ್ಡನನ್ನೂ ಅವರು ಪ್ರಾರಂಭಿಸಿದ ಯುದ್ಧವನ್ನೂ ಅಸಂಹಿಸಿ, ಫ್ರಾನ್ಸ್ ದೇಶಕ್ಕೆ ತಿರಿಗಿ ಹೋದನು. ತರುವಾಯ ಪೆಲೆಸ್ತೈನ್ ದೇಶದಲ್ಲಿ ಇರುವ ಸೈನ್ಯಕ್ಕೆಲ್ಲಾ ಇಂಗ್ಲಾಂಡ್ ಅರಸನು ಶ್ರೇಷ್ಠ ಸೈನ್ಯಾಧಿಪತಿಯಾಗಿ ಇದ್ದು, ತೇರಿದ ಯುದ್ಧವೀರನಾಗಿಯೂ ಯುದ್ಧತಂತ್ರಗಳನ್ನೆಲ್ಲಾ ಬಲ್ಲ ಶೇರಿದ ಸೈನ್ಯಾಧಿಪತಿಯಾಗಿಯೂ ಅವರನ್ನು ನಡಿಸಿ ದಿನದಿನ ಶತ್ರುಗಳನ್ನು ಸೋಲಿಸಿ ಜಯ ಹೊಂದಿದನು. ಹೀಗಿರುವಾಗ ಅವನು (Ascalon) ಅಸ್ಕೆಲೋನ್ ಪಟ್ಟಕ್ಕೆ ಮುತ್ತಿಗೆ ಹಾಕುವದಕ್ಕೋಸ್ಕರ ತನ್ನ ಸೈನ್ಯವನ್ನು ನಡಿಸಿ ಕೊಂಡು ಹೋದನು. ಹೋಗುವ ಮಾರ್ಗದಲ್ಲಿ (Saracens) ಸರಸೇನರ ಸೈನ್ಯವನ್ನು ನಡಿಸಿದ ಶೌರ್ಯವೂ ದಯಾಳವೂ ದೊಡ್ಡಸ್ತಿಕೆಯೂ ಉಳ್ಳ (Saladin) ಸಾಲದೀನ್ ಎಂಬವನು ಮೂರು ಲಕ್ಷ ಯುದ್ಧವೀರರು ಕೂಡಿದ ಸೈನ್ಯದೊಡನೆ ಅಡ್ಡ ಬಂದು ತಡೆದನು. ರಿಚಾರ್ಡನು ಇದನ್ನು ಕಂಡು ಬಹು ಸಂತೋಷ ಪಟ್ಟು ಸಂಗಡಲೇ ಯುದ್ಧ ಕಲಿತದರಿಂದ ಸ್ವಲ್ಪ ಹೊತ್ತು ಯಾವ ಪಕ್ಷದವರಿಗೆ ಜಯವಾಗುವದೋ ಎಂದು ಸಂಶಯವಾಗಿತ್ತು. ಶಿಲುಬೆಯುದ್ಧಸ್ಥರ ಸೈನ್ಯದ ಉಭಯ ಪಾರ್ಶ್ವದ ವರಿಶೆಗಳವರು ಚದರಿ ಹೋದರು. ಹೋಗುವಾಗ ರಿಚಾರ್ಡನು ತನ್ನ ಸೈನ್ಯದ ದೊಡ್ಡ ವರಿಶೆಯನ್ನು ನಡಿಸಿ ಮುಹಮ್ಮದಿಯರ ಮೇಲೆ ಬಿದ್ದು ಭಯಂಕರವಾದ ಸಂಹಾರ ಮಾಡಿ ಅವರನ್ನು ನಾಲ್ಕು ದಿಕ್ಕುಗಳಿಗೂ ಚದರಿಸಿ ಓಡಿಸಿದನು.

## ಸಂಧಿ 7. ಸಮಾಧಾನದ ಒಡಂಬಡಿಕೆ.

ಇದರ ತರುವಾಯ ರಿಚಾರ್ಡನು ತಾನು ಹೊಂದಿದ ಜಯವನ್ನು ಕುರಿತು ಸಂತೋಷಚರಿತನಾಗಿ ಯೆರೂಸಲೇಮು ಪಟ್ಟಣಕ್ಕೆ ಸೈನ್ಯ ನಡಿಸಿಕೊಂಡು ಹೋದನು. ಆದಾಗ್ಯೂ ಯುದ್ಧರಂಗದಲ್ಲಿಯೂ, ವ್ಯಾಧಿಯಿಂದಲೂ, ಅವನ ಸೈನ್ಯದಲ್ಲಿ ಅನೇಕರು ಸತ್ತದ್ದರಿಂದಲೂ, ಬೇರೆ ಅನೇಕರು ತಮ್ಮ ತಮ್ಮ ದೇಶಗಳಿಗೆ ತಿರಿಗಿ ಹೋಗ ವಾಂಛೆಯುಳ್ಳವರಾಗಿದ್ದದರಿಂದಲೂ, ಆ ದೊಡ್ಡ ಪಟ್ಟಣಕ್ಕೆ ಮುತ್ತಿಗೆ ಹಾಕಲು ಅವನಿಗೆ ತಕ್ಕ ಸೈನ್ಯವಿಲ್ಲದೆ ಇತ್ತು. ಆದದರಿಂದ ಮೂರು ವರುಷವೂ, ಮೂರು ತಿಂಗಳೂ, ಮೂರು ದಿವಸಗಳ ಮಟ್ಟಿಗೂ ಉಭಯತ್ರರೂ ಯುದ್ಧ ಮಾಡುವದಿಲ್ಲವೆಂದು ಸಾಲದೀನ್ ಎಂಬವನ ಸಂಗಡ ಒಡಂಬಡಿಕೆ ಮಾಡ ಬೇಕಾಯಿತು.

ಈ ಪ್ರಕಾರ ಸಿರಿಯ ದೇಶದಲ್ಲಿರುವ ಮರಳಿನ ಕಾಡುಗಳಲ್ಲಿ ಉಂಟಾದ ಯುದ್ಧವು ಬಹು ಅತಿಶಯಿಸ ತಕ್ಕದ್ದು. ಯಾಕಂದರೆ, ಆ ಸ್ಥಳದಲ್ಲಿ ತೋರಿಸಲ್ಪಟ್ಟ ಶೂರತ್ವದ ಕೆಲಸಗಳು ಬಹಳ. ಆ ವೀರರಲ್ಲಿ ಅನೇಕರು ಆ ಸ್ಥಳಕ್ಕೆ ಹೋಗಿ ಶೇರಿ ಯುದ್ಧ ಮಾಡ ಬೇಕೆಂಬ ವಾಂಛೆಯಿಂದ ತಮಗುಂಟಾದ ಒಡವೆಗಳನ್ನು ಎಲ್ಲಾ ಬಿಟ್ಟು ಬಿಟ್ಟಿದ್ದರು. ಆದಾಗ್ಯೂ ಅಲ್ಲಿ ಹೋರಾಡಿದವರೊಳಗೆ ಇಂಗ್ಲಾಂಡ್ ದೇಶದ ಅರಸನಾದ ರಿಚಾರ್ಡನೂ, ಸಾಲದೀನನೂ ವೀರಾದಿವೀರರೆಂಬುವದಕ್ಕೆ ಸಂದೇಹವಿಲ್ಲ. ರಿಚಾರ್ಡನ ಕೀರ್ತಿ ಪ್ರತಾಪವು ಮಹಮ್ಮದಿಯರೊಳಗೆ ಅಷ್ಟು ಪ್ರಕಾಶವಾಗಿದ್ದದರಿಂದ ತಲತಲಾಂತ್ರಗಳಲ್ಲಿ ಅವನ ಹೆಸರನ್ನು ಕೊಂಡಾಡಿ ಕೊಳ್ಳುವರು. ಸಾಲದೀನ್ ಎಂಬವನು ಸ್ವಲ್ಪ ಹೆಚ್ಚುಕಡಿಮೆ ರಿಚಾರ್ಡನಿಗೆ ಸಮಾನ ಧೈರ್ಯಶಾಲಿಯಾಗಿಯೂ ಸುಶೀಲನಾಗಿಯೂ ಪ್ರಕಾಶಿಸಿದನು. ಇದಕ್ಕೊಂದು ದೃಷ್ಟಾಂತವುಂಟು. ಏನಂದರೆ, ರಿಚಾರ್ಡನಿಗೆ ವಿಷಜ್ವರ ಬಂದು ಅವನು ಬಹು ಕಷ್ಟ ಪಡುತ್ತಿರುವಲ್ಲಿ ಸಾಲದೀನನು ಅದನ್ನು ಕೇಳಿ, ತನ್ನ ಅರಮನೆಯಿಂದ ರುಚಿಯುಳ್ಳ ಹಣ್ಣುಗಳನ್ನೂ, ಜ್ವರವನ್ನು ತಣ್ಣಗೆ ಮಾಡ ತಕ್ಕ ತಂಪಾದ ಪಾನಗಳನ್ನೂ ಅವನಿಗೆ ಕಳುಹಿಸಿ, ಹೀಗೆ ತನ್ನ ವೈರಿಯ ಪ್ರಾಣವನ್ನು ಕಾಪಾಡಿದನು.

ಮೇಲೆ ಹೇಳಿದ ಸಮಾಧಾನದ ಒಡಂಬಡಿಕೆ ಮಾಡಿದ ಕೂಡಲೇ

## ಸಂಧಿ 7. ರಿಚಾರ್ಡನು ಶೆರೆಯಾದದ್ದು.

ರಿಚಾರ್ಡನು ಪೆಲೆಸ್ತೈನ್ ದೇಶವನ್ನು ಬಿಟ್ಟು ಇಂಗ್ಲಾಂಡಿಗೆ ತಿರಿಗಿ ಹೋಗುವದಕ್ಕೆ ಹಡಗ ಹತ್ತಿದನು. ಆಗ ಭಯಂಕರವಾದ ಘಾಳಿ ಯೆದ್ದು ಅವನ ಸೈನ್ಯವು ಹತ್ತಿದ ಹಡಗಗಳನ್ನು ಚದರ ಬಡಿದು, ಅವನು ಹತ್ತಿದ ಹಡಗವು ಧಡ ತಟ್ಟಿ ಬಿಚ್ಚಿ ಹೋದದರಿಂದ ಅವನು ಭೂಮಾರ್ಗವಾಗಿ ಯಾತ್ರೆ ಮಾಡ ಬೇಕಾಗಿತ್ತು. ಹೀಗೆ ಪ್ರಯಾಣ ಮಾಡುವಲ್ಲಿ ಅವನು ದಾಟಿ ಹೋಗುವ ದೇಶಗಳಲ್ಲಿ ಅವನಿಗೆ ಅನೇಕ ಶತ್ರುಗಳಿದ್ದದರಿಂದ ಅವನು ಬದಲುವೇಷದಿಂದ ಪರದೇಶಿಯ ಹಾಗೆ ಯಾತ್ರೆ ಮಾಡಿದನು. ಆದಾಗ್ಯೂ (Austria) ಆಸ್ತ್ರಿಯ ದೇಶದ ಧೊರೆಯಾದ (Leopold) ಲೇಯೊಪೋಲ್ಡ್ ಎಂಬವನ ಸೇವಕರು ಅವನನ್ನು ಕಂಡು, ಮುಖದ ಜಾಡೆಯನ್ನು ತಿಳಿದು, ಹಿಡಿದು ಕೊಂಡರು. ಪರಿಶುದ್ಧ ಭೂಮಿಯಲ್ಲಿ ಮುಂಚೆ ನಡೆದಿದ್ದ ಯಾವದೋ ಒಂದು ಸಂಗತಿಯನ್ನು ಕುರಿತು ಆ ಲೇಯೋಪೋಲ್ಡನು ಅವನ ಮೇಲೆ ಬಹು ಕೋಪವುಳ್ಳವನಾಗಿರುವದರಿಂದ ಅವನಿಗೆ ಸಂಕೋಲೆ ಹಾಕಿ ಶೆರೆಮನೆಯಲ್ಲಿ ಮುಚ್ಚಿ ಬಿಟ್ಟನು. ತರುವಾಯ ಆಸ್ತ್ರಿಯದ ಧೊರೆ ತನಗೆ ದೊಡ್ಡವನಾದ ಜರ್ಮನಿ ದೇಶದ ಚಕ್ರವರ್ತಿಗೆ ಅವನನ್ನು ಒಪ್ಪಿಸಿದ್ದರಿಂದ ಆ ದೇಶದಲ್ಲಿ ಅವನು ಬಹಳ ಕಾಲ ತನಗೆ ಅಸಹ್ಯವಾದ ಶೆರೆಮನೆಯಲ್ಲಿ ಬಿದ್ದಿದ್ದನು. ಆ ಸಮಯದಲ್ಲಿ ಅವನ ರಾಜ್ಯದವರು ಅವನಿರುವ ಸ್ಥಳವನ್ನು ತಿಳಿಯದೆ ತಮಗೆ ಅತಿ ಪ್ರಿಯನಾದ ಅರಸನು ಕಾಣದೆ ಹೋದನೆಂದು ದುಃಖ ಪಡುತ್ತಿದ್ದರು.

ಅವನಿದ್ದ ಶೆರೆಮನೆಯು ಇಂಥಾದ್ದೆಂದು ತಿಳಿಯಲಾದದ್ದನ್ನು ಕುರಿತು ಒಂದು ಒಳ್ಳೇ ಚರಿತ್ರೆಯುಂಟು. ಏನಂದರೆ, ರಿಚಾರ್ಡನಿಗೆ ಅಧಿಕ ಪ್ರಿಯನಾದ ವೀಣೆ ಬಾರಿಸುವ ಒಬ್ಬ ಯೌವನಸ್ಥನಿದ್ದನು. ಅವನು ಕೈಯಲ್ಲಿ ವೀಣೆಯನ್ನು ತೆಗದು ಕೊಂಡು, ಕಾಡು ಬೆಟ್ಟ ವನಾಂತ್ರಗಳನ್ನು ದಾಟಿ, ಪ್ರತಿ ಪಟ್ಣಗಳಿಗೂ ಊರುಗಳಿಗೂ ಕೋಟೆಗಳಿಗೂ ಹೋಗಿ ತನ್ನ ಯಜಮಾನನು ಇರುವ ಶೆರೆಮನೆಯನ್ನು ತಿಳಿದು ಕೊಳ್ಳ ಬೇಕೆಂದು ಹುಡುಕುತ್ತಾ ತಿರುಗಿದನು. ಅವನು ಹೀಗೆ ಸಂಚರಿಸುತ್ತಾ ಬರುವಲ್ಲಿ ಒಂದು ದಿವಸ ಸಾಯಂಕಾಲ ಬಹು ಭದ್ರವಾದ ಒಂದು ದುರ್ಗವನ್ನು ಕಂಡು ಸಮೀಪಕ್ಕೆ ಹೋಗಿ ಬುರುಜಿನ ಅಂಚಿನಲ್ಲಿ ಕುಳಿತು ಕೊಂಡು, ತನ್ನ

ಸಂಧಿ 7. ರಾಜಪುತ್ರನು ಅಪನಂಬಿಗಸ್ತನಾಗಿ ನಡದದ್ದು.

ಯಜಮಾನನು ಮುಂಚೆ ಬಾಳುತ್ತಿದ್ದ ಕಾಲದಲ್ಲಿ ಬಹು ಇಷ್ಟವಾಗಿ ಕೇಳುತ್ತಿದ್ದ ಒಂದು ಸಣ್ಣ ರಾಗವನ್ನು ವೀಣೆಯಲ್ಲಿ ಬಾರಿಸಿ, ಅದಕ್ಕೆ ತಕ್ಕ ಒಂದು ಚರಣವನ್ನು ಹಾಡಿದನು. ಅವನು ಹಾಡಿದ ಸಂಗಡಲೇ ಆ ಕೋಟೆಯೊಳಗೆ ಯಾರೋ ಒಬ್ಬನು, ಗಂಭೀರವೂ ಪೌರುಷವೂ ಉಳ್ಳ ಇಂಪಾದ ಕೊರಳಿನಿಂದ ಆ ಪದದ ಎರಡನೇ ಚರಣವನ್ನು ಪ್ರತ್ಯುತ್ತರವಾಗಿ ಹಾಡಿದನು. ಅದನ್ನು ಕೇಳಿ ಈ ರಾಗವೂ ಪದವೂ ನನಗೂ ನನ್ನ ಯಜಮಾನನಿಗೇ ಹೊರ್ತು ಬೇರೊಬ್ಬರಿಗೂ ಬಾರದು. ಧೊರೆಯು ಇಗೋ ಈ ಕೋಟೆಯಲ್ಲಿದ್ದಾನೆಂದು ಬಹುಶಾ ಮನಸ್ಸಂತೋಷವಾಗಿ ಇಂಗ್ಲಾಂಡಿಗೆ ತ್ವರೆಯಿಂದ ಹೋಗಿ ಅರಸನಿರುವ ಸ್ಥಳವನ್ನು ಕಂಡು ಕೊಂಡೆನೆಂದು ಹೇಳಲು, ಇಂಗ್ಲಾಂಡ್ ದೇಶದವರೆಲ್ಲರೂ, ಕಾಣದೆ ಹೋದ ನಮ್ಮ ಅರಸನು ಕಂಡು ಹಿಡಿಯಲ್ಪಟ್ಟನೆಂದು ಬಹು ಸಂತೋಷ ಪಟ್ಟು, ಅವನನ್ನು ಬಿಡುಗಡೆ ಮಾಡಿಸುವಂತೆ, ಆ ಚಕ್ರವರ್ತಿಯು ಕೇಳಿದ ದ್ರವ್ಯವನ್ನು ಕೊಡುವದಕ್ಕೆ ಮನಃಪೂರ್ವಕವಾಗಿ ಸಮ್ಮತಿಸಿ, ಸಿಂಹದ ಹೃದಯವುಳ್ಳವನಾದ ತಮ್ಮ ಅರಸನನ್ನು ಬಿಡಿಸಿ ಕೊಳ್ಳುವದಕ್ಕೆ ಚಿನ್ನ ಬೆಳ್ಳಿ ಮುಂತಾದವುಗಳನ್ನು ಉತ್ಸಾಹದಿಂದ ಕೊಟ್ಟರು.

ರಿಚಾರ್ಡನು ಸ್ವದೇಶವನ್ನು ಬಿಟ್ಟು ಹೊರಡುವದಕ್ಕೆ ಮುಂಚೆ (Durham) ದರ್ಹಾಂ (Ely) ಈಲೈ ಎಂಬ ಪಟ್ಟಗಳ ಅಧ್ಯಕ್ಷರನ್ನು ತಾನು ಇಲ್ಲದ ಸಮಯದಲ್ಲಿ ದೇಶವನ್ನು ಆಳುವದಕ್ಕೆ ನೇಮಿಸಿದ್ದನು. ಮತ್ತು ತನ್ನ ಸಹೋದರನಾದ ಯೋಹಾನನಿಗೆ ಅಧಿಕ ದಯ ತೋರಿಸಿದನು. ಆದಾಗ್ಯೂ ಅವನಿಗೆ ಯಾವದೊಂದು ಅಧಿಕಾರ ಕೊಡಲಿಲ್ಲ. ಈ ಯೋಹಾನನು ಉಪಕಾರವರಿಯದವನೂ ಕೆಟ್ಟವನೂ ಆಗಿದ್ದನು. ಆದದರಿಂದ ತನ್ನ ಸಹೋದರನ ರಾಜ್ಯವನ್ನು ಕಿತ್ತು ಕೊಂಡದ್ದಲ್ಲದೆ, ಅವನನ್ನು ಇನ್ನೂ ಸೆರೆಮನೆಯಲ್ಲಿ ಇಡುವಂತೆ ಫಿಲಿಪ್ಪನೆಂಬ ಫ್ರಾನ್ಸ್ ದೇಶದ ಅರಸನಿಗೆ ರಹಸ್ಯವಾಗಿ ಆಲೋಚನೆ ಹೇಳಿ, ಅದರ ನಿಮಿತ್ತ ನೊರ್ಮಂದಿ ದೇಶದಲ್ಲಿ ತನಗುಂಟಾದ ಮಿರಾಶಿಗಳನ್ನು ಕುರಿತು ಆ ಅರಸನಿಗೆ ಒಳ ಪಟ್ಟ ಅಧಿಕಾರಿಯಂತೆ ದಂಡ ಕೊಟ್ಟು, ಅವನ ಸಂಗಡ ಒಡಂಬಡಿಕೆ ಮಾಡಿ ಕೊಂಡನು.

## ಸಂಧಿ 7. ರಿಚಾರ್ಡ್ ತಿರಿಗಿ ಇಂಗ್ಲಾಂದಿಗೆ ಬಂದದ್ದು.

ರಿಚಾರ್ಡನು ತಿರಿಗಿ ಬಂದ ಸಮಯದಲ್ಲಿ ಇಂಗ್ಲಾಂದ್ ದೇಶವೆಲ್ಲೆಲ್ಲಿಯೂ ಎಲ್ಲಾ ತರದವರೂ ಬಹುಶಾ ಸಂತೋಷ ಪಟ್ಟರು. ಅವನು ಜಯೋತ್ಸವವಾಗಿ ಲಂದನ್ ಪಟ್ಣದೊಳಗೆ ಪ್ರವೇಶ ಮಾಡಿ ಎರಡನೇ ಸಾರಿ ಕಿರೀಟ ಧರಿಸಲ್ಪಟ್ಟನು. ಮತ್ತು ಆ ಶುಭದಿನದಲ್ಲಿ ತನ್ನ ಸಹೋದರನು ಮಾಡಿದ್ದ ದ್ರೋಹವನ್ನು ಮನ್ನಿಸಿದ್ದರಿಂದ ತನ್ನ ಸುಗುಣವನ್ನು ಪ್ರಕಟ ಮಾಡಿದನು. ಅವನು ಆಳಿದ ಮಿಕ್ಕಾದ ಕಾಲವೆಲ್ಲಾ ಫ್ರಾನ್ಸ್ ದೇಶದ ಅರಸನಿಗೂ ಅವನಿಗೂ ಅಲ್ಪ ಕಲಹಗಳು ಸಂಭವಿಸುತ್ತಾ ಇದ್ದವು. ಅವನು ತಿರಿಗಿ ಬಂದ ತರುವಾಯ ಅವನು ಕೆಲವು ದಿವಸ ರಾಜ್ಯಭಾರ ಮಾಡಿ ಸತ್ತು ಹೋದನು. ಅವನು ಮರಣ ಹೊಂದಿದ ವಿವರ ಹ್ಯಾಗಂದರೆ, ಅವನಿಗೆ ಒಳ ಪಟ್ಟ ಒಬ್ಬ ಅಧಿಕಾರಿಗೆ ಒಂದು ದಿವಸ ಅವನ ಸ್ವಾಸ್ಥ್ಯವಾದ ಭೂಮಿಯಲ್ಲಿ ಹೂಣಿಟ್ಟಿದ್ದ ದ್ರವ್ಯ ಶಿಕ್ಕಿತು. ಅದನ್ನು ತೆಗದು ಅರಸನಾದ ರಿಚಾರ್ಡನಿಗೆ ಅದರಲ್ಲಿ ಒಂದು ಭಾಗವನ್ನು ಕೊಟ್ಟು ಕಳುಹಿಸಿದನು. ಅರಸನು ಆ ದ್ರವ್ಯವೆಲ್ಲಾ ತನಗೆ ಶೇರ ಬೇಕೆಂದು ತನ್ನ ಬಾಧ್ಯತೆಯಿಂದ ಕೇಳಲಾಗಿ ಅವನು ಕೊಡುವದಿಲ್ಲವೆಂದು ಹೇಳಿದ್ದರಿಂದ, ಅರಸನು ಅದನ್ನು ಬಲಾತ್ಕಾರದಿಂದ ಹಿಡಿದು ಕೊಳ್ಳುವದಕ್ಕೆ ಅದನ್ನು ಇಟ್ಟಿದ್ದ (Chalus) ಚಾಲುಸ್ ಎಂಬ ಕೋಟೆಗೆ ಮುತ್ತಿಗೆ ಹಾಕಿದನು. ಆಗ ಒಂದು ದಿವಸ ತನ್ನ ಸೈನ್ಯಗಳು ಕಟ್ಟುವ ಆವರಣಗಳನ್ನು ಅವನು ಸುತ್ತಿ ನೋಡುತ್ತಾ ಇರುವಲ್ಲಿ ಕೋಟೆಯ ಅಲಂಗದ ಮೇಲಿನಿಂದ ಒಬ್ಬ ಬಿಲ್ಲುಗಾರನು ಎಸೆದ ಅಂಬು ಅವನ ಭುಜದಲ್ಲಿ ತಟಾಯಲು, ಅವನ ರಣವೈದ್ಯರು ಆ ಘಾಯವನ್ನು ಚನ್ನಾಗಿ ಕಟ್ಟದೆ ಹೋದದರಿಂದ ಜ್ವರ ಬಂದು ಸತ್ತು ಹೋದನು. ಹೀಗೆಯೇ ತನ್ನ ದೇಶಕ್ಕೆ ಕೀರ್ತಿಯನ್ನೂ ಘನವನ್ನೂ ಬರ ಮಾಡಿದ್ದ ದೊಡ್ಡ ಅರಸನು ಇಗೋ ಒಂದು ಸಣ್ಣ ಕೋಟೆಯನ್ನು ಹಿಡಿಯ ಹೋಗಿ ಹೆಸರು ತಿಳಿಯದ ಒಬ್ಬ ಶಿಫಾಯಿ ಎಸೆದ ಅಂಬಿನಿಂದ ಸತ್ತು ಹೋದನು.

"ಅನಿತ್ಯಾನಿ ಶರೀರಾಣಿ ವಿಭವೋ ನೈವ ಶಾಶ್ವತಃ"

ಎಂಬ ಶ್ಲೋಕದ ಪ್ರಕಾರ ಅರಸನ ಎಲ್ಲಾ ಮಹಿಮೆಯೂ ಮುಗಿಯಿತು.

ಯೋಹಾನನೆಂಬ ಅರಸುಕುಮಾರನು ಸಂಗಡಲೇ ರಾಜ್ಯಾಧಿಕಾ

ರವನ್ನು ತೆಗದು ಕೊಂಡನು. ಹ್ಯಾಗಂದರೆ, ರಿಚಾರ್ಡನು ಬರೆದು ಇರಿಸಿದ ಮರಣಸಾಧನದಲ್ಲಿ ಯೋಹಾನನಿಗೆ ಪಟ್ಟವಾಗ ಬೇಕೆಂದು ಬರೆದಿದ್ದನು. ಆದಾಗ್ಯೂ ಕ್ರಮದ ಪ್ರಕಾರ ಬೇರೊಬ್ಬನಿಗೆ ರಾಜ್ಯಾಧಿಕಾರ ದೊರಕ ಬೇಕಾಗಿತ್ತು. ಅವನ್ಯಾರಂದರೆ, ಯೋಹಾನನ ಹಿರಿಯ ಸಹೋದರನಾದ (Geoffrey) ಜೆಫ್ರೆ ಎಂಬವನ ಕುಮಾರನಾದ (Arthur) ಆರ್ಥರ್ ಎಂಬವನು ನ್ಯಾಯದ ಪ್ರಕಾರ ಪಟ್ಟಕ್ಕೆ ಬಾಧ್ಯನು. ಹಾಗಿದ್ದಾಗ್ಯೂ ಅತ್ಯಾಶೆಯಿಂದ ಮರುಳಾಗಿ ಒಂದು ಕೇಡನ್ನು ಮಾಡಿದ ಯೋಹಾನನು ಮತ್ತೊಂದು ಕೇಡನ್ನು ಮಾಡುವದು ದೊಡ್ಡದೆಂದು ಎಣಿಸದೆ ಅನ್ಯಾಯವಾಗಿ ರಾಜ್ಯವನ್ನು ತೆಗದು ಕೊಂಡ ತರುವಾಯ ಆ ರಾಜ್ಯಕ್ಕೆ ಸ್ವತಂತ್ರಿಕನಾದ ತನ್ನ ಸಹೋದರನ ಮಗನನ್ನು ಕೊಲ್ಲಿಸಿದನು.

ಅನ್ಯಾಯ ಮಾಡಿ ರಾಜ್ಯವನ್ನು ಹೊಂದುವದು ಸುಲಭವಾದಾಗ್ಯೂ ಅದನ್ನು ಚನ್ನಾಗಿ ಕಾಯುವದು ಕಷ್ಟವೆಂದು ತ್ವರೆಯಾಗಿ ಗ್ರಹಿಸಿ ಕೊಂಡನು. ಹ್ಯಾಗಂದರೆ, ಅವನಿಗೆ ಚುರುಕಾದ ಬುದ್ಧಿ ಇಲ್ಲದೆ ಮನೋಸಾಧನೆ ಸಹ ಇಲ್ಲದ್ದರಿಂದ ಪ್ರಭುಗಳು ಅವನನ್ನು ಸಡ್ಡೆ ಮಾಡದೆ ತಮ್ಮ ಮನಸ್ಸಿನ ಪ್ರಕಾರ ಮಾಡ ಪ್ರಾರಂಭಿಸಿದರು; ಮತ್ತು ಮುಂಚೆ ಅವನ ಸಂಗಡ ಸ್ನೇಹವಾಗಿದ್ದ ಫ್ರಾನ್ಸ್ ದೇಶದ ಅರಸನು ಈಗ ಅವನನ್ನು ವಿರೋಧಿಸಿ ನೊರ್ಮಂದಿ ದೇಶದ ಮೇಲೆ ದಂಡೆತ್ತಿ ಕೊಂಡು ಹೋಗಿ ಅದನ್ನು ವಶ ಮಾಡಿ ಕೊಂಡನು. ನೊರ್ಮನ್ನ ಪ್ರಭುಗಳು ಸಹ ಯಾವದನ್ನಾದರು ಮಾಡ ತೃಣೀಕರವುಳ್ಳಂಥ ಫಿಲಿಪ್ಪನನ್ನು ಮೆಚ್ಚಿ ಕೊಂಡು, ಬಲಹೀನನೂ ಅಂಜುಬುರಿಕಿಯೂ ಆದ ಯೋಹಾನನ್ನು ಅಲ್ಪವಾಗಿ ಎಣಿಸಿದ್ದರಿಂದ ಫ್ರಾನ್ಸ್ ದೇಶದ ಅರಸನು ಮಾಡಿದ್ದಕ್ಕೆ ಏನೂ ಆಕ್ಷೇಪಣಿ ಮಾಡಲಿಲ್ಲ.

ಇದೆಲ್ಲಾದರ ಹೊರ್ತು, ಅರಸನು (Canterbury) ಕಾಂತರ್ಬರಿ ಪಟ್ಟಕ್ಕೆ ಶ್ರೇಷ್ಠ ಅಧ್ಯಕ್ಷನನ್ನು ನೇಮಿಸುವದನ್ನು ಕುರಿತು ತನ್ನ ರಾಜ್ಯದಲ್ಲಿರುವ ಎಲ್ಲಾ ಗುರುಗಳ ಸಂಗಡ ವಾಗ್ವಾದ ಮಾಡಿದನು. ಹ್ಯಾಗಂದರೆ, ಆ ಪಟ್ಟದಲ್ಲಿದ್ದ ವಿರಕ್ತರು ಶ್ರೇಷ್ಠ ಅಧ್ಯಕ್ಷನಾದ (Hubert) ಹೂಬರ್ತ್ ಸತ್ತಾಗ ಅವನಿಗೆ ಬದಲಾಗಿ ಬೇರೊಬ್ಬನನ್ನು ಆರಿಸಿ ಕೊಂಡರು.

ಯೋಹಾನನು ತನಗೆ ಪ್ರಿಯನಾದ ಬೇರೊಬ್ಬನನ್ನು ಆ ಪಟ್ಟಕ್ಕೆ ನೇಮಿಸಿದನು. ಈ ಸಂಗತಿಯನ್ನು ಕುರಿತು ರೋಮಾಪುರಿ ಪಾಪುವಿಗೆ ತಿಳಿಸಿದಾಗ ಅವನು ಇವರು ಆದು ಕೊಂಡವನನ್ನೂ, ಅರಸನು ಆದು ಕೊಂಡವನನ್ನೂ ತಳ್ಳಿ ಬಿಟ್ಟು, ಬೇರೊಬ್ಬನನ್ನು ತಾನೇ ಆದು ಕೊಂಡನು. ಇದರಿಂದ ಪಾಪನು ನೇಮಿಸಿದ ಅಧ್ಯಕ್ಷನನ್ನು ಯೋಹಾನನು ಅಂಗೀಕರಿಸದೆ ಹೋದದರಿಂದ ದೇಶದಲ್ಲೆಲ್ಲಿಯೂ ಗುರುಗಳಾದವರು ಯಾರಾದರು ದೈವಾರಾಧನೆ ಎಷ್ಟು ಮಾತ್ರವೂ ಮಾಡ ಕೂಡದೆಂದು ಪಾಪನು ಕಟ್ಲೆ ಕೊಟ್ಟು ಅಡ್ಡಿ ಮಾಡಿದನು.

ಆ ದಿವಸಗಳಲ್ಲಿ ಇಂಥಾ ಅಡ್ಡಿಯಾದ ಕಟ್ಟಳೆಯಿಂದ ದೇಶದವರಿಗೆ ಉಂಟಾದ ಮನಸ್ತಾಪವೂ ದಿಗುಲೂ ಇಷ್ಟೆಂದು ಹೇಳ ಕೂಡದು. ಯಾಕಂದರೆ, ಆ ಕಾಲದಲ್ಲಿ ಎಲ್ಲರೂ ಗುರುಗಳ ಮಾತಿಗೆ ಬಹಳ ಅಂಜಿ, ಯಾವ ವಿಧದಿಂದಲಾದರೂ ರೋಮಾಪುರಿಯ ಶ್ರೇಷ್ಠ ಗುರುವಾದ ಪಾಪನ ಅಧಿಕಾರಕ್ಕೆ ಒಳ ಪಟ್ಟ ಸಭೆಯ ಸಂಗಡ ಐಕ್ಯವಾಗಿರುವದು ಮುಖ್ಯ ಕಾರ್ಯವೆಂದು ಎಣಿಸುವರು. ಈ ಕಾಲದಲ್ಲಿ ಜನರಿಗೆ ವಿದ್ಯವೂ ದೇವರ ವಾಕ್ಯದ ತಿಳುವಳಿಕೆಯೂ ಅಧಿಕವಾದದರಿಂದ ಅಂಥಾ ನೆನೆಪು ಇರಲಾರದು. ಪಾಪನು ಇಟ್ಟ ಕಟ್ಟಳೆಯ ಪ್ರಕಾರ ಅವರು ಆಗ ದೇವಾಲಯಗಳನ್ನೆಲ್ಲಾ ಮುಚ್ಚಿ ಬಿಟ್ಟರು. ಮದುವೆ, ಜ್ಞಾನಸ್ನಾನ ಎಂಬ ಈ ಎರಡು ಆಚರಣೆಗಳ ಹೊರ್ತು ಗುರುಗಳು ಬೇರೆ ಆಚರಣೆಗಳನ್ನು ಮಾಡದೆ ನಿಲ್ಲಿಸಿ ಬಿಟ್ಟರು. ದೇವಾಲಯಗಳಲ್ಲಿದ್ದ ಪುಣ್ಯಾತ್ಮರ ಸ್ವರೂಪಗಳನ್ನೂ ಬೇರೆ ಅಲಂಕಾರಗಳನ್ನೂ ತೆಗೆದು ಬಿಟ್ಟರು. ಆದದರಿಂದ ದೇಶದಲ್ಲೆಲ್ಲಾ ಒಂದು ಸ್ಥಳದಲ್ಲಾದರೂ ಸಂಗೀತಗಳನ್ನು ಹಾಡುವವರಿಲ್ಲ; ಮನಸ್ಸಂತೋಷವಾಗಿರುವವರಿಲ್ಲ. ಹೀಗಿದ್ದಾಗ್ಯೂ ಯೋಹಾನನೆಂಬವನು ಒಂದು ಕಾಲಕ್ಕೂ ಪಾಪನ ತೀರ್ಮಾನಕ್ಕೆ ಒಡಂಬಡುವದಿಲ್ಲವೆಂದು ಬಿಡುವಾದ ಮಾಡಿದನು. ಆ ಕಟ್ಟಳೆಗೆ ವಿಧೇಯರಾಗಿ ನಡಿಯ ಯತ್ನಯಿಸಿದ ಗುರುಗಳನ್ನೆಲ್ಲಾ ತಳ್ಳಿ ಬಿಟ್ಟನು. ಹಾಗಿರಲಾಗಿ ಆ ಕಾಲದಲ್ಲಿ ಪಾಪು ಎಂಬ ಶ್ರೇಷ್ಠತ್ವವನ್ನು ಹೊಂದಿ ಇದ್ದ ಮೂರನೇ (Innocent III) ಇನ್ನೋಸೆಂತ್ ಎಂಬವನು ಯಾವ ವಿಧದಿಂದಲಾದ

ರೂ ಆ ಅರಸನನ್ನು ವಿಧೇಯ ಪಡಿಸ ಬೇಕೆಂದು ಶೀರ್ಮಾನಿಸಿ, ಯೋಹಾನನನ್ನು ಸಭೆಗೆ ಬಹಿಷ್ಕಾರ ಮಾಡುವ ಪತ್ರಿಕೆಯನ್ನು ಹುಟ್ಟಿಸಿದನು. ಇದರ ನಿಮಿತ್ತ ಅರಸನ ಸ್ನೇಹಿತರು ಮುಂತಾಗಿ ತನ್ನನ್ನು ಬಿಟ್ಟು ಅಗಲಿದ್ದರಿಂದ, ಪಾಪನು ಮುಂಚೆ ಕಳುಹಿಸಿದ ಅಜ್ಞೆಯ ಕಟ್ಟಳೆಗೆ ಭಯ ಪಡದೆ ಇದ್ದಾಗ್ಯೂ ಈ ಕಟ್ಟಳೆಯಿಂದ ಬಹಳ ಕಷ್ಟ ಪಟ್ಟನು.

ಮತ್ತು ಪಾಪನು ತನ್ನ ಅಧಿಕಾರಕ್ಕೆ ವಿಧೇಯವಾಗದ ಯಾವ ಅರಸನನ್ನಾದರೂ ತೆಗೆದು ಹಾಕುವದಕ್ಕೆ ಮೇಲಾದ ಅಧಿಕಾರ ತನಗೆ ಉಂಟೆಂಬುವ ಭಾವನೆ ತೋರಿಸಿ, ಇನ್ನು ಮೇಲೆ ಇಂಗ್ಲಾಂದ್ ರಾಜ್ಯವು ಯೋಹಾನನಿಗೆ ಇಲ್ಲವೆಂದೂ ಅದನ್ನು ಫಿಲಿಪ್ಪನೆಂಬ ಫ್ರಾನ್ಸ್ ದೇಶದ ಅರಸನಿಗೆ ತಾನು ಕೊಟ್ಟು ಬಿಟ್ಟೆನೆಂದೂ ಪ್ರಸಿದ್ಧ ಮಾಡಿದ್ದರಿಂದ ಫ್ರಾನ್ಸ್ ಅರಸನು ತಾನು ಕೋರಿದ್ದ ದೇಶವನ್ನು ಕಟ್ಟಿ ಕೊಳ್ಳುವ ಹಾಗೆ, ಚನ್ನಾಗಿ ಆಯುಧ ಧರಿಸಿದ ಯುದ್ಧವೀರರಾದ ಸೈನ್ಯವನ್ನು ಕೂಡಿಸಿಟ್ಟು, ಪಾಪನ ಅಪ್ಪಣೆಯ ಪ್ರಕಾರ ಇಂಗ್ಲಾಂದಿನ ಮೇಲೆ ದಂಡೆತ್ತಿ ಕೊಂಡು ಬರ ಯತ್ನವಾದನು. ಆ ಸಮಯದಲ್ಲಿ ಯುದ್ಧವೀರರಾದ ಅರವತ್ತು ಸಾವಿರ ಮಂದಿ ತಮ್ಮ ದೇಶವನ್ನು ಕಾಪಾಡ ಬೇಕೆಂದು ಯೋಹಾನನ ಕಡೆಗೆ ಶೇರಿ ತಾವು ಜೀವದಿಂದಿರುವ ಮಟ್ಟಿಗೂ ದಂಡೆತ್ತಿ ಕೊಂಡು, ಬರುವ ಅನ್ಯ ದೇಶದವರಿಗೆ ಸ್ಥಳ ಕೊಡುವದಿಲ್ಲವೆಂದು ವೀರಶಪಥ ಮಾಡಿ, ಯುದ್ಧ ಮಾಡ ಯತ್ನ ಪಟ್ಟಿದ್ದರಿಂದ ಪಾಪು ಎಂಬವನನ್ನೂ ಫ್ರಾನ್ಸ್ ದೇಶದ ಅರಸನನ್ನೂ ಅವರಿಗೆ ಶೇರಿದ ಎಲ್ಲರನ್ನೂ ಹೊರಡಿಸಿ ಬಿಡುವದಕ್ಕೆ ಯೋಹಾನನಿಗೆ ಶಕ್ಯ ಸೈನ್ಯದ ಬಲ ಉಂಟಾಗಿತ್ತು. ಆದರೆ ಆ ಅರಸನು ತನ್ನ ಸೈನ್ಯದವರನ್ನು ನಂಬದೆ, ತಾನು ಮಾಡಿದ ಶೀರ್ಮಾನದಲ್ಲಿ ಸ್ಥಿರವಾಗಿ ನಿಲ್ಲದೆ, ಕಡೆಯಲ್ಲಿ ಪಾಪನಿಗೆ ವಿಧೇಯನಾಗಿ ಆ ಪಾಪನು ಕಳುಹಿಸಿದ (Pandulf) ಪಂದುಲ್ಫ್ ಎಂಬ ರಾಯಭಾರಿಯ ಕೈಯಲ್ಲಿ ತನ್ನ ತಲೆಯ ಮೇಲಿದ್ದ ಕಿರೀಟವನ್ನು ಒಪ್ಪಿಸಿ, ಇನ್ನು ಮೇಲೆ ತಾನು ಪಾಪನಿಗೆ ಪೂರ್ಣ ವಿಧೇಯನಾಗಿ ನಡಿಯುತ್ತೇನೆಂದು ಮಾತು ಕೊಟ್ಟು, ಆ ನಿಶ್ಚಯಕ್ಕೆ ಗುರುತಾಗಿ ಆ ರಾಯಭಾರಿಗೆ ಬಹಳ ಹಣವನ್ನು ಕೊಟ್ಟನು. ಪಂದುಲ್ಫ್ ಎಂಬವನು ಅರಸನನ್ನು ಬಹಳ ನಿಂದಿಸಿ, ಅವನು ಕೊ

ಟ್ಟ ದ್ರವ್ಯವನ್ನೆಲ್ಲಾ ಕಾಲಿನಿಂದ ತುಳಿದು, ನಾನಾ ವಿಧವಾಗಿ ಅರಸನ್ನಿಗೆ
ಅಪಮಾನ ಮಾಡಿದನು. ಆ ತರುವಾಯ ಪಾಪನಿಂದ ಶ್ರೇಷ್ಠ ಅಧ್ಯಕ್ಷ
ನಾಗಿ ನೇಮಿಸಲ್ಪಟ್ಟಿದ್ದ (Stephen Langton) ಸ್ತೇಫನ್ ಲಾಂಗ್ತನ್
ಎಂಬವನನ್ನು ಅರಸನು ಸ್ನೇಹದ ರೀತಿಯಾಗಿ ಅಂಗೀಕರಿಸಿದನು. ಅದ
ನ್ನು ಕಂಡು ಫಿಲಿಪ್ಪನು ಇಂಗ್ಲಾಂದನ್ನು ಕಟ್ಟಿ ಕೊಳ್ಳುವದಕ್ಕೆ ಇನ್ನು ಮೇಲೆ
ಆಗದೆಂದು ಕೋಪಗೊಂಡು ವಿಚಾರಿ ಹೋಗಿ, (Flanders) ಫ್ಲಾಂದ
ರ್ಸ್ ಎಂಬ ದೇಶದಲ್ಲಿ ಯುದ್ಧ ಮಾಡ ತನ್ನ ಸೈನ್ಯವನ್ನು ನಡಿಸಿ ಕೊಂ
ಡು ಹೋದನು.

ಹೀಗೆ ಯೋಹಾನನು ಗುರುಗಳ ಸಂಗಡ ಮಾಡಿದ ವ್ಯಾಜ್ಯ ತೀ
ರಿದ್ದರಿಂದ ಪ್ರಜೆಗಳನ್ನು ಅನೇಕ ವಿಧವಾಗಿ ಇಕ್ಕಟ್ಟು ಪಡಿಸಿ, ಪ್ರಭುಗಳ
ಸಂಗಡ ಸಣ್ಣ ಜಗಳಗಳನ್ನು ಮಾಡುತ್ತಾ ಬಂದನು. ಅವನು ಆಳಿದ ಕ
ಡೇ ವರುಷಗಳಲ್ಲಿ ಇದೇ ಅವನಿಗೆ ಕೆಲಸವಾದದರಿಂದ ಆ ಪ್ರಭುಗಳು ವ್ಯ
ಸನ ಪಟ್ಟು ಬಹಿರಂಗವಾಗಿ ಕಲಹ ಮಾಡಿ, (Robert Fitz Walter)
ರೋಬರ್ತ್ ಫಿಟ್ಜ್ ವಾಲ್ತರ್ ಎಂಬವನನ್ನು ತಮಗೆ ಮುಖ್ಯಸ್ತನಾಗಿ ಇ
ಟ್ಟು ಕೊಂಡು, ಅರಸನ ಸಂಗಡ ಯುದ್ಧ ತೊಡಗಿದರು. ಹೀಗೆ ಮಾಡಿ
ದಾಗ ನಾಲ್ಕು ಕಡೆಗಳಲ್ಲಿಯೂ ಅವರಿಗೆ ಜಯವಾದದ್ದಲ್ಲದೆ ಲಂಡನ್
ಪಟ್ಣದವರು ಸಹ ಅವರ ಸಂಗಡ ಶೇರಿ ಕೊಂಡದ್ದರಿಂದ ಅರಸನು ಬಹ
ಳ ಭಯ ಪಟ್ಟು, ಅವರು ಕೇಳಿ ಕೊಂಡ ಹಾಗೆ ಎಲ್ಲಾ ಮಾಡಿ ಕೊಡುವದ
ಕ್ಕೆ ಸಮ್ಮತಿಸಿದನು. ಆದದರಿಂದ (Staines) ಸ್ತೇನ್ಸ್ ಎಂಬ ಊರಿ
ಗೂ (Windsor) ವಿನ್ಸರ್ ಎಂಬ ಪಟ್ಟಣಕ್ಕೂ ಮಧ್ಯದಲ್ಲಿರುವ
(Runnymede) ರುನ್ನಿಮೀದ್ ಎಂಬ ಬೈಲಿನಲ್ಲಿ ಸಂಘವು ಕೂಡಿದಾಗ
ಉಭಯ ಪಕ್ಷದವರೂ ಆ ಪಾರ್ಶ್ವದಲ್ಲಿಯೂ ಈ ಪಾರ್ಶ್ವದಲ್ಲಿಯೂ
ದಂಡಿಳಿದಿರಲಾಗಿ ಮುಖ್ಯಸ್ತರು ಮಧ್ಯದಲ್ಲಿ ಬಂದು ಆಲೋಚನೆ ಮಾ
ಡುವ ಸಮಯದಲ್ಲಿ ಸರ್ವಾಯುಧಕವಚಗಳನ್ನು ಧರಿಸಿ ಕೊಂಡು, ಕೈಯ
ಲ್ಲಿ ಆಯುಧಗಳನ್ನು ಹಿಡಿದು ಭಯ ಪಡಿಸಿ ಮಾತಾಡುವ ಪ್ರಭುಗಳಿಂ
ದ ಸುತ್ತಲ್ಪಟ್ಟು ಯೋಹಾನನೆಂಬ ಅರಸನು, ಆ ಸಂಘದವರು ಹೇಳಿದಂ
ತೆ, ಸ್ವೀಕಾರಪತ್ರಿಕೆಗೆ ರುಜು ಹಾಕಿದನು. ಆ ಪತ್ರಿಕೆಯು ಅರಿಕೆ ಮಾಡುವ

ವನೆಂಬುವ ಎದ್ವರ್ದ್ ಅರಸನೂ ಮೊದಲನೇ ಹೆನ್ರಿ ಎಂಬವನೂ ಏರ್ಪ ಡಿಸಿದ ನ್ಯಾಯನಿಬಂಧನೆಗಳಿಗೆ ಒಪ್ಪುವಂತೆ ಕಾನ್‍ತರ್‍ಬರಿ ಪಟ್ಟದ ಶ್ರೇ ಷ್ಠ ಅಧ್ಯಕ್ಷನಿಂದ ಬರೆಯಲ್ಪಟ್ಟಿತ್ತು. ಈ ಪತ್ರಿಕೆ ದೊಡ್ಡ ಪತ್ರಿಕೆ ಎಂಬ ರ್ಥವುಳ್ಳ (Magna Charta) ಮಗ್ನಚಾರ್ತ ಅನ್ನಲ್ಪಡುವದು. ಇದು ಇಂಗ್ಲಾಂಡ್ ದೇಶದವರಿಗೆಲ್ಲಾ ದೊಡ್ಡ ಉಪಕಾರವಾಯಿತು. ಹ್ಯಾಗಂ ದರೆ, ಆ ಪತ್ರಿಕೆಯು ಇಂಗ್ಲಾಂಡ್ ದೇಶವನ್ನು ಆಳಿ ಕೊಳ್ಳುವ ರಾಜನಿಬಂ ಧನೆಗಳಿಗೂ ಆ ದೇಶದವರು ಅನುಭವಿಸುವ ಸ್ವೀಕಾರಗಳಿಗೂ ಸ್ವಾಧೀನ ಕ್ಕೂ ಆಧಾರವಾಗಿತ್ತು. ಅದರಿಂದ ಇಂಗ್ಲಾಂಡ್ ದೇಶದವರು ಪಾರಂಪ ರ್ಯವಾಗಿ ತಮ್ಮ ಪೂರ್ವಿಕರು ಆ ದಿವಸ ಆ ಅರಸನಿಂದ ತೀರ್ಮಾನ ವಾಗಿ ಕೇಳಿ ತೆಗದು ಕೊಂಡ ಆ ನಿಬಂಧನೆಯನ್ನು ಕೃತಜ್ಞತೆಯಿಂದ ಜ್ಞಾ ಪಕ ಮಾಡಿ ಕೊಳ್ಳ ಬೇಕು. ಆ ಪತ್ರಿಕೆಯಲ್ಲಿ ಪ್ರಭುಗಳಿಗೂ ಸ್ವಾಧೀನ ಪ್ರಜೆಗಳಿಗೂ ಉಂಟಾಗಿರ ಬೇಕಾದ ಸ್ವಾತಂತ್ರ್ಯಗಳನ್ನು ಕುರಿತು ಹೇಳಿ ಇರುತ್ತದೆ. ಆ ಕಾಲದಲ್ಲಿ ದಾಸರು ಕೆಲವರು ಇದ್ದರು. ಆದಾಗ್ಯೂ ಅ ವರನ್ನು ಕುರಿತು ಆ ಪತ್ರಿಕೆಯಲ್ಲಿ ಏನೂ ಬರೆಯಲ್ಪಡಲಿಲ್ಲ. ಮತ್ತು ಸ್ವ ಲ್ಪ ಕಾಲದೊಳಗಾಗಿಯೇ ದೇಶದಲ್ಲೆಲ್ಲಾ ದಾಸತ್ವವು ನಿವರ್ತಿಯಾಯಿ ತು. ಮತ್ತು ಆ ಪತ್ರಿಕೆಯಲ್ಲಿ ಪ್ರಭುಗಳ ಬಳಿಯಲ್ಲಿಯೂ ಅವರಿಗೆ ಶೇ ರಿದವರ ಬಳಿಯಲ್ಲಿಯೂ ಅರಸನು ಅನ್ಯಾಯವಾದ ದಂಡ ತೆಗದು ಕೊ ಳ್ಳ ಕೂಡದೆಂದೂ, ಯಾರಾದರು ಸ್ವಾಧೀನರು ಆ ದೇಶದಲ್ಲಿ ಬಂದು ಒಕ್ಕಲುತನ ಮಾಡುವದಕ್ಕೂ ಬೇರೆ ದೇಶಕ್ಕೆ ಹೋಗುವದಕ್ಕೂ ಒಬ್ಬರೂ ತಡೆ ಮಾಡ ಕೂಡದೆಂದೂ, ದೇಶದವರ ದೊಡ್ಡ ಸಂಘದ ಅನುಮತಿಯಿಂ ದಲೇ ಹೊರ್ತು ಅರಸನು ತನ್ನ ಇಷ್ಟದ ಪ್ರಕಾರ ಬಹುಶಾ ತೆರಿಗೆಗಳನ್ನು ವಿಧಿಸ ಕೂಡದೆಂದೂ, ವ್ಯಾಪಾರಸ್ಥರನ್ನು ಕಾಪಾಡಿ ಆದರಿಸ ಬೇಕೆಂದೂ, ನ್ಯಾಯಸ್ಥಳಗಳೆಲ್ಲಾ ಎಲ್ಲರಿಗೂ ಸಾಧಾರಣವಾಗಿ ಇರ ಬೇಕೆಂದೂ, ಸ್ವಾ ಧೀನನ ಮೇಲೆ ಅಪರಾಧ ಹೊರಿಸಿ ಇದ್ದರೆ ಅವನಿಗೆ ಸರಿಸಮಾನವಾದ ಅಂತಸ್ತು ಉಳ್ಳ ಮಧ್ಯಸ್ತರಿಂದ ಅವನ ತಪ್ಪು ವಿಚಾರಿಸ ಬೇಕೆಂದೂ ತೀ ರ್ಪು ಮಾಡಲ್ಪಟ್ಟಿತ್ತು.

ಮೇಲೆ ಹೇಳಿದ ಪತ್ರಿಕೆಗೆ ಅರಸನು ರುಜು ಹಾಕ ಮನಸ್ಸಿಲ್ಲದೆ ಇ

ದ್ದಾಗ್ಯೂ ಬಲವಂತದಿಂದ ರುಜು ಹಾಕ ಬೇಕಾಯಿತು. ಆದದರಿಂದ ಪ್ರಭುಗಳು ಮುಂತಾದ ಆ ಸಂಘದವರು ತನಗೆ ಮಾಡಿದ ಅವಮಾನವನ್ನು ಕುರಿತು ಬಹಳ ಮನ ಮುರಿದು ಕೆಲವು ಕಾಲದ ವರೆಗೂ ಅರಮನೆಯನ್ನು ಬಿಟ್ಟು ಹೊರಗೆ ಬರಲಿಲ್ಲ. ಅದರ ತರುವಾಯ ಆ ಪ್ರಭುಗಳ ಸಂಗಡ ತಿರಿಗಿ ಯುದ್ಧ ಮಾಡ ಯತ್ನಯಿಸಿದನು. ಪ್ರಭುಗಳು ಅಷ್ಟು ಶೀಘ್ರವಾಗಿ ಅರಸನು ತಾನು ಮಾಡಿದ ಪ್ರಮಾಣವನ್ನು ಬೊಂಕಲಾರನೆಂದು ನೆನಸಿದ್ದರಿಂದ ಅವನನ್ನು ಎದುರಿಸ ತಕ್ಕ ಸೈನ್ಯವನ್ನು ಕೂಡಿಸಿ ಇರಿಸಲಿಲ್ಲ. ಆದದರಿಂದ ಬಹು ಸಂಕಟ ಪಟ್ಟು ಫ್ರಾನ್ಸ್ ದೇಶದ ಅರಸನ ಹಿರಿಯ ಮಗನಾದ (Louis) ಲೂವಿಸ್ ಎಂಬವನ ಬಳಿಗೆ ರಾಯಬಾರಿಗಳನ್ನು ಕಳುಹಿಸಿ, ಅವನು ಫ್ರಾನ್ಸ್ ದೇಶದವರಾದ ಸೈನ್ಯವನ್ನು ಶೇರಿಸಿ ಕೊಂಡು ತಮಗೆ ಸಹಾಯ ಮಾಡ ಬಂದರೆ, ಅವನಿಗೆ ಪಟ್ಟ ಧರಿಸುತ್ತೇವೆಂದು, ಮಾತಾಡಿದ್ದರಿಂದ ಅವನು ಅದ್ಕೆ ಸಮ್ಮತಿಸಿದನು. ಆದಾಗ್ಯೂ ಯುದ್ಧ ತೊಡಗುವದಕ್ಕಿಂತ ಮುಂಚೆ ಯೋಹಾನನು ಸತ್ತು ಹೋದನು. ಅವನು ಸತ್ತ ವಿವರ ಹ್ಯಾಗಂದರೆ, (Norfolk) ನೊರ್ಫೋಲ್‍ಕ್ ನಾಡನ್ನು ಬಿಟ್ಟು (Lincolnshire) ಲಿನ್‍ಕೊಲ್‍ನ್‍ಷೀರ್ ನಾಡಿಗೆ ವರಿಶೆಯಾಗಿ ನಡಿಯುವಾಗ, ಸಮುದ್ರದ ಧಡದ ಮಾರ್ಗವಾಗಿ ಹೋಗುವಾಗ, ತನ್ನ ಸೈನ್ಯಕ್ಕೋಸ್ಕರ ಶೇರಿಸಿದ್ದ ಆಹಾರವೂ ಬಾಶಿಮುಟ್ಟುಗಳೂ ಸಮುದ್ರದ ಉಬ್ಬುಕದಿಂದ ಬಹಳ ನಷ್ಟವಾಗಿ ಹೋದದ್ದನ್ನು ಕುರಿತು ಅವನು ವ್ಯಸನ ಪಟ್ಟದ್ದರಿಂದಲೂ ತರುವಾಯ ಪಥ್ಯ ತಪ್ಪಿ ಅಮಿತವಾಗಿ ತಿಂದದರಿಂದಲೂ ಜ್ವರ ಉಂಟಾಗಿ, ಅವನ ಆಳಿಕೆಯ ಹದಿನೆಂಟನೇ ವರುಷದಲ್ಲಿ ಸತ್ತು ಹೋದನು.

ಯೋಹಾನನು ಕ್ರೂರತ್ವವಾಗಿ ಆಳಿದವನೂ ದುರ್ಮಾರ್ಗ ನಡತೆಯುಳ್ಳವನೂ ಆಗಿದ್ದನು. ಅವನ ಗುಣ ನಡತೆಗಳನ್ನು ವಿಚಾರಿಸುವಾಗ ಹೊಗಳ ತಕ್ಕ ವಿಶೇಷವೇನೂ ಕಾಣುವದಿಲ್ಲ. ಚಿಕ್ಕವನಾಗಿರುವಾಗ ತನ್ನ ತಂದೆಗೆ ಅವನು ಅಣಗಿದ್ದವನಲ್ಲ. ತನ್ನ ಸಹೋದರನು ಮಾಡಿದ ಉಪಕಾರಕ್ಕೆ ಅಪಕಾರ ಮಾಡಿದನು. ತನ್ನ ರಾಜ್ಯದವರಿಗೆ ಇಕ್ಕಟ್ಟು ಪಡಿಸಿದನು. ಅವನು ಆಳಿದ ಕಾಲದಲ್ಲಿ ನಡೆದ ಮೂರು ದೊಡ್ಡ ಸಂಗತಿಗಳಿಂದ ಅವ

ನ ಅವಿವೇಕವನ್ನೂ ಮನೋ ಅಹಂಕಾರವನ್ನೂ ಕ್ರೂರತ್ವವನ್ನೂ ಸ್ಪಷ್ಟವಾಗಿ ತಿಳಿದು ಕೊಳ್ಳ ಬಹುದು. ಹೀಗಿದ್ದಾಗ್ಯೂ ಆ ಸಂಗತಿಗಳಿಂದಲೇ ಇಂಗ್ಲಾಂಡ್ ದೇಶಕ್ಕೆ ಆ ಮೇಲೆ ಮೇಲು ಫಲಿಸಿತು. ಹ್ಯಾಗಂದರೆ, ಫ್ರಾನ್ಸ್ ದೇಶದಲ್ಲಿ ಅವನಿಗಿದ್ದ ಸ್ವಾಸ್ಥ್ಯವನ್ನು ಅವನು ಕಳದು ಬಿಟ್ಟದ್ದರಿಂದ ಇಂಗ್ಲಾಂಡಿಗೆ ಬಾಧ್ಯತ್ವದ ಘನವನ್ನೂ ಬಲವನ್ನೂ ಹೆಚ್ಚಿಸುವಂತೆ ಹಿಂದಿನ ಅರಸರು ಪ್ರಯತ್ನ ಮಾಡಿದರು. ಪಾಪು ಮುಂತಾದ ಗುರುಗಳ ಸಂಗಡ ಅವನು ಮಾಡಿದ ವಾಗ್ವಾದದಿಂದ ಜನವೆಲ್ಲಾ ರೋಮಾಪುರಿಯ ಅಧ್ಯಕ್ಷತ್ವದ ಅಧಿಕಾರವನ್ನು ನ್ಯಾಯವಾದದ್ದಲ್ಲವೆಂದು ತಳ್ಳಿ ಬಿಡುವದಕ್ಕೆ ಹೇತುವೆಯಾಯಿತು. ಪ್ರಭುಗಳು ಮಾಡಿದ ಕಲಹದಿಂದ ಇಂಗ್ಲಾಂಡ್ ದೇಶದವರೆಲ್ಲರಿಗೂ ಉಂಟಾಗಿರುವ ಬಾಧ್ಯತೆಯ ಸ್ವೀಕಾರಗಳನ್ನೂ ಸ್ವಾತಂತ್ರ್ಯಗಳನ್ನೂ ಸ್ಥಿರ ಪಡಿಸುವ ದೊಡ್ಡ ಪತ್ರಿಕೆ ಹುಟ್ಟಿತು.

# CHAPTER VIII.

## THE REIGNS OF HENRY THE THIRD AND EDWARD THE FIRST.

FROM A. D. 1216. TO A. D. 1307.

## 8 ಸಂಧಿ.

## ಮೂರನೇ ಹೆನ್ರಿ, ಮೊದಲನೇ ಎಡ್ವರ್ಡ್ ಎಂಬವರ ಧೊರೆತನಗಳು.

ಕ್ರಿ. ಶ. 1216 ಮೊದಲು ಕ್ರಿ. ಶ. 1307 ವರೆಗೂ.

ಮುಖ್ಯ ತಾರೀಖುಗಳು: (Henry III) 3ನೇ ಹೆನ್ರಿ ಕ್ರಿ. ಶ. 1207 ಹು ಟ್ಟಿದ್ದು. ಕ್ರಿ. ಶ. 1216 ಮೊದಲು 1272 ವರೆಗೂ ಆಳಿದ್ದು. 1264ನೇ ವರುಷದಲ್ಲಿ ಈಗಲು ಇರುವ ಪ್ರಜಿಸಂಘದ ಮೊದಲು ತೋರುತ್ತದೆ. (Edward I) 1ನೇ ಎಡ್ವ ರ್ಡ್ ಕ್ರಿ. ಶ. 1236 ಹುಟ್ಟಿದ್ದು. ಕ್ರಿ. ಶ. 1272—1307 ಆಳಿದ್ದು. ಕ್ರಿ. ಶ. 1292 ನೇ ವರುಷದಲ್ಲಿ (Wales) ವೇಲ್ಸ್ (England) ಇಂಗ್ಲಾಂಡಿಗೆ ಸೇರಿಸಲ್ಪಟ್ಟಿತು. ಅದೇ ಕಾಲದ ಇಂಡ್ಯ ಚರಿತ್ರೆ: ಮೊಗಲರು ಮೊದಲು ಹಿಂದುಸ್ಥಾನಕ್ಕೆ ಬಂದ ದ್ದು ಕ್ರಿ. ಶ. 1217. ಮಹಮ್ಮದಿನವರು ದಖಿಣದ ಮೇಲೆ ದಂಡೆತ್ತಿದ್ದು ಕ್ರಿ. ಶ. 1294. ಶ್ರೇಷ್ಟ ನಾಮಗಳು: ವಿದ್ವಾಂಸನಾದ (Roger Bacon) ರೋಜರ್ ಬೇ ಕೊನ್ ಕ್ರಿ. ಶ. 1214—1294. ವೀರರಾದ (Llewellyn) ಲೆವೆಲಿನ್, (Bruce) ಬ್ರೂ ಸ್, (Balliol) ಬೆಲೆಯೊಲ್, (Wallace) ವಾಲೆಸ್ ಎಂಬವರು ಕ್ರಿ. ಶ. 1263—1326.

ಸತ್ತು ಹೋದ ಅರಸನ ಕುಮಾರನಾದ ಹೆನ್ರಿಯು ತನ್ನ ತಂದೆ ಸತ್ತ ಕಾಲದಲ್ಲಿ ಒಂಬತ್ತು ವರುಷಪ್ರಾಯದವನಾದದರಿಂದ (Pembroke) ಪೆಂಬ್ರೋಕ್ ನಾಡಿನ ಅಧಿಪತಿಯಾದ ವಿವೇಕವೂ ಪರಾಕ್ರಮವೂ ಉ ಳ್ಳವನು ಪ್ರತಿ ಅರಸನಾಗಿರುವಂತೆ ನೇಮಿಸಲ್ಪಟ್ಟನು. ಅವನು ದಂಡೆತ್ತಿ ಕೊಂಡು ಬಂದ ಫ್ರಾನ್ಸಿನವರನ್ನು ಓಡಿಸಿ ಬಿಟ್ಟು ದೇಶವನ್ನೆಲ್ಲಾ ಸಮಾ ಧಾನ ಪಡಿಸಿದನು.

## ಸಂಧಿ ೩. ರಾಜ್ಯದವರು ಗುಣುಗುಟ್ಟಿದ್ದು.

ಹೆನ್ರಿ ಎಂಬವನು ತಾನೇ ಧೊರೆತನ ಮಾಡ ತಕ್ಕ ವಯಸ್ಸು ಬಂದಾಗ, ರಾಜ್ಯ ಪರಿಪಾಲನೆ ಮಾಡ ತಕ್ಕ ಯುಕ್ತಿಯೂ ಬಲವೂ ಇಲ್ಲದವನೆಂದು ಕಾಣಲ್ಪಟ್ಟಿತು. ಅವನು ಬಹು ಬಲಹೀನನೂ ಅಣಗದವರನ್ನು ಅಣಗಿಸುವದಕ್ಕೆ ಏನೂ ಶಕ್ತಿ ಇಲ್ಲದವನೂ ಆಗಿದ್ದನು. ಅವನು (Provence) ಫ್ರೋವೆನ್ಸ್ ನಾಡಿನಲ್ಲಿ ಹುಟ್ಟಿದ ಒಬ್ಬಳನ್ನು ಮದುವೆ ಮಾಡಿ ಕೊಂಡು, ಅವಳ ಬಂಧುಗಳನ್ನೂ ಬೇರೆ ಅನ್ಯ ದೇಶದ ಇಷ್ಟರನ್ನೂ ಬಹು ಪಕ್ಷವಾಗಿ ನಡಿಸಿದ್ದರಿಂದ ಸ್ವದೇಶದವರಿಗೆ ಮನಸ್ಸು ಮುರಿದು ಹೋಯಿತು. ಆದಾಗ್ಯೂ ಅವನು ಅನ್ಯ ದೇಶದವರನ್ನು ಆದರಿಸಿದ್ದು ಸ್ವದೇಶದವರಿಗೆ ಬಹು ವ್ಯಸನವಾಗಿದ್ದಾಗ್ಯೂ ಆ ಅನ್ಯ ದೇಶದವರು ಉಪಯೋಗವಾದ ನಾನಾ ವಿದ್ಯೆಗಳನ್ನೂ ನೂತನವಾದ ಸೂಕ್ಷ್ಮ ಕೆಲಸಗಳನ್ನೂ ಇಂಗ್ಲಾಂಡಿನವರಿಗೆ ತೋರಿಸಿದ್ದರಿಂದ ಅವರ ಮುಖಾಂತ್ರವಾಗಿ ಆ ದೇಶದಲ್ಲಿ ಕೆಲಸದ ಸಾಮರ್ಥ್ಯವೂ ವಿದ್ಯಾಸಾಮರ್ಥ್ಯವೂ ಹೆಚ್ಚುವದಕ್ಕೆ ಹೇತುವೆಯಾಯಿತು. ಹೀಗಿದ್ದಾಗ್ಯೂ ಆ ದೇಶದವರು ಬರಬರ ಹೆಚ್ಚೆಚ್ಚಾಗಿ ವ್ಯಸನ ಪಡುತ್ತಾ ಬಂದರು. ಅರಸನು ಸಂಪಾದ್ಯಕ್ಕೆ ತಕ್ಕ ಖರ್ಚು ಮಾಡದೆ ಬಹಳ ದ್ರವ್ಯ ಖರ್ಚು ಮಾಡಿದ್ದರಿಂದ ಅವನು ಕೊರತೆ ಪಟ್ಟು, ಮುಖ್ಯ ಪ್ರಭುಗಳನ್ನೂ ದೇಶಸಂಘದವರನ್ನೂ ಕೂಡಿ ಬರ ಮಾಡಿ, ತನಗೆ ಬೇಕಾದ ದ್ರವ್ಯ ಕೊಡ ಬೇಕೆಂದು ಕೇಳ ಬೇಕಾಯಿತು. ಅರಸನೂ ಪ್ರಭುಗಳೂ (Oxford) ಒಕ್ಸ್‌ಫೋರ್ಡ್ ಪಟ್ಟದಲ್ಲಿ ಸಂಘವು ಕೂಡಿದಾಗ ಅವರು ರಾಜ್ಯವಾಳುವ ಕ್ರಮವನ್ನು ಮಾರ್ಪಡಿಸಿ, ಅರಸನಿಂದ ನೇಮಿಸಲ್ಪಟ್ಟ ಹನ್ನೆರಡು ಮಂದಿಯೂ, ಪ್ರಜೆಗಳ ಪಕ್ಷವಾಗಿದ್ದ ಪ್ರಭುಗಳಿಂದ ನೇಮಿಸಲ್ಪಟ್ಟ ಹನ್ನೆರಡು ಮಂದಿಯೂ ಆದ ಇಪ್ಪತ್ತು ನಾಲ್ಕು ಮಂದಿಯು ರಾಜ್ಯದ ಕಾರ್ಯಗಳನ್ನು ನಡಿಸಿ ಕೊಂಡು ಬರುವದಲ್ಲದೆ, ಒಂದೊಂದು ನಾಡಿನಲ್ಲಿಯೂ ಸ್ವತಂತ್ರರಾದ ಒಕ್ಕಲುತನದವರು ನಾಲ್ಕು ಮಂದಿ ಆಲೋಚನೇ ಸಂಘದವರನ್ನು ಆದು ಕೊಳ್ಳ ಬೇಕೆಂದೂ, ಆ ಆಲೋಚನೆಗಾರರು ದೊಡ್ಡ ರಾಜಸಂಘದಲ್ಲಿ ಶೇರ ಬೇಕೆಂದೂ ತೀರ್ಪು ಮಾಡಿದರು. ಈ ವಿಧವಾಗಿ ಪ್ರಜೆಗಳು ಆದು ಕೊಂಡ ಆಲೋಚನೆಗಾರರು ಶೇರಿದ ಸಂಘದ ಮೂಲಕವಾಗಿ ರಾಜ್ಯದ ಎಲ್ಲಾ ಕಾರ್ಯಗಳನ್ನೂ

ನಿರ್ಣಯಿಸ ಬೇಕೆಂಬುವ ಕ್ರಮವು ಸ್ಥಾಪಿಸಲ್ಪಟ್ಟಿತು. ಆ ದಿನ ಮೊದಲ್ಗೊಂಡು ಇಂಗ್ಲಾಂಡ್ ದೇಶದ ದೊಡ್ಡ ಸಂಘದಲ್ಲಿ ಒಕ್ಕಲುತನದವರ ಅಭಿಪ್ರಾಯದ ಪ್ರಕಾರವೇ ಅಧಿಕಾಧಿಕವಾಗಿ ಸಕಲ ಕಾರ್ಯಗಳೂ ನಡಿಸಲ್ಪಡುವವು. ಮತ್ತು ಅರಸನೂ ಹದಿನೆಂಟು ವರುಷಪ್ರಾಯದವನಾದ ಎಡ್ವರ್ಡ್ ಎಂಬ ಅರಸ ಕುಮಾರನೂ ಪಾರ್ಲಿಮೆಂತ್ ಎಂಬುವ ದೊಡ್ಡ ಆಲೋಚನೇ ಸಂಘದವರು ಸ್ಥಾಪಿಸಿದ್ದ ನಿಬಂಧನೆಗಳ ಪ್ರಕಾರ ನಡೆದು ಕೊಳ್ಳುತ್ತೇವೆಂದು ಮಾತು ಕೊಟ್ಟರು.

ಆ ಸಂಘದವರು ಮಾಡಿದ ಪ್ರಯತ್ನದಿಂದ ಪ್ರಜೆಗಳಲ್ಲಿ ಇದ್ದ ತಾರುಮಾರೂ ಗುಣುಗುಟ್ಟುವಿಕೆಯೂ ನಿವರ್ತಿಯಾಗಲಿಲ್ಲ. ಆರು ವರುಷಗಳ ಮಟ್ಟಿಗೂ ಅರಸನು ಪ್ರಭುಗಳನ್ನು ಸೇರಿಸಿ ಕೊಂಡು ಅರಸುತನ ಮಾಡಿದ್ದರಲ್ಲಿ ನಿತ್ಯ ನಿತ್ಯವೂ ವ್ಯಾಜ್ಯಗಳೂ ಜಗಳಗಳೂ ಉಂಟಾದವು. ಆದದರಿಂದ ಹೆನ್ರಿಯು ತಾನು ಮಾಡಿದ ಪ್ರಮಾಣವನ್ನು ತೊಲಗಿಸುವಂತೆ ಪಾಪು ಎಂಬ ರೋಮಾಪುರಿಯ ಅಧ್ಯಕ್ಷನನ್ನು ಕೇಳಿ ಕೊಂಡನು. ಪ್ರಭುಗಳು ಅದಕ್ಕೆ ಎಷ್ಟು ಮಾತ್ರ ಸಮ್ಮತಿಸಲಿಲ್ಲ. ಯಾಕಂದರೆ ಅರಸನು ತಾನೇ ಧೊರೆತನ ಮಾಡಿದರೆ, ದೇಶದ ಕಾರ್ಯಗಳು ತಾರುಮಾರಾಗುವವು; ಆದದರಿಂದ ಅದಕ್ಕೆ ಒಡಂಬಡಲಾರೆವು ಎಂಧೇಳಿ (Louis ix) ಒಂಬತ್ತನೇ ಲೂವಿಸ್ ಎಂಬುವ ಫ್ರಾನ್ಸ್ ದೇಶದ ಅರಸನನ್ನು ಆ ವ್ಯಾಜ್ಯ ತೀರಿಸಿ ಕೊಡ ಬೇಕೆಂದು ಕೇಳಿ ಕೊಂಡರು. ಅವನು ಕಾರ್ಯವನ್ನೆಲ್ಲಾ ಕೇಳಿ ಕೊಂಡು ತೀರ್ಪು ಮಾಡಿದನು. ಆದಾಗ್ಯೂ ಅವನು ಮಾಡಿದ ತೀರ್ಪಿಗೆ ಒಬ್ಬನೂ ಸಮ್ಮತಿಸಲಿಲ್ಲ.

ಹ್ಯಾಗಾದರೂ ಈ ಕಾರ್ಯ ಮುಗಿಸ ಬೇಕಾಗಿತ್ತು. ಆದದರಿಂದ ಅರಸನ ಪಕ್ಷದವರಿಗೂ, ಪ್ರಜೆಗಳ ಪಕ್ಷದವರಿಗೂ ಉಂಟಾದ ವ್ಯಾಜ್ಯವನ್ನು ಯುದ್ಧ ಮಾಡಿ ಮುಗಿಸ ಬೇಕಾಗಿತ್ತು. ರಾಜ್ಯದಲ್ಲಿರುವ ಅನೇಕ ಮುಖ್ಯರಾದ ಪ್ರಭುಗಳು ಪ್ರಜೆಗಳ ಪಕ್ಷದಲ್ಲಿದ್ದರು. ಇವರು (Leicester) ಲೆಸ್ತರ್ ಪಟ್ಟದ ಪ್ರಭುವಾದ (Simon de Montfort) ಸೀಮೋನ್ ದಿ ಮೊಂದ್‌ಫೋರ್ತ್ ಎಂಬವನನ್ನು ತಲೆಯಾಗಿ ನೇಮಿಸಿ ಕೊಂಡು, ಅರಸನಿಗೆ ವಿರೋಧವಾಗಿ ಯುದ್ಧ ತೊಡಗಿದರು. ದಿ ಮೊಂದ್‌ಫೋರ್ತ್ ಎಂಬವ

ನು ಬಹು ಸಾಮರ್ಥ್ಯವುಳ್ಳ ಸೈನ್ಯಾಧಿಪತಿಯಾದದರಿಂದ (Sussex) ಸಸ್ಸೆಕ್ಸ್ ನಾಡಿನಲ್ಲಿದ್ದ (Lewes) ಲೂವೆಸ್ ಊರು ಬಳಿಯ ಮಾಡಿದ ಮೊದಲನೇ ದೊಡ್ಡ ಯುದ್ಧದಲ್ಲಿ ಅವನು ಅರಸನು ನಡಿಸಿದ ಸೈನ್ಯವನ್ನು ಪೂರ್ಣವಾಗಿ ಸೋಲಿಸಿ, ಅರಸನನ್ನೂ ಅರಸನಿಗೆ ಪಕ್ಷವಾಗಿದ್ದ ಎಡ್ವರ್ಡ್ ಎಂಬ ರಾಜಪುತ್ರನನ್ನೂ ಸೆರೆಯಾಗ ಮಾಡಿದನು.

ಹೀಗೆ (Earl of Leicester) ಲೆಸ್ಟರ್ ಎಂಬ ಪ್ರಭುವಿನ ಕೈಯಲ್ಲಿ ರಾಜ್ಯಾಧಿಕಾರವೆಲ್ಲಾ ಬಂತು. ಅವನು ಅರಸನ ಹೆಸರಿನಿಂದ ಆಳಿಕೆ ಮಾಡಿ, ನೋಟಕ್ಕೆ ಅರಸನಿಗೆ ಬಹು ಮರ್ಯಾದೆ ಮಾಡುತ್ತಾ ಬಂದಾಗ್ಯೂ ಆ ಅರಸನು ಇವನು ಆಡಿಸಿದ ಬೊಂಬೆಯೇ ಹೊರ್ತು ಬೇರೆ ಅಲ್ಲ. ಅವನು ಅಧಿಕಾರ ಮಾಡುವ ವೇಳೆಯಲ್ಲಿ ದೊಡ್ಡ ಕೇಡುಗಳನ್ನೂ ದೊಡ್ಡ ಮೇಲುಗಳನ್ನೂ ಮಾಡುತ್ತಾ ಬಂದನು. ಜನರು ಅವನನ್ನು ಸಾಧಾರಣವಾಗಿ ದೇಶಾಭಿಮಾನಿ ಎಂದು ನೆನಸಿದರು. ಮತ್ತು ಯಥಾಸ್ಥಿತಿಯಾಗಿ ಸ್ವದೇಶದವರಿಗೆ ಉಪಯೋಗವಾದವುಗಳನ್ನು ಮಾಡ ಅಭಿಪ್ರಾಯವುಳ್ಳವನಾಗಿದ್ದನೆಂದು ನೆನಸುವದಕ್ಕೆ ಆಸ್ಪದ ಉಂಟು. ಹಾಗಿದ್ದಾಗ್ಯೂ ಅವನು ಪ್ರಜೆಗಳ ಮೇಲನ್ನು ಮಾತ್ರ ಹುಡುಕಿದವನೆಂದು ಹೇಳ ಕೂಡದು. ತನಗೆ ಹಗೆಯವರಾಗಿದ್ದವರನ್ನು ತಗ್ಗಿಸಲೂ, ತಾನು ಆಶಿಸಿದ ಸ್ವಪ್ರಯೋಜನಗಳನ್ನು ಸಂಪಾದಿಸಲೂ ತಕ್ಕದ್ದಾಗಿ ಆ ಅಧಿಕಾರ ನಡಿಸುತ್ತಾ ಬಂದನೆಂದು ಚನ್ನಾಗಿ ತೋರುತ್ತದೆ.

ಮುಂಚೆ ತೋರಿಸಿದ ಪ್ರಕಾರವೇ ನಡೆದ ಮೊದಲನೇ ಯುದ್ಧದ ತರುವಾಯ "ಲೂವೆಸ್ ಪಟ್ಟದ ಒಡಂಬಡಿಕೆ" ಎಂದು ಒಂದು ಸಮಾಧಾನದ ಒಡಂಬಡಿಕೆಯನ್ನು ಮಾಡಿ ಮುಗಿಸಿದರು. ಆ ಒಡಂಬಡಿಕೆಯಲ್ಲಿ ಉಭಯತ್ರರೂ (Magna Charta) "ಮಗ್ನಚಾರ್ತ" ಎಂಬ ಪತ್ರಿಕೆಯಲ್ಲಿ ಕಂಡ ನಿಬಂಧನೆಗಳನ್ನು ತಪ್ಪದೆ ಕೈ ಕೊಳ್ಳ ಬೇಕೆಂದೂ, ಒಬ್ಬ ಅನ್ಯ ದೇಶದವನಾದರೂ ಇಂಗ್ಲಾಂಡಿನಲ್ಲಿ ಉದ್ಯೋಗ ಮಾಡ ಕೂಡದೆಂದೂ, ಅರಸನು ವ್ಯರ್ಥ ಖರ್ಚು ಮಾಡದೆ ಮಿತವಾಗಿ ಖರ್ಚು ಮಾಡಬೇಕೆಂದೂ ಬಹು ದೃಢವಾಗಿ ಥಿಟ್ಟ ಮಾಡಲ್ಪಟ್ಟಿತು. ಮತ್ತು ಇದರ ತರುವಾಯ ಕೂಡಿ ಬಂದ ದೊಡ್ಡ ಆಲೋಚನೇ ಸಂಘದಲ್ಲಿ ಸೇರುವದಕ್ಕೆ

* ಸಂಧಿ ೩. ಲೆಸ್ಟೆರ್ ಎಂಬವನಿಗೆ ವಿರೋಧವಾದ ರಹಸ್ಯ ನಿಬಂಧನೆ.

ಇಂಗ್ಲಾಂದ್ ದೇಶದ ಒಂದೊಂದು ಪಟ್ಣದಲ್ಲಿಯೂ ಊರಿನಲ್ಲಿಯೂ ವಾಸ ಮಾಡುವವರು ಆಲೋಚನೆಗಾರರಾದ ಕೆಲವರನ್ನು ಆದು ಕೊಂಡರು. ಅವರು ಒಂದೊಂದು ವಾಡಿನಲ್ಲಿಯೂ ಘನಸ್ತರು ಆರಿಸಿ ತೆಗದು ಕೊಂಡ ಆಲೋಚನೆಗಾರರ ಸಂಗಡ ಶೇರಿ ಅರಸನೂ ಪ್ರಭುಗಳೂ ಮಾಡಿದ ಯಾವ ಆಲೋಚನೆಗೂ ಬಾಧ್ಯತೆ ಪಟ್ಟರು.

ಆದಾಗ್ಯೂ ಲೆಸ್ತರ್ ಎಂಬ ಪ್ರಭುವು ಬಡ ಜನರಿಂದ ಅಧಿಕವಾಗಿ ಸ್ನೇಹಿಸಲ್ಪಟ್ಟದ್ದನ್ನೂ ವಿಶೇಷವಾದ ಅಧಿಕಾರ ಹೊಂದಿ ಇರುವದನ್ನೂ ಕಂಡು, ಅವನಿಗೆ ಸ್ನೇಹಿತರಾಗಿದ್ದ (Earls of Gloucester & Derby) ಗ್ಲೋಸ್ತರ್ ದರ್ಬಿ ಎಂಬ ಪಟ್ಣಗಳ ಪ್ರಭುಗಳೂ ಇನ್ನು ಕೆಲವರೂ ಬಹು ಹೊಟ್ಟೇ ಕಿಚ್ಚು ಪಟ್ಟರು. ಇದಲ್ಲದೆ ಆ ಕಾಲದಲ್ಲಿ ಅರಸನೂ ಎದ್ವರ್ದ್ ಎಂಬ ರಾಜಪುತ್ರನೂ ಯಥಾರೀತಿಯಾಗಿ ಅವನ ವಶದಲ್ಲಿದ್ದ ಶೆರೆಯವರಾಗಿದ್ದರು. ಅವರನ್ನು ತಮ್ಮ ಇಚ್ಛೆಯ ಪ್ರಕಾರ ತಿರುಗುತ್ತಾರೆಂದು ಜನರು ನೆನಸುವ ಹಾಗೆ ಅಲ್ಲಿಲ್ಲಿ ತಮ್ಮ ಇಷ್ಟವಿದ್ದ ಕಡೆ ಹೋಗಲೂ ಬರಲೂ ಬಿಟ್ಟನು. ಆದಾಗ್ಯೂ ಅವರು ಹೋಗುವ ಸ್ಥಳಗಳಲ್ಲೆಲ್ಲಾ ಅವನ ಕಡೆಯವರು ಹೊಂಚು ನೋಡುವದಕ್ಕೆ ಅವರ ಸಂಗಡ ಹೋಗುವರು. ಎದ್ವರ್ದನು ಬಹು ಅಹಂಕಾರಿಯಾಗಿರುವದರಿಂದ ಇದನ್ನು ಸಹಿಸಲಾರದೆ, ಅರಸನ ಪಕ್ಷದವರು ರಹಸ್ಯವಾಗಿ ಯತ್ನ ಮಾಡಿ ಕೊಂಡಿದ್ದ ಸೈನ್ಯದ ಮುಖ್ಯಸ್ತರ ಸಂಗಡ ನಿರೂಪಗಳ ಮೂಲಕವಾಗಿ ಸ್ನೇಹ ನಿಬಂಧನೆ ಮಾಡಿ ತಪ್ಪಿಸಿ ಕೊಂಡು ಹೋಗಿ ಅವರ ಬಳಿಯಲ್ಲಿ ಶೇರುವದಕ್ಕೆ ಸಮಯ ನೋಡಿ ಕೊಂಡಿದ್ದನು.

ಎದ್ವರ್ದ್ ಎಂಬ ರಾಜಪುತ್ರನು ತಪ್ಪಿಸಿ ಕೊಂಡು ಹೋದದ್ದು ಹ್ಯಾಗಂದರೆ, ವಸಂತಕಾಲದಲ್ಲಿ ಒಂದು ದಿವಸ ಅತಿ ಉದಯದಲ್ಲಿ ದಕ್ಷಿಣ ಘಾಳಿ ಎಲ್ಲರನ್ನು ಉಲ್ಲಾಸ ಪಡಿಸುವಂತೆ ಮೆತ್ತಗೆ ಬೀಸಿ ಕೊಂಡಿರಲು, ಕೆಲವು ಧೊರೇ ಮಕ್ಕಳು ಕುದುರೆ ಹತ್ತಿ, (Hereford) ಹೆರಿಫೋರ್ದ್ ಪಟ್ಣದ ಬಳಿಯ ಇರುವ ಒಂದು ಬೈಲಿನಲ್ಲಿ ಸವಾರಿ ಮಾಡಿ, ಇಲ್ಲಿಗೂ ಅಲ್ಲಿಗೂ ಕುದುರೆಗಳನ್ನು ಓಡಿಸಿ ಜೂಜು ಕಟ್ಟಿ ಬಹಳ ದೂರ ಓಡಿ ಮತ್ತೂ ತಿರುಗಿಸಿ ಕೊಂಡು ಬಂದು ನಾನಾ ವಿಧವಾಗಿ ಉಲ್ಲಾಸ ಪಡು

ತ್ತಾ ಇದ್ದರು. ಇವರಲ್ಲಿ ಒಬ್ಬನು ಬೇರೆ ಜನರ ಸಂಗಡ ಸಂತೋಷ ಪಡದೆ, ತಾನು ಹತ್ತಿದ ಕುದುರೆಯನ್ನು ವೇಗವಾಗಿ ಬಿಡದೆ ಬಾಧಿದ ಮುಖದಿಂದ ಇದ್ದು ಬೇರೊಬ್ಬರು ಇವನನ್ನು ತಮ್ಮಂತೆ ಆಟಾಡ ಬೇಕೆಂದು ಕೇಳಿದಾಗ ಅದು ನನಗೆ ಬೇಡ ಎಂದು ಕಿರುನಗೆಯಿಂದ ತಮಾಷೆ ನೋಡಿ ಕೊಂಡು ನಿಂತನು. ಸ್ವಲ್ಪ ಹೊತ್ತಿನ ತರುವಾಯ ಮಿಕ್ಕಾದವರು ಅನೇಕ ಸಾರಿ ಇವನನ್ನು ಬಹಳ ಬಲವಂತ ಮಾಡಿದ್ದರಿಂದ, ತಾನು ಹತ್ತಿದ ಕುದುರೆಯ ವೇಗವನ್ನು ಪರೀಕ್ಷಿಸ ಅಪೇಕ್ಷಿಸಿದವನಂತೆ ಸ್ವಲ್ಪ ದೂರ ಓಡಿಸಿ ಕೊಂಡು ಹೋದನು. ಅದು ವರೆಗೂ ಸುಮ್ಮನೆ ನಿಂತಿದ್ದದರಿಂದ ಇವನು ಹತ್ತಿದ ಕುದುರೆ ಬಹು ನೆಗದಾಡುತ್ತಾ ಇದ್ದು ಬಹು ವೇಗವಾಗಿ ಓಡಿತು. ಮತ್ತು ಕೆಲವು ಸಾರಿ ಬಹಳ ದೂರ ಓಡಿ ತಿರುಗಿ ಬಂದ ಬೇರೆ ಕುದುರೆಗಳೆಲ್ಲಾ ಬಹಳ ದಣಿದಿದ್ದವು. ಆದದರಿಂದ ಇವನು ಸಂಗಡಲೇ ಓಟದಲ್ಲಿ ಮುಂಕೊಂಡು ಘಾಳಿಯ ಹಾಗೆ ಹಾರಿ ಬಹು ದೂರ ಹೋಗಿ ಬಿಟ್ಟನು. ಅವರೆಲ್ಲರು ಅದನ್ನು ಮೆಚ್ಚಿ ಕೊಂಡಿರುವ ಕಾಲದಲ್ಲಿ ಅಷ್ಟು ವೇಗವಾಗಿ ಓಡಿದ ಕುದುರೆಗಾರನು ಯಾಕೋ ತಿರಿಗಿ ಬರಲಿಲ್ಲವೆಂದು ಕಂಡು ಎಲ್ಲರು ತಮ್ಮಿಂದಲಾದ ಮಟ್ಟಿಗೂ ದಣಿದಿದ್ದ ಕುದುರೆಗಳನ್ನು ಹೊಡದು ಗದಿಮಿ ಬೆನ್ನಟ್ಟಿ ಹೋದರು. ಆದಾಗ್ಯೂ ಓಡಿ ಹೋದವನನ್ನು ಅವರು ಆ ಮೇಲೆ ಕಾಣಲೇ ಇಲ್ಲ. ಹೀಗೆ ತಪ್ಪಿಸಿ ಕೊಂಡು ಹೋದವನು ಎಡ್ವರ್ಡನೆಂಬ ರಾಜಪುತ್ರನೇ. ಈ ಉಪಾಯದಿಂದ ಬಿಡುಗಡೆ ಹೊಂದಿದನು.

ಈ ವಿಧವಾಗಿ ಬಿಡುಗಡೆ ಹೊಂದಿದ ಸಂಗಡಲೇ ಅರಸನ ಸೈನ್ಯಕ್ಕೆ ಒಡಲಿನಲ್ಲಿ ಜೀವವೆಂಬಂತೆ ಶೇರಿ ಕೊಂಡು ಎಡ್ವರ್ಡನು ಆ ಸೈನ್ಯದವರನ್ನು ಧೈರ್ಯ ಪಡಿಸಿದನು. ಅವನು ಯಾವ ಅಪಾಯಕ್ಕೂ ಅಂಜದ ವೀರನೂ, ಯೌವನತ್ವಕ್ಕೆ ತಕ್ಕ ಧಿಕ್ಕಾರವೂ, ತ್ರಾಣೀಕರವೂ, ತನ್ನನ್ನು ಹೊಂದಿದವರಿಗೆ ಅಧಿಕ ದಯಾಳನೂ, ಯುದ್ಧೋಪಾಯಗಳನ್ನೆಲ್ಲಾ ಬಲ್ಲವನೂ ಆಗಿದ್ದದರಿಂದ ಅವನೇ ಲೆಸ್ಟರ್ ಎಂಬವನನ್ನು ಎದುರಿಸ ತಕ್ಕ ಸೈನ್ಯಾಧಿಪತಿಯು. ಲೆಸ್ಟರನು ಲಂಡನ್ ಪಟ್ಣದಲ್ಲಿರುವ (Simon) ಸೀಮೋನ್ ಎಂಬ ತನ್ನ ಕುಮಾರನನ್ನು ಸಹಾಯಕ್ಕಾಗಿ ಕರೆಸಿ ಕೊಂಡನು.

ಎದ್ವರ್ಡ್ ಎಂಬವನು ಅದನ್ನು ತಿಳಿದು ಲೆಸ್ಟರನ ಸೈನ್ಯವನ್ನು ಶೇರುವದಕ್ಕೆ ಬರುವ ಆ ಸಹಾಯಸೈನ್ಯದ ಮೇಲೆ ಬಿದ್ದು ಅದನ್ನು ಜಯಿಸಿ ಅವರ ಬಿರುದಿನ ಧ್ವಜಗಳನ್ನು ಹಿಡಿದು ಕೊಂಡು, ಲೆಸ್ಟರನಿರುವ ಕಡೆಗೆ ಅಭಿಮುಖವಾಗಿ ತನ್ನ ಸೈನ್ಯವನ್ನು ನಡಿಸಿ, ಅವನಿದ್ದ (Evesham) ಎವಷಮ್ ಎಂಬ ಊರಿಗೆ ಸಮೀಪವಾಗಿ ಬಂದಾಗ ಆ ಧ್ವಜಗಳನ್ನು ತನ್ನ ಸೈನ್ಯದ ಮುಂಗಡೆ ಎತ್ತಿ ಸಾಲ್ಗಟ್ಟಿ ನಡಿಸಿದನು.

ಲೆಸ್ಟರನು ತನ್ನ ಎದುರಿಗೆ ಬರುವ ಸೈನ್ಯಮುಖದಲ್ಲಿ ಹಾರುವ ಬಿರುದಿನ ಧ್ವಜಗಳನ್ನು ಕಂಡು ಸಂತೋಷ ಪಟ್ಟು, ತನ್ನ ಮಗನು ನಡಿಸುವ ಸೈನ್ಯವೆಂದೆಣಿಸಿ ಎದಿರ್ಗೊಂಡು ಬಂದನು. ಸಮೀಪಕ್ಕೆ ಬರುವಾಗ ಅದು ಎದುರಾಳಿಯ ಸೈನ್ಯವೆಂದೂ, ಆ ಸೈನ್ಯಸಮುದ್ರದಲ್ಲಿ ತಾನು ನಡಿಸಿದ ಚಿಕ್ಕ ಸೈನ್ಯವು ಒಂದು ಬೊಟ್ಟು ಮಾತ್ರ ಇರುವದೆಂದೂ ತಿಳಿದು ಕೊಂಡು ತನ್ನ ಯುದ್ಧವೀರರನ್ನು ನೋಡಿ ರಾಜಪುತ್ರನ ಕೈಯಲ್ಲಿ ಈ ಹೊತ್ತು ಸಿಕ್ಕಿ ಬಿದ್ದೆವಲ್ಲಿ; ಇನ್ನು ದೇಹಕ್ಕೆ ಬದುಕು ಇಲ್ಲ. ದೇವರು ನಮ್ಮ ಆತ್ಮಗಳಿಗೆ ದಯ ಮಾಡ ಬೇಕೆಂದು ಪ್ರಾರ್ಥಿಸುವದೇ ಹೊರ್ತು ಬೇರೆ ಏನು ಮಾಡುವದು? ಎಂಧೇಳಿ, ಬಹು ಮೂರ್ಖವಾಗಿ ಯುದ್ಧ ಮಾಡ ಪ್ರಾರಂಭಿಸಿದನು. ಉಭಯತ್ರರೂ ಇಂಗ್ಲಿಷಿನವರಾದದರಿಂದ ಒಬ್ಬನೂ ಹಿಂಜರಿದು ಹೋಗದೆ ಬಹಳ ಹೊತ್ತು ಅಧಿಕ ವೈರಾಗ್ಯವಾಗಿ ಯುದ್ಧ ಮಾಡಿದರು. ಕಡೆಯಲ್ಲಿ (De Montfort) ಧಿ ಮೊಂಡ್ಫೋರ್ಶ್ ಎಂಬವನೂ, ಅವನನ್ನು ಬಿಡದೆ ಶೇರಿ ಕೊಂಡಿದ್ದ ಪರಿಜನರಲ್ಲಿ ಅಧಿಕವಾದ ಜನರೂ ಸತ್ತು ಹೋದದರಿಂದ ಅರಸನ ಸೈನ್ಯಕ್ಕೆ ಜಯವ್ಹಾಯಿತು. ಲೆಸ್ಟರ್ ಎಂಬವನು ತನ್ನ ವಶದಲ್ಲಿದ್ದ ವೃದ್ಧಾಪ್ಯನಾದ ಅರಸನಿಗೆ ಸರ್ವಾಯುಧಕವಚವರ್ಗಗಳನ್ನು ಧರಿಸಿ ಯುದ್ಧರಂಗಕ್ಕೆ ಕರಕೊಂಡು ಬಂದಿದ್ದನು. ಹೀಗಿರಲಾಗಿ ಆ ಯುದ್ಧದಲ್ಲಿ ಯುದ್ಧವೀರನೊಬ್ಬನು ಅವನನ್ನು ಅರಸನೆಂದು ತಿಳಿಯದೆ, ಕಡಿಯುವದಕ್ಕೆ ಕೈ ಎತ್ತಿ ಹೊಡಿಯ ಹೋದಾಗ, ಅವನು ಕಡಿಯ ಬೇಡ; (Winchester) ವಿನ್‌ಚೆಸ್ಟರ್ ಪಟ್ಟದ ಹೆನ್ರಿ ಎಂಬ ಅರಸನು ನಾನೇ ಎಂದು ಕೂಗಿದನು. ಅದನ್ನು ಕೇಳಿ ಆ ಶಿಪಾಯಿ ಅರಸನನ್ನು ಕಡಿಯಲಿಲ್ಲ. ಈ ವರ್ತಮಾನ ಎದ್ವರ್ದನೆಂಬ ರಾಜ

ಪುತ್ರನು ತಿಳಿದು ಸಂಗಡಲೇ ತನ್ನ ತಂದೆಯು ಬಳಿಗೆ ತ್ವರೆಯಾಗಿ ಬಂದು ಯುದ್ಧರಂಗಕ್ಕೆ ಆಚೆ ಅವನನ್ನು ತೆಗೆದು ಕೊಂಡು ಹೋಗಿ ಭದ್ರವಾದ ಸ್ಥಳದಲ್ಲಿ ಇರಿಸಿ, ಮತ್ತೂ ಯುದ್ಧಮುಖದಲ್ಲಿ ಯುದ್ಧ ಮಾಡ ಹೋದನು.

ದಿ ಮೊಂದ್‌ಫೋರ್‌ತನು ಹೀಗೆ ಸತ್ತು ಹೋದದ್ದು ಪ್ರಭುಗಳಿಗೆ ಬಹಳ ಸಂತೋಷವಾಗಿದ್ದಾಗ್ಯೂ, ಒಕ್ಕಲುತನದವರಿಗೆ ಬಹಳ ವ್ಯಸನವಾಗಿತ್ತು. ಆ ಕಾಲದಲ್ಲಿ ಕವೀಶ್ವರರು ಹಾಡಿದ ಯಾವ ಪದಗಳಲ್ಲಿಯೂ ಅವನ ಗುಣಾತಿಶಯಗಳನ್ನು ಬಹಳವಾಗಿ ಕೊಂಡಾಡಿ ಇದ್ದಾರೆ. ಇದಲ್ಲದೆ ಅವನು ಸ್ವದೇಶದವರಿಗೆ ಉಪಯೋಗಿಸುವಂತೆ ಯತ್ನಯಿಸಿದ್ದ ನಾನಾವಿಧ ಕಾರ್ಯಗಳನ್ನು ಮುಗಿಸದೆ ಬಿಟ್ಟದ್ದರಿಂದ ರಾಜನೂ ರಾಜಪುತ್ರನೂ ಜಯ ಹೊಂದಿದ ತರುವಾಯ ಅವುಗಳನ್ನು ಬಹು ಪ್ರಯೋಜನವಾದವುಗಳೆಂದು ಕಂಡು ತೀರಿಸುತ್ತಾ ಬಂದದರಿಂದ ಅವನ ನೆನವುಗಳು ಎಲ್ಲರೂ ಒಪ್ಪಿ ಕೊಳ್ಳ ತಕ್ಕ ಯುಕ್ತಿಯಾದವುಗಳೆಂದು ಸ್ಪಷ್ಟವಾಗಿ ತೋರುತ್ತವೆ. ಎದ್ವರ್ದನೆಂಬ ರಾಜಪುತ್ರನು ಆಲೋಚನೇ ಸಂಘದಲ್ಲಿ ಆಳವಾದ ಯುಕ್ತಿಶಾಲಿಯೂ, ಯುದ್ಧರಂಗದಲ್ಲಿ ಹಿಂತೆಗಿಯದ ವೀರನೂ ಆಗಿದ್ದು, ಅರಸನ ಅಧಿಕಾರವನ್ನು ಬಲ ಪಡಿಸಿ ಯಾವ ತರದವರೂ ತನ್ನನ್ನು ಹೊಗಳಲೂ ಸ್ನೇಹಿಸಲೂ ಶಕ್ಯದ್ದಾಗಿ ತನ್ನ ತಂದೆಗೆ ಸಹಾಯವಾಗಿ ಸ್ವಲ್ಪ ಕಾಲ ರಾಜ್ಯ ಪರಿಪಾಲನೆ ಮಾಡಿದ ತರುವಾಯ, ಪೆಲೆಸ್ತೈನ್ ದೇಶಕ್ಕೆ ಹೊರಟು ಹೋಗುವದಕ್ಕೆ ಹೊಸದಾಗಿ ಕೂಡಿದ ಶಿಲುಬೆಯುದ್ಧಸ್ಥರಾದ ಸೈನ್ಯದವರ ಸಂಗಡ ಶೇರಿ ಕೊಂಡು ಸ್ವದೇಶವನ್ನು ಬಿಟ್ಟು ಪ್ರಯಾಣವಾಗಿ ಹೋದನು.

ಹೆನ್ರಿ ಎಂಬ ಅರಸನು ತನ್ನ ಕುಮಾರನು ಹೋದ ಮೇಲೆ ಸ್ವಲ್ಪ ಹೆಚ್ಚು ಕಡಿಮೆ ಮುಂಚಿನ ಹಾಗೆಯೇ ಬುದ್ಧಿಹೀನವಾಗಿ ನಡೆದು, "ಕುಜನರ ನಯನುಡಿಗಳು, ಸುಜನರ ಕ್ಷೇಮಕ್ಕೆ ಹಾನಿಯಕ್ಕುಂ" ಎಂಬುವದನ್ನು ಯೋಚಿಸದೆ ಉಪಯೋಗಕ್ಕೆ ಬಾರದ ವ್ಯರ್ಥರ ಮೇಲೆ ಪ್ರೀತಿ ಇಟ್ಟು ಅವರು ಹೇಳಿದಂತೆ ಆಳಿಕೆ ಮಾಡಿದನು. ಅವನು ಐವತ್ತಾರು ವರುಷ ರಾಜ್ಯಭಾರ ಮಾಡಿ ನಾನಾ ವಿಧವಾದ ಶ್ರಮೆಗಳನ್ನು ಬಹಳ

ದಿವಸಗಳು ಸರಿಸಿದ ತರುವಾಯ 1272ನೇ ವರುಷ (November) ನವಂಬರ್ ತಿಂಗಳ 16ನೇ ತಾರೀಖಿನಲ್ಲಿ ಸತ್ತು ಹೋದನು.

ಮೂರನೇ ಹೆನ್ರಿ ಎಂಬ ಅರಸನು ಬಹು ಬುದ್ಧಿವಂತನಲ್ಲ. ಅವನ ಚಿಂತೆ ಇಲ್ಲದತನದಿಂದಲೂ ಬುದ್ಧಿಹೀನತ್ವದಿಂದಲೂ ಅವನು ಆಳಿದ ಕಾಲವೆಲ್ಲಾ ಪ್ರಜೆಗಳಿಗೂ ಅರಸನಿಗೂ ಸಹಿತವಾಗಿ ನಾನಾ ಕೇಡುಗಳು ಸಂಭವಿಸಿದವು. ಆದಾಗ್ಯೂ ಅವನು ಪಕ್ಷವೂ ದಯೆಯೂ ಉಳ್ಳವನು. ಮತ್ತು ರಾಜ್ಯಾಧಿಕಾರ ಮಾಡುವಾಗಲು ಬಹು ಉದಾರತ್ವವೂ ಸ್ಥೈರಣೆಯೂ ಉಳ್ಳವನಾಗಿದ್ದನು. ತನ್ನ ಮಕ್ಕಳನ್ನು ಬಹು ಪ್ರೀತಿಯಿಂದ ನಡಿಸಿ ಕೊಂಡು ಬಂದನು. ಅವನ ಕುಮಾರನಾದ ಎಡ್ವರ್ಡನು ಯಾವಾಗಲೂ ಅವನಿಗೆ ಬಹಳ ಉಪಚಾರ ಮಾಡುತ್ತಾ ಬಂದನು. ಮತ್ತು ಅವನ ಮರಣಸುದ್ದಿಯನ್ನು ಕೇಳಿ ಬಹಳ ದುಃಖ ಪಟ್ಟನು.

ಎಡ್ವರ್ಡನೆಂಬ ರಾಜಪುತ್ರನು ಅವನ ತಂದೆಯು ಸತ್ತ ಕಾಲದಲ್ಲಿ, (Palestine) ಪೆಲೆಸ್ತೈನಿನಲ್ಲಿ ಇದ್ದು ತಿರುಗಿ ಬರುವ ಮಾರ್ಗದಲ್ಲಿ (Savoy) ಸವೋಯಿ ಎಂಬ ನಾಡಿನಲ್ಲಿ ಬರುತ್ತಾ ಇದ್ದನು. ಆ ಸಮಾಚಾರವನ್ನು ಕೇಳಿ ರಾಜಪಟ್ಟವನ್ನು ಹೊಂದುವದಕ್ಕೆ ಅಪೇಕ್ಷೆ ಇಲ್ಲದವನಂತೆ ಇನ್ನೂ ಎರಡು ವರುಷಗಳ ಮಟ್ಟಿಗೂ ನಾನಾ ದೇಶಗಳಲ್ಲಿ ಪ್ರಯಾಣ ಮಾಡಿ ಕೊಂಡು ಹೋದನು. ಹಾಗಿದ್ದಾಗ್ಯೂ ಇಂಗ್ಲಾಂಡ್ ದೇಶದವರು ಅವನನ್ನು ಅಷ್ಟು ಅಧಿಕವಾಗಿ ಸ್ನೇಹಿಸಿದದರಿಂದ ಆ ಕಾಲವೆಲ್ಲಾ ಅವರು ಗದ್ದಲವೂ ಕಲಹವೂ ಏನೂ ಮಾಡದೆ ಬಹು ಕ್ರಮವಾಗಿ ನಡಿಯುತ್ತಾ ಬಂದರು. ಆದದರಿಂದ ಅವನು ತಿರಿಗಿ ಬಂದಾಗ ದೇಶವೆಲ್ಲಾ ಒಳ್ಳೇ ಸಮಾಧಾನವಾಗಿಯೂ ಕ್ರಮವಾಗಿಯೂ ಇರುವದನ್ನು ಕಂಡು ಸಂತೋಷಿಸಿದನು.

ಅದರ ತರುವಾಯ ಅವನು ಪೆಲೆಸ್ತೈನ್ ದೇಶದಲ್ಲಿ ಬಹು ಕೀರ್ತಿ ಪ್ರತಾಪವನ್ನು ಹೊಂದಿ, ಆ ದೇಶದವರು ರಿಚಾರ್ಡ್ ಎಂಬ ಅರಸನ ಪರಾಕ್ರಮವನ್ನು ಕಂಡು ಇಂಗ್ಲಿಷಿನವರನ್ನು ಮಹಾ ವೀರರೆಂದು ಮುಂಚೆ ತಾವು ಎಣಿಸಿದ್ದ ಪ್ರಕಾರ ಇನ್ನೂ ಅವರಿಗೆ ಅಂಜಿಕೆ ಇರುವಂತೆ ಹೋರಾಡಿದನು. ಎಡ್ವರ್ಡನು ತನ್ನ ಬಲದಿಂದಲೂ, ಶೌರ್ಯದಿಂದಲೂ, ಸಾಮರ್ಥ್ಯದಿಂದಲೂ, (Saracens) ಸರಸೇನರು ತನಗೆ ಬಹು ಜಯಪ

ಡುವ ಹಾಗೆ ಮಾಪಿದ್ದರಿಂದ ಅವನನ್ನು ಕೊಲ್ಲುವದಕ್ಕೆ ಅವರು ಕೇಡಾಲೋಚನೆ ಮಾಡಿ, ವಿಷವೇರಿಸಿದ ಕತ್ತಿಯಿಂದ ಅವನನ್ನು ತಿವಿಯುವದಕ್ಕೆ ಒಬ್ಬ ಕೊಲೆಗಾರನನ್ನು ಕಳುಹಿಸಿದರು. ಅವನು ಹೀಗೆ ಘಾಯ ಪಟ್ಟದ್ದರಿಂದ (Eleanor) ಎಲೆನೋರ್ ಎಂಬ ಅರಸಿಯು ಆ ಘಾಯವನ್ನು ತನ್ನ ಬಾಯಿಯಿಂದ ಚಪ್ಪರಿಸಿ, ವಿಷವನ್ನು ಹೀರಿ ತೆಗದು ಹಾಕಿ ತನ್ನ ಪುರುಷನ ಪ್ರಾಣವನ್ನು ಕಾಪಾಡಿದಳೆಂದು ಚರಿತ್ರಗಾರರು ಹೇಳಿ ಇದ್ದಾರೆ.

ಅವನು ತಿರಿಗಿ ಬಂದ ತರುವಾಯ (Wales) ವೇಲ್‍ಸ್ ನಾಡಿನವರ ಸಂಗಡ ಯುದ್ಧ ಮಾಡ ಪ್ರಾರಂಭಿಸಿದನು. ಆ ನಾಡಿನವರು ಯಾರಂದರೆ, ಪೂರ್ವ ಕಾಲದಲ್ಲಿ ಸಕ್ಸನರು ಬಂದು ಇಂಗ್ಲಾಂಡಿನ ಮೇಲೆ ಯುದ್ಧ ಮಾಡಿದಾಗ ಪಶ್ಚಿಮ ಕಡೆ ಬೆಟ್ಟದ ಶೀಮೆಯಲ್ಲಿ ಆಶ್ರಯ ಮಾಡಿ ಕೊಂಡಿದ್ದ ಪೂರ್ವ ಬ್ರಿತಾನ್ಯರ ವಂಶದವರು. ಅವರು ತಮ್ಮ ನಾಡಿಗೆ ಸಮೀಪದಲ್ಲಿರುವ ಅಯಾ ದೇಶದವರ ಸಂಗಡ ಎಡೆ ಬಿಡದೆ ಝಗಳ ಮಾಡುತ್ತಾ ಇದ್ದರು. ಅವರು ಇದ್ದ ನಾಡಿನಲ್ಲಿ ಸಹ ಕೊಲೆಯೂ ಕಲಹವೂ ಯಾವಾಗಲೂ ನಡಿಯುವದು. ಇದಲ್ಲದೆ (Llewellyn) ಲಿವೆಲಿನ್ ಎಂಬ ಆ ನಾಡಿನ ಅರಸನು ಹೆನ್ರಿ ಅರಸನ ಕಾಲದಲ್ಲಿ ಉಂಟಾದ ಯುದ್ಧಗಳಲ್ಲಿ (De Montfort) ದಿ ಮೊಂದ್‍ಫೋರ್‍ತ್ ಎಂಬವನಿಗೆ ಸಹಾಯ ಮಾಡಿ ಇದ್ದನು. ಆದದರಿಂದ ಎದ್ವರ್ದನೆಂಬ ಅರಸನು ಆಗ ಮಾಡಲ್ಪಟ್ಟ ಸಮಾಧಾನದ ಒಡಂಬಡಿಕೆಯ ಪ್ರಕಾರ ಅವನು ನಡಿಯದೆ, ತನಗೆ ಒಳ ಪಟ್ಟ ಅರಸನಾಗಿ ತನಗೆ ಸೇವೆ ಮಾಡದೆ ಹೋದದರಿಂದ, ಅವನನ್ನು ದಂಡಿಸಿ ಅಣಗಿಸಿ ಬಿಡ ಬೇಕೆಂದು ಯುದ್ಧ ಮಾಡ ಪ್ರಾರಂಭಿಸಿದನು. ಇದಲ್ಲದೆ ಎದ್ವರ್ದನು ಆ ದ್ವೀಪವನ್ನೆಲ್ಲಾ ಒಂದೇ ರಾಜ್ಯವಾಗಿ ಕಟ್ಟಿ ಕೊಳ್ಳ ಬೇಕೆಂಬುವ ಅತ್ಯಾಶೆಯುಳ್ಳವನಾಗಿದ್ದದರಿಂದ, ವೇಲ್‍ಸ್ ನಾಡಿನ ಅರಸನು ದ್ರೋಹ ಮಾಡಿದ ಸಂಗಡಲೇ ತನ್ನ ಅಭಿಪ್ರಾಯವನ್ನು ಈಡೇರಿಸುವದಕ್ಕೆ ಇದೇ ಒಳ್ಳೇ ಸಮಯವೆಂದು ಸಂತೋಷದಿಂದ ಯುದ್ಧಕ್ಕೆ ಪ್ರಾರಂಭಿಸಿದನು. ವೇಲ್‍ಸಿನವರು ಬಹು ವೀರ್ಯದಿಂದ ಯುದ್ಧ ಮಾಡುವವರಾದಾಗ್ಯೂ, ಅವರು ಅಭ್ಯಾಸಿಸಲ್ಪಡದವರಾದದರಿಂದಲೂ, ಅವರೊಳಗೆ ವಿಭೇದಗಳು ಉಂಟಾಗಿದ್ದದರಿಂದಲೂ

ಎದ್ವರ್ಡನು ಅವರನ್ನು ಬಹು ಶೀಘ್ರವಾಗಿ ಜಯಿಸಿ ಬಿಟ್ಟನು. ಲಿವೆಲಿನ್ ಎಂಬ ಅರಸನ ಸಹೋದರನಾದ ದಾವೀದನು ಮುಂತಾದವರು ಆ ಕಾಲದಲ್ಲಿ ದ್ರೋಹ ಮಾಡಿದರು.

ವೇಲ್ಸ್ ನಾಡಿನವರು ಆ ಸಮಯದಲ್ಲಿ ಅಣಗಿಸಲ್ಪಟ್ಟಾಗ್ಯೂ ಅವರು ಬಹಳ ಕಾಲ ಸುಮ್ಮನೆ ಇರಲಿಲ್ಲ. ಹ್ಯಾಗಂದರೆ ಅರಸನ ಸಹೋದರನಾದ ದಾವೀದನು ತಾನು ಇನ್ನು ಮೇಲೆ ದ್ರೋಹ ಮಾಡುವದಿಲ್ಲವೆಂದು ತಗ್ಗಿ ಬಂದದ್ದಲ್ಲದೆ ಲಿವೆಲಿನ್ ತನ್ನ ಬಿರುದಿನ ಧ್ವಜವನ್ನು ಏರಿಸಿದ ಸಂಗಡಲೇ ಧೈರ್ಯಶಾಲಿಗಳಾದ ಆ ಬೆಟ್ಟದ ಶೀಮೆಯವರು ತಮ್ಮ ನಾಡನ್ನು ಕಾಪಾಡ ಬೇಕೆಂದು ಸಂಗಡಲೇ ಕೂಡಿ ಕೊಂಡರು. ಆದಾಗ್ಯೂ ಎದ್ವರ್ಡನು ಮತ್ತೂ ಜಯ ಹೊಂದಿದನು. ಹ್ಯಾಗಂದರೆ, ವೇಲ್ಸಿನವರ ಸೈನ್ಯವು ಆಳವಾಗಿಯೂ ವೇಗವಾಗಿಯೂ ಹರಿಯುವ ಒಂದು ನದಿಯ ಆಚೇ ಥಡದಲ್ಲಿ ಬಹು ಬಲವಾದ ಸ್ಥಳದಲ್ಲಿ ದಂಡಿಳಿದಿದ್ದಾಗ, ಇಂಗ್ಲಿಷಿನವರು ಅವರ ಮೇಲೆ ತಗಲುವದಕ್ಕೆ ಇಕ್ಕಟ್ಟಾದ ಒಂದು ಶೇತುವೆಯ ಹೊರ್ತು ಬೇರೆ ಮಾರ್ಗವಿಲ್ಲದೆ ಸಂಕಟ ಪಟ್ಟರು. ಆಗ ದ್ರೋಹಿಯಾದ ವೇಲ್ಸ್ ದೇಶದವನೊಬ್ಬನು ಎದ್ವರ್ಡನ ಸೈನ್ಯವು ಆ ನದಿಯನ್ನು ದಾಟ ತಕ್ಕ ರೇವನ್ನು ತೋರಿಸಿದನು. ಅವರು ಆ ಮಾರ್ಗವಾಗಿ ನದಿಯನ್ನು ದಾಟಿ ವೇಲ್ಸಿನವರ ಮೇಲೆ ಬಿದ್ದು, ಅದನ್ನು ಪೂರ್ಣವಾಗಿ ಸೋಲಿಸಿ, ಲಿವೆಲಿನ್ ಎಂಬ ಅರಸನನ್ನು ಕೊಂದು, ಅವನ ಸಹೋದರನಾದ ದಾವೀದನನ್ನು ಶೆರೆಯಾಗಿ ಹಿಡಿದರು.

ಹೀಗೆ ಜಯಿಸಿದ ತರುವಾಯ ಎದ್ವರ್ಡನು ಮಾಡಿದ್ದು ಧರ್ಮವಲ್ಲ. ಏನಂದರೆ, ಲಿವೆಲಿನ್ ಎಂಬವನ ಹೆಣವನ್ನು ಅವಮಾನ ಪಡಿಸಿದ್ದಲ್ಲದೆ, ದಾವೀದನನ್ನು ದ್ರೋಹಿ ಎಂಥೇಳಿ ಕೊಲ್ಲಿಸಿದನು. ದಾವೀದನು ಹ್ಯಾಗಾದರೂ ದ್ರೋಹಿಯೇ ಸರಿ. ಲಿವೆಲಿನ್ ಎಂಬ ಅರಸನು ತನ್ನ ದೇಶವನ್ನೂ ರಾಜ್ಯವನ್ನೂ ಕಾಯ ಬೇಕೆಂದು ಬಹು ಧೈರ್ಯವಾಗಿ ಹೋರಾಡಿದ್ದೇ ಹೊರ್ತು ಬೇರೆ ಏನೂ ಅಪರಾಧ ಮಾಡದೆ ಇದ್ದದರಿಂದ ಅವನನ್ನು ಜಯಿಸಿದ ಅರಸನು ಅವನನ್ನು ಘನ ಪಡಿಸ ಬೇಕೇ ಹೊರ್ತು, ಅವನಿಗೆ ಅವಮಾನ ಮಾಡಿದ್ದು ನ್ಯಾಯವಲ್ಲ.

## ಸಂಧಿ 8. ವೇಲ್ಸ್ ನಾಡು ಒಳ ಪಡಿಸಲ್ಪಟ್ಟದ್ದು.

ಹೀಗೆ ವೇಲ್ಸ್ ನಾಡು ಸಂಪೂರ್ಣವಾಗಿ ವಶವಾಗಿ ಇಂಗ್ಲಾಂಡ್ ಅರಸನು ಆಳಿದ ಶೀಮೆಗಳಲ್ಲಿ ಎಣಿಸಲ್ಪಟ್ಟಿತು. ಮತ್ತು ಎಧ್ವರ್ದನು ಗರ್ಭವತಿಯಾದ ತನ್ನ ಅರಸಿಯನ್ನು ವೇಲ್ಸ್ ದೇಶದ ಉತ್ತರ ಕಡೆ ಇರುವ (Caernarvon) ಕರ್ನಾರ್ವನ್ ಎಂಬ ಪಟ್ಣಕ್ಕೆ ಕಳುಹಿಸಿದನು. ಅವಳು ಅಲ್ಲಿ ಒಬ್ಬ ಕುಮಾರನನ್ನು ಹೆತ್ತಾಗ ಅವನಿಗೆ "ವೇಲ್ಸ್ ದೇಶದ ಪ್ರಭು" ಎಂಬ ಪಟ್ಟ ಕಟ್ಟಿದನು. ಹೀಗೆ ತನಗೆ ನೂತನವಾಗಿ ವಶವಾದ ಆ ದೇಶದ ಪ್ರಜೆಗಳಿಗೆ ಸಂತೋಷವನ್ನು ಉಂಟು ಮಾಡಿದನು. ಅಲ್ಲಿ ಹುಟ್ಟಿದ ಅರಸ ಕುಮಾರನು ತರುವಾಯ ಆಳಿದ "ಎರಡನೇ ಎಧ್ವರ್ದನು" ಎಂದು ಕರೆಯಲ್ಪಟ್ಟನು. ಮತ್ತು ಆ ಕಾಲದಿಂದ ಇಂಗ್ಲಾಂಧಿನಲ್ಲಿ ಪಟ್ಟದ ಧೊರೆಗೆ "ವೇಲ್ಸ್ ಪ್ರಭು" ಎಂಬುವದೇ ಪಟ್ಟದ ಹೆಸರು.

ಆ ತರುವಾಯ ಎಧ್ವರ್ದನು ಮುಂಚೆ ಹೇಳಿದ್ದಕ್ಕಿಂತ ಉಗ್ರವಾದ ಒಂದು ಯುದ್ಧವನ್ನು ಬಹಳ ದಿವಸಗಳು ನಡಿಸುವದಕ್ಕೆ ಹೇತುವೆಯಾದ ಒಂದು ಸಂಗತಿ ಸಂಭವಿಸಿತು. ಅದು ಏನಂದರೆ, (Scotland) ಸ್ಕೊತ್ಲಂದ್ ದೇಶದಲ್ಲಿ (Alexander) ಅಲೆಕ್ಸಾಂದರ್ ಎಂಬವನು ಆ ಕಾಲದಲ್ಲಿ ಧೊರೆತನ ಮಾಡಿದನಂತೆ; ಅವನಿಗೂ ಎಧ್ವರ್ದನಿಗೂ ಸಮೀಪ ಬಂಧುತ್ವವಂತೆ. ಹ್ಯಾಗಂದರೆ ಅವನ ಮೊಮ್ಮಗಳು ಎಧ್ವರ್ದನ ಮಗನಿಗೆ ನೇಮಿಸಲ್ಪಟ್ಟಿದ್ದಳು. ಆ ಅರಸನು ಆಕಸ್ಮಿಕವಾಗಿ ಕೆಳಗೆ ಬಿದ್ದು ಸತ್ತು ಹೋದನು. ಮತ್ತು (Margaret) ಮರ್ಗ್ರೆತ್ ಎಂಬ ಅವನ ಮೊಮ್ಮಗಳು ಸಹ ಸ್ವಲ್ಪ ಕಾಲದ ತರುವಾಯ ಸತ್ತು ಹೋದದರಿಂದ ಆ ದೇಶವನ್ನು ಆಳುವದಕ್ಕೆ ಬಾಧ್ಯನಾದವನೊಬ್ಬನೂ ಇಲ್ಲ. ಆದದರಿಂದ ಆ ದೇಶದ ಪ್ರಭುಗಳು ಅನೇಕರು ತಮಗೆ ಆ ಪಟ್ಟ ದೊರಕ ಬೇಕೆಂದು ವ್ಯಾಜ್ಯವಾಡ ಪ್ರಾರಂಭಿಸಿದರು. ಅವರೊಳಗೆ (Robert Bruce) ರೋಬರ್ತ್ ಬ್ರೂಸ್, (John Balliol) ಜಾನ್ ಬೆಲಿಯೊಲ್ ಎಂಬವರು ಮುಖ್ಯಸ್ಥರು. ವಾಗ್ವಾದ ಮಾಡಿದ ಇವರಿಬ್ಬರೂ ಎಧ್ವರ್ದನಿಗೆ ಆ ಕಾರ್ಯವನ್ನು ತಿಳಿಸಿ, ಅವನ ತೀರ್ಪಿನ ಪ್ರಕಾರ ನಡಿಯುವೆವೆಂದು ಸಮ್ಮತಿಸಿ ಕೊಂಡರು. ಎಧ್ವರ್ದನು ನ್ಯಾಯದ ಪ್ರಕಾರ ಆ ವ್ಯಾಜ್ಯವನ್ನು ತೀರಿಸುವದಕ್ಕೆ

ಮನಸ್ಸಿಲ್ಲದವನಾಗಿ, ತಾನು ಆ ದೇಶವನ್ನು ಸಹ ಕಟ್ಟಿ ಕೊಳ್ಳ ಬೇಕೆಂ ಬ ಅತ್ಯಾಶೆಯಿಂದ ಈ ವ್ಯಾಜ್ಯದಲ್ಲಿ ತನಗೆ ಅನುಕೂಲವಾಗುವದೆಂದು ಎದುರು ನೋಡಿ ಕೊಂಡಿದ್ದನು. ಆದದರಿಂದ "ಇಬ್ಬರ ನ್ಯಾಯ ಒಬ್ಬರಿ ಗಾಯ" ಎಂಬುವ ಗಾದೆಯ ಪ್ರಕಾರ ಎದ್ವರ್ದನಿಗೆ ಆಯ ಬಿತ್ತು. ಹ್ಯಾಗಂದರೆ, ಆ ಕಾರ್ಯವನ್ನು ತೀರಿಸುವದಕ್ಕೆ ಇಂಗ್ಲಾಂದಿನ ಉತ್ತರ ಭಾಗದಲ್ಲಿರುವ ಒಂದು ಸ್ಥಳವನ್ನು ಗೊತ್ತು ಮಾಡಿ, ಅಲ್ಲಿ ಕೂಡಿದ ಸಂ ಘದಲ್ಲಿ ಸಂಗತಿಯನ್ನು ಕೇಳಿ ಬೆಲಿಯೊಲ್ ಎಂಬವನಿಗೆ ಪಟ್ಟ ದೊರಕ ಬೇಕೆಂದೂ, ಅವನು ಇಂಗ್ಲಾಂದ್ ಅರಸನನ್ನು ತನ್ನ ಯಜಮಾನನೆಂದು ವಂದಿಸಿ ಒಳ ಪಟ್ಟ ಅರಸನಾಗಿ ಆಳಿ ಕೊಳ್ಳ ಬೇಕೆಂದೂ ತೀರ್ಮಾನ ಮಾಡಿ ದನು. ಸ್ಕೊತ್ಲಾಂದ್ ಅರಸನು ಹೀಗೆ ಕೆಳಗಿನ ಅರಸನಾಗಿ ವಂದನೆ ಮಾ ಡುವದು ನ್ಯಾಯವಲ್ಲ. ಯಾಕಂದರೆ, (Tweed) ತ್ವೀದ್ ಎಂಬ ನದಿ ಗೆ ದಕ್ಷಿಣವಾಗಿರುವ ಶೀಮೆ ಇಂಗ್ಲಾಂದಿಗೆ ಶೇರಿದ್ದರಿಂದ ಅವುಗಳನ್ನು ಕುರಿತು ಸ್ಕೊತ್ಲಾಂದ್ ಅರಸನು ಇಂಗ್ಲಾಂದ್ ಅರಸನಿಗೆ ಸೇವೆ ಮಾಡು ವದು ನ್ಯಾಯವೇ ಹೊರ್ತು, ಸ್ವದೇಶವನ್ನು ಕುರಿತು ಹಾಗೆ ಮಾಡುವ ದು ವಾಡಿಕೆ ಅಲ್ಲ. ಒಂದೇ ಸಾರಿ ಮಾತ್ರ ಮುಂಚೆ ಯಾರೋ ಒಬ್ಬ ನು ಹಾಗೆ ವಂದಿಸಿ ಇದ್ದನಂತೆ. ಆ ವರಿಯಂತರ ಬೇರೊಬ್ಬರು ಹಾಗೆ ಮಾಡಿದ್ದೇ ಇಲ್ಲ. ಆದಾಗ್ಯೂ ಹೊಸದಾಗಿ ಪಟ್ಟ ಹೊಂದಿದ ಅರಸನು ಎದ್ವರ್ದನಿಗೆ ಸೇವೆ ಮಾಡಿ ತಾನು ಒಳ ಪಟ್ಟ ಅರಸನು ಎಂದು ಒಪ್ಪಿ ಕೊಂಡನು; ಅವನು ಹೆಸರಿಗೆ ಮಾತ್ರ ತಾನು ಒಳ ಪಟ್ಟಿರ ಬೇಕೆಂದು ನೆ ನಸಿ ಹಾಗೆ ಸೇವೆ ಮಾಡ ಒಡಂಬಟ್ಟನೆಂದು ತೋರುತ್ತದೆ.

ಅವನು ಹಾಗೆ ನೆನಸಿದ್ದು ತಪ್ಪು. ಹ್ಯಾಗಂದರೆ ಎದ್ವರ್ದನು ಅವ ನನ್ನು ಅಲ್ಪವಾಗಿ ಎಣಿಸಿ ಬಹುಶಾ ಅವಮಾನ ಪಡಿಸಿ ನಿಂದಿಸಿದ್ದರಿಂದ ಅವನು ತಾನು ಇನ್ನು ಮೇಲೆ ಆ ಅರಸನಿಗೆ ಒಳ ಪಡುವದಿಲ್ಲವೆಂದು ಬ ಹಿರಂಗವಾಗಿ ಹೇಳಿ ಯುದ್ಧ ಮಾಡ ಯತ್ನಯಿಸಿದನು. ಆ ಕಾಲದಲ್ಲಿ ಎದ್ವರ್ದನು ಫ್ರಾನ್ಸ್ ದೇಶದ ಅರಸನ ಸಂಗಡ ಯುದ್ಧ ಮಾಡ ಆರಂ ಭಿಸಿದ್ದನು. ಮತ್ತು ವೇಲ್ಸ್ ನಾಡಿನಲ್ಲಿಯೂ ಕಲಹ ಉಂಟಾಗಿತ್ತು. ಆದಾಗ್ಯೂ ಸ್ಕೊತ್ಲಾಂದ್ ಅರಸನು ಮಾಡಿದ್ದನ್ನು ಕೇಳಿದ ಸಂಗಡಲೇ

ಫ್ರಾನ್ಸ್ ದೇಶದವರಿಗೆ ವಿರೋಧವಾಗಿ ಯುದ್ಧ ಮಾಡುವದಕ್ಕೆ ತಾನು ಮಾಡಿದ್ದ ಯತ್ನಗಳನ್ನೆಲ್ಲಾ ನಿಲ್ಲಿಸಿ, ವೇಲ್ಸ್ ನಾಡಿಗೆ ದಂಡು ನಡಿಸಿ ಕೊಂಡು ಹೋಗಿ, ಅದನ್ನು ಸಮಾಧಾನ ಪಡಿಸಿ ಸ್ಕೊತ್ಲಾಂದಿಗೆ ನೆಟ್ಟಗೆ ದಂಡೆತ್ತಿ ಕೊಂಡು ಹೋದನು. ಅಲ್ಲಿ ಅವನಿಗೆ ಸಂಗಡಲೇ ಜಯವಾಯಿತು. (Dunbar) ದನ್‌ಬಾರ್ ಎಂಬ ಊರಿನ ಬಳಿಯ ಸ್ಕೊತ್ಲಾಂದರ ಸೈನ್ಯವು ಮುರಿಯಲ್ಪಡಲಾಗಿ ಅವರ ಅರಸನು ಎದ್ವರ್ದನ ಪಾದದ ಬಳಿಯಲ್ಲಿ ವಿಧೇಯನಾಗಿ ಬಂದನು. ಆದದರಿಂದ ಸ್ವಲ್ಪ ಕಾಲದೊಳಗೆ ಆ ದೇಶದವರು ಸ್ವಾಧೀನವನ್ನು ಕಳಕೊಂಡರು. (Balliol) ಬೆಲಿಯೊಲ್ ಎಂಬವನು ತನಗೆ ಧರಿಸಲ್ಪಟ್ಟಿದ್ದ ಕಿರೀಟವನ್ನು ಎದ್ವರ್ದನ ಕೈಯಲ್ಲಿ ಒಪ್ಪಿಸಿದ ತರುವಾಯ ಮೂರು ವರುಷಕಾಲ ಶೆರೆಯಲ್ಲಿ ಹಾಕಲ್ಪಟ್ಟಿದ್ದನು. ಆದದರಿಂದ ಎದ್ವರ್ದನು ಸ್ಕೊತ್ಲಾಂದ್ ದೇಶದ ಪ್ರಧಾನ ಪಟ್ಣಗಳಲ್ಲಿ ಇಂಗ್ಲಿಷಿನ ಕಾವಲಿಸೈನ್ಯಗಳನ್ನು ಇರಿಸಿದ ತರುವಾಯ ಆ ದೇಶವೆಲ್ಲಾ ಸ್ವಾಧೀನವಾಯಿತು. ಇನ್ನು ಮೇಲೆ ಕಲಹ ಮಾಡಲಾರರೆಂದು ಎಣಿಸಿ ತನ್ನ ಸ್ಥಳಕ್ಕೆ ಹೋಗಿ ಶೇರಿದನು.

ಹಾಗಿದ್ದರೂ ಸ್ಕೊತ್ಲಾಂದರು ಅನ್ಯರಿಗೆ ಅಣಗಲಾರದ ವೀರ್ಯವೂ ದೊಡ್ಡಸ್ತಿಕೆಯೂ ಉಳ್ಳ ಜಾತಿಯವರಾದದರಿಂದ ತತ್ಕಾಲಕ್ಕೆ ತಗ್ಗಿ ಹೋದಾಗ್ಯೂ ಅವರು ಅಧೈರ್ಯ ಪಡಲಿಲ್ಲ. ಆದದರಿಂದ ಮಾರಣೆ ವರುಷದಲ್ಲಿ ಆ ದೇಶದಲ್ಲಿ ಇದ್ದ (William Wallace) ಉಲ್ಲಿಯಮ್ ವಾಲೆಸ್ ಎಂಬ ದೊಡ್ಡ ಒಕ್ಕಲತನದವನೊಬ್ಬನು ಇಂಗ್ಲಾಂದರ ಸಂಗಡ ಯುದ್ಧ ಮಾಡ ಸ್ವದೇಶದವರನ್ನು ಎಬ್ಬಿಸಿ ಬಿಟ್ಟು ಯುದ್ಧ ಪ್ರಾರಂಭಿಸಿದನು. ಅವನು ಅಧಿಕ ಪರಾಕ್ರಮವೂ ಮನೋಸಾಧನೆಯೂ ಉಳ್ಳವನಾಗಿ, ವೈರಾಗ್ಯದಿಂದಲೂ ಪೌರುಷದಿಂದಲೂ ತುಂಬಿ, ಹೆಚ್ಚಿದ ವೇಳೆಯಲ್ಲಿ ಅವರನ್ನು ನಡಿಸುವದಕ್ಕೂ ತಗ್ಗಿದ ವೇಳೆಯಲ್ಲಿ ಅವರನ್ನು ದೃಢಪಡಿಸುವದಕ್ಕೂ ತಕ್ಕವನಾಗಿದ್ದನು. ಮೊದಲಲ್ಲಿ ಇಂಗ್ಲಿಷಿನವರು ಮಾಡಿದ ಕ್ರೂರತ್ವಕ್ಕೆ ವ್ಯಸನ ಪಟ್ಟು, ಸ್ವದೇಶವನ್ನು ಕಾಪಾಡ ಬೇಕೆಂಬ ವಾಂಛೆಯಿಂದ ತೃಣೀಕರಿಸಿದ ಒಬ್ಬರಿಬ್ಬರು ಮಾತ್ರ (Wallace) ವಾಲೆಸ್ ಎಂಬವನ ಕಡೆಗೆ ಶೇರಿದವರು. ಆದಾಗ್ಯೂ ಬರ ಬರ ಅವನ ಬಳಿಯ

ಲ್ಲಿದ್ದ ಚಿಕ್ಕ ದಂಡು ಹೆಚ್ಚಿ, ದೃಢವೂ ವೀರ್ಯವೂ ಉಳ್ಳ ದೊಡ್ಡ ಸೈನ್ಯ ವಾಯಿತು. ಆ ಸೈನ್ಯಕ್ಕೆ ಯುದ್ಧಾಭ್ಯಾಸವೂ, ತಕ್ಕ ಆಯುಧಗಳೂ ಇ ಲ್ಲದಿದ್ದಾಗ್ಯೂ ಅವರು ಇಂಗ್ಲಿಷಿನವರ ಸಂಗಡ ಪ್ರಾರಂಭಿಸಿದ ಮೊದಲ ನೇ ಯುದ್ಧದಲ್ಲಿ ಅವರನ್ನು ಬೆನ್ನು ಕೊಟ್ಟು ಓಡ ಮಾಡಿದರು. ಹ್ಯಾಗಂ ದರೆ ಉಭಯ ಸೈನ್ಯಗಳೂ ಆಳವಾದ ಒಂದು ನದಿಗೆ ಈಚೆ ಆಚೆ ಥಡಗ ಳಲ್ಲಿ ಸನ್ನದ್ಧರಾಗಿ ನಿಲ್ಲಲು ಇಕ್ಕಟ್ಟಾದ ಒಂದು ಶೇತುವೆಯ ಮಾರ್ಗ ವಾಗಿ ಆ ನದಿಯನ್ನು ದಾಟ ಬಹುದೇ ಹೊರ್ತು ಬೇರೆ ಮಾರ್ಗವಿಲ್ಲ ವೆಂದು ಕಂಡು, ಇಂಗ್ಲಿಷ್ ಸೈನ್ಯಾಧಿಪತಿಯು ತನ್ನ ರಾಜುವೆಯವರು ಹೇ ಳಿದ ಆಲೋಚನೆಯನ್ನು ಅಸಡ್ಡೆ ಮಾಡಿ, ಆ ಶೇತುವೆಯ ಮಾರ್ಗವಾ ಗಿ ತನ್ನ ಸೈನ್ಯದ ಸಂಗಡ ಆ ನದಿಯನ್ನು ದಾಟ ಬೇಕೆಂದು ನಿರ್ಣಯಿಸಿ ದನು. (Wallace) ವಾಲೆಸ್ ಎಂಬವನು ಹಗೆಯವರ ಸೈನ್ಯದಲ್ಲಿ ಒಂ ದು ಭಾಗ ನದಿಯನ್ನು ದಾಡುವ ಮಟ್ಟಿಗೂ ಸುಮ್ಮನೆ ಇದ್ದು, ತರುವಾ ಯ ಅವರ ಮೇಲೆ ತನ್ನ ಎಲ್ಲಾ ಸೈನ್ಯದ ಸಂಗಡ ಮೂರ್ಖವಾಗಿ ಬಿ ದ್ದು, ಸುಲಭವಾಗಿ ಓಡಿಸಿ ಬಿಟ್ಟನು. ಮುರಿಯಲ್ಪಟ್ಟ ಸೈನ್ಯಕ್ಕೆ ಸಹಾಯ ಮಾಡುವದಕ್ಕೆ ಬೇರೆ ಸೈನ್ಯವು ಬಂದು ಶೇರುವಷ್ಟರೊಳಗೆ ಅವರು ಮುರಿ ಯಲ್ಪಟ್ಟು ಓಡಿ, ಹಿಂದುಗಡೆ ಆಳವಾದ ನದಿ ಇದ್ದದರಿಂದ ತಪ್ಪಿಸಿ ಕೊ ಳ್ಳ ಸ್ಥಳವಿಲ್ಲದೆ ವಾಲೆಸ್ ಎಂಬವನ ಕೈಯಲ್ಲಿ ಶಿಕ್ಕಿ ಕೊಂಡರು. ಈ ಪ್ರ ಕಾರ ಜಯ ಹೊಂದಿದ ತರುವಾಯ ವಾಲೆಸ್ ಇಂಗ್ಲಾಂದಿನ ಮೇಲೆ ದಂಡೆತ್ತಿ ಕೊಂಡು ನಡೆದನು. ಆದಾಗ್ಯೂ ಆ ಕಾಲದಲ್ಲಿ (Flanders) ಫ್ಲಾಂದರ್ಸ್ ನಾಡಿನಲ್ಲಿ ಇದ್ದ ಎದ್ವರ್ದನು ಸಂಗಡಲೇ ತಿರಿಗಿ ಬಂದು ಅವನನ್ನು ಎದುರಿಸಿ (Falkirk) ಫಾಲ್‌ಕರ್ಕ್ ಎಂಬ ಊರಿನ ಬಳಿಯ ಸ್ಕೊತ್ಲಾಂದರ ಸೈನ್ಯವನ್ನು ಸೋಲಿಸಿ ಜಯಶೀಲನಾಗಿ ತಿರುಗಿದನು.

ಆ ಹೋರ್ರ್‍ಯಾಟವು ಅಷ್ಟರಲ್ಲಿ ಮುಗಿಯಲಿಲ್ಲ. ಹ್ಯಾಗಂದರೆ, (Wallace) ವಾಲೆಸನು ಎಷ್ಟು ಮಾತ್ರವಾದರೂ ಮನಗುಂದದೆ, ಸುಖ ದಲ್ಲಿಯೂ ಕಷ್ಟದಲ್ಲಿಯೂ ತನ್ನನ್ನು ಬಿಡದೆ ಹಿಂಬಾಲಿಸಿದ ನಿಜಸ್ತರಾದ ಕೆಲವು ಯುದ್ಧವೀರರ ಸಂಗಡ ನಾಲ್ಕು ವರುಷಗಳ ಮಟ್ಟಿಗೂ ಇಂಗ್ಲಿಷಿ ನವರಿಗೆ ಬಹಳ ತೊಂದರೆ ಕೊಡುತ್ತಾ ಬಂದನು. ಅವನು ಬಿಡದ ಸಾ

ಧನೆಯುಳ್ಳವನಾದದರಿಂದ ಒಂದು ದಿನ ಈ ಕಡೆಯಲ್ಲಿಯೂ ಮರು ದಿವಸ ಆ ಕಡೆಯಲ್ಲಿಯೂ ಇಂಗ್ಲಿಷ್ ಸೈನ್ಯದ ಮೇಲೆ ಬಿದ್ದು ಅವರು ಬೆನ್ನಟ್ಟಿ ಬರುವಾಗ ಸ್ವದೇಶಸ್ತರಿಗೆ ಮಾತ್ರ ಗೊತ್ತಾಗಿರುವ ಕೂಟಾದ ಬೆಟ್ಟಗಳಿಗೆ ಓಡಿ, ದಟ್ಟವಾದ ಕಾಡುಗಳಲ್ಲಿ ಬಚ್ಚಿಟ್ಟು ಕೊಳ್ಳುವನು. (Sir John Monteith) ಸರ್ ಜಾನ್ ಮಂಶೀತ್ ಎಂಬ ದ್ರೋಹಿಯಾದವನು ಮೋಸ ಮಾಡಿ ಎದ್ವರ್ದನ ಕೈಯಲ್ಲಿ ಅವನನ್ನು ಒಪ್ಪಿಸಿದನು. ಆ ಅರಸನು ಮಹಾ ಪಾತಕರಿಗೆ ಶಿಕ್ಷೆ ಮಾಡುವ ಪ್ರಕಾರ ಅವನನ್ನು ಬಹು ಕ್ರೂರವಾಗಿ ಕೊಲ್ಲಿಸಿದನು.

ಅದರ ತರುವಾಯ ಸ್ವಲ್ಪ ಕಾಲಕ್ಕೆ ಸ್ಕೊತ್ಲಾಂದ್ ದೇಶವು ಒಳ್ಳೇ ಶಾಂತಿಯಿಂದ ಅಣಗಿ ಇರುತ್ತದೆಂದು ಅರಸನು ನೆನಸಿ ಕೊಂಡನು. ಆದಾಗ್ಯೂ ಯುದ್ಧಪ್ರಿಯನೂ ಅಧಿಕಾರ ಅಪೇಕ್ಷೆಯುಳ್ಳವನೂ ಆದ ಆ ಅರಸನು ಏಮಾರಿ ಹೋದನು. ಹ್ಯಾಗಂದರೆ, ಮುಂಚೆ ಹೇಳಿದ ಪ್ರಕಾರ ತನಗೆ ಧೊರೆತನವಾಗ ಬೇಕೆಂದು ವ್ಯಾಜ್ಯವಾಡಿದ (Robert Bruce) ರೋಬರ್ತ್ ಬ್ರೂಸ್ ಎಂಬವನ ಮೊಮ್ಮಗನು ಕಲಹ ಮಾಡ ಪ್ರಾರಂಭಿಸಿದನು. ಆರಂಭಿಸುವಾಗ ಅವನ ನಾಡಿನ ಬಿರುದುಧ್ವಜವನ್ನು ಅನೇಕರು ಬಂದು ಶೇರಲು, ಇಂಗ್ಲಾಂದರಿಗೆ ವಿರೋಧವಾಗಿ ಯುದ್ಧ ಮಾಡಲಪೇಕ್ಷಿಸಿದ ದೊಡ್ಡ ಸೈನ್ಯವು ಕೂಡಿಸಲ್ಪಟ್ಟಿತ್ತು. ಇದನ್ನು ಕೇಳಿದ ಅರಸನಾದ ಎದ್ವರ್ದನು, ತಾನು ಆ ದೇಶವನ್ನೆಲ್ಲಾ ಪೂರ್ಣವಾಗಿ ಜಯಿಸಬೇಕು, ಅಥವಾ ತಾನು ಅಲ್ಲಿಯೇ ಯುದ್ಧರಂಗದಲ್ಲಿ ಸಾಯ ಬೇಕು ಎಂದು ವೀರಶಪಥ ಮಾಡಿ ಕೊಂಡು ಉತ್ತರಾಭಿಮುಖವಾಗಿ ದಂಡೆತ್ತಿ ಕೊಂಡು ನಡೆದನು. ಅವನ ಪ್ರಮಾಣದಂತೆಯೇ ಈಡೇರಿತು. ಹ್ಯಾಗಂದರೆ, ಅವನು ಪ್ರಯಾಣ ಮಾಡಿ ಸ್ಕೊತ್ಲಾಂದ್ ದೇಶದ ಪರ್ವತಗಳನ್ನು ಬಹು ದೂರದಿಂದ ಕಂಡು ಆ ಸ್ಥಳ ಶೇರುವದಕ್ಕೆ ಮುಂಚಿತಾಗಿಯೇ ದಾರಿಯಲ್ಲಿ ಸತ್ತು ಹೋದನು. ಹೀಗೆಯೇ ಮೊದಲನೇ ಎದ್ವರ್ದನು ತಾನು ಕೋರಿದ್ದು ತನಗೆ ಕೈಗೂಡದೆ ಸತ್ತು ಹೋದನು. ಅವನು ಉದಾರಗುಣವುಳ್ಳವನೂ, ಒಳಗೂ ಹೊರಗೂ ಒಂದೇ ಪ್ರಕಾರವಾದ ಸುಶೀಲನೂ ಆಗಿದ್ದಾಗ್ಯೂ ವೇಲ್ಸ್ ದೇಶದಲ್ಲಿಯೂ ಸ್ಕೊತ್ಲಾಂದಿನಲ್ಲಿಯೂ

ದಂಡೆತ್ತಿ ಕೊಂಡು ಹೋಗಿ ಅನ್ಯಾಯವಾದ ಯುದ್ಧ ಮಾಡಿದ್ದು ನೀಚ ವಾದ ಕಾರ್ಯವೆಂಬುವದಕ್ಕೆ ಸಂದೇಹವಿಲ್ಲ. ಯೌವನ ಕಾಲದಲ್ಲಿ ಅವನ ಬಳಿಯು ತೋರಿದ ಗಾಂಭೀರ್ಯವಾದ ಗುಣಗಳು, ಅವನು ಹಿಂದಿನ ಕಾಲದಲ್ಲಿ ತೋರಿಸಿದ ವ್ಯರ್ಥವಾದ ಅಧಿಕಾರದ ಆಶೆಯಿಂದ ಕಳಂಕವಾದವು.

ಈ ಅರಸನು ಮಾಡಿದ್ದು ಅಯುಕ್ತವೆಂದಾಗ್ಯೂ ಅವನು ಮಾಡಿದ ಕೇಡಿನಿಂದ ತರುವಾಯ ದೈವಾನುಗ್ರಹದಿಂದ ಮೇಲು ಬೆಳೆಯಿತು. ಹ್ಯಾಗಂದರೆ, ಅವನು ವೇಲ್ಸ್ ನಾಡನ್ನು ಜಯಿಸಿದ್ದು ಇಂಗ್ಲಾಂಡರಿಗೆ ಮಾತ್ರವಲ್ಲ ಆ ನಾಡಿನವರಿಗೆ ಸಹ ಉಪಕಾರವಾಯಿತು. ಆ ಮೇಲೆ ವೇಲ್ಸ್ ನಾಡಿನಲ್ಲಿ ಮುಂಚೆ ಇದ್ದ ಕಲಹಗಳೂ ಕೊಲೆಗಳೂ ನಿವರ್ತಿಯಾಗಲು ಸಮಾಧಾನ ಸೌಖ್ಯಗಳು ಉಂಟಾದವು. ಆ ನಾಡಿಗೆ ಸಮೀಪವಾದ ಇಂಗ್ಲಿಷ್ ಪ್ರದೇಶಗಳಿಗೆ ಸಹ ಶತ್ರುಭಯ ನಿವರ್ತಿಯಾದದರಿಂದ ಫಲಾಭಿವೃದ್ಧಿಯಾಯಿತು. ಮತ್ತು ಅನ್ಯ ದೇಶಗಳನ್ನು ಕುರಿತು ಅವನು ಮಾಡಿದ್ದೆಲ್ಲಾ ಸರಿ ಅಲ್ಲ ಅಂದಾಗ್ಯೂ ಅವನು ಸ್ವದೇಶವನ್ನು ಚನ್ನಾಗಿ ಆಳಿ, ನೀತಿ ನ್ಯಾಯ ತಪ್ಪದೆ, ಪಕ್ಷಪಾತವೇನೂ ಇಲ್ಲದೆ ತನ್ನ ರಾಜ್ಯದಲ್ಲಿರುವ ಯಾವತ್ತರದವರನ್ನೂ ಆದರಿಸಿ, ದೇಶಪ್ರಮಾಣಗಳನ್ನು ಚಕ್ರಿಯಾಗಿ ಕೈಕೊಂಡದ್ದು ಮಾತ್ರವಲ್ಲದೆ ಈ ಕಾಲದ ಮಟ್ಟಿಗೂ ಸ್ಥಿರ ಪಟ್ಟಿರುವ ಪ್ರಮಾಣಗಳಲ್ಲಿ ಅಧಿಕ ಉಪಯೋಗವಾದವುಗಳೆಂದು ಎಣಿಸಲ್ಪಡುವ ಕೆಲವು ನೂತನವಾದ ಪ್ರಮಾಣಗಳನ್ನು ಅವನೇ ನಿರ್ಮಿಸಿದನು.

# CHAPTER IX.

## THE REIGNS OF EDWARD THE SECOND AND EDWARD THE THIRD.

FROM A. D. 1307 TO A. D. 1377.

## 9 ಸಂಧಿ.

## ಎರಡನೇ ಎದ್ವರ್ಡ್, ಮೂರನೇ ಎದ್ವರ್ಡ್ ಎಂಬವರು ಆಳಿದ ವಿವರ.

ಕ್ರಿ. ಶ. 1307 ಮೊದಲು ಕ್ರಿ. ಶ. 1377 ವರೆಗೂ.

ಮುಖ್ಯ ತಾರೀಖುಗಳು: (Edward II) ಎರಡನೇ ಎದ್ವರ್ಡ್, ಮೊದಲನೇ ವೇಲ್‌ಸಿನ ಪ್ರಭು ಕ್ರಿ. ಶ. 1284 ಹುಟ್ಟಿದ್ದು. ಕ್ರಿ. ಶ. 1307 ಮೊದಲು 1327 ವರೆಗೂ ಆಳಿದ್ದು. ಪ್ರಜೆಯ ಸಂಘದವರು ರಾಜ್ಯವನ್ನು ಆಳುವದಕ್ಕೆ ಮೊದಲು ಅಧಿಕಾರ ಹೊಂದಿದ್ದು ಕ್ರಿ. ಶ. 1320. (Edward III) ಮೂರನೇ ಎದ್ವರ್ಡ್ ಕ್ರಿ. ಶ. 1312 ಹುಟ್ಟಿದ್ದು. ಕ್ರಿ. ಶ. 1327 ಮೊದಲು 1377 ವರೆಗೂ ಆಳಿದ್ದು. (Scotland) ಸ್ಕೊತ್ಲಾಂದಿನ ಮೇಲೆ ದಂಡೆತ್ತಿದ್ದು ಕ್ರಿ. ಶ. 1356. ಅದೇ ಕಾಲದ ಇಂದ್ಯ ಚರಿತ್ರೆ: ಆದಿ ಮಹಮ್ಮದಿನವರ ಧೊರೆತನ. ಶ್ರೇಷ್ಟ ನಾಮಗಳು: ಮೊದಲನೇ ಮಂತ್ರಿಯಾದ (Earl of Lancaster) ಲಾಂಕೆಸ್ತ್ರಿರ್ ಪ್ರಭು, ಮೂರನೇ ಎದ್ವರ್ಡನ ಕುಮಾರನಾದ (Black Prince) ಕಾಳಪ್ರಭು ಕ್ರಿ. ಶ. 1330—1376. (Sir John Mandevelle) ಸರ್ ಜಾನ್ ಮಾಂದಿವಿಲ್, ಕೀರ್ತಿ ಹೊಂದಿದ ಒಬ್ಬ ಪ್ರಯಾಣಿಕನೂ ಚರಿತ್ರಗಾರನೂ. ಕ್ರಿ. ಶ. 1301—1372.

ತರುವಾಯ ಕಿರೀಟ ಧರಿಸಲ್ಪಟ್ಟ (Edward II) ಎರಡನೇ ಎದ್ವರ್ಡನು ಆಳಿದ ವಿಧವು, ಮಹಾ ಪರಾಕ್ರಮವುಳ್ಳ ಅವನ ತಂದೆಯು ಆಳಿದ ವಿಧಕ್ಕೆ ವ್ಯತಿರಿಕ್ತವಾದದ್ದು. ಅವನು ಸಿಂಹಾಸನವೇರಿದ ಸಂಗಡಲೇ ತಾನು ರಾಜ್ಯಭಾರವನ್ನು ತಾಳ ತಕ್ಕವನಲ್ಲವೆಂದು ತೋರ ಮಾಡಿದ

ನು. ತನ್ನ ತಂದೆಯು ಸ್ಕೊತ್ಲಾಂದರನ್ನು ಎದುರಿಸುವದಕ್ಕೋಸ್ಕರ ಕೂಡಿಸಿ ಇಟ್ಟಿದ್ದ ಸೈನ್ಯವನ್ನು ಬಿಟ್ಟು ಬಿಟ್ಟು, ಕಲಹಗಾರರ ಸಂಗಡ ನೀಚತ್ವವಾಗಿ ಸಮಾಧಾನವೊಡಂಬಡಿಕೆ ಮಾಡಿ ಮುಗಿಸಿ, ರಾಜಧಾನಿಗೆ ತ್ವರೆಯಾಗಿ ಬಂದು ರಾಜಲೀಲೆಯಿಂದ ಬಾಳಿ ಸುಖಸಾಗರದಲ್ಲಿ ಮುಳುಗಿದನು. ಅವನು (Gascony) ಗಾಸ್ಕೊನಿ ನಾಡಿನವನಾದ (Piers Gaveston) ಪೀರ್ಸ್ ಗಾವೆಸ್ತನೆಂಬವನ ಮೇಲೆ ಬಹು ಪ್ರೀತಿ ಇಟ್ಟಿದ್ದದರಿಂದ ಅರಸನ ತಂದೆಯು ಆ ಮನುಷ್ಯನನ್ನು ಅಯೋಗ್ಯನೆಂದು ಕಂಡು, ಮುಂಚೆಯೇ ದೇಶದಿಂದ ಹೊರಡಿಸಿ ಬಿಟ್ಟಿದ್ದನು. ಎರಡನೇ ಎದ್ವರ್ದನು ಅರಸನಾದ ಕೂಡಲೇ ಆ ಗುಣಭ್ರಷ್ಟನನ್ನು ತಿರಿಗಿ ಕರೇ ಕಳುಹಿಸಿ, ಅವನ ಸಂಗಡ ಕಾಲವನ್ನು ವ್ಯರ್ಥವಾಗಿ ಕಳೆದು ಬಿಟ್ಟನು. ಆ ಗುಣಭ್ರಷ್ಟನು ರಾಜಸಭೆಗೆ ಶೇರಿದ ಮಂತ್ರಿಗಳು ಪ್ರಭುಗಳು ಮುಂತಾದವರನ್ನು ಉದಾಸೀನ ಮಾಡಿ ಬಹು ಗರ್ವವಾಗಿ ನಡಿಯುತ್ತಾ ಬಂದನು. ಎದ್ವರ್ದನು ಆಳಿದ ಮೊದಲನೇ ವರುಷದಲ್ಲಿ "ಸುಂದರನು" ಎಂದು ಹೆಸರುಗೊಂಡ (Philip the Fair) ಫಿಲಿಪ್ಪನೆಂಬ ಫ್ರಾನ್ಸ್ ದೇಶದ ಅರಸನ ಕುಮಾರ್ತೆಯನ್ನು ಮದುವೆ ಮಾಡಿ ಕೊಳ್ಳ ಆ ದೇಶಕ್ಕೆ ಹೋಗುವಾಗ ಮೇಲೆ ಹೇಳಿದ (Gaveston) ಗಾವೆಸ್ತನನ್ನು ಪ್ರತಿ ಅರಸನಾಗಿ ಧೊರೆತನ ಮಾಡುವ ಹಾಗೆ ನೇಮಿಸಿದ್ದದರಿಂದ ದೇಶದಲ್ಲಿರುವ ಯಾವತ್ತರದವರೂ ಬಹಳ ಮನೋವೇದನೆ ಪಟ್ಟರು. ಮತ್ತು ಅವನು ತಿರಿಗಿ ಬಂದ ಸಮಯದಲ್ಲಿ, ಏನೂ ಕಾರಣವಿಲ್ಲದೆ ಆ ಮನುಷ್ಯನ ಮೇಲೆ ಹೆಚ್ಚಾದ ಪ್ರೀತಿ ಇಟ್ಟು ಅವನ ಮಾತಿನಂತೆ ಆಡುತ್ತಾನೆಂದು ಕಂಡು, ರಾಜ್ಯದವರೆಲ್ಲರೂ ವ್ಯಸನ ಪಟ್ಟಿದ್ದಲ್ಲದೆ, ಅರಸಿಯು ಸಹ ಅದನ್ನು ತಿಳಿದು ಕೊಂಡು ತನ್ನ ಗಂಡನನ್ನು ಅಸಂಹಿಸುವದಕ್ಕೆ ಹೇತುವೆಯಾಯಿತು. ಹೀಗಿರಲಾಗಿ ಎಲ್ಲರೂ ಮನಸ್ತಾಪ ಪಡುವದನ್ನು ಕಂಡು ಅರಸನು ಆ ಮನುಷ್ಯನನ್ನು ಐರ್ಲಾಂದ್ ದೇಶಕ್ಕೆ ಕಳುಹಿಸಿ ಬಿಟ್ಟು ಈ ಪ್ರಕಾರ ಅವನನ್ನು ತಾನು ಪೂರ್ಣವಾಗಿ ಹೊರಡಿಸಿ ಬಿಟ್ಟಂತೆ ತೋರಿಸಿದನು. ಆದಾಗ್ಯೂ ಒಂದು ವರುಷದೊಳಗಾಗಿ ಅವನನ್ನು ತಿರಿಗಿ ಕರೇ ಕಳುಹಿಸಿದನು. ಆದದರಿಂದ (Lancaster) ಲಾಂಕೆಸ್ತರ್ ಪಟ್ಟದ ಅಧಿಪತಿಯಾಗಿ

ಯೂ ಅರಸನ ಮೈದುನನಾಗಿಯೂ ಇರುವ ಪ್ರಭುವನ್ನು ತಮಗೆ ಮುಖ್ಯಸ್ತನಾಗಿ ಇಟ್ಟು ಕೊಂಡು ದೇಶದಲ್ಲಿದ್ದ ಮುಖ್ಯರಾದ ಪ್ರಭುಗಳು ಅರಸನಿಗೆ ವಿರೋಧವಾಗಿ ಕಲಹ ಮಾಡ ಆರಂಭಿಸಿದರು. ಅದರಲ್ಲಿ (Gaveston) ಗಾವೆಸ್ತನೆಂಬವನನ್ನು (Pembroke) ಪೆಂಬ್ರೋಕ್ ಪಟ್ಟದ ಅಧಿಪತಿಯು ಪ್ರಾಣನಷ್ಟವಿಲ್ಲದೆ ಕಾಪಾಡುವೆನೆಂದು ಮಾತು ಕೊಟ್ಟು ಅವನನ್ನು ಶೆರೆಯಾಗ ಮಾಡಿದನು. (Lancaster) ಲಾಂಕೆಸ್ತೆರ್ (Warwick) ವಾರಿಕ್ ಪಟ್ಟಗಳ ಪ್ರಭುಗಳು ಆ ಪ್ರಕಾರ ಅವನಿಗೆ ಮಾತು ಕೊಟ್ಟಿದ್ದಾಗ್ಯೂ ಅವನನ್ನು ಬಹು ಕ್ರೂರವಾಗಿ ಕೊಲ್ಲಿಸಿದರು.

ಇಂಗ್ಲಾಂದಿನಲ್ಲಿ ಇಂಥಾ ತಾರುಮಾರಾದ ಕಾರ್ಯಗಳು ನಡೆದದರಿಂದ ದೇಶಕ್ಕೆಲ್ಲಾ ಘನಹೀನ ಬಂದ ಕಾಲದಲ್ಲಿ (Robert Bruce) ರೋಬರ್ತ್ ಬ್ರೂಸ್ ಎಂಬವನು ಇದೇ ಸಮಯವೆಂದು ನೆನಸಿ ಸ್ಕೊತ್ಲಾಂದಿನಲ್ಲಿದ್ದ ಇಂಗ್ಲಿಷ್ ಸೈನ್ಯದ ಸಂಗಡ ಯುದ್ಧ ಮಾಡಿ ಅವರನ್ನು ಜಯಿಸಿ (Stirling) ಸ್ತರ್ಲಿಂಗ್ (Berwick) ಬೆರಿಕ್ (Dunbar) ದನ್‌ಬಾರ್ ಎಂಬ ಮೂರು ಪಟ್ಟಗಳ ಹೊರ್ತಾಗಿ ಮಿಕ್ಕ ಎಲ್ಲಾ ಪಟ್ಟಗಳನ್ನು ಹಿಡಿದು ಅಲ್ಲಿದ್ದ ಇಂಗ್ಲಿಷ್ ಕಾವಲಿಸೈನ್ಯಗಳನ್ನು ಓಡಿಸಿ ಬಿಟ್ಟನು. ಎದ್ವರ್ದನು ಅದನ್ನು ಕೇಳಿ ಇನ್ನು ಮೇಲೆ ವ್ಯರ್ಥವಾಗಿ ತಿರುಗುವದು ಸರಿಯಲ್ಲ, ಗೆಲುವಾಗಿರುವ ಹಗೆಯವರನ್ನು ಎದುರಿಸಿ ಅಭ್ಯಂತರಿಸ ಬೇಕೆಂದು ನಿಶ್ಚಯಿಸಿ, ಉತ್ತರ ಕಡೆಯಲ್ಲಿ ದೊಡ್ಡ ಸೈನ್ಯವನ್ನು ಕೂಡಿಸಿ ಕೊಂಡು, ಸ್ಕೊತ್ಲಾಂದರ ಸೈನ್ಯವಿದ್ದ ಕಡೆಗೆ ಅಭಿಮುಖವಾಗಿ ತನ್ನ ರಾಣುವೆಯನ್ನು ನಡಿಸಿ ಕೊಂಡು, (Bannock) ಬನ್ನೊಕ್ ಎಂಬ ಚಿಕ್ಕ ನದಿಯ ಘಡದ ಮೇಲೆ ದಂಡಿಳಿದಿದ್ದ ಆ ಸೈನ್ಯವನ್ನು ಕಂಡನು. ಸ್ಕೊತ್ಲಾಂದರ ಸಂಖ್ಯವು ಇಂಗ್ಲಾಂದರ ಸಂಖ್ಯೆಗಿಂತ ಬಹು ಕೊಂಚವಾಗಿದ್ದಾಗ್ಯೂ, ಅವರು ಅಧಿಕ ಪರಾಕ್ರಮವೂ ಧೈರ್ಯವೂ ಉಳ್ಳವರು. ರೋಬರ್ತ್ ಬ್ರೂಸ್ ಎಂಬುವ ಸೈನ್ಯಾಧಿಪತಿಯು ಭಯ ಪಡದೆ ಕಳವಳ ಪಡದೆ ಇದ್ದು, ಇಂಗ್ಲಿಷ್ ಸೈನ್ಯದ ಬರುವಿಕೆಯನ್ನು ಎದುರು ನೋಡಿ ಕೊಂಡಿದ್ದು, ಬಹು ಭದ್ರವಾದದ್ದೂ ಇಂಗ್ಲಿಷ್ ರಾಹುತರಿಗೆ ಕಷ್ಟವಾದದ್ದೂ ಆದ ಒಂದು ರಣಭೂಮಿಯಲ್ಲಿ ತನ್ನ ಸೈನ್ಯವನ್ನು ದಿಟ್ಟ ಪಡಿಸಿ, ತನ್ನ ಸೈನ್ಯಕ್ಕೆ ಮುಂದುಗಡೆ ಇರುವ ಮೈಲಿ

ದಾನದಲ್ಲಿ ದೊಡ್ಡ ಕುಣಿಗಳನ್ನು ಅಗಿದು, ಹುಲ್ಲುಗಿಡ ಮುಂತಾದವುಗಳಿಂದ ಅವುಗಳನ್ನು ಮರೆ ಮಾಡಿ ಬಿಟ್ಟನು. ಇದರಿಂದ ಇಂಗ್ಲಿಷ್ ರಾಹುತರು ಆ ಕುಣಿಗಳಲ್ಲಿ ಎಡವಿ ಬಿದ್ದು ಸಂಗಡಲೇ ಸೋತು ಹೋದರು. ಮತ್ತು ಪದಾತಿಗಳು ದಿಗುಲು ಪಟ್ಟು ಓಡಿ, ಜಯ ಹೊಂದಿದ ಸ್ಕೊತ್ಲಾಂದರಿಂದ ಓಡಿಸಲ್ಪಟ್ಟು ಬಹು ದೂರ ಓಡಿ ಹೋದರು. ಎಧ್ವರ್ದ್ ಅರಸನು ಶೌರ್ಯವಾಗಿ ಯುದ್ಧ ಮಾಡಿದಾಗ್ಯೂ ತನ್ನ ಮೈಗಾವಲಿಯವರ ಸಂಗಡ ಓಡಿ ಹೋಗ ಬೇಕಾಗಿತ್ತು. ಈ ಪ್ರಕಾರ (Bannockburn) ಬನ್ನೊಕ್ಕ್‌ಬರ್ನ್ ಎಂಬ ಸ್ಥಳದಲ್ಲಿ ಮಾಡಿದ ಯುದ್ಧದಿಂದ ಸ್ಕೊತ್ಲಾಂದ್ ರಾಜ್ಯವು ಮತ್ತೂ ಸ್ವಾಧೀನ ಹೊಂದಲು, ರೋಬರ್ತ್ ಬ್ರೂಸ್ ಎಂಬವನು ಸಿಂಹಾಸನವೇರಿ ಎದುರಿಸುವವರಿಲ್ಲದೆ ಆಳುತ್ತಾ ಬಂದನು. ಆದಾಗ್ಯೂ ಮುಂಚಿನ ಎಧ್ವರ್ದನು ಅನ್ಯಾಯವಾಗಿ ಅಧಿಕಾರದ ಆಶೆಯಿಂದ ಮರುಳಾಗಿ ಯುದ್ಧ ಮಾಡ ತೊಡಗಿದ್ದದರಿಂದ ಇಂಗ್ಲಾಂದರಿಗೂ ಸ್ಕೊತ್ಲಾಂದರಿಗೂ ಹುಟ್ಟಿದ ಹಗೆಯು ಇನ್ನೂರು ಮುನ್ನೂರು ವರುಷಗಳ ಮಟ್ಟಿಗೂ ತೀರಲಿಲ್ಲ.

ಈ ಪ್ರಕಾರ ಸ್ವಲ್ಪ ಕಾಲ ಹೋರಾಡಿದ ತರುವಾಯ ಎಧ್ವರ್ದನು ಮುಂಚಿನ ಹಾಗೆಯೇ ಸೋಮಾರಿಯಾಗಿಯೂ ಬುದ್ಧಿ ಹೀನನಾಗಿಯೂ ತಿರುಗಿದನು. "ಉನ್ನತನು ಸನ್ಮತವಾಗಿ ನಡಿಯ ಬೇಕೆಂಬುವ" ಗಾದೆಯು ನಿಜವೆಂದು ಮುಂಚೆ ತಾನೇ ತಿಳಿದಿದ್ದಾಗ್ಯೂ ಸ್ವಲ್ಪ ಹೊತ್ತಿನೊಳಗೆ (De Spenser) ದಿ ಸ್ಪೆನ್‌ಸರ್ ಎಂಬ ಒಬ್ಬನನ್ನು ಆದು ಕೊಂಡು ಅವನ ಮೇಲೆ ಪ್ರೀತಿ ಇಟ್ಟು ಅವನ ಕೈಯಲ್ಲಿ ಎಲ್ಲವನ್ನೂ ಒಪ್ಪಿಸಿ ಕೊಟ್ಟದ್ದರಿಂದ ಅವನು (Gaveston) ಗಾವೆಸ್ತನು ಮಾಡಿದ ಪ್ರಕಾರ ಬಹು ಗರ್ವವಾಗಿ ನಡಿಯುತ್ತಾ ಬಂದನು. ಆದದರಿಂದ ಸ್ವದೇಶದ ಕಲಹ ಮತ್ತೂ ಉಂಟಾಯಿತು. ಆ ಕಲಹದಿಂದ ಉಂಟಾದ ಕೇಡುಗಳ ಹೊರ್ತು ಆ ವರುಷದಲ್ಲಿ ಘೋರವಾದ ಬರ ಉಂಟಾದದರಿಂದ ಪ್ರಜೆಗಳು ಬಹಳ ಕಷ್ಟ ಪಟ್ಟರು. ಪ್ರಾರಂಭದಲ್ಲಿ ಅರಸನ ಕಕ್ಷಿಯವರೂ ಪ್ರಭುಗಳ ಕಕ್ಷಿಯವರೂ ಸರಿಸಮಾನವಾಗಿದ್ದರು. ತರುವಾಯ ಪ್ರಭುಗಳ ಕಕ್ಷಿಯವರಿಗೆ ಮುಖ್ಯಸ್ಥನಾಗಿದ್ದ (Lancaster) ಲಾಂಕೆಸ್ತೆರ್ ಪಟ್ಟದ ಪ್ರಭುವು ಶೆರೆ ಹಿ

ಡಿಯಲ್ಪಟ್ಟನು. ಅವನನ್ನು ಅರಸನು (Pontefract) ಪೊಂತಿಪ್ರಾಕ್ತ್ ಎಂಬ ಊರಿನಲ್ಲಿ ಅವನು ಮುಂಚೆ (Gaveston) ಗಾವೆಸ್ತನನ್ನು ಕನಿಕರ ವೇನೂ ಇಲ್ಲದೆ ಕೊಲೆ ಮಾಡಿಸಿದ ಪ್ರಕಾರ ಈಗ ಅವನನ್ನು ಕೊಲೆ ಮಾಡಿಸಿದನು. ಆದದರಿಂದ "ಕೇಡು ಮಾಡಿದವನಿಗೆ ಕೇಡೇ ಸಂಭವಿಸುತ್ತದೆ" ಎಂಬುವ ನೀತಿವಾಕ್ಯಕ್ಕೆ ಒಳ್ಳೇ ದೃಷ್ಟಾಂತವಾಯಿತು.

ಎದ್ವರ್ದನು ಹೀಗೆ ಕೊಲೆ ಮಾಡಿದ್ದು, ಮಿಾಯುವದಕ್ಕೆ ಇಳಿದು ಕೆಸರನ್ನು ಹಚ್ಚಿ ಕೊಂಡ ಹಾಗಾಯಿತು. ಹ್ಯಾಗಂದರೆ ಆ ಕ್ರೂರ ಕೆಲಸವನ್ನು ಕಂಡು, ಪ್ರಜೆಗಳೆಲ್ಲರು ಅವನನ್ನು ಬಹಳವಾಗಿ ಹಗೆ ಮಾಡಿದರು, ಮತ್ತು ಅರಸಿಯು ಸಹ ಅವನ ಹಗೆಯವರ ಸಂಗಡ ಕೂಡಿ ಕೊಂಡಳು. ಅದು ಯಾಕಂದರೆ, ಆ ಅರಸಿಯು ತನ್ನ ಸಹೋದರನಾದ ಫ್ರಾನ್ಸ್ ದೇಶದ ಅರಸನ ಸಂಗಡ (Guienne) ಗಿಯೆನ್ ಎಂಬ ಶೀಮೆಯನ್ನು ಕುರಿತು ಉಂಟಾದ ವ್ಯಾಜ್ಯ ತೀರಿಸುವದಕ್ಕೆ ಆ ನಾಡಿಗೆ ಹೋಗಿರುವ ಸಮಯದಲ್ಲಿ ತನಗೆ ತಕ್ಕ ಮರ್ಯಾದೆ ಮಾಡಲಾರದ ಪುರುಷನ ಬಳಿಗೆ ತಾನು ತಿರಿಗಿ ಹೋಗುವದಿಲ್ಲವೆಂದು ಹೇಳಿ ಅಲ್ಲಿಯೇ ಇದ್ದು ಬಿಟ್ಟಳು. ಕಲಹಗಾರರೂ ಅರಸನ ವಿಷಯ ವ್ಯಸನ ಪಟ್ಟವರೂ ಆದ ಅನೇಕ ಪ್ರಭುಗಳು ಆ ದೇಶಕ್ಕೆ ಹೋಗಿ ಅವಳ ಬಳಿಯಲ್ಲಿ ಶೇರಿ ಕೊಂಡರು. ಅವರಲ್ಲಿ (Mortimer) ಮೊರ್ತಿಮರ್ ಎಂಬ ಪ್ರಭುವು ಒಬ್ಬನಿದ್ದನು. ಅವನಿಗೂ ಆ ಅರಸಿಗೂ ತಕ್ಕದ್ದಲ್ಲದ ಐಕ್ಯ ಉಂಟೆಂದು ಕೆಲವರು ಹೇಳಿ ಕೊಂಡರು. ಅವಳು ತನ್ನ ಕಡೆ ಬಲವಾದ ಸೈನ್ಯ ಉಂಟೆಂದು ಕಂಡು ತನ್ನ ಪುರುಷನಾದ ಅರಸನ ಸಂಗಡ ಯುದ್ಧ ಮಾಡ ತೃಣೀಕರಿಸಿದಳು. ಯುದ್ಧ ಕಲತದ್ದರಲ್ಲಿ ಅವಳ ಕಡೆ ಶೇರಿದವರು ಅನೇಕರು ಬಲ ಉಂಟಾದವರಾದದರಿಂದ ತ್ವರೆಯಲ್ಲಿ ಅವರಿಗೆ ಜಯ ಉಂಟಾಯಿತು. (De Spenser) ದಿ ಸ್ಪೆನ್ಸರ್ ಎಂಬವನ ತಂದೆಯಾದ ವೃದ್ಧಾಪ್ಯನನ್ನು (Bristol) ಬ್ರಿಸ್ತಲ್ ಕೋಟೆಯಲ್ಲಿ ಹಿಡಿದು ಕೊಂಡಾಗ, ಅರಸನು ಅವನ ಕುಮಾರನಾದ ತನ್ನ ಸ್ನೇಹಿತನ ನಿಮಿತ್ತ ಅವನನ್ನು ದಯವಾಗಿ ನಡಿಸಿದ್ದದರಿಂದ ಅವರು ನರೆಗೂದಲುಳ್ಳ ಅವನನ್ನು ನೀಚನ ಹಾಗೆ ಕೊಲೆ ಮಾಡಿದರು. ಅದರ ತರುವಾಯ ದಿ ಸ್ಪೆನ್ಸರ್ ಎಂಬವನನ್ನು ಶೆರೆಯಾಗ ಮಾಡಿ ಶಿರಚ್ಛೇದ ಮಾಡಿದರು. ಕಡೆಯಲ್ಲಿ

## ಸಂಧಿ ೯. ಎರಡನೇ ಎದ್ವರ್ಡನು ಕೊಲ್ಲಲ್ಪಟ್ಟದ್ದು.

ಬಹು ದೌರ್ಭಾಗ್ಯನಾದ ಆ ಅರಸನು ನಾನಾ ಸ್ಥಳಗಳಲ್ಲಿ ಆಶ್ರಯ ಹುಡುಕಿದರೂ ಶಿಕ್ಕದೆ ಹೋದದರಿಂದ ಅವರ ಕೈಯ್ಯಲ್ಲಿ ಶಿಕ್ಕಿಕೊಂಡನು. (Parliament) ಪಾರ್ಲಿಮೆಂತ್ ಎಂಬ ಶ್ರೇಷ್ಠ ಸಂಘದವರು ಸಂಗಡಲೇ ಅವನನ್ನು ಸಿಂಹಾಸನದಿಂದ ತಳ್ಳಿ ಬಿಡ ಬೇಕೆಂದು ಕ್ರಮ ಪ್ರಕಾರ ಮಾತಾಡಿ ನಿರ್ಣಯಿಸಿದರು. ಅವರು ಅದನ್ನು ಅರಸನಿಗೆ ತಿಳಿಸಿದಾಗ, ತನಗೆ ಮಾಡಲ್ಪಟ್ಟ ಅವಮಾನವನ್ನು ಕುರಿತು ಬಹಳ ವ್ಯಸನ ಪಟ್ಟು, ತನಗೆ ಒಂದು ಸಹಾಯವೂ ದಿಕ್ಕೂ ಕಾಣದೆ ಇರುವದನ್ನು ಕಂಡು, ತನ್ನ ಬಾಲ್ಯನಾದ ಕುಮಾರನ ಕೈಯ್ಯಲ್ಲಿ ಮುದ್ರೆಕೋಲನ್ನು ಕೊಟ್ಟು ಬಿಡ ಬೇಕಾಗಿತ್ತು. ಅದರ ತರುವಾಯ ಕಲಹಗಾರರು ಅವನನ್ನು ಶೆರೆಯಲ್ಲಿಟ್ಟು, ಮೊದಲಲ್ಲಿ ಸ್ವಲ್ಪ ದಯವಾಗಿಯೂ ಮರ್ಯಾದೆಯಾಗಿಯೂ ನಡಿಸಿಕೊಂಡು ಬಂದರು. ತರುವಾಯ ಅರಸಿಯೂ ಮೊರ್ತಿಮರನೂ ಅವರಿಗೆ ಶೇರಿದ ಬೇರೆ ಕೆಲವರೂ ಅರಸನನ್ನು ಜೀವದಿಂದ ಇರಿಸುವದು ಒಳ್ಳೇದಲ್ಲವೆಂದು ಹೇಳಿ, ಅವನನ್ನು ಬಹು ಕ್ರೂರವಾಗಿ ನಡಿಸುತ್ತಾ ಬಂದದರಿಂದ ಅವನು ಹೇಳ ಕೂಡದ ಆಪತ್ತುಗಳನ್ನು ಎಲ್ಲಾ ಸಹಿಸಿ ಕೊಂಡನು. ಅವನನ್ನು ಅಲ್ಲಿಗೆ ಇಲ್ಲಿಗೆ ತೆಗದು ಕೊಂಡು ಹೋಗಿ ಬೇರೆ ಬೇರೆ ಶೆರೆಮನೆಗಳಲ್ಲಿ ಇರಿಸಿದರು. ಸೌಖ್ಯಕ್ಕೆ ಹೇತುವೆಯಾದವುಗಳನ್ನು ಕೊಡದೆ ಇದ್ದದ್ದು ಮಾತ್ರವಲ್ಲ, ಅನ್ನ ವಸ್ತ್ರಗಳನ್ನು ಸಹ ಅವನಿಗೆ ಕೊಡಲಿಲ್ಲ. ಕಡೆಯಾಗಿ ಅರ್ಧರಾತ್ರಿಯಲ್ಲಿ ಒಂದು ಮೃಗವನ್ನು ಕೊಲ್ಲುವ ಪ್ರಕಾರ ಬಹು ಕ್ರೂರವಾಗಿ ಅವನನ್ನು ಕೊಲ್ಲಿಸಿದರು. ಈ ಪ್ರಕಾರ ಆ ಅರಸನು ಮೊದಲಿನಲ್ಲಿ ಸುಖ ಸೌಖ್ಯಗಳಿಂದ ಆಳಿದನು; ಮಧ್ಯದಲ್ಲಿ ನಿರ್ವಿಚಾರದಿಂದಲೂ ಬುದ್ಧಿಹೀನತ್ವದಿಂದಲೂ ಬಿಡುವಾದದಿಂದಲೂ ತನ್ನ ಮೇಲೆ ನಾನಾ ಆಪತ್ತುಗಳನ್ನು ಬರ ಮಾಡಿ ಕೊಂಡನು; ಕಡೆಯಲ್ಲಿ ಕ್ರೂರವಾಗಿ ಕೊಲ್ಲಲ್ಪಟ್ಟು ಸತ್ತನು.

ಕೊಲ್ಲಲ್ಪಟ್ಟ ಅರಸನ ಕುಮಾರನಾದ ಎದ್ವರ್ಡನೆಂಬವನು ತನ್ನ ತಂದೆಯು ಸತ್ತಾಗ ಹದಿನೈದು ವರುಷದ ಯೌವನಸ್ತನಾಗಿದ್ದನು. ಆದದರಿಂದ ಕೆಲವು ಕಾಲ ರಾಣಿಯೂ ಮೊರ್ತಿಮರ್ ಎಂಬವನೂ ಪ್ರತಿಯಾಗಿ ಅರಸುತನ ಮಾಡಿ ಬುದ್ಧಿಹೀನವಾಗಿಯೂ ಸ್ವಪ್ರಯೋಜನಾ

ರ್ಥವಾಗಿಯೂ ನಡೆದದರಿಂದ ಅನೇಕರು ಮನಸ್ತಾಪ ಹೊಂದಿ ಕಲಹ ಮಾಡ ಪ್ರಾರಂಭಿಸಿದರು. ಹಾಗಿದ್ದಾಗ್ಯೂ ರಾಣಿಯ ಪಕ್ಷದವರು ಬಹು ಬಲುವಾಗಿದ್ದದರಿಂದ ಅವರು ಕಲಹಗಾರರನ್ನು ಜಯಿಸಿ, (Kent) ಕೆನ್ತ್ ನಾಡಿಗೆ ಪ್ರಭುವಾದ ಎದ್ವರ್ದನ ಚಿಕ್ಕಪ್ಪನು ಕಲಹಗಾರರ ಸಂಗಡ ಶೇರಿ ಕೊಂಡಿದ್ದದರಿಂದ ಅವನ ಶಿರಚ್ಛೇದ ಮಾಡಿದರು.

ಅದರ ತರುವಾಯ ಅರಸನೂ ಪ್ರಜೆಗಳೂ ಒಳಗಿನ ಕಲಹಗಳನ್ನು ಬಿಟ್ಟು ಬೇರೆ ವಿಷಯಗಳನ್ನು ಕುರಿತು ಯೋಚಿಸ ಅವಸರ ಉಂಟಾಯಿತು. ಹ್ಯಾಗಂದರೆ, (Robert Bruce) ರೋಬರ್ತ್ ಬ್ರೂಸ್ ಎಂಬವನು ಇಂಗ್ಲಾಂದರು ಮುಂಚಿತಾಗಿ ತನ್ನ ದೇಶದ ಮೇಲೆ ದಂಡೆತ್ತಿ ಕೊಂಡು ಬಂದಿದ್ದರೆಂಬುವ ಕ್ರೋಧವನ್ನು ಮನಸ್ಸಿನಲ್ಲಿಟ್ಟು ಕೊಂಡು ಮುಯ್ಯಿ ತೀರಿಸ ಇದೇ ಸಮಯವೆಂಥೇಳಿ, ಇಂಗ್ಲಾಂದಿನ ಉತ್ತರ ಭಾಗದಲ್ಲಿರುವ ಶೀಮೆಗಳಲ್ಲಿ ತನ್ನ ಸೈನ್ಯವನ್ನು ನಡಿಸಿ ಅನೇಕ ಸ್ಥಳಗಳನ್ನು ಹಾಳು ಮಾಡಿದನು. ಯೌವನ ರಾಜನು ಚಿಕ್ಕಂದಿನಿಂದ ಆಯುಧಾಭ್ಯಾಸ ಮಾಡಿ ಕೊಂಡವನಾಗಿದ್ದದರಿಂದ ಅವನ ಸಂಗಡ ಯುದ್ಧ ಮಾಡ ತನ್ನ ಸೈನ್ಯದ ಸಂಗಡ ಹೊರಟನು. ಆದಾಗ್ಯೂ ಇಂಗ್ಲಿಷ್ ಸೈನ್ಯವು ಬರುವದನ್ನು ಕಂಡು ಸ್ಕೊತ್ಲಾಂದರು ಸಂಗಡಲೇ ತಮ್ಮ ದೇಶಕ್ಕೆ ಹೋಗಿ ಶೇರಿ ಕೊಂಡದ್ದರಿಂದ ಉಭಯ ಸೈನ್ಯಗಳೂ ಬಹು ದೂರ ನಡೆದು ಬಹು ದಣಿದಿದ್ದಾಗ್ಯೂ ದೊಡ್ಡ ಯುದ್ಧವೇನೂ ಮಾಡದೆ ಸಮಾಧಾನದ ಒಡಂಬಡಿಕೆ ಮಾಡಿ ಮುಗಿಸಿದರು.

ಮಾರಣೆ ವರುಷದಲ್ಲಿ ಎದ್ವರ್ದನೆಂಬ ಅರಸನು (Hainault) ಹೈನಾಲ್ತ್ ನಾಡಿನ ರಾಜಕುಮಾರ್ತೆಯಾದ (Philippa) ಫಿಲಿಪ್ಪ ಎಂಬವಳನ್ನು ವಿವಾಹ ಮಾಡಿ ಕೊಂಡನು. ಅವಳು ಬಹಳ ಸೌಂದರ್ಯವಂತಳೂ ಶೌರ್ಯ ಮನಸ್ಸುಳ್ಳವಳೂ ಆಗಿದ್ದಳು. ಅದಾದ ಮೇಲೆ ಅರಸನು ತಾನೇ ಧೊರೆತನ ಮಾಡ ತನಗೆ ಸಾಮರ್ಥ್ಯ ಉಂಟೆಂದು ನೆನಸಿ ಕೊಂಡು, ಆ ಪರ್ಯಂತರ ನೀತಿ ತಪ್ಪಿ ಬಹು ತಾರುಮಾರಾಗಿ ಧೊರೆತನ ಮಾಡುತ್ತಾ ಬಂದ ತನ್ನ ತಾಯಿಯನ್ನೂ ಮೊರ್ಟಿಮರ್ ಎಂಬವನನ್ನೂ ನಿವರ್ತಿ ಮಾಡ ಬೇಕೆಂದು ತನ್ನ ಅಂತರ್ಯದಲ್ಲಿ ನಿರ್ಣಯಿಸಿ ಕೊಂಡನು.

ತಾನು ಅಪೇಕ್ಷಿಸಿದ ಅಭಿಪ್ರಾಯವನ್ನು ಮುಗಿಸ ತ್ವರೆಯಾಗಿ ಸಮಯ ಸಿದ್ಧಿಸಿತು. ಹ್ಯಾಗಂದರೆ ಅವರೆಲ್ಲರೂ (Nottingham) ನೊತ್ತಿಂಗ್ಹಾಮ್ ಪಟ್ಣದ ಕೋಟೆಯಲ್ಲಿ ತಂಗಿದ್ದ ವೇಳೆಯಲ್ಲಿ ಆ ಕೋಟೆಯನ್ನು ಕಾಯುತ್ತಿದ್ದ ಧೊರೆಯನ್ನು ಅರಸನು ತನ್ನ ಕಡೆ ಶೇರುವಂತೆ ಸಮ್ಮತಿ ಪಡಿಸಿದ್ದರಿಂದ, ಅವನು ಆ ಕೋಟೆಯೊಳಗೆ ಪ್ರವೇಶಿಸ ತಕ್ಕ ಒಂದು ಸುರಂಗವನ್ನು ಅರಸನಿಗೆ ತೋರಿಸಿದನು. ಅದರ ಮಾರ್ಗವಾಗಿ ಮಧ್ಯರಾತ್ರಿಯ ದಲ್ಲಿ ಆಯುಧಪಾಣಿಗಳಾದ ಒಂದು ಚಿಕ್ಕ ದಂಡು ಕೋಟೆಯೊಳಗೆ ಪ್ರವೇಶಿಸಿ (Isabella) ಇಸಬೇಲ ಎಂಬ ಅರಸಿಯನ್ನೂ ಮೊರ್ಟಿಮರನನ್ನೂ ಹಿಡಿದು ಕೊಂಡರು. ಪಾರ್ಲಿಮೆಂತ್ ಎಂಬ ದೊಡ್ಡ ಆಲೋಚನೇ ಸಂಘದವರು ಅವನ ಸಂಗತಿ ಒಂದನ್ನೂ ವಿಚಾರಣೆ ಮಾಡದೆ ಗಲ್ಲಿಗೆ ಹಾಕ ನಿರ್ಣಯಿಸಿದರು. ಅರಸಿಯನ್ನು ಸಹ ಒಂದು ಅರಮನೆಯಲ್ಲಿ ಜೀವಿತ ಕಾಲವೆಲ್ಲಾ ಶೆರೆಯಲ್ಲಿ ಹಾಕಿ ಬಿಟ್ಟರು. ಆದದರಿಂದ "ಹಳ್ಳವಿದ್ದ ಕಡೆ ನೀರು ಶೇರುವದು" ಎಂಬ ಗಾದೆಯ ಪ್ರಕಾರ ಆ ಇಬ್ಬರೂ ತಾವು ಮಾಡಿದ ಕೇಡಿಗೆ ತಕ್ಕ ದಂಡನೆ ಹೊಂದಿದರು. ಆ ಪರ್ಯಂತರ ಹೆಸರಿಗೆ ಮಾತ್ರ ಅರಸನಾಗಿದ್ದ ಎದ್ವರ್ಡನು ತರುವಾಯ ನಿಜವಾಗಿ ಅರಸನಾದನು.

ಆ ಕಾಲದಲ್ಲಿ ಅರಸನು ಮತ್ತೂ ರಣರಂಗದಲ್ಲಿ ಪ್ರವೇಶಿಸ ಅವಸರ ಬಂತು. ಹ್ಯಾಗಂದರೆ, ಸ್ಕೊತ್ಲಾಂದ್ ಅರಸನಾದ ರೋಬರ್ತ್ ಬ್ರೂಸ್ ಎಂಬವನು ಸತ್ತ ತರುವಾಯ ಸಣ್ಣ ಹುಡುಗನಾಗಿದ್ದ ಅವನ ಮಗನು ಅರಸನಾದನು. ಹೀಗಿರುವಲ್ಲಿ ತನಗೆ ಪಟ್ಟವಾಗ ಬೇಕೆಂದು ಬ್ರೂಸನ ಸಂಗಡ ವ್ಯಾಜ್ಯವಾಡಿದ (Balliol) ಬೆಲೆಯೊಲ್ ಎಂಬವನ ಮಗನು ಈಗ ತನಗೆ ಪಟ್ಟವಾಗ ಬೇಕೆಂದು ವ್ಯಾಜ್ಯವಾಡಿದನು. ಮತ್ತು ಎದ್ವರ್ಡ್ ಅರಸನು ಅವನಿಗೆ ಸಹಾಯವಾಗಿದ್ದು, ಸ್ಕೊತ್ಲಾಂದಿನಲ್ಲಿ ಒಂದು ಸೈನ್ಯವನ್ನು ನಡಿಸಿ ಕೊಂಡು ಹೋಗಿ (Halidon Hill) ಹಲಿದನ್ ಬೆಟ್ಟದ ಅಂಚಿನಲ್ಲಿ ಸ್ಕೊತ್ಲಾಂದರ ಸೈನ್ಯವನ್ನು ಮುರಿಯ ಬಡಿದು, ಅವರು ಅಪೇಕ್ಷಿಸದವನನ್ನು ಸಿಂಹಾಸನದಲ್ಲಿ ಹತ್ತಿಸಿದನು.

ಅದರ ತರುವಾಯ ಎದ್ವರ್ಡನು ಬಹು ಕಾಲ ತನ್ನ ಮನಸ್ಸಿನಲ್ಲಿ ಇಟ್ಟಿದ್ದ ಯೋಚನೆಯನ್ನು ಈಡೇರಿಸುವದಕ್ಕೆ ಉಪಾಯ ಹುಡುಕಿದನು.

ಅದು ಏನಂದರೆ, ತಾನು ಫ್ರಾನ್ಸ್ ದೇಶವನ್ನು ಸಹ ಕಟ್ಟಿ ಕೊಳ್ಳ ಅಪೇಕ್ಷಿ ಪಟ್ಟಿದ್ದನು. ಅದಕ್ಕೆ ಕಾರಣ ಮುಂಚೆ ಹೇಳಿದ ಪ್ರಕಾರ ಅವನ ತಾಯಿಯು ಸುಂದರನೆಂಬ ಅಲಂಕಾರಹೆಸರು ಹೊಂದಿದ ಫಿಲಿಪ್ಪನೆಂಬ ಫ್ರಾನ್ಸ್ ದೇಶದ ಅರಸನ ಕುಮಾರ್ತೆಯು. ಅವಳ ಒಡ ಹುಟ್ಟಿದ ಸಹೋದರರು ಮೂರು ಮಂದಿಯೂ ವರಿಶೆಯಾಗಿ ಆ ದೇಶವನ್ನು ಆಳಿ ಪುತ್ರಸಂತಾನವಿಲ್ಲದೆ ಸತ್ತು ಹೋಗಿದ್ದರು. ಹೀಗಿರುವಾಗ ಒಬ್ಬ ಸ್ತ್ರೀಯು ಫ್ರಾನ್ಸ್ ದೇಶದಲ್ಲಿ ಸಿಂಹಾಸನಾರೂಢಳಾಗ ಕೂಡದೆಂದು (Salic) ಸಲಿಕ್ ನಿಬಂಧನೆ ಎಂಬ ಒಂದು ಪ್ರಮಾಣವು ಮುಂಚಿತಾಗಿ ಏರ್ಪಡಿಸಲ್ಪಟ್ಟಿತ್ತು. ಆ ನಿಬಂಧನೆಯ ಪ್ರಕಾರ ಫ್ರಾನ್ಸ್ ದೇಶದ ಪ್ರಭುಗಳು ಸತ್ತು ಹೋದ ಅರಸನ ಮಗಳಿಗೆ ಪಟ್ಟ ಕಟ್ಟ ಕೂಡದೆಂದು ತೀರ್ಪು ಮಾಡಿದ್ದರು. ಆದ್ದರಿಂದ (Valais) ವಾಲೇ ನಾಡಿನ ಫಿಲಿಪ್ಪ ಎಂಬವನು ಸತ್ತು ಹೋದ ಮೂರು ಮಂದಿ ಅರಸರಿಗೂ ಎದ್ವರ್ದನ ತಾಯಿಯಾದ ಇಸಬೇಲಳಿಗೂ ಮೈದುನನಾದದರಿಂದ ಇವನು ತಾನು ಸಂತಾನಪಾರಂಪರೆಯಾಗಿ ಪಟ್ಟ ಹೊಂದ ಹಕ್ಕುದಾರನೆಂದು ಅವನಿಗೆ ಪಟ್ಟ ಕಟ್ಟಿದರು. ಎದ್ವರ್ದನು ತನ್ನ ತಾಯಿಗೆ ಮೇಲೆ ಹೇಳಿದ (Salic law) ಸಲಿಕ್ ನಿಬಂಧನೆಯ ಪ್ರಕಾರ ಪಟ್ಟವಿಲ್ಲದ್ದು ನ್ಯಾಯವೆಂದು ಒಪ್ಪಿ ಕೊಂಡಾಗ್ಯೂ ಅವಳ ಕುಮಾರನಾದ ತನಗೆ ಆ ದೇಶವನ್ನು ಆಳುವದಕ್ಕೆ ಮನಸ್ಸೂ ಸಾಮರ್ಥ್ಯವೂ ಉಂಟಾಗಿರುವದರಿಂದ ಅದು ತನಗೆ ದೊರಕ ಬೇಕೆಂದು ಸಾಧಿಸಿ, ಇದರ ನಿಮಿತ್ತ ಯುದ್ಧ ಮಾಡ ಬೇಕೆಂದು ಯತ್ನಯಿಸಿದನು. ಎದ್ವರ್ದನು ಹೀಗೆ ಹೇಳಿದ್ದು ನ್ಯಾಯವಲ್ಲ. ಹ್ಯಾಗಂದರೆ ಫ್ರಾನ್ಸ್ ದೇಶದ ಪ್ರಭುಗಳು ತಮ್ಮ ಇಷ್ಟವಿದ್ದಂತೆ ಅರಸನನ್ನು ನೇಮಿಸಲೂ ಪ್ರಮಾಣಗಳನ್ನು ಏರ್ಪಡಿಸಲೂ ಶಕ್ಯವರಾಗಿದ್ದಾರೆ. ಆದಾಗ್ಯೂ ಅವನು ಹೇಳಿದ್ದೆಲ್ಲಾ ನಿಜವೇ ಅಂದಾಗ್ಯೂ ಅವನಿಗಿಂತ ಮುಂಚೆ ಪಟ್ಟ ಹೊಂದ ಬೇಕಾದ ಅವನ ಮಾವನ ಮಕ್ಕಳು ಇದ್ದರು. ಮತ್ತು ಫ್ರಾನ್ಸ್ ದೇಶದಲ್ಲಿ ತನಗಿದ್ದ ಭೂಸ್ಥಿತಿಗಳನ್ನು ಕುರಿತು ಅವನು ಮುಂಚಿತಾಗಿಯೇ ಫಿಲಿಪ್ಪನೆಂಬವನಿಗೆ ವಂದನೆ ಮಾಡಿ ಅವನೇ ಆ ದೇಶದ ಅರಸನೆಂದು ಒಪ್ಪಿ ಕೊಂಡಿದ್ದನಷ್ಟೆ. ಆದದರಿಂದ ಅವನು ಅಧಿಕಾರದ ಮೇಲೆ

ಅತ್ಯಾಶೆ ಪಟ್ಟು ಮರುಳಾಗಿ ತಾನು ಅನ್ಯಾಯವಾಗಿ ಯುದ್ಧ ಮಾಡ ಪ್ರಾರಂಭಿಸಿದನು.

ಯೂರೋಪಿನ ಅನೇಕ ಅರಸರೂ ವಿಶೇಷವಾಗಿ ಫ್ರಾನ್ಸ್ ದೇಶದ ಉತ್ತರ ಕಡೆ ಇರುವ ರಾಜರೂ ಅವನಿಗೆ ಸಹಾಯವಾಗಿದ್ದರು. ಆದದರಿಂದ 1338ನೇ ಸಂವತ್ಸರದ ವಸಂತಕಾಲದಲ್ಲಿ ಅವನು (Flanders) ಫ್ಲಾಂದರ್ಸ್ ನಾಡಿನಲ್ಲಿ ಇಳಿದು ಆ ಮಾರ್ಗವಾಗಿ ಹೋಗಿ ಫ್ರಾನ್ಸ್ ದೇಶದಲ್ಲಿ ಸೈನ್ಯವನ್ನು ನಡಿಸಿದನು. ಆದಾಗ್ಯೂ ಆ ದಂಡೆತ್ತಿದ್ದರಿಂದ ಏನೂ ಪ್ರಯೋಜನವಾಗಲಿಲ್ಲ. ವ್ಯರ್ಥ ಡಂಬ ಮಾಡಿ ಕೊಂಡು ಅನೇಕ ಕೇಡುಗಳನ್ನು ಮಾಡಿದರು. ಅವನು ಫ್ರಾನ್ಸ್ ದೇಶದ ಕಡೆ ಗಡಿಗಳನ್ನು ಹಾಳು ಮಾಡಿದ ತರುವಾಯ ಅವನ ಸಂಗಡ ಒಡಂಬಟ್ಟಿದ್ದ ಅರಸರು ಒಬ್ಬೊಬ್ಬರಾಗಿ ಜಾರಿ ಹೋದರು. ಮತ್ತು ಸೈನ್ಯಕ್ಕೆ ಬೇಕಾದ ಆಹಾರಪದಾರ್ಥಗಳು ದೊರಕದೆ ಹೋದದರಿಂದ ಅವನ ಯೋಚನೆಗಳನ್ನು ಮುಗಿಸಲಾರದೆ ಸ್ವದೇಶಕ್ಕೆ ತಿರುಗಿದನು.

ಎಡ್ವರ್ಡನು 1340ನೇ ಸಂವತ್ಸರದಲ್ಲಿ ಎರಡನೇ ಸಾರಿ ಫ್ರಾನ್ಸ್ ದೇಶದ ಮೇಲೆ ದಂಡೆತ್ತಿ ಕೊಂಡು ಹೋಗ ಯತ್ನಯಿಸಿದನು. ಫಿಲಿಪ್ಪನೆಂಬ ಅರಸನು ಅದನ್ನು ಕೇಳಿ ಅವನನ್ನು ಎದುರಿಸುವದಕ್ಕೆ ಲೆಖ್ಖವಿಲ್ಲದ ನಾವೆಗಳೆನ್ನು ಕೂಡಿಸಿ (Sluys) ಸ್ಲೋಯ್ಸ್ ಎಂಬ ರೇವಿನ ಬಳಿಯ ಅವುಗಳನ್ನು ಯುದ್ಧಕ್ಕೆ ವರಿಸೆಯಾಗಿ ನಿಲ್ಲಿಸಿದನು. ಇಂಗ್ಲಿಷಿನವರ ನಾವಿಕಸೈನ್ಯವು ಲೆಖ್ಖದಲ್ಲಿ ಕಡಿಮೆಯಾಗಿದ್ದಾಗ್ಯೂ ಆ ನಾವಿಕರು ಶತ್ರುಗಳ ನಡುವೆ ಅತಿ ವೇಗವಾಗಿ ಓಡಿ ಯುದ್ಧ ತೊಡಗಿದರು. ಆ ನಾವೆಯುದ್ಧದಲ್ಲಿ ಎಡ್ವರ್ಡನು ಬಹು ಶೌರ್ಯವಾಗಿ ಹೋರಾಡಿ ತನ್ನ ಯುದ್ಧವೀರರನ್ನು ಧೈರ್ಯ ಪಡಿಸಿದ್ದರಿಂದ ಇಂಗ್ಲಿಷಿನವರು ಪೂರ್ಣ ಜಯ ಹೊಂದಿ ಫ್ರಾನ್ಸಿನವರ ನಾವೆಗಳಲ್ಲಿ ನಾನೂರು ಹಡಗಗಳನ್ನು ಮುಣುಗಿಸಿ, ಮೂವತ್ತು ಸಾವಿರ ಫ್ರಾನ್ಸಿನವರನ್ನು ಮಡಿಯ ಮಾಡಿದರೆಂದು ಚರಿತ್ರಗಾರರು ಬರೆದಿದ್ದಾರೆ. ಇಂಗ್ಲಾಂಡ್ ಅರಸನು ಈ ಪ್ರಕಾರ ಮಾರ್ಗದಲ್ಲಿದ್ದ ತಡೆಗಳನ್ನೆಲ್ಲಾ ನಿವರ್ತಿಸಿ ಫ್ರಾನ್ಸ್ ದೇಶದಲ್ಲಿ ಇಳಿದು, ಎದುರಿಸುವವನು ಒಬ್ಬನೂ ಇಲ್ಲದೆ (Tournay) ತೂರ್ನೆ ಎಂ

ಬ ಪಟ್ಟಣದ ಮಟ್ಟಿಗೂ ಹೋಗಿ ಆ ಊರಿಗೆ ಮುತ್ತಿಗೆ ಹಾಕಿದನು. ಆದಾಗ್ಯೂ ಆ ಪಟ್ಟಣವನ್ನು ಹಿಡಿಯಲಾರದೆ, ಫಿಲಿಪ್ಪನು ಆ ಊರಿಗೆ ಸಹಾಯವಾಗಿ ಬಂದಾಗ ಅವನ ಸಂಗಡ ಸಮಾಧಾನದ ಒಡಂಬಡಿಕೆ ಮಾಡ ಬೇಕಾಗಿತ್ತು. ಅದರ ತರುವಾಯ ಅವನು ಇಂಗ್ಲಾಂದಿಗೆ ತಿರುಗಿದಾಗ ತಾನು ಅನ್ಯ ದೇಶಗಳಲ್ಲಿ ಮಾಡಿದ ಯುದ್ಧಗಳಿಗೋಸ್ಕರ ಖರ್ಚಾದ ಹಣವನ್ನು ಕೊಡ ಬೇಕೆಂದು ಕೇಳಿದ್ದರಿಂದ ಇವನಿಗೂ ಪಾರ್ಲಮೆಂತ್ ಎಂಬ ಸಂಘದವರಿಗೂ ವಾಗ್ವಾದ ಉಂಟಾಯಿತು.

ಅದರ ತರುವಾಯ ಮೂರನೇ ಸಾರಿ ಯುದ್ಧ ನಡಿಯಿತು. ಅದು ಯಾಕಂದರೆ, (Brittany) ಬ್ರಿತನಿ ಎಂಬುವ ಬಾಧ್ಯತೆಯನ್ನು ಕುರಿತು ಆ ಕಾಲದಲ್ಲಿ ವಿವಾದ ಉಂಟಾಯಿತು. ಉಂಟಾದಾಗಲೇ ಎದ್ವರ್ದಸು ಫ್ರಾನ್ಸ್ ದೇಶದ ಅರಸನಿಗೆ ಪ್ರತಿ ಕಕ್ಷಿಯವರ ಸಂಗಡ ಸೇರಿ ಕೊಂಡು ತನಗೆ ಫ್ರಾನ್ಸ್ ರಾಜ್ಯವು ಆಗ ಬೇಕೆಂದು ಮುಂಚೆ ವ್ಯಾಜ್ಯವಾಡಿದಾಗ ತಾನು ಹೇಳಿದ ನ್ಯಾಯಕ್ಕೆ ಪ್ರತಿ ವಿರೋಧವಾದ ನ್ಯಾಯಗಳನ್ನು ಮಾತಾಡಿ (De Montfort) ದಿ ಮೊಂದ್‌ಫೋರ್ತ್ ಎಂಬವನಿಗೆ ಈ ಧೊರೆತನ ವಾಗ ಬೇಕೆಂದು ಹೋರಾಡ ಬಂದನು. ದಿ ಮೊಂದ್‌ಫೋರ್ತ್ ಎಂಬವನು ಸೆರೆಯವನಾಗಿ ಕೊಲೆ ಮಾಡಲ್ಪಟ್ಟನು. ಆದಾಗ್ಯೂ ಅವನ ವಿಧವೆಯು (Hennebonne) ಹೆನ್ನೇಬೋನ್ ಎಂಬ ಕೋಟೆಯಲ್ಲಿ ಪ್ರವೇಶಿಸಿ, ವೈರಿಗಳು ಆ ಕೋಟೆಗೆ ಸಮೀಪಿಸಿ ಮುತ್ತಿಗೆ ಹಾಕಿದಾಗ ಬಹು ಶೌರ್ಯದಿಂದ ಅದನ್ನು ಕಾದು ಕೊಂಡಳು. ಆ ಸಮಯದಲ್ಲಿ ಎದ್ವರ್ದನು ತನ್ನ ರಾಹುತಶ್ರೇಷ್ಠರಲ್ಲಿ ಒಬ್ಬನಾದ (Sir Walter Manny) ಸರ್ ವಾಲ್ತರ್ ಮನ್ನಿ ಎಂಬವನನ್ನು ಅವಳಿಗೆ ಸಹಾಯವಾಗಿ ಕಳುಹಿಸಿದನು. ಇದಲ್ಲದೆ ಆ ಕೋಟೆಗೆ ದಕ್ಷಿಣವಾದ (Guienne) ಗಿಯೆನ್ ಎಂಬ ನಾಡಿನಿಂದ ಒಂದು ಸಣ್ಣ ದಂಡು ಬಂದು ಮುತ್ತಿಗೆ ಹಾಕಿದ್ದ ಸೈನ್ಯದ ಮೇಲೆ ತಗಲಿದ್ದರಲ್ಲಿ (Derby) ದೆರ್ಬಿ ಪಟ್ಟದ ಪ್ರಭುವು ಅಧಿಕ ಪರಾಕ್ರಮವಾಗಿ ಯುದ್ಧ ಮಾಡಿದ್ದರಿಂದ ಬಹು ಕೀರ್ತಿ ಪ್ರತಾಪವನ್ನು ಹೊಂದಿದನು. ಆ ಕಾಲದಲ್ಲಿ ಅರಸನು ತಾನೂ ಬಿಲ್ಲುಗಾರರೂ ಪರಶುಗಾರರೂ ರಾಹುತವೀರಶ್ರೇಷ್ಠರೂ ಆದ ಅಲಂಕಾರ ಹೊಂದಿದ ಸೈ

ನಿಕರ ಬಹು ಬಲವಾದ ಒಂದು ಚಿಕ್ಕ ದಂಡನ್ನು ಕರಕೊಂಡು (Normandy) ನೋರ್ಮಂದಿ ದೇಶದಲ್ಲಿ 1346ನೇ ವರುಷ ಜುಲಾಯಿ ತಿಂಗಳು 12ನೇ ತಾರೀಖಿನಲ್ಲಿ ಇಳಿದನು. ತರುವಾಯ ಆ ಸೈನಿಕರು ಒಳನಾಡಿನಲ್ಲಿ ಹೊಕ್ಕು ನಾಲ್ಕು ಕಡೆಗಳಲ್ಲಿಯೂ ಆ ಪ್ರಜೆಗಳಿಗೆ ನಾನಾ ವಿಧವಾದ ಕೇಡುಗಳನ್ನೂ ಉಪದ್ರಗಳನ್ನೂ ಮಾಡಿ, (Paris) ಪಾರಿಸ್ ಪಟ್ಟಣದ ಬಳಿಗೆ ಶೇರಿದರು. ಫಿಲಿಪ್ಪನೆಂಬ ಅರಸನು ತನ್ನ ರಾಜಧಾನಿಯನ್ನು ಕಾಯುವ ದಕ್ಕೋಸ್ಕರ ತನ್ನ ಕಡೆಯವರಾದ ಬಹು ಕೀರ್ತಿ ಹೊಂದಿದ ಕೆಲವು ಯುದ್ಧವೀರರನ್ನು ಆದು ಕೊಂಡು ಅವರೊಡನೆ ಇಂಗ್ಲಾಂದ್ ಅರಸನನ್ನು ಅಡ್ಡಗಟ್ಟಿ ಕಾದುವದಕ್ಕೆ ಬಂದನು. ಎದ್ವರ್ದನೆಂಬ ಅರಸನು ಅವನು ಬರುವದನ್ನು ತಿಳಿದು ಶತ್ರುಗಳು ತನ್ನ ಚಿಕ್ಕ ಸೈನ್ಯವನ್ನು ಸುತ್ತಿ ಕೊಂಡು, ಹಗೆಯವರ ಶೀಮೆಯಲ್ಲಿ ಸಹಾಯವೇನೂ ದೊರಕದಂತೆ ತಮ್ಮನ್ನು ನಾಲ್ಕು ಕಡೆಯೂ ಇರಿಕಿಸುವರೆಂದು ಚಿಯ ಪಟ್ಟು ಬಹು ಯುಕ್ತಿಯಿಂದ, ಯುದ್ಧತಂತ್ರಗಳನ್ನೆಲ್ಲಾ ಪ್ರಯೋಗಿಸಿ (Somme) ಸೋಮ್ ಎಂಬ ನದಿಯ ಥಡದ ಮಟ್ಟಿಗೂ ಫ್ರಾನ್ಸ್ ಅರಸನಿಗೆ ತಪ್ಪಿಸಿ ಕೊಂಡು ತನ್ನ ಸೈನ್ಯವನ್ನು ನಡಿಸಿ ಕೊಂಡು ಬಂದನು. ಆ ಸ್ಥಳದಲ್ಲಿ ಅವನು ಎರಡು ತಲೆಯ ಕಟ್ಟಿರುವಿನ ಹಾಗಿದ್ದು, ಒಂದು ಪಕ್ಕದಲ್ಲಿ ಆಳವೂ ವೇಗವೂ ಉಳ್ಳ ನದಿಯುಂಟೆಂದೂ, ಇನ್ನೊಂದು ಪಕ್ಕದಲ್ಲಿ ಲಕ್ಷ ಯುದ್ಧವೀರರಾದ ಮಹಾ ಸೈನ್ಯವು ತನ್ನ ಚಿಕ್ಕ ದಂಡಿನ ಮೇಲೆ ಬೀಳ ಯತ್ನಯಿಸುತ್ತಾರೆಂದೂ ಕಂಡು ಬಹು ಸಂಕಟ ಪಟ್ಟನು. ಆ ಸಮಯದಲ್ಲಿ ಒಬ್ಬ ಫ್ರಾನ್ಸಿನವನು ಇಂಗ್ಲಾಂದ್ ಅರಸನು ಕೊಟ್ಟ ದ್ರವ್ಯವನ್ನು ತೆಗದು ಕೊಂಡು ದ್ರೋಹ ಮಾಡಿ, ಆ ನದಿಯನ್ನು ದಾಟ ತಕ್ಕ ಒಂದು ರೇವನ್ನು ತೋರಿಸಿದನು. ಅದೇ ಮಾರ್ಗವಾಗಿ ಶತ್ರುಗಳ ಬಲವಾದ ಒಂದು ದಂಡು ಎದುರಿಸಿ ನಿಲ್ಲುವಾಗ ಅವನ ಸೈನ್ಯವೆಲ್ಲಾ ಅತಿ ತ್ವರೆಯಾಗಿ ಆ ನದಿಯನ್ನು ದಾಟಿ ತಪ್ಪಿಸಿ ಕೊಂಡಿತು. ಹೀಗಿರುವಾಗ ಇಂಗ್ಲಿಷ್ ಸೈನ್ಯದ ಹಿಂದಿನ ದಂಡು ದಾಟಿ ಬರುವಷ್ಟರಲ್ಲಿ ಫ್ರಾನ್ಸಿನವರ ಸೈನ್ಯವೆಲ್ಲಾ ಆ ನದಿಯ ಥಡಕ್ಕೆ ಬಂದು ಶೇರಿತು. ಆದಾಗ್ಯೂ ನದಿಯಲ್ಲಿ ನೀರು ಉಬ್ಬಿ ಬರುವ ಸಮಯವಾದದರಿಂದ ಫಿಲಿಪ್ಪನು "ಕೈಗೆ ಬಂದದ್ದು ಬಾಯಿಗೆ ಬರಲಿ

ಲ್ಲಿ" ಎಂಥೇಳಿ ಆ ರೇವಿನಲ್ಲಿ ಅವರನ್ನು ಬೆನ್ನಟ್ಟಿ ಇಳಿಯ ಕೂಡದೆ, ಸು ತ್ತಿ ಕೊಂಡು ಬಂದು (Abbeyville) ಅಬ್ಬಿವಿಲ್ ಎಂಬ ಊರಿನ ಅಂಚಿನಲ್ಲಿ ಇರುವ ಶೇತುವೆಯ ಮಾರ್ಗವಾಗಿ ಹೋದನು.

ಎದ್ವರ್ಡನು ಸಮೀಪಿಸಿ ಬಂದ ಶತ್ರುಸೈನ್ಯವನ್ನು ಹೀಗೆ ವಿಮಾರಿಸಿದ್ದರಿಂದ ಸಂತೋಷ ಪಟ್ಟು "ಜಾಗವಿದ್ದಲ್ಲಿ ತಾಗ ಬೇಕು" ಎಂಬ ಗಾದೆಯ ಪ್ರಕಾರ ಶತ್ರುಗಳು ಬರುವಷ್ಟರಲ್ಲಿ ಯುದ್ಧ ಮಾಡ ತಕ್ಕ ಸ್ಥಳವನ್ನು ಸಾವಧಾನವಾಗಿ ಆದು ಕೊಳ್ಳುವದಕ್ಕೆ ಸುತ್ತಲೂ ನೋಡಿದನು. ಅಲ್ಲಿ (Crecy) ಕ್ರೇಸಿ ಎಂಬ ಒಂದು ಊರು ಇತ್ತು. ಅದರ ಒಂದು ಪಕ್ಕದಲ್ಲಿ ಒಳ್ಳೇ ಇಳಿಜಾರಾದ ಒಂದು ಮೈದಾನದಲ್ಲಿ ತನ್ನ ಸೈನ್ಯವನ್ನೆಲ್ಲಾ ಸಾಲ್ಗಟ್ಟಿ ನಿಲ್ಲಿಸಿ ಹಗೆಯವರ ಸೈನ್ಯ ಬರುವದನ್ನು ನಿರೀಕ್ಷಿಸಿ ಕೊಂಡೇ ನಿಂತನು. ತನ್ನ ಸೈನ್ಯವನ್ನು ಮೂರು ದೊಡ್ಡ ವಿಭಾಗಗಳಾಗಿ ಭಾಗಿಸಿದನು. ಮುಂದಿನ ಭಾಗಕ್ಕೆ (Black Prince) ಕಾಳಪ್ರಭು ಎಂಬ ಪ್ರಭುವಾದಂಥ ಶೌರ್ಯವೂ ಭಾರೀತನವೂ ಉಳ್ಳಂಥ, ಎದ್ವರ್ಡನ ಕುಮಾರನೇ ದಳಕರ್ತನಾಗಿದ್ದನು. ಸೈನ್ಯವೆಲ್ಲಾ ಯುದ್ಧ ಮಾಡ ಆಯತ್ತವಾಗಿ ನಿಂತಿರಲು, ಅರಸನು ತನ್ನ ಯುದ್ಧಾಶ್ವದ ಮೇಲೆ ಹತ್ತಿ, ಭಾಗಭಾಗವಾಗಿಯೂ ಸಾಲುಸಾಲಾಗಿಯೂ ಹೋಗಿ ಶಾಂತ ಮುಖದಿಂದ ತನ್ನ ಯುದ್ಧವೀರರನ್ನು ದೃಷ್ಟಿಸಿ, ಕಿರುನಗೆಯೊಡನೆ ಅವರನ್ನು ಧೈರ್ಯ ಪಡಿಸಿ ಇಂಗ್ಲಾಂದಿಗೂ ತಮ್ಮ ಅರಸನಿಗೂ ಮಾನ ಉಂಟಾಗ ತಕ್ಕ ಪ್ರಕಾರ ಒಬ್ಬೊಬ್ಬನೂ ಯುದ್ಧರಂಗದಲ್ಲಿ ಹಿಂತೆಗಿಯದೆ ಧೈರ್ಯವಾಗಿ ಯುದ್ಧ ಮಾಡ ಬೇಕೆಂದು ಹೇಳಿ, ಎಲ್ಲರೂ ಯತ್ನ ಪಟ್ಟಿದ್ದಾರೆಂದು ಕಂಡು ಶತ್ರುಸೈನ್ಯ ಬರುವ ಪರ್ಯಂತವೂ ಹುಲ್ಲಿನ ಮೇಲೆ ಕುಳಿತು ವಿಶ್ರಾಂತಿ ಹೊಂದ ಮಾಡಿದನು.

ಸ್ವಲ್ಪ ಹೊತ್ತಿನ ತರುವಾಯ ಫಿಲಿಪ್ಪನು ವೀರಾವೇಶದಿಂದ ಸಮೀಪವಾಗಿ ಬಂದನು. ಬರುವಾಗ ತನ್ನ ಸೇವಕರು ದಣಿದಿದ್ದಾರೆಂದು ನೆನಸಿ ಯುದ್ಧ ಪ್ರಾರಂಭಿಸುವದಕ್ಕಿಂತ ಮುಂಚೆ ಸ್ವಲ್ಪ ದಣುವಾರಿಸಿ ಕೊಳ್ಳಬಹುದೆಂದು ಅವರನ್ನು ನಿಲ್ಲಲಿಕ್ಕೆ ಅಪ್ಪಣೆ ಕೊಟ್ಟನು. ಆದಾಗ್ಯೂ

ಹಾಗೆ ನಿಲ್ಲುವದಕ್ಕೆ ಅವರಿಗೆ ಮನಸ್ಸೂ ಇರಲಿಲ್ಲ, ಯತ್ನವೂ ಇರಲಿಲ್ಲ. ಯಾಕಂದರೆ ಹಿಂದಿನ ರಾಣುವೆಯು ವೀರಾವೇಶದಿಂದ ಎದುರಿಗಳ ಮೇಲೆ ಬೀಳುವಂತೆ ಮುಂದೆ ಹೋಗ ಬೇಕೆಂಬ ವಾಂಛೆಯಿಂದ ತಳ್ಳಿ ಕೊಂಡು ಬಂದದರಿಂದ ಮುಂದಿನ ರಾಣುವೆಯವರು ಸ್ವಲ್ಪವಾದರೂ ನಿಲ್ಲಿ ಕೂಡದೆ ಏನೂ ಕ್ರಮವಿಲ್ಲದೆ ಧೈರ್ಯದಿಂದ ಶತ್ರುಗಳ ಮೇಲೆ ಹಾದರು. (Genoa) ಜಿನೋವ ಪಟ್ಣದವರಾದ ಬಿಲ್ಲುಗಾರರು ಯುದ್ಧ ಮಾಡ ಪ್ರಾರಂಭಿಸಿದರು. ಆದಾಗ್ಯೂ ಸ್ವಲ್ಪ ಮುಂಚೆ ಸುರಿದಿದ್ದ ಮಳೆಯಿಂದ ಅವರ ಬಿಲ್ಲುಗಳು ತೊಯಿದು ಇದ್ದದರಿಂದಲೂ, ಅವರು ಅಂಬುಗಳನ್ನು ನಾರಿನಲ್ಲಿ ಹೂಡುವಾಗ ಮುಂಚೆ ಮೇಘದಿಂದ ಮರೆಯಲ್ಪಟ್ಟ ಸೂರ್ಯನು ಹೊರಟು ಕಡು ಬಿಸಿಲು ಉರಿದದರಿಂದಲೂ, ಅವರ ಕಣ್ಣುಕುಕ್ಕಿ ಸರಿಯಾಗಿ ಗುರಿ ಇಟ್ಟು ಅಂಬೆಸೆಯ ಕೂಡದೆ ಹೋದದರಿಂದಲೂ, ಅವರು ಎಸೆದ ಅಂಬುಗಳು ಈಚೆಯೇ ಬಿದ್ದು ನಷ್ಟವೇನೂ ಮಾಡಲಿಲ್ಲ. ಇಂಗ್ಲಿಷಿನವರು ಬಿಲ್ಲು ಅಂಬು ಮೊದಲಾದ ಆಯುಧಗಳನ್ನು ತೋಳಿನ ಮೇಲೆ ಕಟ್ಟಿ ಕೊಂಡ ಪೆಟ್ಟಿಗೆಯಲ್ಲಿ ಇಟ್ಟಿದ್ದು, ಪ್ರಯೋಗಿಸ ಬೇಕಾದ ಸಮಯದಲ್ಲಿ ಅವುಗಳನ್ನು ತೆಗದು, ಶತ್ರುಗಳು ವ್ಯರ್ಥವಾಗಿ ತಮ್ಮ ಅಂಬುಗಳನ್ನು ಎಸೆದ ತರುವಾಯ, ಪದರದೆ ಕಳವಳ ಪಡದೆ ಇದ್ದು, ಎದುರಿಸಿ ಬರುವ ಹಗೆಯವರ ಮೇಲೆ ಅಂಬುಗಳನ್ನು ಎಸೆದದರಲ್ಲಿ ಒಂದೊಂದು ಅಂಬು ಸಹ ಒಬ್ಬ ಶತ್ರುವಿನ ಎದೆಯಲ್ಲಿ ನಾಟಿತು. ಅದನ್ನು ಕುರಿತು ಪೂರ್ವ ಚರಿತ್ರಗಾರನೊಬ್ಬನು, "ಕಲ್ಲಿನ ಮಳೆ ಸುರಿದಪ್ರಕಾರ ಬಿಳೀ ಗರಿಗಳುಳ್ಳ ಅಂಬಿನ ಮಳೆಯು ಶತ್ರುಗಳ ಮೇಲೆ ಸುರಿಯಿತು," ಎಂದು ಬರೆದಿದ್ದಾನೆ. ಅದರಿಂದ (Genoa) ಜಿನೋವ ಪಟ್ಣದ ವೀರರು ದಿಗಲು ಪಟ್ಟು ಬೆನ್ನು ಕೊಟ್ಟು ಓಡಿ, ಹಿಂದೆ ಬಂದ ಬೇರೆ ಸೈನ್ಯವನ್ನು ಸಹ ಕಳವಳ ಪಡ ಮಾಡಿದರು. ಇದನ್ನು ಕಂಡು ಫ್ರಾನ್ಸ್ ದೇಶದ ರಾಹುತಶ್ರೇಷ್ಠರು ಮುಂದಕ್ಕೆ ಬಂದು ಚಯ ಪಟ್ಟು ಓಡುವ ಒಬ್ಬೊಬ್ಬನನ್ನು ಕಡಿದು ಹಾಕಿ, ಆ ಮೇಲೆ ಇಂಗ್ಲಿಷ್ ಸೈನ್ಯದ ಮೇಲೆ ಬಿದ್ದು ಬಹು ಉಗ್ರದಿಂದಲೂ ಧೈರ್ಯದಿಂದಲೂ ಆ ಸೈನ್ಯದ ಮುಂದಿನ ವರಿಶೆಯವರೊಡನೆ ಕೈ ಕಲತು ಯುದ್ಧ ಮಾಡಿದರು. ಹೀಗೆ ಉಂಟಾದ

ಹೋರ್ಯಾಟವು ಬಹು ಕಠಿಣವಾಗಿಯೂ ಜಯಂಕರವಾಗಿಯೂ ಇತ್ತು. ಆ ದಿವಸ (Black Prince) ಕಾಳಪ್ರಭು ಎಂಬ ರಾಜಪುತ್ರನು ಶೌರ್ಯದಲ್ಲಿ ಕೀರ್ತಿ ಹೊಂದಿ, ಅಧಿಕ ಪರಾಕ್ರಮವಾಗಿ ಯುದ್ಧ ಮಾಡಿದ್ದರಿಂದ, ಅವನನ್ನು ಹಿಡಿದು ಕೊಳ್ಳುವದಕ್ಕೆ ಶತ್ರುಸೈನ್ಯದವರು ಸುತ್ತಿಕೊಂಡು ಬರಲಾಗಿ ಅವನನ್ನು ಕಾದು ಕೊಳ್ಳುವದಕ್ಕೆ ಇಂಗ್ಲಿಷ್ ಸೈನಿಕರಾದ ಶೂರರು ಅನೇಕರು ಅವನ ಪಕ್ಕದಲ್ಲಿ ನಿಲ್ಲಲು ಉಗ್ರವಾದ ಯುದ್ಧವಾಯಿತು. ಆ ಸಮಯದಲ್ಲಿ ಅರಸನಾದ ಎದ್ವರ್ದನು ಸಮೀಪದಲ್ಲಿದ್ದ ಒಂದು ಗುಡ್ಡದ ಮೇಲೆ ಹತ್ತಿ ನಿಂತು ಯುದ್ಧವನ್ನು ಚಿಂತಿಸಿ ಕೊಂಡಿರಲು, ಒಬ್ಬ ದೂತನು ಬಂದು ಸಂಗಡಲೇ ರಾಜಪುತ್ರನಿಗೆ ಸಹಾಯವಾಗಿ ಒಂದು ದಂಡನ್ನು ಕಳುಹಿಸ ಬೇಕೆಂದು ಹೇಳಿದನು. ಅದಕ್ಕೆ ಅರಸನು ನನ್ನ ಕುಮಾರನು ಜೀವದಿಂದಿದ್ದಾನೋ ಎಂದು ಕೇಳಿದನು. ಅದಕ್ಕೆ ಆ ದೂತನು ಜೀವದಿಂದ ಇದ್ದಾನೆ, ಆದಾಗ್ಯೂ ಅಧಿಕ ಸಂಕಟ ಪಡುತ್ತಾನೆ ಎಂಧೇಳಿದನು. ಅದನ್ನು ಕೇಳಿ ಅರಸನು ನೀನು ಅವನ ಬಳಿಗೆ ಹೋಗಿ ಬೇರೆ ಯಾವ ಸಹಾಯವೂ ಇಲ್ಲದೆ ಈ ಹೊತ್ತು ಅವನು ತಾನೇ ಜಯ ಹೊಂದಿ ಕೀರ್ತಿ ಪಡಿಯ ಬೇಕು, ವೀರಶ್ರೇಷ್ಠನು ಪಾದದಲ್ಲಿ ಧರಿಸುವ (golden spurs) ಬಂಗಾರಮಯವಾದ ಮುಳ್ಳನ್ನು ಅವನು ತನ್ನ ಶೌರ್ಯದಿಂದ ಈ ಹೊತ್ತು ಹೊಂದ ಬೇಕು ಎಂದು ಅರಸನು ಹೇಳಿದನೆಂದು ಅವನಿಗೆ ಹೇಳು ಎಂದು ಹೇಳಿ, ಆ ದೂತನನ್ನು ಕಳುಹಿಸಿ ಬಿಟ್ಟನು. ಆ ಮಾತುಗಳನ್ನು ಕೇಳಿದವರೆಲ್ಲರೂ ಸಂತೋಷದಿಂದ ಉಬ್ಬಿ, ಆರ್ಭಟಿಸಿ ಜಯಕೀರ್ತನೆಗಳನ್ನು ಹಾಡಿ, ಫ್ರಾನ್‌ಸಿನವರನ್ನು ಗದಿಮಿ ಓಡಿಸಿ ಹೊತ್ತು ಮುಳುಗುವಷ್ಟರಲ್ಲಿ ಪೂರ್ಣ ಜಯ ಹೊಂದಿದರು; ಈ ಪ್ರಕಾರ ಇಂಗ್ಲಿಷಿನವರು ಆ ಹೊತ್ತು ಅಧಿಕ ಧೈರ್ಯದಿಂದ ಹೋರಾಡಿ ಜಯಶೀಲರಾದರು. ಆದಾಗ್ಯೂ ಜಯ ಹೊಂದಿದ ತರುವಾಯ ವಿಧೇಯರಾಗಿ ಬಂದ ಶತ್ರುಗಳನ್ನು ಅವರು ಕನಿಕರವಿಲ್ಲದೆ ಬಹು ಕ್ರೂರವಾಗಿ ನಾಲ್ಕು ಕಡೆಗಳಲ್ಲಿಯೂ ಸಂಹಾರ ಮಾಡಿ, ಒಬ್ಬನನ್ನಾದರೂ ಸೆರೆ ಹಿಡಿಯದೆ, ತಪ್ಪಿಸಿ ಬಿಡದೆ ಎಲ್ಲರನ್ನೂ ಕೊಂದು ಬಿಟ್ಟರು. ಅವರು ಹೀಗೆ ಮಾಡಿದ್ದು ಬಹಳ ತಪ್ಪು. ಶೌರ್ಯವಾಗಿ ಹೋರಾಡುವದು

ಕೀರ್ತಿಯೇ. ಹಗೆಯವನಿಗೆ ಕಷ್ಟ ಬಂದಾಗ ಅವನಿಗೆ ಕನಿಕರ ತೋರಿಸು ವದು ಆ ಶೌರ್ಯಕ್ಕೆ ಅಲಂಕಾರವೇ.

ಎಡ್ವರ್ಡ್ ಅರಸನು (Crecy) ಕ್ರೇಸಿ ಊರಿನಲ್ಲಿ ಸ್ವಲ್ಪ ಕಾಲ ತಂಗಿದ್ದು ತರುವಾಯ ಫ್ರಾನ್ಸ್ ದೇಶದ "ಬೀಗದ ಕೈ" ಎಂದು ಕರೆಯಲ್ಪಟ್ಟ (Calais) ಕಲೇ ಎಂಬ ಬಲವುಳ್ಳ ಕೋಟೆಗೆ ಮುತ್ತಿಗೆ ಹಾಕಿದನು. ಅವನು ಬಹಳ ಕಾಲ ಬಹು ಪ್ರಯಾಸ ಪಟ್ಟು ಹನ್ನೊಂದು ತಿಂಗಳ ವರೆಗೂ ಅದನ್ನು ಸುತ್ತಿ ಕೊಂಡಿದ್ದ ತರುವಾಯ, ಅದನ್ನು ಕಾದಿದ್ದ ಸೈನ್ಯಕ್ಕೆ ಬಹಳ ಇಕ್ಕಟ್ಟು ಉಂಟಾಗಿ ಆಹಾರವಿಲ್ಲದ್ದರಿಂದ ಬಹು ಅಸಹ್ಯವಾದ ಪದಾರ್ಥಗಳನ್ನು ಸಹ ತಿಂದು, ಬಹು ಕಷ್ಟ ಪಟ್ಟು, ಸಹಾಯವಿಲ್ಲದ್ದರಿಂದ ಅರಸನಿಗೆ ವಿಧೇಯರಾಗಿ ಬರ ಬೇಕಾಯಿತು. ಆದಾಗ್ಯೂ ಅವರು ಶೌರ್ಯದಿಂದ ಆ ಕೋಟೆಯನ್ನು ಕಾದು ಕೊಂಡಿದ್ದದರಿಂದ ಅವರು ಕೋಟೆಯನ್ನು ಒಪ್ಪಿಸಿ ಬಿಟ್ಟು, ಬಿರುದಿನ ನಿಶಾನಿಗಳನ್ನು ಹಿಡಿದು ಕೊಂಡು, ತಮ್ಮ ಆಯುಧಗಳ ಸಹಿತವಾಗಿ ಅವಮಾನವಿಲ್ಲದೆ ಬೇರೊಂದು ಪಟ್ಣಕ್ಕೆ ಹೊರಟು ಹೋಗ ತಮಗೆ ಅಪ್ಪಣೆ ಕೊಡ ಬೇಕೆಂದು ಅರಸನ ಬಳಿಯಲ್ಲಿ ವಿಜ್ಞಾಪನೆ ಮಾಡಿದರು. ಮೊದಲಲ್ಲಿ ಅರಸನು ಆ ವಿಜ್ಞಾಪನೆಗೆ ಕಿವಿ ಕೊಡಲಿಲ್ಲ. ಆದಾಗ್ಯೂ ತರುವಾಯ ಆ ಪಟ್ಣದ ಪ್ರಮುಖರು ಆರು ಮಂದಿ ದುಖ್ಖಾವೇಷದಿಂದ ಬೋಳು ತಲೆಯಾಗಿಯೂ ಬರಿಗಾಲಾಗಿಯೂ ಕೊರಳಿಗೆ ಹಗ್ಗಗಳನ್ನು ಕಟ್ಟಿ ಕೊಂಡು, ಆ ಪಟ್ಣದ ಬೀಗದ ಕೈಗಳನ್ನು ತನ್ನ ಬಳಿಗೆ ತಂದು ತನ್ನ ಪಾದಗಳ ಬಳೀಲಿಟ್ಟರೆ, ಬೇರೆ ಊರಿನವರೆಲ್ಲರೂ ತಾವು ಕೇಳಿ ಕೊಂಡ ಪ್ರಕಾರ ಹೋಗ ಬಹುದೆಂದು ಅವರಿಗೆ ಪ್ರತ್ಯುತ್ತರ ಹೇಳಿ ಕಳುಹಿಸಿದನು. (Calais) ಕಲೇ ಪಟ್ಣದವರು ಈ ತೀರ್ಮಾನವನ್ನು ಕೇಳಿದಾಗ ದುಖ್ಖಾಬ್ಧಿಯಲ್ಲಿ ಮುಳುಗಿದರು. ಆದಾಗ್ಯೂ (Eustace de St. Pierre) ಯೂಸ್ಟೇಸ್ಡಿ ಸೆಂತ್ ಪೀಯರ್ ಎಂಬ ಧೈರ್ಯಶಾಲಿಯೊಬ್ಬನು ಬೇರೆ ಊರಿನವರನ್ನು ಕಾಪಾಡುವದಕ್ಕೆ ತನ್ನ ಪ್ರಾಣ ಕೊಡುವದು ದೊಡ್ಡದಲ್ಲವೆಂದೆಣಿಸಿ, ಆ ಅರಸನು ಹೇಳಿದಂತೆ ಇಗೋ ನಾನು ಹೋಗುತ್ತೇನೆ ಎಂದು ಹೇಳಿದನು. ಈ ದೊಡ್ಡ ಮನುಷ್ಯನು ಮಾಡಿದ್ದನ್ನು ಕಂಡು ಬೇರೆ ಐದು ಮಂದಿಯೂ

ನಿನ್ನ ಸಂಗಡ ನಾವೂ ಬರುತ್ತೇವೆ ಎಂದು ಹೇಳಿದರು. ಅದೇ ಪ್ರಕಾರ ಬರಿಗಾಲಾಗಿಯೂ ತೆರೆದ ತಲೆಗಳಾಗಿಯೂ ಆ ಆರು ಮಂದಿಯೂ ಪಟ್ಣವನ್ನು ಬಿಟ್ಟು ಇಂಗ್ಲಿಷ್ ದಂಡಿಗೆ ಬಂದು ಶೆರೆಯವರಾದದ್ದರಿಂದ ಅರಸನು ಬೇರೆ ಊರಿನವರನ್ನು ಬಿಟ್ಟು ಬಿಟ್ಟನು. ಅದರ ತರುವಾಯ ಫನವುಳ್ಳ ಈ ಆರು ಮಂದಿಯನ್ನೂ ಪ್ರಾಣಾಗ್ನೆ ಮಾಡ ಅರಸನು ಯತ್ನಯಿಸುವಾಗ ಸ್ವಲ್ಪ ಮುಂದಾಗಿ ದಂಡಿಗೆ ಬಂದಿದ್ದ (Philippa) ಫಿಲಿಪ್ಪ ಎಂಬುವ ಅರಸಿಯು ಆ ಆರು ಮಂದಿಗೆ ಏನೂ ಆಜ್ಞೆ ಮಾಡಿಸದೆ ತನಗೆ ಒಪ್ಪಿಸ ಬೇಕೆಂದು ಅರಸನ ಬಳಿಯಲ್ಲಿ ಬಹುಶ ಬೇಡಿ ಕೊಂಡದ್ದರಿಂದ ಅವನು ಅವಳ ವಿಜ್ಞಾಪನೆಗೆ ಸಮ್ಮತಿಸಿ ಅವರನ್ನು ಅವಳಿಗೆ ಒಪ್ಪಿಸಿದನು. ಆ ಅರಸಿಯು ಅವರನ್ನು ಮರ್ಯಾದೆಯಿಂದ ಕರೆದು ಕೊಂಡು ಹೋಗಿ ಬೇಕಾದ ಉಪಚಾರ ಮಾಡಿ ಕಳುಹಿಸಿ ಬಿಟ್ಟಳು.

ಎದ್ವರ್ದನು ಈ ಪ್ರಕಾರ ಫ್ರಾನ್ಸ್ ದೇಶದಲ್ಲಿ ಯುದ್ಧ ಮಾಡಿ ಕೊಂಡಿರುವಾಗ ಸ್ಕೊತ್ಲಾಂದರು ಇಂಗ್ಲಾಂದಿನ ಮೇಲೆ ದಂಡೆತ್ತಿ ಕೊಂಡು ಬಂದರು. (Philippa) ಫಿಲಿಪ್ಪ ಎಂಬ ಅರಸಿಯು ಕನಿಕರವೂ ಅಂತಃಕರಣವೂ ಉಳ್ಳವಳಾದಾಗ್ಯೂ ಬಹು ಶೌರ್ಯ ಉಳ್ಳವಳಾದದರಿಂದ ಆ ಸಮಾಚಾರವನ್ನು ಕೇಳಿದ ಸಂಗಡಲೇ ದೊಡ್ಡ ಸೈನ್ಯವನ್ನು ಕೂಡಿಸಿ (Nevill's Cross) ನೆವಿಲ್ ಕ್ರಾಸ್ ಎಂಬ ಸ್ಥಳದ ಬಳಿಯ ಆ ಶತ್ರುಗಳನ್ನು ಮುರಿಯ ಬಡಿದಳು. ಯುದ್ಧ ಮಾಡುವದಕ್ಕೆ ಸೈನ್ಯವೆಲ್ಲಾ ವರಿಶೆಗಟ್ಟಿ ನಿಲ್ಲುವಾಗ ಆ ಅರಸಿಯು ಕುದುರೆಯ ಮೇಲೆ ಹತ್ತಿ ಕೊಂಡು ಸಾಲುಸಾಲಿನಲ್ಲಿ ಹೋಗಿ ಯುದ್ಧವೀರರಿಗೆ ಧೈರ್ಯ ಹೇಳಿದಳು. ಅದರ ತರುವಾಯ ಜಯವಾಯಿತೆಂಬ ಶುಭಸಮಾಚಾರವನ್ನು ತನ್ನ ಪುರುಷನಿಗೆ ತಿಳಿಸುವದಕ್ಕೆ, (Calais) ಕಲೇ ಊರಿನವರು ವಿಧೇಯರಾಗಿ ಬರುವದಕ್ಕಿಂತ ಸ್ವಲ್ಪ ಮುಂಚೆ ಅಲ್ಲಿಗೆ ಬಂದು ಶೇರಿದಳು. ಅದರ ತರುವಾಯ ಎರಡು ಮೂರು ವರುಷಗಳ ಮಟ್ಟಿಗೂ ಯುದ್ಧ ನಡೆಯಿತು. ಆದಾಗ್ಯೂ ಎರಡು ಪಕ್ಷದವರೂ ಅಷ್ಟು ಬಲವಾಗಿ ಹೋರಾಡಲಿಲ್ಲ. ಯಾಕಂದರೆ ಇಂಗ್ಲಾಂಡ್ ದೇಶದಲ್ಲಿ ಬಹು ಕ್ರೂರವಾದ ಕೊಳ್ಳೆಜ್ವರವು ಹೊಡೆದದರಿಂದ ಎದ್ವರ್ದ್ ಅರಸನೂ ಅರಸನ ಕುಮಾರನೂ ಅಲ್ಲಿಗೆ ಬಂ

ದು ಬಿಟ್ಟರು. ಮತ್ತು ಫ್ರಾನ್ಸ್ ದೇಶದಲ್ಲಿ ಫಿಲಿಪ್ಪನೆಂಬ ಅರಸನು ಸಾಯಲಾಗಿ ಅವನ ಮಗನಾದ ಯೋಹಾನನಿಗೆ ಪಟ್ಟವಾಯಿತು.

ಅದರ ತರುವಾಯ 1356ನೇ ವರುಷದಲ್ಲಿ (Black Prince) ಕಾಳಪ್ರಭುವಿನಿಂದ ನಡಿಸಲ್ಪಟ್ಟ ದೊಡ್ಡ ಸೈನ್ಯವು ಫ್ರಾನ್ಸ್ ದೇಶದ ಮೇಲೆ ಯುದ್ಧ ಮಾಡ ಹೋಯಿತು. ಆ ಪ್ರಭುವು (Bordeaux) ಬೋರ್ಡೋ ಎಂಬ ಪಟ್ಟಣದಲ್ಲಿ ಇಳಿದು ಕೊಂಡು ಅಲ್ಲಿಂದ ಒಳದೇಶದಲ್ಲಿ ಹೊಕ್ಕು (Poictiers) ಪೋಯಿಸ್ಟೀಯರ್ಸ್ ಎಂಬ ಊರಿನ ಮಟ್ಟಿಗೂ ಒಂದೊಂದು ಪಟ್ಟಣವನ್ನೂ ಸಣ್ಣ ಗ್ರಾಮವನ್ನೂ ನಾಶ ಮಾಡಿ ಕೊಳ್ಳೆ ಇಡುವದಕ್ಕೆ ತನ್ನ ಸೈನ್ಯದವರಿಗೆ ಸ್ಥಳ ಕೊಟ್ಟನು. ಅದರ ತರುವಾಯ ಯೋಹಾನನೆಂಬ ಅರಸನು ಹೊರಟು ಆ ದೇಶದಲ್ಲಿದ್ದ ರಾಹುತವೀರಶ್ರೇಷ್ಠರಾದ ಅತಿ ಪರಾಕ್ರಮವಂತರೂ ಸುಶೀಲರೂ ಆದ ಕೆಲವರನ್ನು ಕೂಡಿಸಿ, ತಮಗೆ ಬಹು ಪ್ರಿಯವಾದ ಸ್ವದೇಶದಲ್ಲಿ ಶತ್ರುಗಳು ಮಾಡುತ್ತಾ ಬಂದ ಅಕ್ರಮಕ್ಕೆ ಮುಯ್ಯಿ ತೀರಿಸ ಬೇಕೆಂದು ಶಪಥವಿಟ್ಟು ಕೊಳ್ಳುವ ಹಾಗೆ ಮಾಡಿದನು. ಈ ರಾಹುತರ ಮುಂದೆ ಇಂಗ್ಲಿಷ್ ಸೈನ್ಯವು ಹಿಂಜರಿದು ಹೋಯಿತು. ಆದಾಗ್ಯೂ ಅವರು ಹಿಂಜರಿದು ಹೋಗುವಷ್ಟರಲ್ಲಿ ಫ್ರಾನ್‌ಸಿನವರು ಅತಿ ಶೀಘ್ರವಾಗಿ ಹಾರಿ ಅವರನ್ನು ಅಡ್ಡಗಟ್ಟಿದರು. ಆದದರಿಂದ ಇನ್ನು ಮೇಲೆ ಹಿಂಜರಿದು ಹೋದರೆ ಅವಮಾನವಾಗುವದೆಂದು ಹೇಳಿ, (Black Prince) ಕಾಳಪ್ರಭುವು ಎದುರಾಳಿಗಳ ಸಂಗಡ ಕೈ ಕಲಿತು ಅವರನ್ನು ಓಡಿಸಿ ಬಿಡುವದೇ ಸರಿ ಎಂದು ಯುದ್ಧಕ್ಕೆ ಯತ್ನ ಪಟ್ಟನು. ಮೊದಲಲ್ಲಿ ಸಮಾಧಾನವೊಡಂಬಡಿಕೆಗೆ ಮಾತನಾಡಿದನು. ಫ್ರಾನ್ಸ್ ದೇಶದ ಅರಸನು, ಆ ಪ್ರಭುವೂ ಅವನಿಗೆ ಸೇರಿದ ರಾಹುತವೀರಶ್ರೇಷ್ಠರಾದ ನೂರು ಮಂದಿಯೂ ತಮ್ಮನ್ನು ಸೆರೆಯವರಾಗಿ ಒಪ್ಪಿಸಿದರೆ, ಮಿಕ್ಕ ಸೈನ್ಯವನ್ನು ಬಿಟ್ಟು ಬಿಡುತ್ತೇನೆ, ಇಲ್ಲದಿದ್ದರೆ ಬಿಡುವದಿಲ್ಲವೆಂದು ಖಂಡಿತವಾಗಿ ಹೇಳಿದ್ದರಿಂದ ಇಂಗ್ಲಿಷ್ ಸೈನ್ಯಾಧಿಪತಿಯು, ಯುದ್ಧಮುಖದಲ್ಲಿ ನಾವು ಕತ್ತಿಯನ್ನು ಹಿಡಿದು ಯುದ್ಧ ಮಾಡುವ ಕಾಲದಲ್ಲಿ ನಮ್ಮನ್ನು ನೀವು ಹಿಡಿದು ಕೊಂಡರೇ ಹೊರ್ತು ನಾವು ನಿಮಗೆ ಸೆರೆಯಾಗುವದಿಲ್ಲವೆಂದು ಪ್ರತ್ಯುತ್ತರ ಹೇಳಿ ತನ್ನ ಸೈನ್ಯವನ್ನು ದಿಟ್ಟ ಪಡಿಸಿ ಕೊಂಡು ನಿಂತನು.

## ಸಂಧಿ ೯. ಕಾಳಪ್ರಭು ಫ್ರಾನ್ಸಿನ ಮೇಲೆ ದಂಡೆತ್ತಿದ್ದು.

ಇಂಗ್ಲಿಷಿನವರ ಸಣ್ಣ ದಂಡು ದ್ರಾಕ್ಷೀ ತೋಟಗಳೂ ಬೇಲಿಗಳೂ ಸುತ್ತಲ್ಪಟ್ಟ ಒಂದು ಸ್ಥಳದಲ್ಲಿ ಶತ್ರುಗಳಿಗೆ ಬಹು ಅರಿದಾದ ನೆಲೆಯಲ್ಲಿ ಯುದ್ಧ ಮಾಡುವದಕ್ಕೆ ಬಹು ಯುಕ್ತಿಯಿಂದ ಸಾಲ್ಗಟ್ಟಿ ನಿಂತರು. ಅವರ ಸೈನ್ಯದ ನಡುವೆ ಏರುಮೇಡೂ ಇಕ್ಕಟ್ಟೂ ಆದ ಒಂದು ದಾರಿ ಇತ್ತು. ಅದರಲ್ಲಿ ಆಯಲ್ಪಟ್ಟ ಕೆಲವು ರಾಹುತವೀರಶ್ರೇಷ್ಠರು ಹೊಂಚಿಕೊಂಡಿದ್ದು ಶತ್ರುಗಳು ಹಿಂಜರಿದು ಹೋದರೆ ಸಂಗಡಲೇ ಅವರ ಮೇಲೆ ಬಿದ್ದು ಪೂರ್ಣವಾಗಿ ಮುರಿಯ ಬಡಿಯುವದಕ್ಕೆ ಯತ್ನವಾಗಿದ್ದರು. ಫ್ರಾನ್ಸಿನವರು ಮುಂಚೆ ಹೇಳಿದ ಆ ಇಕ್ಕಟ್ಟಾದ ಮಾರ್ಗವಾಗಿ ಬಹು ವಾಂಛೆಯಿಂದ ಶೀಘ್ರವಾಗಿ ಓಡಿ ಬಂದು ಇಂಗ್ಲಿಷ್ ಸೈನ್ಯದ ಮೇಲೆ ತಗಲಿದರು. ಅವರು ಬರುವದನ್ನು ಕಂಡು ಇಂಗ್ಲಿಷ್ ಸೈನ್ಯದ ಬಿಲ್ಲುಗಾರರು ಆ ಬೇಲಿಗಳ ಮರೆಯಲ್ಲಿ ಬಚ್ಚಿಟ್ಟು ಕೊಂಡು ಎದುರಾಗಿ ಬರುವ ಫ್ರಾನ್ಸಿನವರ ಮೇಲೆ ಒಂದೊಂದು ಅಂಬು ಒಬ್ಬ ಎದುರಾಳಿಯ ಎದೆಯಲ್ಲಿ ತಾಕುವಂತೆ ಅಂಬುಗಳನ್ನೆಸೆದರು. ಫ್ರಾನ್ಸಿನವರು ಅಂಬೆಸೆದವರನ್ನು ಕಾಣದೆ ಅವರನ್ನು ಕಡಿಯುವದಕ್ಕೆ ದಾರಿ ತಿಳಿಯದೆ ಇದ್ದು ಘಾಯ ಪಟ್ಟವರಾಗಿಯೂ ಕಳವಳ ಪಟ್ಟವರಾಗಿಯೂ ಚದರಿ ಓಡಿ ಹೋದರು.

ಈ ಪ್ರಕಾರ ಇಂಗ್ಲಿಷ್ ಸೈನ್ಯದ ಮೇಲೆ ಬಿದ್ದ ಶತ್ರುಗಳಲ್ಲಿ ಅನೇಕರು ತಡುಬಡುತ್ತಾ ಓಡಿದಾಗ, ಆಯಲ್ಪಟ್ಟ ಇಂಗ್ಲಿಷ್ ರಾಹುತವೀರಶ್ರೇಷ್ಠರು ಕ್ರಮ ತಪ್ಪಿದ ಆ ರಾಣುವೆಯ ಮೇಲೆ ಬಿದ್ದು ಅದನ್ನು ಚದರ ಬಡಿದರು. ಫ್ರಾನ್ಸ್ ದೇಶದ ಅರಸನೂ ಅವನ ಪರಿವಾರದವರೂ ಮಹಾ ಧೈರ್ಯದಿಂದಲೂ ಕೋಪದಿಂದಲೂ ಹೋರಾಡಿದಾಗ್ಯೂ ಅವರೆಲ್ಲರೂ ಸೋತು ಹೋಗಿ ಶೆರೆಯಾಗಿ ಹಿಡಿಯಲ್ಪಟ್ಟರು. ಆ ದಿನದ ಸಾಯಂಕಾಲ (Black Prince) ಕಾಳಪ್ರಭುವು ತನ್ನ ಗುಡಾರಕ್ಕೆ ಹೋಗಿ ಘೋರ ಯುದ್ಧದಲ್ಲಿ ಉಂಟಾದ ಆಯಾಸ ತೀರಿಸಿ ಕೊಳ್ಳುತ್ತಿರುವಾಗ ಅವನ ಸೇವಕರು ಯೋಹಾನನೆಂಬ ಫ್ರಾನ್ಸ್ ದೇಶದ ಅರಸನನ್ನೂ ಅವನ ಚಿಕ್ಕ ಕುಮಾರನನ್ನೂ ಶೆರೆಯಾಗಿ ತಂದು ಅವನ ಮುಂದೆ ನಿಲ್ಲಿಸಿದರು. ಅವನು ಸಂಗಡಲೇ ಎದ್ದು ಶೆರೆಯವನಾದ ಅರಸನಿಗೆ ಬಹು ಉಪಚಾರ ಮಾಡಿ, ಆತನು ತೋರಿಸಿದ ಪರಾಕ್ರಮವನ್ನು ಕುರಿತು ಆತನನ್ನು

ಹೊಗಳಿ, ಪ್ರಾಪ್ತಿಸಿದ ಕಷ್ಟವನ್ನು ಕುರಿತು ಆತನಿಗೆ ಅದರೂಣಿ ಹೇಳಿ, ಆತನನ್ನು ಒಂದು ಆಸನದ ಮೇಲೆ ಕುಳ್ಳಿರಿಸಿದನು. ತರುವಾಯ ಭೋಜನಸಮಯದಲ್ಲಿ ಆ ಅರಸನ ಸಂಗಡ ತಾನು ಪಙ್ತಿಯಲ್ಲಿರದೆ ಆತನ ಹಿಂದೆ ನಿಂತು ಮಹಾ ವಿನಯದಿಂದ ಆತನಿಗೆ ಸೇವೆ ಮಾಡಿದನು. ಈ ಪ್ರಭುವಿನ ನಾಣ್ಯವಾದ ನಡತೆಯನ್ನು ಕಂಡು ಯೋಹಾನನೆಂಬ ಅರಸನು ಅವನನ್ನು ನೋಡಿ, ಎರಡು ಸಾರಿಯೂ ನನ್ನನ್ನು ಮೇಲ್ಗೊಂಡಿದ್ದೀ, ಶೆರೆಯವನಾದ ನನ್ನನ್ನು ಇಷ್ಟು ದಯವಾಗಿ ನಡಿಸಿದ ಉಪಕಾರವನ್ನು ನಾನು ಎಂದಿಗೂ ಮರೆಯುವದಿಲ್ಲವೆಂದು ಅವನನ್ನು ಕೊಂಡಾಡಿದನು.

ಇದರ ತರುವಾಯ (Black Prince) ಕಾಳ ಪ್ರಭು (Brodeaux) ಬೋರ್ದೋ ಎಂಬ ಊರಿಗೆ ತಿರಿಗಿ ಹೋಗಿ ಅಲ್ಲಿ ಹಡಗವನ್ನು ಹತ್ತಿ ಇಂಗ್ಲಾಂಡಿಗೆ ಬಂದು, (Poictiers) ಪೋಯಿತ್ತಿಯರ್ಸ್ ಊರಿನಲ್ಲಿ ಯಾವ ಪ್ರಕಾರ ನಡೆದನೋ ಸ್ವದೇಶದಲ್ಲಿಯೂ ಅದೇ ಪ್ರಕಾರ ಒಳ್ಳೇ ಕ್ರಮವೂ ತಾಳ್ಮೆಯೂ ಉಳ್ಳ ಗುಣವನ್ನು ತೋರಿಸಿ, ಎಲ್ಲರೂ ತನ್ನನ್ನು ಹೊಗಳುವಂತೆ ನಡೆದು ಕೊಂಡನು.

ಹ್ಯಾಗಂದರೆ, ಲಂದನ್ ಪಟ್ಟಣದ ಬಳಿಗೆ ಶೇರುವಾಗ ಹೇರಾಳವಾದ ಜನರು ವಂದನಾರ್ಥಿ ಹೇಳಿ ಸ್ತುತಿ ಮಾಡುವದಕ್ಕೆ ಎದುರುಗೊಂಡು ಬಂದರು. ಹಾಗೆ ಬಂದವರು ಜಯ ಹೊಂದಿದ ಪ್ರಭುವು ಸಣ್ಣ ಮಟ್ಟವಾದ ಕುದುರೆಯ ಮೇಲೆ ಹತ್ತಿರುವದನ್ನೂ, ಶೆರೆ ಪಟ್ಟ ಅರಸನು ಅಪರೂಪವಾದ ಅತಿಥಿಯ ಹಾಗೆ ದೊಡ್ಡ ಯುದ್ಧಕುದುರೆಯ ಮೇಲೆ ಹತ್ತಿರುವದನ್ನೂ ಕಂಡು ಆಶ್ಚರ್ಯ ಪಟ್ಟರು.

ಇದಲ್ಲದೆ ಎದ್ವರ್ದನೆಂಬ ಅರಸನು ಯೋಹಾನನನ್ನು ಬಹು ಪಕ್ಷವಾಗಿ ನಡಿಸಿ, ಅವನು ಜಯ ಹೊಂದಿದ ಅರಸನಿಗೆ ಫ್ರಾನ್ಸ್ ದೇಶದಲ್ಲಿರುವ ಕೆಲವು ನಾಡುಗಳನ್ನು ಕೊಟ್ಟು ಬಿಡುವಂತೆಯೂ, ಅದು ವರೆಗೂ ನಾಲ್ವತ್ತು ರಾಹುತವೀರಶ್ರೇಷ್ಠರನ್ನು ಒತ್ತೆಯಾಗಿ ಇಡುವಂತೆಯೂ ಒಡಂಬಡಿಕೆ ಮಾಡಿದ್ದರಿಂದ ಅವನನ್ನು ಬಿಡುಗಡೆ ಮಾಡಿ ಅವನನ್ನು ತನ್ನ ಸ್ವದೇಶಕ್ಕೆ ಕಳುಹಿಸಿ ಬಿಟ್ಟನು. ಆದಾಗ್ಯೂ ತಮ್ಮ ಅರಸನನ್ನು ವಿ

ಮೋಚಿಸುವದಕ್ಕಾಗಿ ಕೆಲವು ಕಾಲ ಶೆರೆಯಲ್ಲಿರ ಮನಸ್ಸುಳ್ಳವರಾದ ವಿಜ ಸ್ತರಾದ ಸ್ವದೇಶಸ್ನೇಹಿತರು ನಾಲ್ವತ್ತು ಮಂದಿಯೂ ಆ ಸಮಯದ ಲ್ಲಿ ಆ ದೇಶದಲ್ಲಿ ಶಿಕ್ಕದೆ ಹೋದದರಿಂದ ಯೋಹಾನನೆಂಬ ಅರಸನು ತಾನು ಮಾಡಿದ ಒಡಂಬಡಿಕೆ ಅಪದ್ಧವಾಗಿ ಹೋದರೆ ಅವಮಾನವಾಗು ವದೆಂದು ಹೇಳಿ, ಇಂಗ್ಲಾಂದಿಗೆ ತಿರಿಗಿ ಬಂದು ಮತ್ತೂ ಶೆರೆಯಾದನು. ಮಾರಣೆ ವರುಷದಲ್ಲಿ ಅವನು ಇಂಗ್ಲಾಂದಿನಲ್ಲಿಯೇ ಸತ್ತು ಹೋದನು.

ಫ್ರಾನ್ಸ್ ದೇಶದರಸನು ಬಿಟ್ಟು ಕೊಟ್ಟ ನಾಡುಗಳನ್ನು ಆಳುವದ ಕ್ಕೆ (Black Prince) ಕಾಳಪ್ರಭುವು ಅಲ್ಲಿಗೆ ಹೋಗಿ, (Bordeaux) ಬೋರ್ದೋ ಎಂಬ ಪಟ್ಟದಲ್ಲಿ ತನ್ನ ಓಲಗದ ಮಂಟಪವನ್ನು ಸ್ಥಾಪಿಸಿ ದನು. ಆ ಕಾಲದಲ್ಲಿ ಫ್ರಾನ್ಸರೂ ಇಂಗ್ಲಿಷರೂ ಆದ ಯುದ್ಧವೀರರು ಅನೇಕರು ಸಮಾಧಾನ ಉಂಟಾದಾಗ ತಮಗೆ ಕೆಲಸವಿಲ್ಲವೆಂದು ಕಂಡು "ತನ್ನಿಷ್ಟ ಸೈನ್ಯಗಳೆಂಬ" ದಂಡುಗಳಾಗಿ ಶೇರಿ ಕೊಂಡು ಫ್ರಾನ್ಸ್ ದೇ ಶದಲ್ಲಿ ಕೊಲೆ ಕಳ್ಳತನ ಮುಂತಾದ ಕೇಡುಗಳನ್ನು ಮಾಡ ಪ್ರಾರಂಭಿಸಿದ ರು. ಅದನ್ನು ಕಂಡು ಫ್ರಾನ್ಸ್ ಅರಸನು ಬಹು ವ್ಯಸನ ಪಟ್ಟಿರುವಾ ಗ, (Du Guesclin) ದು ಗ್ವೆಸ್ಕ್ಲಿನ್ ಎಂಬ ಮಹಾ ಶೌರ್ಯವುಳ್ಳ ಒಬ್ಬ ಯುದ್ಧವೀರನು ಅರಸನನ್ನು ನೋಡಿ, ಕ್ರೂರನೆಂದು ಕರೆಯಲ್ಪಟ್ಟ (Pedro) ಪೀದ್ರೋ ಎಂಬ ಸ್ಪೇನ್ ದೇಶಕ್ಕೆ ಶೇರಿದ (Castile) ಕಸ್ತೀ ಲ್ ನಾಡಿನ ಅರಸನಿಗೂ ಅವನ ತಂದೆ ಇಟ್ಟು ಕೊಂಡವಳ ಮಗನಾದ (Henry Trastamare) ಹೆನ್ರಿ ತ್ರಾಸ್ತಮೇರ್ ಎಂಬವನಿಗೂ ಈಗ ಕಠಿ ಣ ಯುದ್ಧ ನಡೆಯುತ್ತಾ ಬರುತ್ತದೆ. ಈ ದಂಡುಗಳು ಆ ಹೆನ್ರಿಯ ಬಳಿಗೆ ಹೋಗಿ ಚಾಕರಿ ಸಂಪಾದಿಸಿ ಕೊಂಡರೆ ಒಳ್ಳೇದಾಗಿರುವದು ಎಂ ದು ಆಲೋಚನೆ ಹೇಳಿದನು. ಅರಸನು ಹಾಗೆ ಮಾಡುವದು ಒಳ್ಳೇದೆಂ ದು ಒಪ್ಪಿ ಕೊಂಡು ಆ ಕೊಳ್ಳೆಗಾರರೆಲ್ಲರನ್ನು ಅಲ್ಲಿಗೆ ಕಳುಹಿಸಿದ್ದರಿಂದ ಫ್ರಾನ್ಸ್ ದೇಶದವರಿಗೆ ಆ ತೊಂದರೆ ನಿವರ್ತಿಯಾಯಿತು. ಆ ಯು ದ್ಧದ ಮೊದಲಲ್ಲಿ ಹೆನ್ರಿಗೆ ಜಯವಾಯಿತು. ಆ ಸಮಯದಲ್ಲಿ ಸಿಂಹಾ ಸನದಿಂದ ತಳ್ಳಲ್ಪಟ್ಟ (Pedro) ಪೀದ್ರೋ ಎಂಬವನು (Black Prince) ಕಾಳಪ್ರಭುವಿನ ಬಳಿಗೆ ಹೋಗಿ ತನಗೆ ಸಹಾಯ ಮಾಡ ಬೇಕೆಂದು ಕೇಳಿ

ಕೊಂಡದ್ದರಿಂದ ಆ ಪ್ರಭುವು ಇವನ ಕಾರ್ಯ ನ್ಯಾಯವಾದದ್ದೆಂದು ಹೇಳಿ, ಸಂಗಡಲೇ ಸಹಾಯ ಮಾಡುವದಕ್ಕೆ ಹೊರಟು ಹೋಗಿ ತನ್ನ ಮೇಲೆ ಪಕ್ಷವಾಗಿದ್ದ ಇಂಗ್ಲಿಷ್ ಸೈನ್ಯದವರನ್ನು ಕಂಡು ಅವರಿಂದ ಶತ್ರುಗಳಾದ ಮಹಾ ಸೈನ್ಯವನ್ನು ಮುರಿಯ ಬಡಿದನು. ಹಾಗಿದ್ದಾಗ್ಯೂ (Pedro) ಪೀದ್ರೋ ಎಂಬವನು ಪೂರ್ಣವಾಗಿ ಗುಣಭ್ರಷ್ಟನಾದದರಿಂದ ತನಗೆ ರಾಜ್ಯವನ್ನು ತಿರುಗಿಸಿ ಕೊಟ್ಟವರಾದ ಆ ದಂಡಿನವರಿಗೆ ಬಹುಮಾನ ಮಾಡಲಿಲ್ಲ, ಆಹಾರ ಮೊದಲಾದವುಗಳನ್ನು ಸಹ ಕೊಡಲಿಲ್ಲ. ಇದಲ್ಲದೆ (Black Prince) ಕಾಳಪ್ರಭುವು ಯುದ್ಧ ಮಾಡುವದಕ್ಕೆ ಹೋದಾಗ ರೋಗದಲ್ಲಿ ಬಿದ್ದದ್ದಲ್ಲದೆ (Pedro) ಪೀದ್ರೋ ಎಂಬವನ ಕಾರ್ಯದಲ್ಲಿ ತಲೆ ಇಟ್ಟದ್ದರಿಂದ ಅಪಕೀರ್ತಿ ಹೊಂದಿದಾಗ್ಯೂ ಅವನು ಇವನಿಗೆ ಪ್ರತ್ಯುಪಕಾರವೇನೂ ಮಾಡಲಿಲ್ಲ. ಆದದರಿಂದ "ನೀಚರಿಗೆ ಮಾಡಿದ ಉಪಕಾರ ನೀರಿನ ಮೇಲೆ ಬರೆದ ಬರಹದಂತೆ" ಎಂಬ ಸಾಮತಿ ನಿಜವಾಯಿತು.

ತರುವಾಯ ಕಾಳಪ್ರಭುವಿಗೆ ನಾನಾ ಉಪದ್ರಗಳು ಸಂಭವಿಸಿದವು. ಸ್ಪೇನ್ ದೇಶದಲ್ಲಿ ಅವನಿಗೆ ಉಂಟಾದ ಕಠಿಣ ವ್ಯಾಧಿಯಿಂದ ಅವನ ಶರೀರವು ಬಹಳ ನಶಿಸಿ ಹೋದದ್ದಲ್ಲದೆ ಆ ಯುದ್ಧದಲ್ಲಿ ಆದ ಖರ್ಚಿಗೋಸ್ಕರ ಫ್ರಾನ್ಸ್ ಶೀಮೆಗಳಲ್ಲಿರುವ ತನ್ನ ಪ್ರಜೆಗಳಿಗೆ ತೆರಿಗೆ ವಿಧಿಸಿದಾಗ ಅವರು ಕಲಹ ಮಾಡಿದರು. ಅವರನ್ನು ಅಣಗಿಸಿ ಬಿಡುವದಕ್ಕೆ ಸಂದರ್ಭಿಸದೆ ಆ ನಾಡುಗಳನ್ನು ಕಳಕೊಂಡು ಬಿಟ್ಟು ಇಂಗ್ಲಾಂದಿಗೆ ತಿರಿಗಿ ಬಂದು ಸತ್ತು ಹೋದನು. ಅವನ ತಂದೆಯು ಸಹ ಅದರಿಂದುಂಟಾದ ವ್ಯಸನದಿಂದಲೂ ವೃದ್ಧಾಪ್ಯದಿಂದಲೂ ಬಹು ಬಲಹೀನವಾಗಿ ಮಳಿಮರುಳಾಗಿ ಮಾರಣೆ ವರುಷದಲ್ಲಿ ಸತ್ತು ಹೋದನು. ಅವನು ಸಾಯುವದಕ್ಕೆ ಕೆಲವು ಕಾಲಕ್ಕೆ ಮುಂಚೆ ಮುಪ್ಪಿನಲ್ಲಿ ಹುಟ್ಟಿದ ಮಗನ ಬಾಲ್ಯತ್ವದ ನಿಮಿತ್ತ, ಅವನು ರಾಜ್ಯಕಾರ್ಯಗಳನ್ನು ನಡಿಸ ಶಕ್ತಿ ಇಲ್ಲದ್ದರಿಂದ, ಪಾರ್ಲಿಮೆಂತ್ ಎಂಬುವ ಸಂಘದವರು ಅಧಿಕಾರ ನಡಿಸಿದರು.

ಎದ್ವರ್ಡ್ ಎಂಬ ಅರಸನು ಆ ಕಾಲದಲ್ಲಿ ಆಳಿದ ಎಲ್ಲಾ ಅರಸರಿಗಿಂತ ಬಹು ಘನವುಳ್ಳವನು. ಅವನ ಗುಣ ನಡತೆಗಳನ್ನು ಸಿಥಾಪಿಸು

ವಾಗ ಅವುಗಳಲ್ಲಿ ಮೇಲೂ ಕೇಡೂ ಬೆರಿಕೆಯಾಗಿವೆ. ಹ್ಯಾಗಂದರೆ, ಅವನು ವೀರಶೂರನಾಗಿಯೂ ಸತ್ಯಪ್ರಮಾಣಿಕನಾಗಿಯೂ ಮನೋಸಾಧನೆಯುಳ್ಳವನಾಗಿಯೂ ಇದ್ದನು. ಆದಾಗ್ಯೂ ಅಧಿಕಾರ ಅಪೇಕ್ಷಿಸುವ ಅತ್ಯಾಶೆಯೂ ಬಲಾತ್ಕಾರವೂ ಉಳ್ಳವನಾಗಿದ್ದು ಅನೇಕ ಸಾರಿ ಕ್ರೂರ ಕೆಲಸಗಳನ್ನು ಸಹ ಮಾಡಿದನು.

ಆ ಕಾಲದ ಮನುಷ್ಯರು ಬಹುಶ ಮಾಡುವ ಪುಣ್ಯ ಪಾಪಗಳೂ ಆಚಾರವಾಡಿಕೆಗಳೂ ಎಂಥವುಗಳೆಂದು ತಿಳಿಯ ಮನಸ್ಸುಳ್ಳವನು ಆ ಅರಸನೂ ಅವನ ಕುಮಾರನೂ ನಡೆದ ರೀತಿಯನ್ನು ಯೋಚಿಸುವದರಿಂದ ಅವುಗಳನ್ನು ಸ್ಪಷ್ಟವಾಗಿ ತಿಳಿದು ಕೊಳ್ಳ ಬಹುದು.

ಆ ಅರಸನೂ ಅವನ ಮಗನೂ ಹಲವು ದೇಶಗಳನ್ನು ಕಟ್ಟಿ ಕೊಂಡು ಜಯಪ್ರದರಾಗಿ ಪ್ರಕಾಶಿಸಿ ರಾಜತ್ವ ಮಾಡ ಬೇಕೆಂಬುವ ಅಹಂಕಾರದಿಂದ ಮರುಳಾಗಿ, ಕನಿಕರವೇನೂ ಇಲ್ಲದೆ ಹಲವು ಸಾರಿ ಯುದ್ಧ ಮಾಡುತ್ತಾ ಬಂದಾಗ್ಯೂ, ಅವರು ಆ ಕಾಲದಲ್ಲಿದ್ದ ವೀರಶೂರರಲ್ಲಿ ತೋರಿದ ಮಹಾ ಪ್ರತಾಪವುಳ್ಳ ಶ್ರೇಷ್ಠವಾದ ಗುಣ ನಡತೆಗಳುಳ್ಳವರಾಗಿ ಪ್ರಕಾಶಿಸಿದ್ದರಿಂದ ಈ ಧೀರತನದಿಂದ ಆ ಕಳಂಕಗಳು ಎಣಿಸಲ್ಪಡವು. ಮೂರನೇ ಎದ್ವರ್ಡನು ರಾಜತ್ವ ಮಾಡಿದ ಕಾಲದಲ್ಲಿ ಇಂಗ್ಲಾಂಡ್ ದೇಶದವರಿಗೆ ಉಂಟಾದ ಕೀರ್ತಿ ಪ್ರತಾಪವು ಆ (Middle Ages) ಮಧ್ಯಕಾಲಗಳಲ್ಲಿ* ರಾಜತ್ವ ಮಾಡಿದ ಬೇರೆ ಅರಸರ ದಿವಸಗಳಲ್ಲಿ ಉಂಟಾಗಲಿಲ್ಲ.

ಹ್ಯಾಗಂದರೆ ಅವರ ಕಾಲದಲ್ಲಿ ಇಂಗ್ಲಿಷ್ ರಾಣುವೆಯವರು ಯಾವದಿಕ್ಕಿನಲ್ಲಿಯೂ ಶತ್ರುಸಂಹಾರ ಮಾಡಿದ್ದಲ್ಲದೆ, ಇಂಗ್ಲಾಂದರ ನಾವಿಕ ಸೈನ್ಯವು ಯಾವತ್ಸಮುದ್ರದಲ್ಲಿಯೂ ಜಯಪ್ರದ ಹೊಂದಿತು. ಅವರ ಆಳಿಕೆಯಲ್ಲಿ ದೇಶಪ್ರಮಾಣಗಳು ತಿದ್ದಿ ಸ್ಥಿರ ಪಡಿಸಲ್ಪಟ್ಟವು. ಆ ಕಾಲದ ಇಂಗ್ಲಿಷ್ ವರ್ತಕರು ಹಲವು ದೇಶಗಳಿಗೆ ಹೋಗಿ ನಾನಾವಿಧ ವ್ಯಾಪಾರಗಳನ್ನು ನಡಿಸಿ ಅಭಿವೃದ್ಧಿ ಹೊಂದಿದರು. ಮತ್ತು ಅವರ ದಿನಗಳಲ್ಲಿ ಇಂಗ್ಲಾಂದರಾದ ವಿದ್ವಾಂಸರು ವಚನವಾಗಿ ಅನೇಕ ಗ್ರಂಥಗಳನ್ನು ಮಾಡ

---

* ಎಂಟನೇ ಶತಕ ಮೊದಲ್ಗೊಂಡು ಹದಿನೈದನೇ ಶತಕದ ಮಟ್ಟಿಗೂ ಉಳ್ಳ ಕಾಲವೇ ಮಧ್ಯಕಾಲವೆನ್ನಲ್ಪಡುವದು.

ಸಂಧಿ ೯. ಎಡ್ವರ್ದನ ಕಾಲದಲ್ಲಿದ್ದ ಚಾಸರ್, ವಿಕ್ಲಿಫ್ ಎಂಬವರು.

ಪ್ರಾರಂಭಿಸಿದರು. ಮತ್ತು (Chaucer) ಚಾಸರ್ ಎಂಬ ಕವಿಯು ಬಹು ಇಂಪಾದ ಕಾವ್ಯಗಳನ್ನು ಹಾಡ ಪ್ರಾರಂಭಿಸಿದನು. ಮತ್ತು ಆ ದಿನಗಳಲ್ಲಿ (Wickliffe) ವಿಕ್ಲಿಫ್ ಎಂಬ ಸತ್ಯವೇದಶಾಸ್ತ್ರಿಯು ಬಂದು ಯಾವತ್ತರದವರೂ ದೇವರ ವಾಕ್ಯವನ್ನು ಶೋಧಿಸಿ ನೋಡಿ ಅದಕ್ಕೆ ವಿರೋಧವಾದ ಎಲ್ಲಾ ಅಭಿಪ್ರಾಯಗಳನ್ನೂ, ರೋಮಾಪುರಿಯ ಪಾಪು ಎಂಬ ಬಿಷಪ್ಪನಿಂದ ಏರ್ಪಡಿಸಲ್ಪಟ್ಟ ನೂತನ ಉಪದೇಶಗಳನ್ನೂ ತಳ್ಳಿ ಬಿಡ ಬೇಕೆಂದು ಬಹು ಧೈರ್ಯವಾಗಿ ಪ್ರಸಂಗಿಸಿದನು. ಅವನು ಹೀಗೆ ಬೋಧಿಸುತ್ತಾ ಬಂದದ್ದು ಹಿಂದಿನ ಕಾಲದಲ್ಲಿ ಸಭೆಯು ತಿದ್ದುಪಾಟಾಗುವದಕ್ಕೆ ಹೇತುವೆಯಾಯಿತು.

# CHAPTER X.

## RICHARD THE SECOND'S UNHAPPY REIGN, AND THE USURPATION OF HENRY THE FOURTH.

FROM A. D. 1377 TO A. D. 1413.

## 10 ಸಂಧಿ.

## ಎರಡನೇ ರಿಚಾರ್ಡನು ಅಭ್ಯಂತರವಾಗಿ ಆಳಿದ್ದು, ನಾಲ್ಕನೇ ಹೆನ್ರಿ ಅನ್ಯಾಯವಾಗಿ ರಾಜ್ಯಾಧಿಕಾರ ತೆಗೆದು ಕೊಂಡದ್ದು.

ಕ್ರಿ. ಶ. 1377 ಮೊದಲು ಕ್ರಿ. ಶ. 1413 ವರೆಗೂ.

ಮುಖ್ಯ ತಾರೀಖುಗಳು: (Richard II) 2ನೇ ರಿಚಾರ್ಡನ ಧೊರೆತನವು ಕ್ರಿ. ಶ. 1377 — 1399. (Wat Tyler) ವಾತ್ ತ್ಯೆಲರ್ ಎಬ್ಬಿಸಿದ ಕಲಹ ಕ್ರಿ. ಶ. 1381. (Hebry IV) 4ನೇ ಹೆನ್ರಿಯ ಧೊರೆತನವು ಕ್ರಿ ಶ. 1399 — 1413. (Shrewsbury) ಷ್ರೂಸ್ಬರಿ ಯುದ್ಧ 21ನೇ ಜೂಲಾಯಿ 1403. ಅದೇ ಕಾಲದ ಇಂದ್ಯ ಚರಿತ್ರೆ: (Tamerlane) ಶಾಮೆರ್ಲೇನ್ ದಂಡೆತ್ತಿ ಬಂದದ್ದು ಕ್ರಿ. ಶ. 1398. ಆದಿ ಮಹಮ್ಮದಿನವರ ಧೊರೆತನವು. ಶ್ರೇಷ್ಟ ನಾಮಗಳು: (John Wickliffe) ಜಾನ್ ವಿಕ್ಲಿಫ್ ಎಂಬವನು ತಿದ್ದುಪಾಟಿಗೆ ಮೊದಲು ಸಹಾಯ ಕೊಟ್ಟವನು, ಹುಟ್ಟಿದ್ದು ಕ್ರಿ. ಶ. 1324, ತೀರಿದ್ದು 1385. ಕವೀಶ್ವರನಾದ (Chaucer) ಚಾಸರ್ ಕ್ರಿ. ಶ. 1328 — 1400.

ಕಾಳಪ್ರಭುವಿನ (Black Prince) ಏಕ ಪುತ್ರನಾದ ರಿಚಾರ್ಡನು ತನ್ನ ತಾತನ ಸ್ಥಳಕ್ಕೆ ಬಂದು, "ಎರಡನೇ ರಿಚಾರ್ಡನೆಂಬುವ" ಪಟ್ಟದ ಹೆಸರಿನೊಡನೆ ಅರಸನಾದನು. ಅವನು ಅರಸನಾದದ್ದು ಪ್ರಜೆಗಳಿಗೆ ಬಹು ಸಂತೋಷವಾಗಿತ್ತು. ಹ್ಯಾಗಂದರೆ ಅವನ ತಂದೆಯಾದ ಕಾಳ ಪ್ರಭುವು ಬಂಧುಗಳು ಪ್ರಜೆಗಳು ಎಲ್ಲರಿಗೂ ಬಹು ಪ್ರೀತಿಯುಳ್ಳವನಾಗಿದ್ದನು. ಮತ್ತು ಅವನು ತಾನೇ ಇನ್ನೂ ಬಾಲ್ಯನಾಗಿದ್ದಾಗ್ಯೂ ಎಲ್ಲಿ

ರಿಗೂ ಹಿತವಾಗಿಯೂ ಗಂಭೀರವಾಗಿಯೂ ನಡೆಯುತ್ತಾ ಬಂದದರಿಂದ ತನ್ನ ತಂದೆ ತಾತರ ಹಾಗೆ ರಣರಂಗದಲ್ಲಿ ಪ್ರಖ್ಯಾತಿ ಹೊಂದಿ ರೈತ ಜನರಿಗೆ ಘನವನ್ನೂ ಮೇಲನ್ನೂ ಬರ ಮಾಡುವನೆಂದು ಎಣಿಸಿದರು.

ಅವನು ಪಟ್ಟ ಹೊಂದುವ ಕಾಲದಲ್ಲಿ ಇನ್ನೂ ಹನ್ನೊಂದು ವರುಷ ತುಂಬಲಿಲ್ಲ. ಆದದರಿಂದ ಬಾಲ್ಯ ಅರಸನಿಗೆ ಬದಲಾಗಿ ಅವನ ಚಿಕ್ಕಪ್ಪಂದಿರಾದ (Lancaster) ಲಾಂಕೆಸ್ಟರ್ (Gloucester) ಗ್ಲೋಸ್ಟರ್ (York) ಯೋರ್ಕ್ ಎಂಬುವ ಪಟ್ಟಗಳ ಪ್ರಭುಗಳೂ ಮಿಕ್ಕಾದ ಕೆಲವರು ಶ್ರೇಷ್ಠ ಕುಲಸ್ತರೂ ರಾಜ್ಯಪರಿಪಾಲನೆ ಮಾಡುತ್ತಾ ಬಂದರು. ಫ್ರಾನ್ಸರ ಸಂಗಡಲೂ ಸ್ಕೊತ್ಲಾಂದರ ಸಂಗಡಲೂ ಇನ್ನೂ ಯುದ್ಧ ನಡಿಯುತ್ತಾ ಇದ್ದಾಗ್ಯೂ ಇಂಗ್ಲಾಂದರ ಸೈನ್ಯಾಧಿಪತಿಗಳು ಅಜಾಗ್ರತೆಯಾಗಿಯೂ ಸಡ್ಲವಾಗಿಯೂ ಕಾರ್ಯ ನಡಿಸಿದ್ದರಿಂದ ಅವರ ಸೈನ್ಯಕ್ಕೆ ನಾನಾ ಅಭ್ಯಂತರಗಳು ಪ್ರಾಪ್ತಿಸಿದವು. ಇದಲ್ಲದೆ ಲಾಂಕೆಸ್ಟರ್, ಯೋರ್ಕ್ ಎಂಬ ಪಟ್ಟಗಳ ಪ್ರಭುಗಳು (Spain) ಸ್ಪೇನ್ ದೇಶದಲ್ಲಿರುವ (Castile) ಕಸ್ತೀಲ್ ಶೀಮೆಯನ್ನು ಆಳಿದ ಅರಸನ ಕುಮಾರ್ತೆಗಳನ್ನು ಮದುವೆ ಮಾಡಿ ಕೊಂಡದರಿಂದ ತಮಗೆ ಆ ಶೀಮೆಯಲ್ಲಿ ಆಧಿಕ್ಯವು ದೊರಕ ಬೇಕೆಂದು ಸ್ವಾತಂತ್ರ್ಯದ ಮಾತನಾಡಿ ಇಂಗ್ಲಿಷ್ ದಂಡುಗಳನ್ನು ಅಲ್ಲಿಗೆ ಕಳುಹಿಸಿದ್ದರು.

ಈ ಯುದ್ಧಗಳನ್ನೆಲ್ಲಾ ನಡಿಸುವದಕ್ಕೆ ಹಣದ ಖರ್ಚು ಬೇಕಾದದರಿಂದ ಪಾರ್ಲಿಮೆಂತ್ ಎಂಬುವ ಆಲೋಚನೇ ಸಂಘದವರು ಜನರ ಬಳಿಯಲ್ಲಿ ಮಂಡೆತೆರಿಗೆಯ ಹಣವನ್ನು ಕೂಡಿಸ ಬೇಕೆಂದು ನಿರ್ಣಯಿಸಿದರು. ಆ ಮಂಡೆತೆರಿಗೆಯು ಎದ್ವರ್ಡ್ ಅರಸನು ಆಳಿದ ಕಡೇ ದಿನಗಳಲ್ಲಿ ಸ್ವಲ್ಪ ಕಾಲ ವಿಧಿಸಲ್ಪಟ್ಟಿತ್ತು. ಅದರ ವಿವರ ಹ್ಯಾಗಂದರೆ, ಆ ದೇಶದ ನಿವಾಸಿಗಳಾದ ಹದಿನೈದು ವರುಷಪ್ರಾಯಕ್ಕೆ ಮೇಲ್ಪಟ್ಟ ಗಂಡಸು ಹೆಂಗಸರು ಎಲ್ಲರೂ ತಲೆಗೆ ಅರ್ಧರೂಪಾಯಿಯ ಮೇರೆಗೆ ತೆರ ಬೇಕು. ಈ ಮಂಡೆತೆರಿಗೆಯನ್ನು ಹಣಗಾರರು ಮಾತ್ರವಲ್ಲ ಬಡವರು ಸಹ ಸರಿಯಾಗಿ ತೆರ ಬೇಕಾದದರಿಂದ ಅದು ಬಡ ಜನರಿಗೆ ಬಹು ಕಷ್ಟವಾಗಿತ್ತು. ಮತ್ತು ಕೇಡಿಗೆ ಅಂಜದವರಾದ ಹಣಗಾರರು ಕೆಲವರಿಗೆ ಅದು ಗುತ್ತಿಗೆಯಾ

ಗಿ ಕೊಡಲ್ಪಟ್ಟದ್ದರಿಂದ, ಅವರು ಕೂಡುವಷ್ಟು ಆದಾಯ ಹೊಂದ ಬೇಕೆಂದು ಆಶಿಸಿ ಆ ಶೆರಿಗೆಯನ್ನು ಎಲ್ಲರ ಬಳಿಯಲ್ಲಿಯೂ ಬಹು ಖಂಡಿತವಾಗಿ ವಸೂಲು ಮಾಡಿದ್ದಲ್ಲದೆ ಬಡ ಜನರನ್ನು ಬಹು ಹಿಂಸೆ ಪಡಿಸಿದರು.

ಈ ಶೆರಿಗೆಯು ಬಡವರಿಗೆ ಮಾತ್ರ ಬಹು ಜಾರವಾದದರಿಂದಲೂ ಆ ಹಣ ಕೂಡಿಸುವವರು ಮಾಡಿದ ಅನ್ಯಾಯ ಹೆಚ್ಚಾದದರಿಂದಲೂ ಬಡ ಜನರು ರಾಜಕಲಹ ಮಾಡ ಆರಂಭಿಸಿದರು. ಹಲವು ಸ್ಥಳಗಳಲ್ಲಿ ಒಂದೇ ಸಾರಿ ಗುಬಾರು ಮಾಡ ಪ್ರಾರಂಭಿಸಿದರು. ಆದಾಗ್ಯೂ (Kent) ಕೆನ್ತ್ ನಾಡಿನಲ್ಲಿ ದೊಡ್ಡ ಕಲಹ ಉಂಟಾಯಿತು. ಹ್ಯಾಗಂದರೆ, (Dartford) ದಾರ್ತ್‌ಫೋರ್ಡ್ ಊರಿನಲ್ಲಿದ್ದ ಒಬ್ಬ ಹೆಂಚು ಮಾಡುವವನ ಮಗಳನ್ನು ಶೆರಿಗೆ ವಸೂಲು ಮಾಡುವ ಒಬ್ಬನು ಅವಮಾನ ಪಡಿಸಿದನು. ಅದನ್ನರಿತು ಅವಳ ತಂದೆಯು ಕೋಪಗೊಂಡು ಅವನನ್ನು ಆ ಕ್ಷಣವೇ ಕಡಿದು ಹಾಕಿದನು. ಆ ಮನೆಯವನಿಗೋಸ್ಕರ ಊರಿನವರೆಲ್ಲರೂ ಕೂಡಿ ಬಂದು ಅವನನ್ನು ಮುಖ್ಯಸ್ತನಾಗ ಮಾಡಿ ಕೊಂಡು, ತಾವು ಯಥಾರ್ಥವಾಗಿ ಅನುಭವಿಸಿದ ಉಪದ್ರಗಳನ್ನೂ, ಅನ್ಯಾಯವೆಂದು ಅನೇಕರು ವ್ಯರ್ಥವಾಗಿ ಮನಸ್ಸಿನಲ್ಲಿ ಎಣಿಸಿ ಕೊಂಡವುಗಳನ್ನೂ ಕುರಿತು ಮುಯ್ಯಿಗೆ ಮುಯ್ಯಿ ತೀರಿಸ ಬೇಕೆಂದು ಕಲಹವೆಬ್ಬಿಸಿದರು. ಅವರ ಸಂಗಡ ಬಹು ಶೀಘ್ರವಾಗಿ ದೊಡ್ಡ ಕೂಟವು ಶೇರಿ ಕೊಂಡಿತು.

ಹೆಂಚುಗಾರನಾದ (Wat) ವಾತ್ ಎಂಬವನನ್ನು ಯಜಮಾನನಾಗ ಮಾಡಿ ಕೊಂಡು ಅವರು ಲಂದನ್ ಪಟ್ಟಕ್ಕೆ ಸರಿಯಾಗಿ ಹೋಗಿ ಮಾರ್ಗದಲ್ಲಿ ಶಿಕ್ಕಿದ ಗೃಹಸ್ಥರೆಲ್ಲರನ್ನು ಸೂರೆ ಮಾಡಿ, ಕಂಡ ದೊರೆಮಕ್ಕಳನ್ನು ಹೊಡೆದು ತುಳಿದು ನಿಂದಿಸುತ್ತಾ ಬಂದರು. ಅವರು ಮಾರ್ಗದಲ್ಲಿ ಹೋಗುವಾಗ ಅಂಥಾ ಬೇರೆ ಅನೇಕ ಕಲಹಗಾರರ ಗುಂಪುಗಳು ಅವರ ಸಂಗಡ ಕೂಡಿ ಕೊಂಡವು. ಅವರೆಲ್ಲರು ಲಂದನ್ ರಾಜಧಾನಿಗೆ ಸಮೀಪವಾಗಿ ಶೇರಿ, ನಾವು ಹ್ಯಾಗಾದರೂ ನಮ್ಮ ಅರಸನನ್ನು ಕಂಡು ನಮಗೆ ಸಂಭವಿಸಿದ ಅನ್ಯಾಯಗಳನ್ನೆಲ್ಲಾ ತಿಳಿಯ ಪಡಿಸ ಬೇಕೆಂದು ಕೂಗಿದರು. ಆದಾಗ್ಯೂ, "ಬಡವನ ಮಾತು ಬಾನಕ್ಕೇರುವದೋ?"

ಎಂಬ ಗಾದೆಯ ಪ್ರಕಾರ ಆ ಸಮಯದಲ್ಲಿ ಅರಸನ ಸನ್ನಿಧಿಯಲ್ಲಿರುವವರು ಅವರಿಗೆ ಅರಸನು ಮುಖ ಕೊಟ್ಟು ಮಾತಾಡಗೊಡಿಸದೆ ಹೋದರು.

ಅದರ ತರುವಾಯ ಸ್ವಲ್ಪ ಕಾಲ ಲಂಡನ್ ಪಟ್ಣವೆಲ್ಲಾ ಆ ಕಲಹಗಾರರ ಕೈವಶದಲ್ಲಿದ್ದು ಬಹು ಗಲಿಬಿಲಿಯಾಗಿತ್ತು. ಅಲ್ಲಿದ್ದ ದೊಡ್ಡ ಮನುಷ್ಯರ ಅನೇಕ ಮಾಳಿಗೆಗಳನ್ನು ಕೊಳ್ಳೆ ಮಾಡಿ ಸುಟ್ಟು ಬಿಟ್ಟರು. ಆ ಪಟ್ಣದ ಮಹಾ ಕೋಟೆಯನ್ನು ಸಹ ಮುತ್ತಿಕೊಂಡರು. (Canterbury) ಕಾಂತರ್‌ಬರಿ ಪಟ್ಣದ ಶ್ರೇಷ್ಠ ಅಧ್ಯಕ್ಷನನ್ನು ಕೊಂದು ಹಾಕಿದರು. ಹಾದಿವಾಕರಲ್ಲಿ ಕಂಡ ಧೊರೆಗಳನ್ನೂ ಅನ್ಯ ದೇಶದ ಮನುಷ್ಯರನ್ನೂ ಹೊಡೆದು ತುಳಿದು ಅಧಿಕ ಹಿಂಸೆ ಪಡಿಸಿದರು. ಬೀದಿಗಳಲ್ಲೆಲ್ಲಾ ಹಾಳುಗಾರರು ಎಲ್ಲವನ್ನೂ ಹಾಳು ಮಾಡಿ ಬಿಡ ಬೇಕೆಂದು ತಿರುಗಿದರು. ಮತ್ತು ರಾಜಬೀದಿಗಳಲ್ಲೆಲ್ಲಾ ಚಂಡಾಲರು ಮದ್ಯಪಾನ ಕುಡಿದು ಲಹರಿಯಾಗಿ ಬಿದ್ದಿದ್ದರು.

ಅವರು ಇಂಥಾ ಕೇಡುಗಳನ್ನು ಮಾಡುತ್ತಾ ಬರುವಾಗ ಅರಸನು ಲಂಡನ್ ಪಟ್ಣದ ಬಳಿಯ ಕೆಲವು ಕಲಹಗಾರರನ್ನು ಕಂಡು ಅವರ ಕಾರ್ಯವನ್ನು ತಾನು ವಿಚಾರಿಸಿ ನ್ಯಾಯ ಮಾಡುತ್ತೇನೆಂದು ಹೇಳಿ, ದಾಸರಾಗಿದ್ದವರಿಗೆಲ್ಲಾ ಸ್ವಾತಂತ್ರ್ಯಪತ್ರಿಕೆಗಳನ್ನು ಕೊಟ್ಟು ಅವರನ್ನು ಸಮಾಧಾನ ಪಡಿಸಿದ್ದರಿಂದ, ಕಲಹಗಾರರಲ್ಲಿ ಅನೇಕರು ತಮ್ಮ ಮನೆಗಳಿಗೆ ಹೋಗಿ ಬಿಟ್ಟರು.

ಮಾರಣೆ ದಿವಸ ರಿಚಾರ್ಡ್ ಅರಸನು ಲಂಡನ್ ಪಟ್ಣದ ಶ್ರೇಷ್ಠ ಅಧಿಕಾರಿಯಾದ (Sir William Walworth) ಸರ್ ಉಲ್ಲಿಯಮ್ ವಾಲ್ವರ್ತ್ ಎಂಬವನನ್ನೂ ರಾಜಸಭೆಯವರಲ್ಲಿ ಕೆಲವರನ್ನೂ ಕರೆದು ಕೊಂಡು ಕಲಹಗಾರರ ಮುಖ್ಯಸ್ಥನಾದ ವಾತ್ ಎಂಬ ಹೆಂಚುಗಾರನನ್ನೂ ಅವನ ಸಂಗಡ ಶೇರಿ ಕೊಂಡಿದ್ದವರನ್ನೂ ಕಂಡು ಮಾತಾಡ ಬೇಕೆಂದು ಅವರು ಕೂಡಿದ್ದ ಸ್ಥಳಕ್ಕೆ ಹೋದನು. ಅರಸನು ಆ ಸ್ಥಳಕ್ಕೆ ಶೇರಿದಾಗಲೇ ವಾತ್ ಎಂಬವನು ಬಹು ಅಮರ್ಯಾದೆಯಾಗಿ ಅರಸನನ್ನು ಚಯ ಪಡಿಸುವಂತೆ ಮಾತಾಡ ಪ್ರಾರಂಭಿಸಿದ್ದರಿಂದ ಸರ್ ಉಲ್ಲಿಯಮ್ ವಾಲ್ವರ್ತನು ಬಹು ಕೋಪಗೊಂಡು ಆ ಕಲಹಗಾರರ ಮುಖ್ಯಸ್ತನನ್ನು ಹೊಡೆದು ಕೆಡವಿದನು.

ಕಲಹಗಾರರು ತಮ್ಮ ಮುಖ್ಯಸ್ಥನು ಬಿದ್ದದ್ದನ್ನು ಕಂಡು ರೌದ್ರ ಉಳ್ಳವರಾಗಿ ಅಂಬುಗಳನ್ನು ನಾರಿಗೆ ಏರಿಸಿ ತಮ್ಮ ಕ್ರೋಧ ತೀರಿಸಿ ಕೊಳ್ಳುವದಕ್ಕೆ ಒಪ್ಪಿ ಕೊಂಡು ಬಂದರು. ಹೀಗೆ ಅರಸನಿಗೂ, ಅವನ ಕಡೆ ಶೇರಿದವರಿಗೂ ಅಪಾಯ ಸಂಭವಿಸುವ ಸಮಯದಲ್ಲಿ, ಅವನು ತಾನು ಹತ್ತಿದ ಕುದುರೆಯನ್ನು ಓಡಿಸಿ, ಕಲಹಗಾರರ ಮಧ್ಯದಲ್ಲಿ ಹೋಗಿ ಎಷ್ಟು ಮಾತ್ರವೂ ಮನಸ್ಸಿನಲ್ಲಿ ಕಳವಳ ಪಡದೆ, ಆರ್ಭಟಿಸುವ ಜನವನ್ನು ನೋಡಿ, ಏನಿದು? ನನ್ನ ಪ್ರಜೆಗಳೇ ನಿಮ್ಮ ಅರಸನನ್ನು ಕೊಲ್ಲುವದಕ್ಕೆ ಬಂದಿರೋ? ಆ ಹೆಂಚುಗಾರನು ರಾಜದ್ರೋಹಿಯೇ ಸರಿ, ಇನ್ನು ಮೇಲೆ ನಾನೇ ನಿಮ್ಮ ಯಜಮಾನನು, ನನ್ನನ್ನು ಹಿಂಬಾಲಿಸಿ ಬನ್ನಿರಿ ಎಂದು ಕೂಗಿದನು. ಆ ಕಲಹಗಾರರು ಅರಸನ ಮಾತನ್ನು ಕೇಳಿದ ಕೂಡಲೇ ಸ್ವಲ್ಪ ಅಂಜಿದರು. ತರುವಾಯ ಆತನು ಹೇಳಿದ ಮಾತಿನಿಂದ ಆಶ್ಚರ್ಯ ಪಟ್ಟು, ಅದು ಅವರ ಮನಸ್ಸುಗಳನ್ನು ಎಳೆದು ಕೊಂಡದರಿಂದ ಗುಬಾರೆಲ್ಲಾ ಶಾಂತವಾಯಿತು. ಮತ್ತು (Islington) ಇಸ್ಲಿಂಗ್ಟನ್ ಎಂಬ ಒಂದು ಮಂದೆಬೈಲಿನ ಮಟ್ಟಿಗೂ ಅವರೆಲ್ಲರೂ ಅರಸನನ್ನು ಹಿಂಬಾಲಿಸಿ ಬಂದರು. ಅಲ್ಲಿಗೆ ಶೇರಿದಾಗಲೇ ನಿಮ್ಮ ಕಾರ್ಯಗಳನ್ನೆಲ್ಲಾ ನಾನೇ ವಿಚಾರಿಸಿ ನಿಮಗೆ ನ್ಯಾಯ ಮಾಡುತ್ತೇನೆಂದು, ಅವನು ಮುಂಚೆ ಮಿಕ್ಕಾದ ಕಲಹಗಾರರಿಗೆ ಹೇಳಿದ ಪ್ರಕಾರವೇ ಇವರಿಗೂ ಹೇಳಿ ಇವರನ್ನು ಸಮಾಧಾನ ಪಡಿಸಿದನು. ಅಷ್ಟರಲ್ಲಿ ಯುದ್ಧಸೈನ್ಯವೆಲ್ಲಾ ಕೂಡಿ ಬಂದಿತ್ತು. ಆದಾಗ್ಯೂ ಅವರನ್ನು ಜನರ ಮೇಲೆ ಬೀಳ ಗೊಡಿಸದೆ, ಅವನು ತನ್ನ ನಯವಾದ ಮಾತುಗಳಿಂದಲೂ ಕೃಪಾದೃಷ್ಟಿಯಿಂದಲೂ ಆ ಕಲಹಗಾರರಿಗೆ ಹಿತ ಮಾಡಿ ತಮ್ಮ ತಮ್ಮ ಗ್ರಾಮಗಳಿಗೆ ಸಮಾಧಾನವಾಗಿ ಹೋಗುವಂತೆ ಮಾಡಿದನು. ಆದಾಗ್ಯೂ ಅದರ ತರುವಾಯ ಅರಸನು ಕಟ್ಟಳೆ ಮಾಡಿದ್ದ ಸ್ವೀಕಾರಪತ್ರಿಕೆಗಳನ್ನು ಪಾರ್ಲಿಮೆಂಥ್ ಎಂಬುವ ದೊಡ್ಡ ಆಲೋಚನೇ ಸಂಘದವರು ಮಾರ್ಪಡಿಸಿದ್ದರಿಂದ ಪ್ರಜೆಗಳು ಅರಸನ ಮೇಲೆ ಇಟ್ಟ ಪ್ರೀತಿಗೆ ಕುಂದು ಉಂಟಾಯಿತು.

ಮೇಲೆ ಹೇಳಿದ ಕಲಹ ಉಂಟಾದಾಗ ಅರಸನಿಗೆ ಹದಿನಾರು ವರುಷಪ್ರಾಯ. ಅದರ ತರುವಾಯ ಅವನು ತಾನೇ ಅರಸುತನ ಮಾ-

ಡ ಬೇಕಾದ ಕಾಲ ಬಂತು. ಇನ್ನೂ ಬಾಲ್ಯಪರುವದಲ್ಲಿಯೇ ಅನ್ನಮ್ಮ ಎಂಬುವ (Bohemia) ಬೊಹೇಮಿಯ ನಾಡಿನ ರಾಜಪುತ್ರಿಯನ್ನು ವಿವಾಹ ಮಾಡಿ ಕೊಂಡನು. ಆ ಅರಸಿಯು ಬಹು ಶಾಂತವೂ ಉಪಚಾರವೂ ಉಳ್ಳವಳಾದ್ದರಿಂದ ಜನರೆಲ್ಲರೂ ಅವಳನ್ನು "ಅನ್ನಮ್ಮ ಎಂಬುವ ನಮ್ಮ ಉತ್ತಮ ಅರಸಿ" ಎಂದು ಹೇಳುವರು.

ಅದರ ತರುವಾಯ ಅರಸನಿಗೆ ಪ್ರಾಯ ಶೇರಿದರೂ ಬುದ್ಧಿ ಶೇರಲಿಲ್ಲ. ಹ್ಯಾಗಂದರೆ, ಎರಡನೇ ಎದ್ವರ್ಡನೆಂಬ ಅರಸನು ಮುಂಚಿನ ಕಾಲದಲ್ಲಿ ಮಾಡಿದಂತೆ ಇವನು ಪಕ್ಷಪಾತ ಮಾಡಿ ತನ್ನನ್ನು ಪ್ರೀತಿ ಮಾಡಿದ ಕೆಲವರನ್ನು ಬಹಳವಾಗಿ ನಂಬಿದ್ದರಿಂದ ಬಹಳ ಕೇಡು ಬೆಳೆಯಿತು. ಇವನಿಗೆ ಮುಖ್ಯವಾದ ಸ್ನೇಹಿತನು (Oxford) ಒಕ್ಸ್ಫೋರ್ಡ್ ಪಟ್ಟದ ಪ್ರಭುವಾದ (Robert de Vere) ರೋಬರ್ತ್ ದಿ ವೀರ್ ಎಂಬವನು. ಇವನಿಗೆ ಅರಸನು ಮೊದಲಿಲ್ಲಿ (Dublin) ದಬ್ಲಿನ್ ಪಟ್ಟದ ಶ್ರೇಷ್ಠ ಪ್ರಭು ಎಂಬ ಪಟ್ಟವನ್ನು ಧರಿಸಿ, ತರುವಾಯ ಇವನನ್ನು ಐರ್ಲಾಂಡ್ ನಾಡಿನ ಅಧಿಪತಿಯಾಗ ಮಾಡಿದನು. ಇದು ಅನೇಕರಿಗೆ ವ್ಯಸನವಾಗಿದ್ದದ್ದಲ್ಲದೆ ಮುಖ್ಯವಾಗಿ ಬೇರೆ ಪ್ರಭುಗಳಿಗೆ ಬಹು ಬೇಸರಿಕೆಯಾಗಿತ್ತು. ಆದದರಿಂದ ಲಾಂಕೆಸ್ತೆರ್ ಎಂಬ ಪ್ರಭು (Castile) ಕಸ್ತೀಲ್ ಶೀಮೆಗೆ ಹೋದದರಿಂದ (Gloucester) ಗ್ಲೋಸ್ತರ್ ಎಂಬ ಪ್ರಭುವು ರಾಜ್ಯದಲ್ಲಿ ಮುಖ್ಯಾಧಿಕಾರಿಯಾದ ಸಮಯದಲ್ಲಿ ಇವನು ಹೀಗೆ ವ್ಯಸನ ಪಡುತ್ತಾ ಇರುವ ಪ್ರಭುಗಳನ್ನು ಎಬ್ಬಿಸಿ ಬಿಟ್ಟು ಅರಸನಿಗೆ ಪ್ರತಿಕಕ್ಷಿಯನ್ನು ಉಂಟು ಮಾಡಿ, ಅರಸನಿಗಿದ್ದ ಅಧಿಕಾರವನ್ನು ತೆಗದು ಹಾಕಿ, ಅವನು ಇಟ್ಟಿದ್ದ ಮಂತ್ರಿಗಳನ್ನೂ ನ್ಯಾಯಾಧಿಪತಿಗಳನ್ನೂ ತಳ್ಳಿ ಬಿಟ್ಟು, ಅವರಲ್ಲಿ ಕೆಲವರನ್ನು ಪ್ರಾಣಾಗ್ನೆ ಮಾಡಿದನು.

ಈ ವರ್ತಮಾನಗಳಾದ ಒಂದು ವರುಷದ ಮೇಲೆ ಅರಸನು ಮತ್ತೂ ರಾಜ್ಯಾಧಿಕಾರವನ್ನು ಹೊಂದುವದಕ್ಕೆ ಬಹಳ ಸಾಧಿಸಿ, ಮಂತ್ರಾಲೋಚನೇ ಸಂಘದವರನ್ನು ತಳ್ಳಿ ಬಿಟ್ಟು, ತಾನೇ ಆಳ ಪ್ರಾರಂಭಿಸಿದನು. ಅದರ ತರುವಾಯ ಕೆಲವು ಕಾಲ ಎಲ್ಲಾ ಶಾಂತವಾಗಿತ್ತು. ಆದಾಗ್ಯೂ ಗ್ಲೋಸ್ತರ್ ಪ್ರಭುವೂ ಅವನ ಕಕ್ಷಿಯವರೂ ಇನ್ನೂ ಕೇಡಾಲೋಚನೆ

ಮಾಡುತ್ತಾ ಬಂದರು. ಅರಸನು ಅವರು ಮಾಡುವ ಮೋಸವನ್ನು ತಿಳಿದು ಕೊಂಡು ಇನ್ನು ಮೇಲೆ ತನ್ನ ಚಿಕ್ಕಪ್ಪನು ಮಾಡುವ ತೊಂದರೆಯನ್ನು ಪೂರ್ಣವಾಗಿ ನಿವರ್ತಿ ಮಾಡಿ ಬಿಡ ಬೇಕೆಂದು ನಿರ್ಣಯಿಸಿ ಕೊಂಡನು. ಅವನು ತಾನು ಮಾಡಿದ ನಿರ್ಣಯವನ್ನು ಈಡೇರಿಸಿದ ವಿಧವನ್ನು ಯೋಚಿಸಿದರೆ, ಅದು ಅವನ ಪ್ರಜೆಗಳು ಅವನನ್ನು ಹಗೆ ಮಾಡಲೂ ಹಿಂದಿನ ಸಂತತಿಯವರು ಕುಂದು ಎಣಿಸಲೂ ತಕ್ಕದ್ದಾಗಿತ್ತು. ಹ್ಯಾಗಂದರೆ, "ಮಿತ್ರತ್ವ ಮಾಡಿ ಶತ್ರುವನ್ನು ಕೊಲ್ಲ ಬೇಕು" ಎಂಬ ಗಾದೆಯ ಪ್ರಕಾರ ಅವನು ಗ್ಲೋಸ್ತರ್ ಪ್ರಭುವನ್ನು ದರ್ಶಿಸುವಂತೆ ಸ್ನೇಹಿತನ ಹಾಗೆ ಅವನ ಅರಮನೆಗೆ ಹೋಗಿ ಅಲ್ಲಿ ಔತಣದಲ್ಲಿದ್ದ ಸಮಯದಲ್ಲಿ ಆ ಪ್ರಭುವನ್ನು ಹಿಡಿದು, (Calais) ಕಲೇ ಕೋಟೆಯಲ್ಲಿ ಮುಚ್ಚಿ ಬಿಟ್ಟನು. ಆ ಕೋಟೆಯಲ್ಲಿ ಅವನು ಸತ್ತು ಹೋದನು. ಅರಸನ ಕಟ್ಟಳೆಯ ಪ್ರಕಾರ ಅವನು ಅನ್ಯಾಯವಾಗಿ ಕೊಲೆ ಮಾಡಲ್ಪಟ್ಟನೆಂದು ನೆನಸುವದಕ್ಕೆ ಆಸ್ಪದ ಉಂಟು.

ಗ್ಲೋಸ್ತರ್ ಪ್ರಭುವು ಹೀಗೆ ಸಾಯುವದಕ್ಕಿಂತ ಮುಂಚೆಯೇ ರಿಚಾರ್ಡನು ಫ್ರಾನ್ಸ್ ಅರಸನ ಸಂಗಡ ಸಮಾಧಾನವೊಡಂಬಡಿಕೆ ಮಾಡಿದ್ದಲ್ಲದೆ ಅನ್ನಮ್ಮ ಎಂಬುವ ಉತ್ತಮ ಅರಸಿಯು ಸತ್ತು ಹೋದದರಿಂದ ಆ ಅರಸನ ಕುಮಾರ್ತೆಯನ್ನು ಮದುವೆ ಮಾಡಿ ಕೊಂಡನು.

ಈ ಎರಡು ಸಂಗತಿಗಳೂ ಇಂಗ್ಲಿಷ್ ಜನರಿಗೆ ಅಸಹ್ಯವಾಗಿರುವದರಿಂದ ಅವುಗಳ ನಿಮಿತ್ತ ಅವರು ಅರಸನ ಮೇಲೆ ಅಧಿಕವಾಗಿ ಗುಣುಗುಟ್ಟಿದರು. ಹೀಗೆ ಆ ದೇಶದವರು ಬಹಿರಂಗವಾಗಿ ಕಲಹ ಮಾಡದೆ ಮನಸ್ಸು ಮುರಿದಿರುವ ಕಾಲದಲ್ಲಿ, (Hereford) ಹೆರಿಫೋರ್ಡ್ಡು ಪಟ್ಟದ ಅಧಿಪತಿಯಾದ (Henry Bolingbroke) ಹೆನ್ರಿ ಬೊಲಿನ್‌ಬ್ರೋಕ್ ಎಂಬವನು ರಾಜಸಮುಖದವರ ನಡುವೆ ನಿಂತು, (Norfolk) ನೊರ್‌ಫೋಲ್ಕ್ ಪಟ್ಟದ ಅಧಿಪತಿಯು ತನ್ನ ಸಂಗಡ ಅರಸನಿಗೆ ನಿಂದೆಯಾದ ಕೆಲವು ಮಾತುಗಳನ್ನು ಹೇಳಿದನೆಂದು ಅವನ ಮೇಲೆ ಅಪರಾಧ ಹೊರಿಸಿದನು. ನೊರ್‌ಫೋಲ್ಕ್ ಪಟ್ಟದ ಅಧಿಪತಿಯು ಎದುರಿಗೆ ನಿಂತು ಅವನು ಹೇಳಿದ್ದು ಅಬದ್ಧವೆಂದು ಬಹು ಕೋಪದಿಂದ ಮಾತಾಡಿ, ಅವನನ್ನು

ಏಕಾಂತ ಯುದ್ಧಕ್ಕೆ ಕರೆದನು. ಹೆರಿಫೋರ್ಡ್ ಪ್ರಭುವು ಅದಕ್ಕೆ ಸಮ್ಮತಿಸಿದ್ದರಿಂದ ಅರಸನು ಗೊತ್ತು ಮಾಡಿದ ಸ್ಥಳವಾದ (Coventry) ಕೊವೆಂಶ್ರಿ ಎಂಬ ಊರಿನ ಬಳಿಯ ಇಬ್ಬರೂ ಯುದ್ಧ ಮಾಡ ಬೇಕೆಂದೂ, ಯಾವನು ಗೆಲ್ಲುತ್ತಾನೋ ಅವನು ಹೇಳಿದ್ದು ನಿಜವೆಂಬದಾಗಿ ನಿಶ್ಚಯಿಸ ಬೇಕೆಂದೂ ನಿರ್ಣಯ ಮಾಡಲ್ಪಟ್ಟಿತು. ಆದಾಗ್ಯೂ ಎಲ್ಲರೂ ಆಯತ್ತವಾಗಿ ನಿಲ್ಲುವ ಕಾಲದಲ್ಲಿ ರಿಚಾರ್ಡನೆಂಬ ಅರಸನು ಅವರು ಕಾದ ಕೂಡದೆಂಬದಾಗಿಯೂ, ಇಬ್ಬರೂ ದೇಶಭ್ರಷ್ಟರಾಗಿ ಹೋಗ ಬೇಕೆಂದೂ ಕಟ್ಟಳೆ ಮಾಡಿದನು. ಇದು ಅಲ್ಲಿದ್ದ ಎಲ್ಲರಿಗೂ ಮನಸ್ತಾಪವಾಗಿತ್ತು.

ಅರಸನು ನೊರ್‌ಫೋಲ್ಕ್ ಪ್ರಭುವನ್ನು ಸಾಯುವ ಮಟ್ಟಿಗೂ ಸ್ವದೇಶಕ್ಕೆ ತಿರಿಗಿ ಬರ ಕೂಡದೆಂದೂ, ಹೆರಿಫೋರ್ಡ್ ಪ್ರಭುವು ಹತ್ತು ವರುಷಗಳ ತರುವಾಯ ತಿರಿಗಿ ಬರ ಬಹುದೆಂದೂ ತೀರ್ಪು ಮಾಡಿದನು. ಇದಲ್ಲದೆ ಅರಸನು ಇವನ ಆಸ್ತಿಯನ್ನು ಕಿತ್ತು ಕೊಳ್ಳದೆ ಇವನು ಲಾಂಕೆಸ್ತೆರ್ ಪ್ರಭುವಾದ ತನ್ನ ತಂದೆಯು ಆಳಿದ ಶೀಮೆಗಳನ್ನು ಸ್ವತಂತ್ರಿಸಿ ಕೊಳ್ಳ ಬಹುದೆಂದು ಅಪ್ಪಣೆ ಮಾಡಿದನು.

ಈ ಪ್ರಕಾರ ಅಪ್ಪಣೆ ಮಾಡಿದಾಗ್ಯೂ ಕೆಲವು ತಿಂಗಳ ತರುವಾಯ ಲಾಂಕೆಸ್ತೆರ್ ನಗರಾಧಿಪತಿ ಸತ್ತ ಕೂಡಲೆ ಅರಸನು ಅವನ ಸ್ವಾಸ್ತ್ಯದಿ ರಾಶಿಗಳನ್ನೆಲ್ಲಾ ಕಿತ್ತು ಕೊಂಡು ಅವು ಇನ್ನು ಅರಸನ ಸ್ವಂತವಾದವುಗಳೆಂದು ನಿರ್ಣಯಿಸಿ ತನ್ನ ತಂದೆಯ ಪಟ್ಟವನ್ನು ಹೊಂದಿ ಇದ್ದ ಮೇಲೆ ಹೇಳಿದ ಹೆನ್ರಿ ಎಂಬ ಅಧಿಪತಿಯು ಆಯುಸ್ಸು ಇರುವ ಮಟ್ಟಿಗೂ ಸ್ವದೇಶಕ್ಕೆ ತಿರಿಗಿ ಬರ ಕೂಡದೆಂದು ಕಟ್ಟಳೆ ಮಾಡಿದನು.

ಇವು ಮುಂತಾದ ಮಹಾ ಅನ್ಯಾಯಗಳನ್ನು ಮಾಡಿದ್ದರಿಂದ ಅವನ ರಾಜ್ಯದವರೆಲ್ಲರೂ ಬಹು ವ್ಯಸನ ಪಟ್ಟಿರುವ ಕಾಲದಲ್ಲಿ ಅವನು ಐರ್ಲಾಂಡ್ ದೇಶದಲ್ಲಿ ಕಲಹ ಉಂಟಾದ ಸುದ್ದಿಯನ್ನು ಕೇಳಿ, ಸಂಗಡಲೇ ಸೈನ್ಯವನ್ನು ಕೂಡಿಸಿ ಕೊಂಡು ಆ ದೇಶದ ಮೇಲೆ ಹೋದನು.

ತರುವಾಯ, "ಉರುಳುವ ಗುಂಡಿನ ಮೇಲಿಟ್ಟ ದ್ರವ್ಯವೂ—ಜನಸಮ್ಮತಿ ಇಲ್ಲದ ಅರಸನ ಮೇಲಿಟ್ಟ ಕಿರೀಟವೂ ನಿಲ್ಲಲಾರದು" ಎಂಬ ಸಾಮತಿಯು ಅವನ ಚರಿತ್ರೆಯಿಂದ ರುಜುವಾಯಿತು. ಹ್ಯಾಗಂದ

ರೆ, ಇದರ ಮಧ್ಯೆ ಲಾಂಕೆಸ್ತ್ರರ್ ಪಟ್ಟದ ಅಧಿಪತಿಯು ಅರಸನು ತನಗೆ ಮಾಡಿದ ಅನ್ಯಾಯದ ನಿಮಿತ್ತ ಬಹು ಕೋಪಗೊಂಡವನಾಗಿ ತನಗೆ ದೊರಕ ಬೇಕಾದ ಪಿತ್ರಾರ್ಜಿತವಾದ ಭೂಮಿಗಳನ್ನು ಅರಸನಿಂದ ಕೇಳಿ ತೆಗದು ಕೊಳ್ಳುವದಕ್ಕೆ ಇಂಗ್ಲಾಂಡಿಗೆ ಅಪ್ಪಣೆ ಇಲ್ಲದೆ ತಿರಿಗಿ ಬಂದನು. ಅವನು (Yorkshire) ಯೋರ್ಕ್‌ಷೈರ್ ನಾಡಿನಲ್ಲಿ ಹಡಗದಿಂದ ಇಳಿದಾಗಲೇ ದೇಶದ ಜನರೆಲ್ಲರು ಸಂತೋಷವಾಗಿ ಅವನ ಸಂಗಡ ಕೂಡಿಕೊಂಡದ್ದಲ್ಲದೆ, (Northumberland) ನೊರ್ತಂಬರ್ಲಾಂಡ್ ನಾಡಿನ ಅಧಿಪತಿಯಾದ ಬಲವಾದ ಪ್ರಭುವೂ, ಅರಸನ ಕಠಿಣ ಆಳಿಕೆಯಿಂದ ಕಷ್ಟ ಪಡುತ್ತಿದ್ದ ಬೇರೆ ಅನೇಕ ಪ್ರಭುಗಳೂ ಇವನ ಕಾರ್ಯವನ್ನು ಬಲಪಡಿಸ ಬೇಕೆಂದು ಕೂಡಿ ಬಂದರು. ಇವನು ತಿರಿಗಿ ಬಂದ ಮೊದಲಲ್ಲಿ ತನಗೆ ಬಾಧ್ಯತೆಯಾದ ಸ್ವತಂತ್ರವನ್ನು ಹೊಂದುವದಕ್ಕೆ ಬಂದೆನೆಂದು ತೋರಿಸಿದನು. ಆದಾಗ್ಯೂ ಅನೇಕ ಬಲಶಾಲಿಗಳು ತನ್ನ ಪಕ್ಷದಲ್ಲಿರುವದನ್ನೂ, ತಾನು ತಿರಿಗಿ ಬಂದದಕ್ಕಾಗಿ ಜನರು ಸಂತೋಷ ಪಡುವದನ್ನೂ ಕಂಡು, ರಾಜ್ಯಾಧಿಕಾರವನ್ನು ಕೈವಶ ಮಾಡಿ ಕೊಳ್ಳ ಬೇಕೆಂದು ಬಹಿರಂಗವಾಗಿ ಪ್ರಯತ್ನ ಮಾಡ ಪ್ರಾರಂಭಿಸಿದನು. ಮತ್ತು ಅರಸನು ಐರ್ಲಾಂಡಿಗೆ ಹೋಗಿರುವ ಕಾಲದ ಮಟ್ಟಿಗೂ ಪ್ರತಿಯಾಗಿ ಆಳುವ ಯೋರ್ಕ್ ಪಟ್ಟದ ಅಧಿಪತಿಯು ಸಹ ಇವನ ಪಕ್ಷದಲ್ಲಿ ಸೇರುವಂತೆ ವಶ ಮಾಡಿಕೊಂಡರು. ಇದರ ತರುವಾಯ ಅರಸನ ಸೈನ್ಯವೆಲ್ಲಾ ಇವನ ಸಂಗಡ ಕೂಡಿ ಕೊಂಡು ಕಡೆಯಲ್ಲಿ ಜನರೆಲ್ಲರೂ ಅರಸನಾಗ ಮಾಡುವದಕ್ಕೆ ಕಲ್ಪಹ ಮಾಡಿ ಕೊಂಡರು.

ಅರಸನು ಈ ಮುಖ್ಯವಾದ ಸಂಗತಿಯನ್ನು ಕೇಳಿದ ಕೂಡಲೆ ಐರ್ಲಾಂದನ್ನು ಬಿಟ್ಟು ತಿರುಗಿದನು. ಆದಾಗ್ಯೂ ತನ್ನ ಕಾರ್ಯವು ಪೂರ್ಣವಾಗಿ ಕೆಟ್ಟು ಹೋಗಿರುವದನ್ನು ತಿಳಿದು, ಲಾಂಕೆಸ್ತ್ರರ್ ಎಂಬುವ ಅಧಿಪತಿಯನ್ನು ಕಂಡು ಕೊಂಡು ಕಾರ್ಯವನ್ನು ಮಾತಾಡ ಬೇಕೆಂದು ಬಂದನು. ಬಂದಾಗಲೇ ಆ ಪ್ರಭುವು ಇನ್ನು ಮೇಲೆ ರಾಜ್ಯ ಪರಿಪಾಲನೆ ಮಾಡುವದರಲ್ಲಿ ನಾನು ನಿನಗೆ ಸಹಾಯವಾಗಿರುತ್ತೇನೆಂದು ಹೇಳಿ, ಅರಸನನ್ನು

ಹಿಡಿದು ಸೆರೆಯಲ್ಲಿಟ್ಟನು. ಆದಾಗ್ಯೂ ಆರಂಭದಲ್ಲಿ ಅವನು ಆತನಿಗೆ ಖಂಡಿತವೇನೂ ಮಾಡಲಿಲ್ಲ. ತರುವಾಯ ಪಾರ್ಲಿಮೆಂತ್ ಎಂಬುವ ದೊಡ್ಡ ಆಲೋಚನೇ ಸಂಘವು ಕೂಡಿದಾಗ, ಆ ಸಂಘದವರು ಅರಸನಿಗೆ ರಾಜ್ಯಾಧಿಕಾರವನ್ನು ತಪ್ಪಿಸಿ, ಲಾಂಕೆಸ್ತ್ರೆರ್ ಪ್ರಭುವನ್ನು ಧೊರೆತನ ಮಾಡ ಕೇಳಿ ಕೊಂಡದ್ದರಿಂದ ಅವನು ಅದಕ್ಕೆ ಸಮ್ಮತಿಸಿ ಕಿರೀಟ ಧರಿಸಿ ಕೊಂಡನು. ಈ ಕಾರ್ಯವನ್ನು ಆಲೋಚಿಸುವಾಗ ಆ ಸಂಘದವರು ಅವನಿಗೆ ರಾಜಪಟ್ಟವನ್ನು ಕೊಟ್ಟದ್ದೂ, ಅವನು ಅದನ್ನು ತೆಗದು ಕೊಂಡದ್ದೂ ನ್ಯಾಯವಲ್ಲ. ಹ್ಯಾಗಂದರೆ, ರಿಚಾರ್ಡ್ ಎಂಬ ಅರಸನನ್ನು ತಳ್ಳಿ ಬಿಟ್ಟಾಗ್ಯೂ ಪಟ್ಟಕ್ಕೆ ತಕ್ಕವನು ಬೇರೊಬ್ಬನಿದ್ದನು. ಅವನು ಯಾರಂದರೆ, (March) ಮಾರ್ಚು ಪಟ್ಟಣದ ಅಧಿಪತಿಯಾದ (Edmund) ಎದ್ಮಂದ್ ಎಂಬವನು. ಅವನು ಎಧ್ವರ್ಡ್ ಅರಸನ ಮೂರನೇ ಕುಮಾರನಾದ (Clarence) ಕ್ಲಾರೆನ್ಸ್ ಪಟ್ಟಣದ ಶ್ರೇಷ್ಠಾಧಿಪತಿಯ ಸಂತತಿಯವನು. ಹೆನ್ರಿ ಎಂಬವನು ತನ್ನದಲ್ಲದ ರಾಜ್ಯಾಧಿಕಾರವನ್ನು ಅನ್ಯಾಯವಾಗಿ ತೆಗದು ಕೊಂಡದ್ದು "ಮುಳ್ಳುಶಾವಂತಿಗೆಯ ಯುದ್ಧಗಳು" ಎಂದು ಕರೆಯಲ್ಪಟ್ಟ ಸ್ವದೇಶಹೋರ್ರಾಟಕ್ಕೆ ಕಾರಣವಾಯಿತು.

ಈ ಪ್ರಕಾರ ತಳ್ಳಿ ಬಿಡಲ್ಪಟ್ಟ ಅರಸನನ್ನು ಸ್ವಲ್ಪ ಕಾಲ ಸೆರೆಯಲ್ಲಿಟ್ಟು, ತರುವಾಯ ನೂತನವಾಗಿ ನೇಮಿಸಲ್ಪಟ್ಟ ಅರಸನು ಕೊಟ್ಟ ಕಟ್ಟಳೆಯ ಪ್ರಕಾರ ಅವನನ್ನು (Pontefract) ಪೊಂತಿಫ್ರಾಕ್ಟ್ ಊರಿನ ಕೋಟೆಯಲ್ಲಿ ಕೊಂದು ಅವನ ಪ್ರೇತವನ್ನು ಲಂಡನ್ ಪಟ್ಟಣದ ಬೀದಿಗಳಲ್ಲೆಲ್ಲಾ ಹೊರುತ್ತಾ ಸುತ್ತಿ ಕೊಂಡು ಹೋದರು. ಹೆನ್ರಿ ಎಂಬವನು ತಮ್ಮ ಅರಸನು ಸತ್ತು ಹೋದದ್ದನ್ನು ಜನರು ಕಂಡು ತನಗೆ ವಿಧೇಯವಾಗುವರೆಂದು ಎಣಿಸಿ ಈ ಪ್ರಕಾರ ನಿಷ್ಠೂರವಾಗಿ ಮಾಡಿದನು. ಹೀಗೆ ಕೊಲ್ಲಲ್ಪಟ್ಟ ಅರಸನು ಮೊದಲು ಎಲ್ಲರೂ ಸಂತೋಷ ಪಡುವಂತೆ ಬಹು ಸಂಭ್ರಮವಾಗಿ ಆಳಿದಾಗ್ಯೂ, ತರುವಾಯ ವಿವೇಕವಿಲ್ಲದೆ ದುರ್ಮಾರ್ಗವಾಗಿಯೂ ಕ್ರೂರವಾಗಿಯೂ ಆಳಿದ್ದರಿಂದ ಅವನು ತನನ್ನು ತಾನೇ ಕೆಡಿಸಿ ಕೊಂಡನು. ಆದದರಿಂದ "ಪಾಪವಿದ್ದಲ್ಲಿ ಶಾಪ ತಪ್ಪ

ದು" ಎಂಬ ಗಾದೆಯ ಪ್ರಕಾರ ಅವನು ನಾಶ ಹೊಂದಿದ್ದು ಅವನ ದುಷ್ಕೃತ್ಯಗಳ ಫಲವೇ ಹೊರ್ತು ಬೇರೆ ಅಲ್ಲ.

ನಾಲ್ಕನೇ ಹೆನ್ರಿ ಎಂಬ ಅರಸನು ಸ್ವಲ್ಪ ಕಾಲ ಮಾತ್ರ ಆಳಿ ಬಹು ಅಭ್ಯಂತರ ಪಟ್ಟನು. ಅನ್ಯಾಯದಿಂದಲೂ ಬಲಾತ್ಕಾರದಿಂದಲೂ ಬಂದ ದೊಡ್ಡಸ್ತಿಕೆಯಿಂದ ಅವನಿಗೆ ಉಂಟಾದ ಫಲವು ಕಷ್ಟವೂ ಕಲಹವೇ ಹೊರ್ತು ಬೇರೆ ಇಲ್ಲ. ಅವನು ಆಳಿದ ಮೊದಲು ವರುಷಗಳಲ್ಲಿ ಅನೇಕ ಸಾರಿ ಕಲಹಗಳೂ ಕಲಾಪನೆಗಳೂ ಉಂಟಾದವು. ಮೊದಲನೇ ಕಲಾಪನೆ ಏನಂದರೆ, (Salisbury) ಸಾಲಿಸ್‌ಬರಿ (Huntingdon) ಹಂಟಿಂಗ್ಡನ್ ಎಂಬ ಪಟ್ಟಗಳ ಪ್ರಭುಗಳು ಅವನನ್ನು ಶೆರೆ ಹಿಡಿದು ಕೊಂಡು, ಕಾವಲಲ್ಲಿ ಇಟ್ಟಿದ್ದ ರಿಚಾರ್ಡ್ ಎಂಬ ಅರಸನನ್ನು ಮತ್ತೂ ಸಿಂಹಾಸನದ ಮೇಲೆ ಕುಳ್ಳಿರಿಸುವದಕ್ಕೆ ಮೋಸದಾಲೋಚನೆ ಮಾಡಿದರು. ಆದಾಗ್ಯೂ ಅರಸನು ಆ ವಂಚನೆಯನ್ನು ತಿಳಿದು ಕೊಂಡು ತಾನು ವಾಸ ಮಾಡುತ್ತಿದ್ದ (Windsor) ವಿನ್ಸರ್ ಎಂಬ ಕೋಟೆಯಲ್ಲಿ ಹೊಕ್ಕು ತನ್ನನ್ನು ಹಿಡಿಯ ಯತ್ನ ಪಟ್ಟಿದ್ದಾರೆಂದು ತಿಳಿದದರಿಂದ ಸಂಗಡಲೇ ಆ ಕೋಟೆಯನ್ನು ಬಿಟ್ಟು ಹೋದನು. ಅದರಿಂದ ಅವರು ನೆನಸಿದ್ದು ಸಿದ್ಧಿಸಲಿಲ್ಲ.

ಇದರ ತರುವಾಯ ಬಹು ಮೋಸಕ್ಕೆ ಹೇತುವೆಯಾದ ಬೇರೆ ಕಲಹವು (Wales) ವೇಲ್‌ಸ್ ನಾಡಿನಲ್ಲಿ ಉಂಟಾಯಿತು. ಅದರ ವಿವರ ಹ್ಯಾಗಂದರೆ, ವೇಲ್‌ಸ್ ನಾಡಿನವನಾದ (Owen Glendour) ಓವೆನ್ ಗ್ಲೆಂಡೌರ್ ಎಂಬುವನೊಬ್ಬನಿದ್ದನು. ಅವನು ಸ್ವದೇಶದವರಿಗೆ ಬಹು ಪ್ರೀತಿಯುಳ್ಳವನು. ಅವನು ರಿಚಾರ್ಡ್ ಎಂಬ ಅರಸನಿಂದ ಉದ್ಯೋಗ ಹೊಂದಿ ಅವನ ಅರಮನೆಯಲ್ಲಿ ದೊಡ್ಡವನಾಗಿದ್ದನು. ಇದಲ್ಲದೆ (Grey de Ruthven) ಗ್ರೇ ದಿ ರುತ್ವೆನ್ ಎಂಬ ಬೇರೊಬ್ಬ ದೊಡ್ಡ ದೊರೆ ಇದ್ದನು. ಅವನಿಗೆ (Wales) ವೇಲ್‌ಸ್ ನಾಡಿನಲ್ಲಿ ಅಧಿಕವಾದ ಮಿರಾಶಿಗಳು ಇದ್ಧದ್ದಲ್ಲದೆ ಪಕ್ಕದಲ್ಲಿ ವಾಸಿಸುತ್ತಾ ಇದ್ದ ಮೇಲೆ ಹೇಳಿದ (Glendour) ಗ್ಲೆಂಡೌರ್ ಎಂಬವನ ಭೂಸ್ಥಿತಿಗಳನ್ನು ಸಹ ಕಟ್ಟಿ ಕೊ

ಳ್ಳ ಬೇಕೆಂದು ಆಶಿಸಿದನು. ನಾಲ್ಕನೇ ಹೆನ್ರಿ ಪಟ್ಟಕ್ಕೆ ಬಂದ ಮೊದಲಲ್ಲಿ ಈ ಇಬ್ಬರಿಗೂ ವಾಗ್ವಾದ ಉಂಟಾಯಿತು. ಹೀಗೆ (Ruthven) ರುಥ್ವೆನ್ ಎಂಬ ಪ್ರಭುವು ಮಾಡಿದ ಅನ್ಯಾಯವನ್ನು ಕುರಿತು ಬಹು ಮನೋವ್ಯಸನವುಳ್ಳವನಾಗಿ (Glendour) ಗ್ಲೆಂಡೌರ್ ಎಂಬವನು ಯುದ್ಧ ಮಾಡಲಿಕ್ಕೆ ವೇಲ್ಸ್ ನಾಡಿನವರ ಒಂದು ಸೈನ್ಯವನ್ನು ಕೂಡಿಸಿದನು. ಈ ವಿಧವಾಗಿ ಉಂಟಾದ ಜಗಳದಿಂದ ಬಹು ಕಾಲ ಅಧಿಕ ತೊಂದರೆ ಉಂಟಾಯಿತು. ಗ್ಲೆಂಡೌರ್ ಮರಣ ಹೊಂದಿದ ಅರಸನ ನಂಬಿಕೆಯುಳ್ಳ ಸೇವಕನಾಗಿದ್ದದರಿಂದ ಹೆನ್ರಿ ಅರಸನು ರುಥ್ವೆನ್ ಎಂಬ ಇಂಗ್ಲಿಷ್ ಪ್ರಭುವಿಗೆ ಸಹಾಯವಾಗಿ ಒಂದು ದಂಡನ್ನು ಕಳುಹಿಸಿದನು. ವೇಲ್ಸ್ ನಾಡಿನವರು ಸ್ವದೇಶಸ್ತ್ರನನ್ನು ಕಾಪಾಡಲಿಕ್ಕೆ ಬಹು ಬಿಡುವಾದದಿಂದ ಯುದ್ಧ ಮಾಡಿ, ಆ ನಾಡಿನಲ್ಲಿರುವ ಪರ್ವತಸ್ಥಳಗಳಲ್ಲಿಯೂ ಬಲವಾದ ಕೋಟೆಗಳಲ್ಲಿಯೂ ಇದ್ದು ಕೊಂಡು, ಹೆನ್ರಿಯು ಕಳುಹಿಸಿದ ಸೈನ್ಯಗಳನ್ನೆಲ್ಲಾ ಓಡಿಸಿ ಬಿಟ್ಟರು. ಇದಲ್ಲದೆ ಅವರು ಇಂಗ್ಲಾಂಡ್ ದೇಶಕ್ಕೆ ಸೇರಿದ ತಮಗೆ ಸಮೀಪವಾದ ನಾಡುಗಳ ಮೇಲೆ ಆಗ್ಗಾಗ್ಗೆ ಬಂದು ಬೀಳುತ್ತಿರುವಲ್ಲಿ ಒಂದು ದಿವಸ ಇಂಗ್ಲಾಂಡ್ ರಾಜ್ಯಕ್ಕೆ ಬಾಧ್ಯನಾದ ಮಾರ್ಚ್ ಎಂಬ ಪ್ರಭುವನ್ನು ಸೆರೆ ಹಿಡಿದು ಕೊಂಡು ಹೋದರು. ತನಗೆ ಎದುರಾಳಿಯಾದವನು ಸೆರೆಯಾದದ್ದನ್ನು ಕುರಿತು ಹೆನ್ರಿಯು ಸಂತೋಷ ಪಟ್ಟು ಅವನನ್ನು ಬಿಡಿಸಿ ಕೊಳ್ಳಲಿಕ್ಕೆ ಪ್ರಯತ್ನವೇನೂ ಮಾಡಲಿಲ್ಲ.

ಇದರ ಮಧ್ಯೆ ಅರಸನು ಸ್ಕೊತ್ಲಾಂದಿನ ಮೇಲೆ ದಂಡೆತ್ತಿ ಕೊಂಡು ಹೋದದರಿಂದ ಆ ದೇಶದವರು ಮಾರಣೆ ವರುಷದಲ್ಲಿ ಸರಿಗೆ ಸರಿಯಾಗಿ ಮಾಡ ಮನಸ್ಸುಳ್ಳವರಾಗಿ, ಬಹಳ ವೀರನೂ ಸಾಮರ್ಥ್ಯನೂ ಆದ ಸೈನ್ಯಾಧಿಪತಿ (Douglas) ಡೌಗ್ಲಾಸ್ ಎಂಬ ಪ್ರಭುವಿನಿಂದ ನಡಿಸಲ್ಪಟ್ಟವರಾಗಿ ಇಂಗ್ಲಾಂದಿನ ಉತ್ತರ ಪ್ರದೇಶಗಳ ಮೇಲೆ ದಂಡೆತ್ತಿ ಕೊಂಡು ಬಂದರು. ಆದಾಗ್ಯೂ (Northumberland) ನೊರ್ತಂಬರ್ಲಾಂದಿನ ಶ್ರೇಷ್ಠಾಧಿಪತಿಯೂ ಅವನ ಮಹಾ ವೀರಕುಮಾರನಾದ (Harry Hotspur) ಹರಿ ಹೋತ್ಸ್ಪುರ್ ಎಂಬವನೂ ಅವರಿಗೆ ಎದುರಾಗಿ ಸೈನ್ಯಸನ್ನಾಹದೊಡನೆ ಹೊರಟು ಅವರನ್ನು ಪೂರ್ಣವಾಗಿ ಮುರಿಯು ಬ

ಪಿದು, ಬಹು ಕೀರ್ತಿ ಪ್ರತಾಪವುಳ್ಳ ಅವರ ದಳಕರ್ತನನ್ನು ಶೆರೆಯಾಗಿ ವೈದರು.

ಅವರು ಹೀಗೆ ಶತ್ರುಗಳನ್ನು ಚದರ ಬಡಿದ ತರುವಾಯ ಅರಸನು ಆಳನ್ನು ಕಳುಹಿಸಿ ಆ ಯುದ್ಧದಲ್ಲಿ ಶೆರೆಯಾಗಲ್ಪಟ್ಟವರನ್ನು ತನಗೆ ಒಪ್ಪಿಸ ಬೇಕೆಂದೂ, ಆ ಶೆರೆಯವರನ್ನು ವಿಮೋಚಿಸಲಿಕ್ಕೆ ಅವರ ಪಕ್ಷದವರು ಸಲ್ಲಿಸುವ ದ್ರವ್ಯವನ್ನು ಇವರು ತೆಗದು ಕೊಳ್ಳ ಕೂಡದೆಂದೂ ಕಟ್ಟಳೆ ಮಾಡಿದನು. ಇದು ಜಯವೀರನಾದ ಆ ಪ್ರಭುವಿಗೆ ಬಹು ಬೇಸರಿಕೆಯಾಗಿತ್ತು. ಇದಲ್ಲದೆ ಮುಂಚೆಯೇ ಆ ಪ್ರಭುವಿಗೂ ಅರಸನಿಗೂ ದ್ವೇಷ ಉಂಟಾಯಿತು. ಹ್ಯಾಗಂದರೆ, ಆ ಪ್ರಭುವು ಅರಸನು ತನಗೆ ತಕ್ಕ ಮರ್ಯಾದೆ ಮಾಡಲಿಲ್ಲವೆಂದು ವ್ಯಸನ ಪಟ್ಟಿದ್ದನು. ಅರಸನಿಗೆ ಇವನ ಸಹಾಯದಿಂದಲೇ ರಾಜ್ಯ ಸಿಕ್ಕಿದ್ದಾಗ್ಯೂ, ಅವನು ಮಹಾ ಬಲಶಾಲಿ ಎಂದು ಮತ್ಸರ ಪಟ್ಟನು. ಕಡೆಯಲ್ಲಿ ಅವರಿಬ್ಬರೂ ಬಹಿರಂಗವಾಗಿ ಜಗಳ ಮಾಡ ಪ್ರಾರಂಭಿಸಿದರು. ಆ ಪ್ರಭುವು ಕಲಹ ಮಾಡಿ ದೊಡ್ಡ ಸೈನ್ಯವನ್ನು ಕೂಡಿಸಿ ಕೊಂಡು ತನ್ನ ಕುಮಾರನನ್ನು ಅದಕ್ಕೆ ದಳಕರ್ತನಾಗಿ ಇರಿಸಿ ದಕ್ಷಿಣ ಕಡೆ ಕಳುಹಿಸಿದನು. ಮತ್ತು ಮುಂಚೆ ಹೇಳದ (Douglas) ಡೌಗ್ಲಾಸ್ ಎಂಬವನು ಸಹ ತನಗೆ ಶತ್ರುಗಳಾಗಿದ್ದ ಇವರ ಸಂಗಡ ಕೂಡಿ ಕೊಂಡು ಬಹು ಪರಾಕ್ರಮವಾಗಿ ಯುದ್ಧ ಮಾಡುತ್ತಾ ಬಂದನು.

ಹೆನ್ರಿ ಎಂಬ ಅರಸನು ಕಲಹಗಾರರ ಸೈನ್ಯವನ್ನು ಎದುರಿಸಿ, (Shrewsbury) ಷ್ರೂಸ್ಬರಿ ಊರಿನ ಮಟ್ಟಿಗೂ ಹೋದನು. ಆ ಊರಿನ ಬಳಿಯಲ್ಲಿ (Hotspur) ಹೋತ್ಸ್ಪುರ್ ಎಂಬವನು ತನ್ನ ಸೈನ್ಯವನ್ನು ನಡಿಸಿ ಕೊಂಡು, ತನ್ನ ತಂದೆಯು ಬಂದು ಶೇರುವ ಮಟ್ಟಿಗೂ ಕಾದಿರ ಬೇಕಾಗಿ ಇದ್ದಾಗ್ಯೂ "ಆಲಸ್ಯಂ ಅಮೃತಂ ವಿಷಂ" ಎಂಬುವ ಗಾದೆಯ ಪ್ರಕಾರ ಇವನು ತಾಳಿ ಕೊಂಡಿರದೆ ಅರಸನ ಯುದ್ಧವೀರರನ್ನು ಕಂಡಾಗಲೇ ಅವರ ಮೇಲೆ ಬಿದ್ದು ಯುದ್ಧ ಕಲೆತನು. ಬಹು ಉಗ್ರವಾದ ಘೋರ ಯುದ್ಧ ಉಂಟಾಯಿತು. ಉಭಯ ಪಕ್ಷದವರೂ ಬಹಳ ಹೊತ್ತಿನ ಮಟ್ಟಿಗೂ ಹಿಂತೆಗಿಯದೆ ಯುದ್ಧ ಮಾಡಿದರು. ಅರಸನೂ, ಅದು

ಮೊದಲ್ಗೊಂಡು ಬಹು ವೀರಶೂರನೆಂದು ಪ್ರಕಟವಾದ ಅವನ ಕುಮಾರನೂ ಅತಿ ಪರಾಕ್ರಮವಾಗಿ ಹೋರಾಡಿದರು. ಎದುರಿಗಳ ಸೈನ್ಯದಲ್ಲಿ ಹೋತ್ಸ್ಪುರನೂ (Douglas) ಡೌಗ್ಲಾಸನೂ ಯಾವನು ಬಹು ಪೌರುಷವಾಗಿ ಯುದ್ಧ ಮಾಡುವನೋ ಎಂದು ಪಂಥವಾಡಿ ಕೊಂಡು ಹೋರಾಡಿದರು. ಮತ್ತು ಈ ಇಬ್ಬರು ವೀರರೂ ಅರಸನ ಸಂಗಡ ಏಕಾಂತ ಯುದ್ಧ ಮಾಡಿ ಜಯಿಸಿ ಬಿಟ್ಟು ಯುದ್ಧವನ್ನು ಮುಗಿಸಿ ಬಿಡ ಬೇಕೆಂದು, ಅವನನ್ನು ಯುದ್ಧರಂಗದಲ್ಲಿ ಎಲ್ಲೆಲ್ಲಿಯೂ ಬಹು ವಾಂಛೆಯಿಂದ ಹುಡುಕಿದರು. ಆದಾಗ್ಯೂ ಕಡೆಯಲ್ಲಿ (Harry Hotspur) ಹರಿ ಹೋತ್ಸ್ಪುರನು ಮಡಿದು ಹೋಗಲಾಗಿ ಅವನ ಕಡೆ ಸೈನ್ಯದ ವೀರರು ಹಿಂತೆಗದು ಹೋದರು.

ಈ ಯುದ್ಧದಲ್ಲಿ ಉಭಯ ಪಕ್ಷದವರೂ ಬಹು ಪಿಡುವಾದವಾಗಿ ಹೋರಿದಾಗ್ಯೂ ಅರಸನಿಗೆ ಜಯವಾದದರಿಂದ ಇನ್ನು ಕಲಹ ಮಾಡಿ ಈ ಅರಸನನ್ನು ತೆಗದು ಹಾಕುವದು ಸಾಧ್ಯವಲ್ಲವೆಂದು ನಿಶ್ಚಯಿಸಿ ಕೊಂಡು, ಆ ಶೀಮೆಯವರು ಶಾಂತದಿಂದ ಅವನಿಗೆ ಅಣಗಿ ಇದ್ದರು. ಅದರ ತರುವಾಯ (York) ಯೋರ್ಕ್ ಪಟ್ಟದ ಶ್ರೇಷ್ಠ ಅಧ್ಯಕ್ಷನ ಸಂಗಡ ಕೆಲವರು ಶೇರಿ ಕೊಂಡು ಒಂದು ದಿವಸ ಕಲಹ ಮಾಡಿದ್ದೇ ಹೊರ್ತು ಬೇರೆ ಕಲಹ ಮಾಡಲಿಲ್ಲ. ಆದರೆ ಜನರು ಅರಸನಿಗೆ ಜಯ ಪಟ್ಟಿದ್ದಾಗ್ಯೂ ಅವನನ್ನು ಒಬ್ಬರೂ ಸ್ನೇಹಿಸಲಿಲ್ಲ. ಅವನು ಸಿಂಹಾಸನವನ್ನು ಹತ್ತಿದ ಕಾಲದಲ್ಲಿ ಎಲ್ಲರೂ ಮಂಗಳವಚನ ಹೇಳಿ ಹರಸಿದರು. ತರುವಾಯ ಆ ಅರಸನನ್ನು ತೆಗದು ಹಾಕುವದಕ್ಕೆ ಮಾರ್ಗವೇನೂ ಕಾಣೆವೆಂದು ಮನಸ್ತಾಪದೊಡನೆ ಅವನ ಕಠಿಣ ಆಳಿಕೆಯನ್ನು ಸಹಿಸಿ ಕೊಂಡರು.

ಆ ಅರಸನು ಸಾಯುವದಕ್ಕೆ ಎರಡು ವರುಷಕ್ಕೆ ಮುಂಚೆ ಅವನಿಗೆ ಬಹಳ ಹೊತ್ತು ಅಧಿಕ ಕಷ್ಟವನ್ನು ಕೊಟ್ಟಂಥ ಒಂದು ವ್ಯಾಧಿಯು ಬಹಳ ಹೆಚ್ಚಿದ್ದರಿಂದಲೂ, ಮುಖದಲ್ಲಿ ಕುಷ್ಟರೋಗ ಕಂಡದ್ದರಿಂದಲೂ ಅವನು ಬಲಹೀನನಾಗಿ ರಾಜ್ಯದ ಕಾರ್ಯಗಳನ್ನು ನಡಿಸ ತ್ರಾಣ ಇಲ್ಲದವನಾದನು. ಇದರ ನಿಮಿತ್ತ ಅವನ ಜ್ಯೇಷ್ಠಪುತ್ರನಾದ (Wales) ವೇ

ಲ್ಸ್ ನಾಡಿನ ಪ್ರಭುವು ಅರಸನನ್ನು ನೋಡಿ, ಇನ್ನು ಈ ಧೊರೆತನವು ನಿಮಗೆ ಯೋಗ್ಯವಲ್ಲ ಎಂದು ಹೇಳಿದನು. ಈ ಕಾರ್ಯದಿಂದ ಅರಸನಿಗೂ ಅವನ ಮಗನಿಗೂ ಅಧಿಕ ವಾಗ್ವಾದ ಉಂಟಾಯಿತು.

ತರುವಾಯ ಅವನು ಅರಸುತನ ಹೊಂದಿದ ಹದಿನಾಲ್ಕನೇ ವರುಷದಲ್ಲಿ ಮರಣ ಹೊಂದಿದನು. ಅನ್ಯಾಯವಾಗಿ ಘನ ಹೊಂದಿದವರಿಗೆ ವ್ಯಾಕುಲವೂ ಕಷ್ಟವೂ ಉಂಟಾಗುವದೇ ಹೊರ್ತು ಮನರಮ್ಯ ಇಲ್ಲವೆಂಬುವದಕ್ಕೆ ಇವನ ಚರಿತ್ರವೇ ಸಾಕಾದ ದೃಷ್ಟಾಂತವಾಗಿದೆ. ಇವನಿಗೆ ಸೂಕ್ಷ್ಮ ಬುದ್ಧಿ ಇತ್ತು. ನಯವಾಗಿ ಮಾತಾಡಿ ಎಲ್ಲರಿಗೂ ಉಪಚಾರ ಮಾಡುವನು. ಆದಾಗ್ಯೂ ಪ್ರಜೆಗಳು ಅವನ ಮೇಲೆ ಪ್ರೀತಿ ಇಡಲಿಲ್ಲ. ಅವನಿಂದ ದೇಶದವರಿಗೆ ಮೇಲು ಉಂಟಾಗಲೂ ಇಲ್ಲ.

ಈ ಸಂಧಿಯಲ್ಲಿ ಹೇಳಿದ ಇಬ್ಬರು ಅರಸರು ಆಳಿದ ಕಾಲದಲ್ಲಿ ಆ ದೇಶದವರು ಬರಬರ ಸತ್ಯವೇದದ ಉಪದೇಶಗಳನ್ನು ಶೋಧಿಸಿ ತಿಳಿದುಕೊಂಡರು. ಮತ್ತು ಅವರಲ್ಲಿ ಅನೇಕರು ಅತಿ ಪವಿತ್ರವೂ ಆತ್ಮಕ್ಕೆ ಆರೋಗ್ಯಕರವೂ ಆದಂಥ ಆ ಸತ್ಯವೇದಕಟ್ಟಳೆಗಳ ಪ್ರಕಾರ ನಡಿಯ ಯತ್ನ ಮಾಡಿದರು. ಎರಡನೇ ರಿಚಾರ್ಡನು ಆಳಿದ ಕಾಲದಲ್ಲಿ (Wickliffe) ವಿಕ್ಲಿಫ್ ಎಂಬ ಸತ್ಯವೇದಶಾಸ್ತ್ರಿಯು ಆ ಕಾಲದಲ್ಲಿ ವಾಡಿಕೆಯಾಗಿದ್ದ ತಪ್ಪಾದ ಅಭಿಪ್ರಾಯಗಳನ್ನು ಖಂಡಿಸಿ ಪ್ರಸಂಗ ಮಾಡಿದನು. ಮತ್ತು ತಾನು ಮಾಡಿದ ಉಪದೇಶವು ಸತ್ಯವೇದಕ್ಕೆ ಸರಿಯಾಗಿದೆಯೋ ಇಲ್ಲವೋ ಎಂದು ಮನಸ್ಸುಳ್ಳವರೆಲ್ಲರೂ ಶೋಧಿಸಿ ತಿಳಿದು ಕೊಳ್ಳುವಂತೆ (Lutterworth) ಲತ್ತರ್ವರ್ತ್ ಎಂಬ ಬಹು ನಿರ್ಮಲವಾದ ಒಂದು ಊರಿನಲ್ಲಿ ಇದ್ದು ಕೊಂಡು ನಿತ್ಯ ಜೀವವನ್ನು ಕೊಡುವ ಆ ದೇವವಾಕ್ಯವನ್ನು ಇಂಗ್ಲಿಷ್ ಭಾಷೆಯಲ್ಲಿ ಟೀಕಿಸಿ ಬರೆದು ಕೊಟ್ಟನು. ಮತ್ತು ಅವನ ಶಿಷ್ಯರಲ್ಲಿ ಅನೇಕರು ಸತ್ಯವೇದದ ಪುಸ್ತಕಗಳನ್ನು ಕೈಯ್ಯಲ್ಲಿ ತೆಗದು ಕೊಂಡು ದೇಶವೆಲ್ಲಿಯೂ ಹೋಗಿ ಓದ ತಿಳಿಯದವರಿಗೆ ಓದಿ ತೋರಿಸುತ್ತಾ ಬಂದರು. ದುಷ್ಟರು ಅವರಿಗೆ ಹಾಸ್ಯವಾಗಿ (Lollard) ಲೊಲ್ಲಾರ್ಡ್ ಎಂದು ಹೆಸರಿಟ್ಟರು. ಮತ್ತು ಅವರ ಅಭಿಪ್ರಾಯಗಳ ನಿಮಿತ್ತ ಕೆಲವು ಸಮಯಗಳಲ್ಲಿ ಅವರು

ಬಹಳ ಉಪದ್ರವನ್ನು ಹೊಂದಿದರು. ಆದಾಗ್ಯೂ ಆ ಒಳ್ಳೇ ಉಪದೇಶವು ಬಹಳ ಮಂದಿಗೆ ಆಗದೆ ಇದ್ದರೂ, ಆ ಕಾಲದಲ್ಲಿ ಬಹು ಉಪದ್ರಗಳು ಸಂಭವಿಸಿದರೂ, ಸ್ವದೇಶಯುದ್ಧಗಳು ಹತ್ತಿ ಕೊಂಡಿದ್ದರೂ, ಅದು ಅನೇಕರ ಮನಸ್ಸಿನಲ್ಲಿ ನಾಟಿ ಕೊಂಡು ಹಿಂದಿನ ಕಾಲದಲ್ಲಿ ಮೊಳೆತು ಬೆಳೆದು ಒಳ್ಳೇ ಫಲ ಕೊಟ್ಟಿತು. ಇದಲ್ಲದೆ ಇಂಗ್ಲಾಂದಿನಲ್ಲಿ ಆ ಮೇಲೆ ಬಂದ ಒಬ್ಬ ಅರಸನ ಕಾಲದಲ್ಲಿ ಕ್ರಿಸ್ತನ ಸಭೆಯು ಸರಿಯಾಗಿ ತಿದ್ದುಪಾಟಾಯಿತು.



# CHAPTER XI.

## WAR WITH FRANCE.

FROM A. D. 1413 TO A. D. 1450.

## 11 ಸಂಧಿ.

## ಫ್ರಾನ್ಸ್ ದೇಶದವರ ಸಂಗಡ ಯುದ್ಧ ಮಾಡಿದ್ದು.

ಕ್ರಿ. ಶ. 1413 ಮೊದಲು ಕ್ರಿ. ಶ. 1450 ವರೆಗೂ.

ಮುಖ್ಯ ತಾರೀಖುಗಳು: (Henry V) 5ನೇ ಹೆನ್ರಿ ಕ್ರಿ. ಶ. 1388 ಹುಟ್ಟಿದ್ದು. 1413 ಕಿರೀಟ ಹೊಂದಿದ್ದು. 1422 ಶೀರಿ ಹೋದದ್ದು. ಫ್ರಾನ್ಸ್ ದೇಶದ ಮೇಲೆ ದಂಡೆತ್ತಿದ್ದು 1415. (Henry VI) 6ನೇ ಹೆನ್ರಿ ಹುಟ್ಟಿದ್ದು 1421. ಆಳಿದ್ದು 1422—1461. ಅದೇ ಕಾಲದ ಇಂದ್ಯ ಚರಿತ್ರೆ: ಅರಿ ಮಹಮ್ಮದಿನವರ ಧೊರೆತನ. ಶ್ರೇಷ್ಟ ನಾಮಗಳು: (John Huss) ಯೋಹಾನ್ ಹಸ್ ಕ್ರಿ. ಶ. 1376—1415. (Prague) ಪ್ರೇಗ್ ಊರಿನ (Jerome) ಜೆರೋಮ್ 1416 ಸತ್ತದ್ದು. ಇವರಿಬ್ಬರು ಕ್ರಿಸ್ತನ ಸಭೆಯನ್ನು ಶುದ್ಧ ಮಾಡ ಎತ್ನಿಸಿದ ಶಿದ್ದುಪಾಟಿನವರು. (Joan of Arc) ಆರ್ಕಿನ ಯೋಹನ್ನಳು 1402—1431. ಈಕೆ ಬಹು ಪರಾಕ್ರಮಶಾಲಿ.

ಐದನೇ ಹೆನ್ರಿ ಎಂಬ ಅರಸನು ರಾಜಪಟ್ಟವನ್ನು ಹೊಂದಿದ್ದು ಪ್ರಜೆಗಳಿಗೆ ಬಹು ಸಂತೋಷವಾಗಿತ್ತು. ಅವನು ಬಾಲ್ಯದಲ್ಲಿ ದುಷ್ಟತನ ಮಾಡಿ ಮತಿಹೀನವಾಗಿ ತಿರುಗಿದವನು ಆದಾಗ್ಯೂ ರಣರಂಗದಲ್ಲಿ ಅಪೂರ್ವವಾದ ಪರಾಕ್ರಮವನ್ನು ತೋರಿಸಿದ್ದನು. ಮತ್ತು ಯುದ್ಧವಿಷಯಗಳಲ್ಲಿ ಬಹು ಸಾಮರ್ಥ್ಯವುಳ್ಳವನಾಗಿ ಕೀರ್ತಿ ಪ್ರತಾಪ ಹೊಂದಿದ್ದರಿಂದ ರಾಜ್ಯದವರು ಅವನನ್ನು ಅರಸನಾಗ ಮಾಡುವ ಕಾಲದಲ್ಲಿ ನಮ್ಮ ಸೈನ್ಯದವರು ಎಂಟು ದಿಕ್ಕುಗಳಲ್ಲಿಯೂ ಜಯ ಹೊಂ

ದಿ ಘನ ಸಂಪಾದಿಸುವರೆಂದು ನಂಬಿ ಕೊಂಡು ಅವನ ಮೇಲೆ ಬಹು ಪ್ರೀತಿ ಇಟ್ಟಿದ್ದರು. ಅವರು ಎಣಿಸಿದ್ದ ಹಾಗೆಯೇ ಆಯಿತು. ಹೆನ್ರಿಯು ಪಟ್ಟಾಭಿಷೇಕ ಹೊಂದಿದ ಕೂಡಲೆ ತಾನು ಮುಂಚೆ ಸಹವಾಸ ಮಾಡಿ ಕೊಂಡಿದ್ದ ವ್ಯರ್ಥರೂ ಮತಿಕೇಡರೂ ಆದವರನ್ನು ಬಿಟ್ಟು ಬಿಟ್ಟು ತನ್ನ ತಂದೆಗೆ ಯಥಾರ್ಥವಾಗಿ ಸೇವೆ ಮಾಡುತ್ತಿದ್ದ ಪ್ರಾಯ ಹೋದ ಬುದ್ಧಿಯುಳ್ಳ ಮಂತ್ರಿಗಳನ್ನು ಕರೇ ಕಳುಹಿಸಿ, ಅವರ ಆಲೋಚನೆಯ ಪ್ರಕಾರ ರಾಜ್ಯ ಮಾಡಿ ಕೊಂಡನು. ಅವನು ಮುಂಚೆ ಬಹು ದುರ್ಮಾರ್ಗನಾಗಿ ನಡೆದನೆಂದು ಹೇಳುವರು. ಆದಾಗ್ಯೂ ಅವನು ತನ್ನ ತಂದೆಗೆ ವಿಧೇಯನಾಗದೆ ಹೋದದ್ದೂ ಬಾಲಚೇಷ್ಟೆ ಮಾಡಿದ್ದೂ ಇದರ ಹೊರ್ತು ಬೇರೆ ಅಧಿಕವೇನೂ ಮಾಡಲಿಲ್ಲವೆಂದು ತೋಚುತ್ತದೆ. ಹ್ಯಾಗೂ ಅರಸನಾದ ತರುವಾಯ ಅವನು ದೃಢ ಮನಸ್ಸಿನಿಂದಲೂ ಅಡಕವಾಗಿಯೂ ಅರಸುತನ ಮಾಡಿ ಎಲ್ಲರಿಗೂ ಮೇಲು ಮಾಡುತ್ತಾ ಬಂದನು.

ಅವನು ಅರಸನಾದ ಕೂಡಲೆ ಎರಡನೇ ರಿಚಾರ್ಡನೆಂಬುವ ಸತ್ತು ಹೋದ ಅರಸನು ತನಗೆ ಚಿಕ್ಕ ಪ್ರಾಯದಲ್ಲಿ ತೋರಿಸಿದ ದಯವನ್ನೂ ಉಪಕಾರವನ್ನೂ ನೆನಸಿ ಕೊಂಡು ಕೊಲ್ಲಲ್ಪಟ್ಟ ಸ್ಥಳದ ಬಳಿಯ ಹೂಣಿಟ್ಟಿದ್ದ ಅವನ ಹೆಣವನ್ನು ಎತ್ತಿ, ರಾಜವಂಶದವರನ್ನು ಹೂಣಿಡುವ ಸ್ಥಳವಾದ (Westminster Abbey) ವೆಸ್ಟ್ಮಿನ್ಸ್ಟರ್ ಶ್ರೇಷ್ಠ ದೇವಾಲಯದಲ್ಲಿ ಬಹು ಉಪಚಾರದಿಂದ ಹೂಣಿಟ್ಟನು. ಇದಲ್ಲದೆ ಮುಂಚೆ ಹೇಳಿದ (Earl of March) ಮಾರ್ಚ್ ಪ್ರಭುವನ್ನು ರಾಜಸಭೆಯವರೊಡನೆ ಶೇರಿಸಿ ಕೊಂಡು ಅವನನ್ನು ಯಾವಾಗಲೂ ಬಹು ಮರ್ಯಾದೆಯಾಗಿ ನಡಿಸುತ್ತಾ ಬಂದದ್ದರಿಂದ ಅವನು ಅರಸನಿಗೆ ಎಲ್ಲರಿಗಿಂತಲೂ ಬಹು ದೃಢವುಳ್ಳ ನಿಜವಾದ ಸ್ನೇಹಿತನಾದನು.

ಆ ಅರಸನು ಧೊರೆತನ ಮಾಡಿದ ಪ್ರಾರಂಭದಲ್ಲಿ (Lollards) ಲೊಲ್ಲಾರ್ಡ್ಸ್ ಎಂಬ ಮತಸ್ತರನ್ನು ಉಪದ್ರ ಪಡಿಸಿದ್ದು ದೊಡ್ಡ ತಪ್ಪು. (Cobham) ಕೊಬ್ಹಮ್ ಎಂಬ ಪ್ರಭುವಾದ ನೀತಿಯೂ ದೇವಭಕ್ತಿಯೂ ಉಳ್ಳ ಒಬ್ಬನು ಆ ಅಭಿಪ್ರಾಯಗಳನ್ನು ಅನುಸರಿಸಿದ್ದರಿಂದ ಧೊರೆತನದವರು ಅವನ ಮೇಲೆ ತಪ್ಪು ಹೊರಿಸಿ ವಿಚಾರಣೆ ಮಾಡಿ ಶಿರಸಾ

ಗ್ಲೆಗೆ ಶೀರ್ಘ ಮಾಡಿದರು. ಆದಾಗ್ಯೂ ಅವನು ಲಂದನ್ ಪಟ್ಟದ ಕೋಟೆಯಿಂದ ತಪ್ಪಿಸಿ ಕೊಂಡು ಓಡಿ ಹೋಗಿ ಕೆಲ ಸಮಯಗಳಲ್ಲಿ ವೇಲ್ಸ್ ನಾಡಿನಲ್ಲಿಯೂ ಕೆಲವು ವೇಳೆ ತನ್ನ ಪ್ರಜೆಗಳ ಮನೆಗಳಲ್ಲಿಯೂ ಬಚ್ಚಿಟ್ಟು ಕೊಂಡಿದ್ದನು. ಕೆಲವು ವರುಷಗಳ ತರುವಾಯ ಅವನು ಸಿಕ್ಕಿ ರಾಜದ್ರೋಹಿ ಎಂದು ಪ್ರಾಣದಂಡನೆ ಹೊಂದಿದನು. ಮತ್ತು ಅವನ ಪ್ರೇರೇಪಣೆಯ ಪ್ರಕಾರ ಲೊಲ್ಲಾರ್ದ್ಸ್ ಎನ್ನಲ್ಪಟ್ಟವರಲ್ಲಿ ಕೆಲವರು ಅರಸನಿಗೆ ವಿರೋಧವಾಗಿ ದುರಾಲೋಚನೆ ಮಾಡಿದ್ದಾಗಿ ಅನ್ಯಾಯ ಹೇಳಿ ಅಧಿಕಾರಿಗಳು ಅವರನ್ನು ಕೊಲ್ಲಿಸಿದರು. ಅವರು ಕೊಬ್ಬಮ್ ಎಂಬ ಪ್ರಭುವನ್ನು ಕಂಡು ಮಾತಾಡ ಬೇಕೆಂದು ಲಂದನ್ ಪಟ್ಟದ ಬಳಿಗೆ ಕೂಡಿ ಬಂದದ್ದು ಉಂಟು. ಆದಾಗ್ಯೂ ರಾಜದ್ರೋಹ ಮಾಡ ನೆನಸಿದ್ದಿಲ್ಲ.

ಇದು ಅಲ್ಲದೆ ಐದನೇ ಹೆನ್ರಿ ಆಳಿದ ಕಾಲದಲ್ಲಿ ಅವರು ಫ್ರಾನ್ಸ್ ದೇಶಕ್ಕೆ ವಿರೋಧವಾಗಿ ಯುದ್ಧ ಮಾಡಿದ್ದು ಮುಖ್ಯ. ಆ ಕಾಲದಲ್ಲಿ ಆ ದೇಶದ ಕಾರ್ಯಗಳು ಬಹು ತಾರುಮಾರಾಗಿದ್ದವು. ಯಾಕಂದರೆ, ಆ ದೇಶದ ಅರಸನು ಘೋರ ವ್ಯಾಧಿಯಿಂದ ಕಷ್ಟ ಪಟ್ಟು ಆಯಾ ವೇಳೆಗಳಲ್ಲಿ ಬುದ್ಧಿ ವೈಕಲ್ಯವಾಗುವದರಿಂದ ರಾಜಕಾರ್ಯಗಳನ್ನು ನಡಿಸ ತ್ರಾಣ ಇಲ್ಲದೆ ಇತ್ತು. ಅರಸನಿಗೆ ಆ ವ್ಯಾಧಿ ಬರುವ ವೇಳೆಯಲ್ಲಿ ಯಾವನು ಪ್ರತಿಯಾಗಿ ಅರಸುತನ ಮಾಡ ಬೇಕೆಂಬುವದನ್ನು ಕುರಿತು ವಾಗ್ವಾದ ಉಂಟಾಗುವದು. ಒಂದು ಕಕ್ಷಿಗಾರರು (Duke of Burgundy) ಬರ್ಗಂದಿ ನಾಡಿನ ಅಧಿಪತಿ ರಾಜ್ಯಪಾಲನೆ ಮಾಡುವದು ತಕ್ಕದ್ದು ಅನ್ನುವರು; ಬೇರೆ ಕಕ್ಷಿಯವರು (Duke of Orleans) ಓರ್ಲೀನ್ಸ್ ನಾಡಿನ ಅಧಿಪತಿ ಅರಸುತನ ಮಾಡ ಬೇಕೆಂದು ಕೋರುವರು. ಈ ಎರಡು ಕಕ್ಷಿಗಾರರೂ ಒಬ್ಬರನ್ನೊಬ್ಬರು ಬಹಳ ಹಗೆ ಮಾಡಿದರು. ಮತ್ತು ಬರ್ಗಂದಿ ನಾಡಿನ ಅಧಿಪತಿ ಮಾಡಿದ ವಂಚನೆಯಿಂದ ಆ ಹಗೆ ಅಧಿಕವಾಗಿ ಬೆಳೆಯಿತು. ಹ್ಯಾಗಂದರೆ ಅವನು ಓರ್ಲೀನ್ಸ್ ಪ್ರಭುವನ್ನು ನೋಡಿ, ನಿನಗೂ ನನಗೂ ಹಗೆ ಇರುವದು ಸರಿಯಲ್ಲ, ಇನ್ನು ಮೇಲೆ ನಾವಿಬ್ಬರೂ ಜೀವಿಸಿರುವ ಮಟ್ಟಿಗೂ ಸ್ನೇಹವಾಗಿರ ಬೇಕೆಂದು ಪ್ರಮಾಣ

ಮಾಡಿ ಕೊಳ್ಳುವ ಅಂಥೇಳಿ, ಹಾಗೆಯೇ ಪ್ರಮಾಣ ಮಾಡಿ ಕೊಟ್ಟ ಮೇಲೆ ಪಾರಿಸ್ ಪಟ್ಣದ ಬೀದಿಯಲ್ಲಿ ತನಗೆ ಎದುರಿಯಾಗಿದ್ದವನನ್ನು ಕೊಲೆ ಮಾಡಿಸಿದನು. ಈ ಮಹಾ ಪಾತಕವನ್ನು ಕಂಡು ಕೊಲ್ಲಿಲ್ಪಟ್ಟ ಪ್ರಭುವಿನ ಕಕ್ಷಿಗಾರರು ರೌದ್ರವುಳ್ಳವರಾದದರಿಂದ ದೇಶವೆಲ್ಲಿಯೂ ಉಭಯ ಕಕ್ಷಿಗಾರರು ಕೋಪದ ಉರಿಗೊಂಡು ಒಬ್ಬರ ಮೇಲೆ ಒಬ್ಬರು ಬಿದ್ದರು. ಹೀಗೆ ದ್ರೋಹ ಮಾಡಿದವನ ಕಕ್ಷಿಗಾರರಿಗೆ (Burgundians) ಬರ್ಗುಂಡಿಯರೆಂದು ಹೆಸರು. ಕೊಲ್ಲಿಲ್ಪಟ್ಟ ಓರ್ಲೀನ್‍ಸ್ ಪ್ರಭುವಿನ ಮಗನ ಕಡೆಯ ಜನರಿಗೆ (Armagnacs) ಆರ್ಮಗ್‍ನಕ್ಸ್ ಎಂದು ಹೆಸರು.

ಫ್ರಾನ್‍ಸ್ ದೇಶದಲ್ಲಿ ಈ ವಿಧವಾದ ಭೇದ ಉಂಟಾಗಿರುವದನ್ನು ಕಂಡು ಇಂಗ್ಲಿಷ್ ಅರಸನು ಅತ್ಯಾಶೆಯಿಂದ ಮರುಳಾಗಿ, ಮುಂಚೆ ಮೂರನೇ ಎದ್ವರ್ದನು ಫ್ರಾನ್‍ಸ್ ರಾಜ್ಯವು ತನಗೆ ಪಿತುರಾರ್ಜಿತ ಸ್ವಾಸ್ಥ್ಯವಾಗಿ ಸಲ್ಲ ಬೇಕೆಂದು ವ್ಯಾಜ್ಯವಾಡಿದ್ದರಿಂದ ಅವನ ಮಾರ್ಗವಾಗಿ ಈಗ ಅದು ತನಗೂ ಸಲ್ಲ ಬೇಕೆಂದು ವ್ಯಾಜ್ಯವಾಡ ಪ್ರಾರಂಭಿಸಿದನು. ಫ್ರಾನ್‍ಸರು ರಾಜಿ ಮಾಡ ನೋಡಿದರು. ಹೆನ್ರಿ ಅರಸನು ಅಧಿಕವಾಗಿ ಕೇಳಿದಕ್ಕೆ ಅವರು ಸಮ್ಮತಿಸದೆ ಹೋದದ್ದರಿಂದ ಸಮಾಧಾನದ ಒಡಂಬಡಿಕೆ ಮಾಡಲ್ಪಡಲಿಲ್ಲ. ಅಷ್ಟರೊಳಗೆ (Southampton) ಸೌತಾಂಪ್ಟನ್ ಎಂಬ ಊರಿನ ಬಳಿಯ ದೊಡ್ಡ ಸೈನ್ಯವು ಕೂಡಿಸಲ್ಪಟ್ಟಿತು. ಮತ್ತು ಇಂಗ್ಲಾಂಡರ ಸೈನ್ಯದ ವೀರರೂ ಶ್ರೇಷ್ಠರಾಹುತವೀರರೂ ಅರಸನು ನಿಲ್ಲಿಸಿದ ಧ್ವಜಸ್ತಂಭದ ಬಳಿಗೆ ಹೋಗಿ, ಯಾವಾಗಲೂ ತಮ್ಮ ಜಾತಿಯವರಿಗೆ ವೈರಿಗಳಾಗಿರುವ ಫ್ರಾನ್‍ಸರ ಸಂಗಡ ಯುದ್ಧ ಮಾಡ ಬೇಕೆಂದು, ವೀರಾವೇಶದಿಂದ ಕುದಿಯುತ್ತಿದ್ದರು. ಹಾಗಿದ್ದಾಗ್ಯೂ ಆ ವೇಳೆಯಲ್ಲಿ ಕೆಲವು ಮುಖ್ಯವಾದ ಪ್ರಭುಗಳು ಅರಸನಿಗೆ ವಿರೋಧವಾಗಿ ದುರಾಲೋಚನೆ ಮಾಡಿ ಕೊಂಡರು. ಇವರಲ್ಲಿ (Cambridge) ಕೆಂಬ್ರಿಜ್ ಪಟ್ಣದ ಪ್ರಭುವಾದವನು ಮೊದಲಿನವನಾಗಿದ್ದನು. ಆ ದ್ರೋಹಿಗಳು ಮುಂಚೆ ಹೇಳಿದ (March) ಮಾರ್ಚ್ ಊರಿನ ಪ್ರಭುವನ್ನು ಅರಸನಾಗ ಮಾಡ ಬೇಕೆಂದಿದ್ದರು. ಅವರ ನೆನಪು ಅವನಿಗೆ ತಿಳಿಯಲಿಲ್ಲ. ಆದಾಗ್ಯೂ ಅವರ ಮೋಸಕೃತ್ಯ ಬೈಲಾಯಿತು. ಮತ್ತು ಕಲಹಕ್ಕೆ ಮುಖ್ಯಸ್ಥರು ಹಿ

ಡಿಯಲ್ಪಟ್ಟು ಆಗ್ನೆ ಹೊಂದಿದರು. ತರುವಾಯ ಅರಸನು ಫ್ರಾನ್ಸ್ ದೇಶಕ್ಕೆ ಹೋಗ ಹಡಗ ಹತ್ತುವದಕ್ಕೆ ತಡೆ ಇಲ್ಲ. ಅವನು ತೊಡಗಿದ ಕಾರ್ಯ ನ್ಯಾಯವಾದದಲ್ಲ. ಆದಾಗ್ಯೂ ಅವನು ತನ್ನ ಮನಸ್ಸಿನಲ್ಲಿ ಅದು ನ್ಯಾಯವೆಂದು ಸಂದೇಹವಿಲ್ಲದೆ ನೆನಸಿ ಕೊಂಡನು. ಹೀಗೆ ಗರ್ವಾಂಧಕಾರದಿಂದ ಹಿತಾಹಿತ ತಿಳಿಯದವನಂತೆ ಅನ್ಯಾಯವಾಗಿ ಯುದ್ಧ ಮಾಡ ಯತ್ನಯಿಸಿದನು.

ಹೆನ್ರಿ ಅರಸನು (Harfleur) ಹಾರ್ಫ್‌ಲೂರ್ ಪಟ್ಟದ ಬಳಿಯ ಹಡಗದಿಂದ ಇಳಿದು ಆ ಊರಿಗೆ ಮುತ್ತಿಗೆ ಹಾಕಿದನು. ಇಂಗ್ಲಿಷ್ ಸೈನ್ಯವು ಆ ಕೋಟೆಯ ಮೇಲೆ ಬಹು ಬಲವಾಗಿ ತಗಲಿದ್ದರಿಂದ ಆ ಕೋಟೆಯ ಕಾಕ್ಯದವರು ಪೌರುಷವಾಗಿ ಅದನ್ನು ಕಾದು ಕೊಂಡರು. ಆದಾಗ್ಯೂ ಸಹಾಯವಿಲ್ಲದರಿಂದ ಅದನ್ನು ಅರಸನಿಗೆ ಒಪ್ಪಿಸ ಬೇಕಾಯಿತು. ಹಾಗಿದ್ದಾಗ್ಯೂ ಇಂಗ್ಲಿಷ್ ಸೈನ್ಯದಲ್ಲಿ ಅನೇಕರು ರೋಗದಲ್ಲಿ ಬಿದ್ದದರಿಂದ ಹೆನ್ರಿಯು ಮುಂದಕ್ಕೆ ಹೋಗಲಾರದೆ ಇಂಗ್ಲಾಂದಿಗೆ ತಿರಿಗಿ ಹೋಗ ತಕ್ಕ ಅವಸ್ಯವಾಯಿತು. ಆದದರಿಂದ ಆ ಕೋಟೆಯನ್ನು ಹಿಡಿದದರಿಂದ ಪ್ರಯೋಜನವಿಲ್ಲ. ಆದಾಗ್ಯೂ ಬಂದ ಮಾರ್ಗವಾಗಿ ತಿರಿಗಿ ಹೋದರೆ ಅಪಹಾಸ್ಯಕ್ಕೆ ಗುರಿಯಾಗುವದು ಆದದರಿಂದ (Harfleur) ಹಾರ್ಫ್‌ಲೂರಿಗೆ ನೂರು ಮೈಲು ದೂರದಲ್ಲಿರುವ (Calais) ಕಲೇ ಪಟ್ಟದ ಮಟ್ಟಿಗೂ ಸಾಲ್ಗಟ್ಟಿ ನಡಿಧು ಅಲ್ಲಿ ಹಡಗ ಹತ್ತುವ ಎಂದೂ, ವೈರಿಗಳು ಅಡ್ಡಗಟ್ಟುವದಕ್ಕೆ ಬಂದರೆ ನಮ್ಮ ಸೈನ್ಯವು ಹಿಂತೆಗಿಯದ ಮಹಾ ವೀರ ಶೂರರಾದದರಿಂದ ಆ ಶತ್ರುಗಳನ್ನು ಸುಲಭವಾಗಿ ಓಡಿಸಿ ಬಿಡುವೆವು ಎಂದೂ ಆಲೋಚಿಸಿ, ಹಾಗೆಯೇ ತಮ್ಮ ಸೈನ್ಯವನ್ನು ನಡಿಸಿ ಕೊಂಡು ಹೋದರು.

ಹೋಗುವಾಗ ಸ್ವಲ್ಪ ದೂರ ಮಟ್ಟಿಗೂ ಒಬ್ಬ ಶತ್ರುವಾದರೂ ಕಾಣಿಸಲಿಲ್ಲ. ಆದಾಗ್ಯೂ ಮಾರ್ಗದಲ್ಲಿ (Somme) ಸೋಮ್ ಎಂಬ ನದಿ ಇತ್ತು. ಆ ನದಿಯ ಘಡದಲ್ಲಿ ಫ್ರಾನ್ಸರ ಬಲವಾದ ರಾಣುವೆಯೂ ಶ್ರೇಷ್ಠವೀರರ ಗುಂಪುಗಳೂ ಎಲ್ಲಾ ತೆರಳಿ ಬಂದು, ಮೂರನೇ

## ಸಂಧಿ 11. ಫ್ರಾನ್ಸರ ಸಂಗಡ ಯುದ್ಧ.

ಎದ್ವರ್ಡನು ಮುಂಚೆ ಹಾಗೆಯೆ ಸಂಕಟ ಪಟ್ಟು ಆ ನದಿಯನ್ನು ದಾಟಿದ ರೇವಿನಲ್ಲಿಯೇ ಇವನು ಸಹ ಇಳಿಯುವದಕ್ಕೆ ನೋಡಿದ ಮಾತ್ರದಲ್ಲಿ ಒಂದೊಂದು ರೇವಿನಲ್ಲಿಯೂ ಸೇತುವೆಯಲ್ಲಿಯೂ ನೊಣ ಮುತ್ತಿದ ಮೇರೆಗೆ ಶತ್ರುಸೈನ್ಯವು ಕೂಡಿ ಕೊಂಡಿರುವದನ್ನು ಕಂಡನು. ಅದದರಿಂದ ಆ ನದಿಯನ್ನು ದಾಟಿ ಹೋಗುವದಕ್ಕೆ ಯತ್ನವಿಲ್ಲವೆಂದು ಕಂಡು ಥಡದ ಅಂಚಿನಲ್ಲಿಯೇ ಹೊರಟು ಅದರ ಮೂಲಬುಗ್ಗೆಯನ್ನು ಸುತ್ತಿಕೊಂಡು ಬರ ಬಹುದೆಂದು ಯೋಚಿಸಿ, ಸ್ವಲ್ಪ ದೂರ ಹೋದನು. ಹಾಗೆಯೇ ಬಹಳ ದೂರ ಹೋಗಿ ಶತ್ರುಗಳ ದೇಶದ ಮಧ್ಯೆ ಹಾದು ಹೋಗ ಬೇಕೆಂದು ನಿಶ್ಚಯಿಸಿ ಇರುವ ಕಾಲದಲ್ಲಿ ಶತ್ರುಗಳಿಗೆ ತಿಳಿಯದ ಒಂದು ರೇವನ್ನು ಕಂಡು ಕೊಂಡು ಆ ಮಾರ್ಗವಾಗಿ ದಾಟಿ ಹೋದನು.

ಒಂದು ಲಕ್ಷ ಮಂದಿ ರಾಣುವೆಯವರಿಗೆ ಅಧಿಕ ಸಂಖ್ಯೆಯುಳ್ಳದ್ದಾಗಿಯೂ, ಫ್ರಾನ್ಸ್ ದೇಶದಲ್ಲಿರುವ ಮುಖ್ಯ ವೀರಶ್ರೇಷ್ಠರಾದ ವಿವೇಕವೂ ಪರಾಕ್ರಮವೂ ಉಳ್ಳವರಿಂದ ನಡಿಸಲ್ಪಟ್ಟದ್ದಾಗಿಯೂ ಇರುವ ದೊಡ್ಡ ಸೈನ್ಯವು (Calais) ಕಲೇ ಊರಿಗೂ, ಇಂಗ್ಲಿಷ್ ಸೈನ್ಯವು ದಾಟಿದ ಸ್ಥಳಕ್ಕೂ ನಡುವೆ ದಂಡಿಳಿದು ಅವರನ್ನು ಎದುರಿಸ ಕಾದು ಕೊಂಡಿದ್ದರು. ಇಂಗ್ಲಿಷಿನವರ ಆ ಚಿಕ್ಕ ಸೈನ್ಯವು ಯುದ್ಧ ಮಾಡಿ ಫ್ರಾನ್ಸರನ್ನು ಓಡಿಸಿ ಬಿಡುವದರಿಂದಲೇ ಹೊರ್ತು ತಪ್ಪಿಸಿ ಕೊಳ್ಳುವದಕ್ಕೆ ಬೇರೆ ವಿಧವಿಲ್ಲವೆಂದು ಕಂಡು ಯುದ್ಧ ಮಾಡ ಧೈರ್ಯದಿಂದ ಯತ್ನ ಮಾಡಿ ಕೊಂಡು, ಒಕ್ಟೋಬರ್ ತಿಂಗಳಿನ 24ನೇ ತಾರೀಖು ಸಾಯಂಕಾಲದಲ್ಲಿ (Agincourt) ಅಜಿನ್ಕೋರ್ಟ್ ಎಂಬ ಸ್ಥಳದ ಹತ್ತರ ದಂಡಿಳಿದಿದ್ದ ಫ್ರಾನ್ಸರ ಸೈನ್ಯಕ್ಕೆ ಎದುರಾಗಿ ಬಂದು ಇಳಿದರು. ಆ ರಾತ್ರಿ ಎಲ್ಲಾ ಆ ಎರಡು ಸೈನ್ಯಗಳೂ ಒಂದಕ್ಕೊಂದು ಎದುರುಮುಖವಾಗಿದ್ದು, ಯಾವಾಗ ಉದಯವಾಗುವದೋ ಎಂದು ಕಾದಿದ್ದರು. ಫ್ರಾನ್ಸರು ನಮ್ಮ ಮಹಾ ಸೈನ್ಯದಿಂದ ಶತ್ರುಗಳನ್ನು ನಿರ್ಮೂಲ ಮಾಡುವೆವು, "ಒರಳಲ್ಲಿ ಶಿಕ್ಕಿ ಕೊಂಡದ್ದು ಒನಿಕೆಯ ಪೆಟ್ಟಿಗೆ ತಪ್ಪುವದೋ"? ಎಂದು ಹಿಗ್ಗಿ ಉಲ್ಲಾಸ ಪಡುತ್ತಿದ್ದರು. ಇಂಗ್ಲಿಷಿನವರು, ನಾಳೇ ದಿವಸ ರಣರಂಗದಲ್ಲಿ ಶತ್ರುಗಳನ್ನು ಜಯಿಸುವದೊಂದು, ಅಥವಾ ಯುದ್ಧ ಮಾಡಿದ ಸ್ಥಳದಲ್ಲಿ ನಾವೆಲ್ಲರೂ ಮಡಿ

ದು ಹೋಗುವದೊಂದು ನಿಶ್ಚಯವೆಂದು ತೀರ್ಮಾನಿಸಿ ಕೊಂಡು ಮೌನವಾಗಿದ್ದರು.

ಬೆಳಗಾದಾಗಲೇ ಎರಡು ಸೈನ್ಯಗಳೂ ಸನ್ನಾಹವಾಗಿ ನಿಂತವು. ಫ್ರಾನ್ಸರು ಮೂರು ದಂಡುಗಳಾಗಿಯೂ ಇಂಗ್ಲಿಷರು ಒಂದೇ ಐಕ್ಯವಾದ ದಂಡಾಗಿಯೂ ಸಾಲ್ಗಟ್ಟಿ ನಿಂತರು. ಇಂಗ್ಲಿಷರ ಸೈನ್ಯಕ್ಕೆ ಉಭಯ ಪಾರ್ಶ್ವಗಳಲ್ಲಿಯೂ ದಟ್ಟವಾದ ಕಾಡು ಇದ್ದದರಿಂದ ಶತ್ರುಗಳು ಇವರ ಮುಂದಿನ ಸಾಲನ್ನು ತಾಕ ಬೇಕಾಗಿತ್ತು. ಹಿಂದಗಡೆಯಲ್ಲಿ ಒಂದು ಚಿಕ್ಕ ಗ್ರಾಮವಿತ್ತು. ಅದರಲ್ಲಿ ಇವರ ಕುದುರೆಗಳೂ ಸಾಮಾನುಗಳೂ ಇರಿಸಲ್ಪಟ್ಟಿದ್ದವು. ಅರಸನು ತನ್ನ ಸೈನ್ಯವೆಲ್ಲಾ ಸಾಲ್ಗಟ್ಟಿದ ತರುವಾಯ ಬಿಳೀ ಬಣ್ಣವುಳ್ಳ ಯುದ್ಧಕುದುರೆಯ ಮೇಲೆ ಏರಿ, ರತ್ನಖಚಿತವಾದ ಚಂಗಾರದ ಕಿರೀಟ ಸಹಿತವಾದ ಬಹು ಪ್ರಕಾಶವುಳ್ಳ ಶಿರಸ್ತ್ರಾಣವನ್ನು ಧರಿಸಿ ಕೊಂಡು ಸಾಲುಸಾಲಾಗಿ ಹೋಗಿ, ತನ್ನ ಯುದ್ಧವೀರರನ್ನು ಉತ್ಸಾಹ ಪಡಿಸಿ, ಅವರು ಪರಾಕ್ರಮವಾಗಿ ಯುದ್ಧ ಮಾಡಿ ಶತ್ರುಗಳನ್ನು ಜಯಿಸ ಬೇಕೆಂದು, ತನ್ಮುಖದಿಂದ ಅವರನ್ನು ಕಂಡು ಮಾತಾಡಿ ಬಂದನು. ಸ್ವಲ್ಪ ಹೊತ್ತು ಎರಡು ಸೈನ್ಯಗಳೂ ಕದಲದೆ ನಿಂತವು. ಹ್ಯಾಗಂದರೆ, ಇಂಗ್ಲಾಂಡ್ ಅರಸನು ತನ್ನ ದಂಡಿಳಿದಿದ್ದ ಅನುಕೂಲವಾದ ನೆಲೆಯನ್ನು ಬಿಟ್ಟು ಹೋಗ ಮನಸ್ಸಾಗಿರಲಿಲ್ಲ. ಫ್ರಾನ್ಸರು ಸಹ ಮುಂದಕ್ಕೆ ಹೋಗ ಕೂಡದೆಂದು ತಮ್ಮ ದಳಕರ್ತರಿಂದ ನಿಲ್ಲಿಸಲ್ಪಟ್ಟಿದ್ದರು. ತರುವಾಯ ಹೆನ್ರಿ ಅರಸನು ಮಾಡಿದ ಒಳ್ಳೇ ಉಪಾಯದಿಂದ ಯುದ್ಧಕ್ಕೆ ಆರಂಭವಾಯಿತು. ಹ್ಯಾಗಂದರೆ, ಅವನು ತನ್ನ ಯುದ್ಧವೀರರಿಗೆ ಮುಂದಕ್ಕೆ ಹೋಗ ಅಪ್ಪಣೆ ಮಾಡಿ, ಫ್ರಾನ್ಸರು ಬಹು ವೇಗವಾಗಿ ಅವರ ಮೇಲೆ ಹಾದ ಕೂಡಲೆ ಮುಂದಕ್ಕೆ ಹೋದವರನ್ನು ಹಿಂದಕ್ಕೆ ಬರ ಮಾಡಿದನು. ಫ್ರಾನ್ಸರ ದಳಕರ್ತರು ಸಹ ತಮ್ಮ ಸೈನ್ಯವನ್ನು ಹಿಂದಕ್ಕೆ ಬರ ಮಾಡ ಪ್ರಯತ್ನ ಮಾಡಿದಾಗ್ಯೂ ಅವರನ್ನು ನಿಲ್ಲಿಸ ಕೂಡಲಿಲ್ಲ. ಆದದರಿಂದ ಇಂಗ್ಲಿಷ್ ಸೈನ್ಯವೆಲ್ಲಾ ತಾವು ಮುಂಚೆ ನಿಂತಿದ್ದ ವಸತಿಯಾದ ಸ್ಥಳದ ಮಟ್ಟಿಗೂ ಮೆಲ್ಲಮೆಲ್ಲಗೆ ಮುಂದಿಟ್ಟ ಹೆಜ್ಜೆಯನ್ನು ಹಿಂದಕ್ಕಿಟ್ಟು ಶತ್ರುಗಳ ಬರುವಿಕೆಗೆ ಕಾದು ಕೊಂಡಿದ್ದರು. ತರುವಾಯ ಒಟ್ಟೊ

ಬ್ಬನು ಒಂದೊಂದು ಮರವನ್ನು ಕೈಯಲ್ಲಿ ಹಿಡಿದು, ಶತ್ರುಗಳು ಸಮೀಪವಾಗಿ ಓಡಿ ಬರುವಾಗ, ಅದನ್ನು ನೆಲದಲ್ಲಿ ನಾಟಿ ಅದರ ಹಿಂದೆ ನಿಂತು ಅಂಬುಗಳನ್ನು ನಾರಿಗೆ ಹೂಡಿದರು. ಫ್ರಾನ್‌ಸರ ರಾಹುತರು ಆ ಬಲವಾದ ಆವರಣವನ್ನು ದಾಟ ಯತ್ನಯಿಸಿದಾಗ ಆ ಮರಗಳಿಂದ ಅವರು ಹತ್ತಿದ ಕುದುರೆಗಳಲ್ಲಿ ಕೆಲವು ಘಾಯ ಪಟ್ಟವು. ಕೆಲವು ಸತ್ತು ಹೋದವು. ಆ ಸಮಯದಲ್ಲಿ ಇಂಗ್ಲಿಷ್ ಬಿಲ್ಲುಗಾರರು ಎಷ್ಟು ಮಾತ್ರವೂ ಗುರಿ ತಪ್ಪದೆ ಅಂಬಿನ ಮಳೆ ಗರಿದು ಎದುರಿಗಳನ್ನು ಮಡಿಯ ಮಾಡಿದರು. ಆ ಪ್ರಕಾರ ಫ್ರಾನ್‌ಸರು ತಿರಿಗಿ ತಿರಿಗಿ ತಾಕಿದಾಗ, ನೆಟ್ಟ ಮರಗಳಿಂದಲೂ ಕ್ರೂರವಾದ ಅಂಬುಗಳಿಂದಲೂ ಇಂಗ್ಲಿಷರು ಅವರನ್ನು ಹಿಂಜರಿಯ ಮಾಡಿದರು. ಫ್ರಾನ್‌ಸರು ಅವರನ್ನು ತಾಕುವದಕ್ಕೆ ಬೇರೆ ಮಾರ್ಗವಿಲ್ಲಿ. ಆದದರಿಂದ ಅವರ ಸೈನ್ಯದ ಬಾಹುಳ್ಯದಿಂದ ಅವರಿಗೆ ಉಪಯೋಗವಿಲ್ಲದೆ ಹೋಯಿತು.

ಹೆನ್ರಿ ಅರಸನು ಅಂದು ದಟ್ಟವಾದ ಯುದ್ಧಮುಖದಲ್ಲಿ ಹೋರಾಡಿದನು. ಅದರಲ್ಲಿ ಫ್ರಾನ್‌ಸರಾದ ರಾಹುತವೀರಶ್ರೇಷ್ಠರು ನಾವು ಇಂಗ್ಲಾಂಡ್ ಅರಸನೊಡನೆ ಯುದ್ಧ ಮಾಡಿ ಅವನನ್ನು ಜಯಿಸುವೆವೇ ಹೊರ್ತು ಬೇರೊಬ್ಬನ ಸಂಗಡಲೂ ಯುದ್ಧ ಮಾಡುವದಿಲ್ಲವೆಂದು ಶಪಥ ಮಾಡಿ ಕೊಂಡದ್ದರಿಂದ ಆ ಅರಸನಿಗೆ ಬಹಳ ಅಪಾಯ ಸಂಭವಿಸಿತು. ಆ ಸಮಯದಲ್ಲಿ (David Gam) ದಾವೀದು ಗಾಮ್ ಎಂಬವನೂ ಇನ್ನೂ ಇಬ್ಬರು ವೇಲ್ಸ್ ನಾಡಿನವರೂ ಬಹು ಶೌರ್ಯದಿಂದ ಯುದ್ಧ ಮಾಡಿ ಅರಸನನ್ನು ಕಾಪಾಡಿದರು. ಅರಸನು ತಪ್ಪಿಸಿ ಕೊಂಡನು. ಮಹಾ ಶೂರರಾದ ಆ ಮೂವರೂ ರಣಾಗ್ರದಲ್ಲಿ ಸತ್ತು ಹೋದರು. ಆ ನಿಜಸ್ತರು ಘಾಯ ಪಟ್ಟು ಕೊರೆಪ್ರಾಣದಲ್ಲಿರುವಾಗ ರಣರಂಗದಲ್ಲಿ ಅವರಿಗೆ ಅರಸನು ರಾಹುತಶ್ರೇಷ್ಠವೀರರೆಂಬ ಪಟ್ಟದ ಹೆಸರು ಕೊಟ್ಟನು.

ಹೀಗೆ ಬಹಳ ಹೊತ್ತು ಹೋರಾಡಿದ ತರುವಾಯ ಫ್ರಾನ್‌ಸರ ಸೈನ್ಯದ ಮುಂದಿನ ಸಾಲು ಹಿಂಜರಿದು ಹೋಯಿತು. ಇಂಗ್ಲಾಂದರು ಜಯಶೀಲರಾಗಿ ಅವರ ಬೆನ್ನಟ್ಟಿ ಹೊಡೆದು ಓಡಿಸುವಾಗ ಅವರಿಗೂ ಫ್ರಾನ್‌ಸರ ಮುಖ್ಯ ರಾಣುವೆಗೂ ಘೋರ ಯುದ್ಧ ಉಂಟಾಯಿತು. ಆ

## ಸಂಧಿ 11. ಅರಸನು ಇಂಗ್ಲಾಂದಿಗೆ ತಿರುಗಿದ್ದು.

ಘೋರ ಯುದ್ಧದಲ್ಲಿ ಸತ್ತವರ ಹೆಣಗಳು ಪುರುಷಪ್ರಮಾಣಕ್ಕೆ ಸರಿಯಾಗಿ ರಾಶಿರಾಶಿಯಾಗಿ ಉದ್ದಕ್ಕೂ ಬಿದ್ದು ಇದ್ದದರಿಂದ ಇಂಗ್ಲಿಷ್ ಬಿಲ್ಲುಗಾರರು ಅವುಗಳ ಮರೆಯಲ್ಲಿ ನಿಂತು ಕೊಂಡು ಅಂಬುಗಳನ್ನು ಎಸೆದರು. ತರುವಾಯ ಇಂಗ್ಲಿಷ್ ರಾಹುತವೀರರಾದ ಮುಖ್ಯ ದಳವು ಶತ್ರುಗಳ ಮೇಲೆ ಬಿದ್ದು ಅವರ ಮುಖ್ಯ ರಾಣುವೆಯನ್ನೂ ಎಲ್ಲಾ ಸೈನ್ಯವನ್ನೂ ಚದರ ಬಡಿದರು.

ಜಯ ಹೊಂದಿದವರಾದ ಇಂಗ್ಲಿಷ್ ಸೈನ್ಯದವರು ಆ ಭಯಂಕರವಾದ ಯುದ್ಧದಲ್ಲಿ ದಣಿದು ಹೋದದರಿಂದ ಬೆನ್ನು ಕೊಟ್ಟು ಓಡಿದ ಫ್ರಾನ್ಸರನ್ನು ಹಿಂತೊಡರಿ ಹೋಗುವದಕ್ಕೆ ಶಕ್ತಿ ಇಲ್ಲದವರಾಗಿದ್ದರು. ಮತ್ತು ಫ್ರಾನ್ಸರ ಸೈನ್ಯವು ಸೂರ್ಯನನ್ನು ಕಂಡ ಮಂಜಿನಂತೆ ಚದರಿ ಹೋದದರಿಂದ (Calais) ಕಲೇ ಪಟ್ಣಕ್ಕೆ ಹೋಗುವ ದಾರಿಯಲ್ಲಿ ಅಟಂಕವೇನೂ ಇರಲಿಲ್ಲ. ಆದದರಿಂದ ಬೆನ್ನಟ್ಟಿ ಕೊಂಡು ಹೋಗುವದು ಏನೂ ಪ್ರಯೋಜನವಿಲ್ಲ. ಇಂಗ್ಲಾಂದರು ಆ ದಿವಸ ಶೆರೆ ಹಿಡಿದವರ ಸಂಖ್ಯೆಯು ಬಹಳ ದೊಡ್ಡದಾಗಿದ್ದದರಿಂದ ಆ ಶೆರೆಯವರನ್ನು ಕಾಯುವದಕ್ಕೆ ಅವರ ದಂಡು ಸಾಲದೆ ಇತ್ತು. ಆದಾಗ್ಯೂ ಅರಸನು ಅವರನ್ನು ಸಂಹಾರ ಮಾಡದೆ ಕಾಪಾಡ ಆಜ್ಞಾಪಿಸಿದನು. ಹಾಗಿದ್ದಾಗ್ಯೂ ಯುದ್ಧ ಮುಗಿಯುವದಕ್ಕೆ ಮುಂಚೆಯೇ ಇಂಗ್ಲಿಷ್ ಸೈನ್ಯದ ಹಿಂದಗಡೆ ಇದ್ದ ಸಣ್ಣ ಗ್ರಾಮದ ಮೇಲೆ ಶತ್ರುಗಳು ಬಿದ್ದರೆಂದು ಅರಸನು ಕೇಳಿ, ದೊರಕಿದ್ದ ಶೆರೆಯವರನ್ನೆಲ್ಲಾ ಸಂಹಾರ ಮಾಡ ಕಟ್ಟಳೆ ಕೊಟ್ಟನು. ತರುವಾಯ ಹಾಗೆ ಬಿದ್ದವರು ರಾಣುವೆಯವರಲ್ಲ; ಆಯುಧಪಾಣಿಗಳಾದ ಕೆಲವು ರೈತರೆಂದು ತಿಳಿದು ಅವರನ್ನು ಸುಲಭವಾಗಿ ಬೆನ್ನು ಕೊಟ್ಟು ಓಡ ಮಾಡಿ, ಸಂಗಡಲೇ ಸಂಹಾರವನ್ನು ನಿಲ್ಲಿಸ ಬೇಕೆಂದು ಅಪ್ಪಣೆ ಮಾಡಿದನು.

ಇದರ ತರುವಾಯ ಹೆನ್ರಿಯು ತನ್ನ ಸೈನ್ಯದವರು ವಿಶ್ರಾಂತಿ ಹೊಂದಲಿಕ್ಕಾಗಿ ಸ್ವಲ್ಪ ಕಾಲ ಆ ಸ್ಥಳದಲ್ಲಿಯೇ ತಂಗಿದ್ದು ಆ ಮೇಲೆ ಎದುರಿಸುವವರಿಲ್ಲದೆ ಕಲೇ ಊರಿಗೆ ಹೋಗಿ, ಸ್ವಲ್ಪ ಕಾಲದ ತರುವಾಯ ತನ್ನ ಸೈನ್ಯದವರು ಅರ್ಭಟಿಸಿ ಜಯಹಾಡುಗಳನ್ನು ಹಾಡುತ್ತಾ ಲಂಡನ್

ಪಟ್ಣ ಪ್ರವೇಶ ಮಾಡಿದನು. ಆಗ ಅವನು (Agincourt) ಅಜಿನ್ ಕೋರ್ತ್ತು ಊರಿನ ಯುದ್ಧದಲ್ಲಿ ಜಯ ಹೊಂದಿದ್ದರಿಂದ ಫ್ರಾನ್ಸ್ ಶೀಮೆಯನ್ನೆಲ್ಲಾ ವಶ ಮಾಡಿ ಕೊಳ್ಳ ಅದೇ ಸಮಯವಾಗಿದ್ದಾಗ್ಯೂ ಅವನು ಅದರ ಪ್ರಯತ್ನವೇನೂ ಮಾಡದೆ ಎರಡು ವರುಷದ ಮಟ್ಟಿಗೂ ಸುಮ್ಮನೆ ಇದ್ದು ಬಿಟ್ಟನು.

ಇದರ ಮಧ್ಯೆ ಫ್ರಾನ್ಸ್ ದೇಶದಲ್ಲಿ ಉಂಟಾದ ಕುಲವಿರೋಧಗಳು ದಿನದಿನಕ್ಕೆ ಹೆಚ್ಚುತ್ತಾ ಬಂದವು. ಆ ದೇಶದ ರಾಣಿಯು ತನ್ನ ಜ್ಯೇಷ್ಠ ಪುತ್ರನಾದ ಪಟ್ಟದ ಧೊರೆಗೆ ಪ್ರತಿಕಕ್ಷಿಯಾಗಿ (Burgundy) ಬರ್ಗುಂಡಿ ನಾಡಿನ ಅಧಿಪತಿಯು ಕಕ್ಷಿಯವರೊಡನೆ ಶೇರಿ ಕೊಂಡಳು. ಹೀಗೆ ತಾಯಿಗೂ ಮಗನಿಗೂ ಅನ್ಯಾಯವಾಗಿ ಹಗೆಯುಂಟಾಯಿತು. ಹೀಗಿರುವಲ್ಲಿ ಉಭಯ ಪಕ್ಷದವರೂ ಇಂಗ್ಲಾಂಡ್ ಅರಸನ ಬಳಿಯಲ್ಲಿ ಸಹಾಯ ಹುಡುಕಿದರು. ತರುವಾಯ ಅವನು (Normandy) ನೊರ್ಮಂಡಿ ನಾಡಿನಲ್ಲಿ ದೊಡ್ಡ ಸೈನ್ಯವನ್ನು ನಡಿಸಿ ಕೊಂಡು ಹೋದಾಗ ಅವರು ಸಂಗಡಲೇ ಸಮಾಧಾನದ ಒಡಂಬಡಿಕೆ ಮಾಡಿ ಕೊಂಡು ಅವನನ್ನು ಎದುರಿಸುವದಕ್ಕೆ ಒಂದಾಗಿ ಕೂಡಿ ಬಂದರು. ಆದಾಗ್ಯೂ ಅವರು ರಾಜಿಯಾದದ್ದು ಯಥಾರ್ಥವಲ್ಲ. ಬರ್ಗುಂಡಿ ನಾಡಧಿಪತಿಯು ಹಾಡೇ ಹಗಲಿನಲ್ಲಿ ಪಟ್ಟದ ಧೊರೆಯ ಸನ್ನಿಧಾನದಲ್ಲಿ ಕೊಲ್ಲಲ್ಪಟ್ಟದ್ದರಿಂದ ಎರಡು ಕಕ್ಷಿಯವರೂ ತಿರಿಗಿ ಬಹಿರಂಗವಾಗಿ ಯುದ್ಧ ಮಾಡ ಆರಂಭಿಸಿದರು.

ಬರ್ಗುಂಡಿ ನಾಡಧಿಪತಿಯು ಕೊಲ್ಲಲ್ಪಟ್ಟಾಗ ಆ ಪಟ್ಟಕ್ಕೆ ಬಂದ ಅವನ ಕುಮಾರನು ಇಂಗ್ಲಾಂಡ್ ಅರಸನ ಸಂಗಡ ಸಮಾಧಾನದ ಒಡಂಬಡಿಕೆ ಮಾಡಿದನು. ಅಷ್ಟರೊಳಗೆ ಇಂಗ್ಲಾಂಡ್ ಅರಸನು ಬರ್ಗುಂಡಿ ನಾಡಿನ ಕೆಲವು ಮುಖ್ಯ ಪಟ್ಣಗಳನ್ನು ಹಿಡಿದು ಕೊಂಡಿದ್ದನು. ಈ ಅಧಿಪತಿಗೂ ಅರಸನಿಗೂ ಉಂಟಾದ ಒಡಂಬಡಿಕೆಯಿಂದ ಇಂಗ್ಲಾಂಡ್ ಅರಸನು ಫ್ರಾನ್ಸ್ ಅರಸನ ಮಗಳಾದ (Catherine) ಕತ್ತರೀನ್ ಎಂಬವಳನ್ನು ಮದುವೆ ಮಾಡಿ ಕೊಳ್ಳುವಂತೆಯೂ, ಅವನು ಫ್ರಾನ್ಸ್ ರಾಜ್ಯಕ್ಕೆ ಸ್ವತಂತ್ರಗಾರನೆಂದು ಒಪ್ಪಿ ಕೊಳ್ಳುವಂತೆಯೂ ತೀರ್ಮಾನವಾಗಿತ್ತು. ಆ ಒಡಂಬಡಿಕೆಗೆ ಆ ಇಬ್ಬರೂ (Troyes) ತ್ರೋಯೆ ಎಂಬ ಊರಿನಲ್ಲಿ

ಕ್ಷೈಬರಹ ಹಾಕಿದರು. ಇದಲ್ಲದೆ ಅರಸನ ಎರಡನೇ ಸಹೋದರನಾದ (Bedford) ಬೆದ್ಫೋರ್ಡ್ ಪಟ್ಟದ ಪ್ರಭುವನ್ನು ಬರ್ಗುಂದಿ ನಾಡಿನ ಅಧಿಪತಿಯ ಸಹೋದರಿಗೆ ನೇಮಿಸಿದರು. ಫ್ರಾನ್ಸ್ ದೇಶದ ಅರಸನಾದ (Charles the Sixth) ಆರನೇ ಚಾರ್ಲ್ಸ್ ಎಂಬವನು ಈ ಒಡಂಬಡಿಕೆಗೆ ಸಮ್ಮತಿಸಿದನು. ಆದಾಗ್ಯೂ ಅವನು ಆ ಕಾಲದಲ್ಲಿ ವ್ಯಾಧಿಯಿಂದ ಬಹು ಕಷ್ಟ ಪಡುತ್ತಾ ಇದ್ದದರಿಂದ ಆ ಕಾರ್ಯವನ್ನಾಗಲಿ ಬೇರೆ ಯಾವ ವಿಷಯವನ್ನಾಗಲಿ ನೆಟ್ಟಗೆ ವಿಧಾನಿಸುವದಕ್ಕೆ ಶಕ್ತಿ ಇಲ್ಲದೆ ಇದ್ದನು.

ರೀಗೆ ಒಡಂಬಡಿಕೆ ಮಾಡಿದ ಸ್ವಲ್ಪ ಕಾಲದ ತರುವಾಯ ಹೆನ್ರಿಯು ಸತ್ತನು. ಹ್ಯಾಗಂದರೆ, ಫ್ರಾನ್ಸ್ ದೇಶದ ಪಟ್ಟದ ಧೊರೆಯ ಸಂಗಡ ಯುದ್ಧ ಮಾಡಿ ಜಯ ಹೊಂದಿದ ಸಮಯದಲ್ಲಿ ಅವನಿಗೆ ಕಠಿಣ ವ್ಯಾಧಿಯುಂಟಾಗಿ ಅಗೊಸ್ತ್ ತಿಂಗಳ 31ನೇ ತಾರೀಖಿನಲ್ಲಿ ಸತ್ತು ಹೋದನು.

ಆ ಅರಸನು ಮರಣ ಹೊಂದುವಾಗ್ಯೆ ಅವನ ಬಾಲಕನಾದ ಕುಮಾರನಿಗೆ ಒಂಬತ್ತು ತಿಂಗಳ ಪ್ರಾಯವಾಗಿತ್ತು. ಅವನೇ "ಆರನೇ ಹೆನ್ರಿ" ಎಂದು ಹೆಸರು ಹೊಂದಿ ಅರಸನಾದವನು. ಫ್ರಾನ್ಸ್ ದೇಶದ ಅರಸನು ತನ್ನ ಅಳಿಯನೂ ಬಲಶಾಲಿಯೂ ಆದ ಇಂಗ್ಲಾಂದ್ ಅರಸನು ಸತ್ತ ಎರಡು ತಿಂಗಳ ತರುವಾಯ ಸತ್ತು ಹೋದನು. ಆದದರಿಂದ ಬರ್ಗುಂದಿಯರು ಹೆನ್ರಿ ಎಂಬ ಆ ಮಗುವನ್ನು ಫ್ರಾನ್ಸ್ ದೇಶದ ಅರಸನೆಂದು ಪ್ರಸಿದ್ಧ ಮಾಡಿದರು.

ಆದಾಗ್ಯೂ ಫ್ರಾನ್ಸಿನ ಪಟ್ಟದ ಧೊರೆಯು ತನಗೆ ಅರಸುತನವು ಏನೂ ಸಂದೇಹವಿಲ್ಲದೆ ದೊರಕ ಬೇಕೆಂದು ದೃಢ ಪಡಿಸಿ (Poictiers) ಪೋಯಿಕ್ಟಿಯರ್ಸ್ ಪಟ್ಟದಲ್ಲಿ ಕಿರೀಟ ಧರಿಸಿ ಕೊಂಡನು. ಐದನೇ ಹೆನ್ರಿ ಎಂಬವನ ಮೂರನೇ ಸಹೋದರನಾದ (Duke of Gloucester) ಗ್ಲೋಸ್ತರ್ ಪಟ್ಟದ ಪ್ರಭುವು ಇಂಗ್ಲಾಂದ್ ರಾಜ್ಯಕ್ಕೆ ಪರಿಪಾಲಕನೆಂದು ನೇಮಿಸಲ್ಪಟ್ಟನು. ಅವನಿಗೆ ಸಹಾಯವಾಗಿ ಒಂದು ಆಲೋಚನೇ ಸಂಘವು ಸ್ಥಾಪಿಸಲ್ಪಟ್ಟಿತು. ಇದಲ್ಲದೆ (Duke of Bedford) ಬೆದ್ಫೋರ್ಡ್

## ಸಂಧಿ 11. ಫ್ರಾನ್ಸಿನ ಸಂಗಡ ಯುದ್ಧ.

ಪಟ್ಟದ ಪ್ರಭುವು ಇಂಗ್ಲಿಷ್ ರಾಜುವಿಗೆ ಸೈನ್ಯಾಧಿಪತಿಯಾಗಿಯೂ ಫ್ರಾನ್ಸ್ ದೇಶದಲ್ಲಿ ಇಂಗ್ಲಾಂದರಿಗುಂಟಾದ ಬಾಧ್ಯತೆಯನ್ನು ಕುರಿತು ಕಾರ್ಯಸ್ಥನಾಗಿಯೂ ನಿರ್ಮಿಸಲ್ಪಟ್ಟನು. ಅವನಿಗೆ ಸಹಾಯವಾಗಿ (Earl of Salisbury) ಸಾಲ್ಸ್‌ಬರಿ ಪಟ್ಟದ ಪ್ರಭುವೂ, (Earl of Suffolk) ಸಫ್ಫೋಲ್ಕ್ ನಾಡಿನ (Talbot) ತಾಲ್ಬೊತ್ ಎಂಬ ಪ್ರಭುವೂ, (Sir John Falstaff) ಸರ್ ಜಾನ್ ಫಾಲ್ಸ್ತಾಫ್ ಎಂಬವನೂ ನೇಮಿಸಲ್ಪಟ್ಟರು. ಇವರಿಗಿಂತ ಅಧಿಕ ಅಭಿಮಾನವುಳ್ಳ ಶ್ರೇಷ್ಠ ವೀರರು ಆ ಕಾಲದಲ್ಲಿ ಇಂಗ್ಲಾಂದಿನಲ್ಲಿ ಇರಲಿಲ್ಲ.

ಇಂಗ್ಲಾಂದರ ಸೈನ್ಯಕ್ಕೂ ಫ್ರಾನ್ಸ್ ದೇಶದ ಅಧಿಪತಿಯಾದ ೭ಳನೇ ಚಾರ್ಲ್ಸ್ ಎಂಬವನ ಸೈನ್ಯಕ್ಕೂ ಉಂಟಾದ ಮೊದಲನೇ ದೊಡ್ಡ ಯುದ್ಧವು (Crevant) ಕ್ರೇವಾಂತ್ ಎಂಬ ಊರಿನ ಬಳಿಯ ನಡಿಯಿತು. ಆ ಯುದ್ಧದಲ್ಲಿ ಫ್ರಾನ್ಸರು ಪೂರ್ಣವಾಗಿ ಮುರಿಯ ಬಡಿಯಲ್ಪಟ್ಟರು. ಮಾರಣೆ ವರುಷ (Verneuil) ವೆರ್ನೇಯಿಲ್ ಎಂಬ ಊರಿನ ಬಳಿಯ ಘೋರ ಯುದ್ಧವು ನಡೆಯಿತು. (Agincourt) ಅಜಿನ್‌ಕೋರ್ತ್ ಊರಿನ ಯುದ್ಧದ ತರುವಾಯ ಅದಕ್ಕೆ ಸರಿಯಾದ ಘೋರ ಯುದ್ಧವು ಅದು ವರೆಗೂ ನಡಿಯಲಿಲ್ಲ. ಈ ರಣದಲ್ಲಿ ಸ್ಕೊತ್ಲಾಂದರು ಮುಖ್ಯವಾಗಿ ಚಾರ್ಲ್ಸ್ ಅರಸನಿಗೆ ಸಹಾಯವಾಗಿದ್ದರು. ಆದಾಗ್ಯೂ ಆ ದಿವಸ ಫ್ರಾನ್ಸರೂ ಸ್ಕೊತ್ಲಾಂದರೂ ಬೆನ್ನು ಕೊಟ್ಟು ಓಡಿದ್ದರಿಂದ ಇನ್ನು ಆ ಅರಸನಿಗೆ ಸಹಾಯ ಏನೂ ಇಲ್ಲವೆಂದು ತೋಚಿತು. ಆದದರಿಂದ ಅವರು ಫ್ರಾನ್ಸ್ ದೇಶದ ಉತ್ತರ ನಾಡುಗಳು ಇಂಗ್ಲಿಷ್ ಸೈನ್ಯದಿಂದಲೂ ಅವರ ಕಡೆಯವರಿಂದಲೂ ಕೈವಶ ಮಾಡಲ್ಪಟ್ಟವೆಂದೂ (Loire) ಲೋಯಿರ್ ನದಿಗೆ ಆಚೆ ಇರುವ ನಾಡಿನವರು ಮಾತ್ರ ಯಥಾರ್ಥವಾಗಿ ತನ್ನ ಕಡೆಯವರಾಗಿದ್ದಾರೆಂದೂ ಕಂಡು ಆ ನಾಡುಗಳಿಗೆ ಓಡಿ ಹೋದನು.

ಫ್ರಾನ್ಸ್ ದೇಶಕ್ಕೆ ನ್ಯಾಯದ ಪ್ರಕಾರ ಅರಸನಾಗಿರುವವನು ಈ ಪ್ರಕಾರ ಯಾವದ್ದಿಕ್ಕಿನಲ್ಲಿಯೂ ಸೋತು ಸಂಕಟ ಪಡುವ ವೇಳೆಯಲ್ಲಿ ಬೆದ್ಫೋರ್ಡ್ ಪಟ್ಟದ ಪ್ರಭುವು (Orleans) ಓರ್ಲೀನ್ಸ್ ಊರಿಗೆ

ಮುತ್ತಿಗೆ ಹಾಕ ಬೇಕೆಂದು ಶ್ರೀಮಾರ್ನಿಸಿ (Salisbury) ಸಾಲ್ಸ್‌ಬ ರಿ ಊರಿನ ಪ್ರಭುವನ್ನು ದೊಡ್ಡ ಸೈನ್ಯದೊಡನೆ ಆ ಊರಿಗೆ ಕಳುಹಿಸಿದ ನು. ಆ ಪಟ್ಟಣವು (Loire) ಲೋಯಿರ್ ನದಿತೀರದಲ್ಲಿ ಕಟ್ಟಲ್ಪಟ್ಟಿತ್ತು. ಅದು ಇಂಗ್ಲಾಂಡರಿಗೆ ಸೇರಿದ ನಾಡುಗಳಿಗೂ ಚಾರ್ಲ್ಸ್ ಅರಸನಿಗೆ ಇ ನ್ನೂ ನಂಬಿಕೆಯಾಗಿದ್ದ ಸೀಮೆಗಳಿಗೂ ಮಧ್ಯದಲ್ಲಿ ಇದ್ದದರಿಂದ ಆ ಸ ಮಯದಲ್ಲಿ ಬಹು ಮುಖ್ಯವಾದ ಸ್ಥಳವಾಗಿತ್ತು.

1428ನೇ ಸಂವತ್ಸರದ ಒಕ್ಟೋಬರ್ ತಿಂಗಳಲ್ಲಿ ಓರ್ಲೀನ್ಸ್ ಊರಿ ಗೆ ಮುತ್ತಿಗೆ ಹಾಕಲ್ಪಟ್ಟಿತು. ಅದನ್ನು ಸುತ್ತಿ ಕೊಂಡು ಬಂದ ಪ್ರಾರಂಭದ ಲ್ಲಿಯೇ (Salisbury) ಸಾಲ್ಸ್‌ಬರಿ ನಾಡಿನ ಅಧಿಪತಿಯು ಫಿರಂಗಿ ಗುಂಡಿನಿಂದ ಘಾಯ ಪಟ್ಟು ಸತ್ತದ್ದರಿಂದ ಸಫ್ಫೋಲ್ಕ್ ಎಂಬ ಪ್ರಭುವು ಆ ಸೈನ್ಯಕ್ಕೆ ಅಧಿಪತಿಯಾದನು. ಮುತ್ತಿಗೆ ಹಾಕಲ್ಪಟ್ಟ ಕೋಟೆಯ ಠಾ ಣ್ಯದವರು ಈ ಕೋಟೆಯನ್ನು ನಾವು ಶತ್ರುಗಳಿಗೆ ಒಪ್ಪಿಸಿ ಕೊಟ್ಟರೆ, ನ ಮ್ಮ ಅರಸನ ಕಾರ್ಯವು ಪೂರ್ಣವಾಗಿ ಕೆಟ್ಟು ಹೋಗುವದು ಎಂಥೇಳಿ ಏನು ಪಾಡು ಪಟ್ಟರೂ ಯಾವ ವಿಧದಲ್ಲಿಯಾದರೂ ಆ ಕೋಟೆಯನ್ನು ಕಾಪಾಡ ಬೇಕೆಂದು ಸಾಧನೆ ಮಾಡಿದರು.

ಅವರಿಗೆ (Dunois) ದುನೋಯಿಸ್ ಎಂಬವನೂ (La Hire) ಲಾ ಹೀರ್ ಎಂಬ ವೃದ್ಧಾಪ್ಯವುಳ್ಳ ವೀರಶ್ರೇಷ್ಠನೂ ಮುಖ್ಯಸ್ತರಾಗಿದ್ದರು. ಆ ಇಬ್ಬರೂ ವೀರಾದಿವೀರರು.

ಆ ಪಟ್ಟಣಕ್ಕೆ ಬಹಳ ದಿವಸಗಳು ಮುತ್ತಿಗೆ ಹಾಕಲ್ಪಟ್ಟಿತು. ತರು ವಾಯ ಸಫ್ಫೋಲ್ಕ್ ಎಂಬ ಪ್ರಭುವು ಬಲಾತ್ಕಾರವಾಗಿ ತಾಕುವದರಿಂ ದ ಆ ಊರನ್ನು ಹಿಡಿಯುವದಕ್ಕೆ ವಶವಿಲ್ಲವೆಂದು ಕಂಡು ನಾಲ್ಕು ಕಡೆ ಗಳಲ್ಲಿಯೂ ದಾರಿಯನ್ನು ಮುಚ್ಚಿ ಊರನ್ನು ಸುತ್ತಿ ಕೊಂಡನು. ಇಂ ಥ ಮುತ್ತಿಗೆಯಿಂದ ಉಂಟಾದ ಕೇಡುಗಳನ್ನು ತಾಳ್ಮೆಯಿಂದ ಸಹಿಸಿದ ವರು ಈಗ ಬರದಿಂದಲೂ ಬಹಳ ಕಷ್ಟ ಪಟ್ಟರು. ಆಗ ನಡೆದ ಯುದ್ಧ ಗಳೆಲ್ಲಾ ಇಂಗ್ಲಿಷ್ ಸೈನ್ಯಕ್ಕೆ ಜಯವಾಯಿತು. ಒಂದು ದಿವಸ ಇಂಗ್ಲಾಂ ದರ ಸಂಣ ದಂಡು, ಫ್ರಾನ್ಸರ ದೊಡ್ಡ ಸೈನ್ಯವನ್ನು ಸೋಲಿಸಿದ ಮುಖ್ಯವಾದ ಒಂದು ಯುದ್ಧ ನಡೆಯಿತು. ಹ್ಯಾಗಂದರೆ, ಸರ್ ಜಾನ್

## ಸಂಧಿ 11. ಹೆರ್‍ರಿಂಗ್ ಯುದ್ಧ; ಆರ್ಕಿನ ಯೋಹನ್ನಳು.

ಫಾಲ್‌ಸ್ಟಾಫ್ ಎಂಬುವ ದಳಕರ್ತನು ನಡಿಸಿದ ಒಂದು ಸಣ್ಣ ದಂಡು ಇಂಗ್ಲಿಷ್ ಸೈನ್ಯಕ್ಕೋಸ್ಕರ ಆಹಾರ ಮುಂತಾದವುಗಳನ್ನು ಸಂಪಾದಿಸ ಹೋದ ಸ್ಥಳದಲ್ಲಿ, ಮುತ್ತಿಗೆ ಹಾಕಲ್ಪಟ್ಟ ಊರಿನವರಿಗೆ ಸಹಾಯವಾಗಿ ಬಂದ ದೊಡ್ಡ ದಂಡನ್ನು ಕಂಡು, ಅದರ ಮೇಲೆ ಬಿದ್ದು ಅದನ್ನು ಪೂರ್ಣವಾಗಿ ಚದರ ಬಡಿಯಿತು. ಆ ಯುದ್ಧಕ್ಕೆ (Herring) ಹೆರ್‍ರಿಂಗ್ ಮಿಾನುಯುದ್ಧ, ಅಥವಾ ಕರಿ ಮಿಾನುಯುದ್ಧವೆಂದು ಹೆಸರಾಯಿತು. ಯಾಕಂದರೆ, ಅವರು ಸಂಗ್ರಹಿಸಿ ಕೊಂಡ ಪದಾರ್ಥಗಳಲ್ಲಿ ಆ ಮಿಾನುಗಳು ಬಹಳವಾಗಿದ್ದವು. ಅದರ ತರುವಾಯ ಓರ್ಲೀನ್ಸ್ ಪಟ್ಟದವರು ಆಶೆಭಗ್ನವಾಗಿ, ಆ ಕೋಟೆಯನ್ನು ಶತ್ರುಗಳಿಗೆ ಬಿಟ್ಟು ಬಿಡ ಬೇಕೆಂದು ಇರಲಾಗಿಯೂ ಚಾರ್ಲ್ಸ್ ಅರಸನು ಫ್ರಾನ್ಸ್ ದೇಶದ ದಕ್ಷಿಣ ಪಾರ್ಶ್ವದಲ್ಲಿದ್ದ ಬೆಟ್ಟಗಳಿಗೆ ಓಡಿ ಬಚ್ಚಿಟ್ಟು ಕೊಂಡಿರ ಬೇಕೆಂದು ಆಲೋಚಿಸುತ್ತಿರಲಾಗಿಯೂ, ಇಂಗ್ಲಿಷ್ ಸೈನ್ಯವು ತಮಗೆ ಪೂರ್ಣ ಜಯವು ಈಗಲೇ ಆಗುತ್ತದೆಂದು ಸಂತೋಷ ಪಡುತ್ತಿರುವ ಸಮಯದಲ್ಲಿ ಒಬ್ಬ ಒಕ್ಕಲಿಗನ ಮಗಳ ಪರಾಕ್ರಮದಿಂದಲೇ ಓರ್ಲೀನ್ಸ್ ಪಟ್ಟಕ್ಕೆ ಮುತ್ತಿಗೆ ಹಾಕಿದವರು ಬಿಮಾರಿ ಹೋದದ್ದಲ್ಲದೆ ಫ್ರಾನ್ಸ್ ದೇಶವು ಸಹ ಕಾಪಾಡಲ್ಪಟ್ಟಿತು.

ಈ ಆಶ್ಚರ್ಯವಾದ ಕಾರ್ಯದ ವಿವರವೇನಂದರೆ, ಓರ್ಲೀನ್ಸ್ ಪಟ್ಟದಲ್ಲಿ ವೀರಪರಾಕ್ರಮವಂತಳೆಂದು ಕೀರ್ತಿ ಹೊಂದಿದ (Joan of Arc) "ಆರ್ಕಿನ ಯೋಹನ್ನ" (Champagne) ಚಾಂಪೇನ್ ಎಂಬ ನಾಡಿನಲ್ಲಿರುವ (Domremy) ದೊಮ್ರೇಮಿ ಊರಿನಲ್ಲಿ ಹುಟ್ಟಿದವಳು; ಅವಳು ಚಿಕ್ಕಂದಿನಿಂದ ಬಹು ದೇವಭಕ್ತಿಯೂ ಶಾಂತಗುಣವೂ ಮತಾವೇಶವೂ ಉಳ್ಳವಳಾಗಿ ಇದ್ದಳು. ಮತ್ತು ಆ ಕಾಲದಲ್ಲಿ ಫ್ರಾನ್ಸ್ ದೇಶದಲ್ಲಿ ನಡಿಯುತ್ತಿದ್ದ ಯುದ್ಧಗಳು ಮುಂತಾದ ಕೇಡುಗಳನ್ನು ನೆನಸಿ ಕೊಂಡು ಅರಸನಿಗೆ ಉತ್ತಮ ಭಕ್ತಿಯುಳ್ಳವಳಾಗಿ ದೇವರನ್ನು ಬಹು ವಾಂಛೆಯಿಂದ ಜಪತಪ ಮಾಡುತ್ತಾ ಬಂದಳು. ಅವಳು ರಾತ್ರಿ ಹಗಲೂ ಸ್ವದೇಶಕ್ಕೆ ಸಂಭವಿಸಿದ ಕೇಡುಗಳನ್ನು ಯೋಚಿಸಿ ಕೊಂಡಿದ್ದದರಿಂದ ಫ್ರಾನ್ಸ್ ದೇಶಕ್ಕೆ ಉಂಟಾದ ಇಕ್ಕಟ್ಟುಗಳನ್ನು ನಿವರ್ತಿಸಿ ಅದನ್ನು

ರಕ್ಷಿಸುವದು ನನ್ನಿಂದಲೇ ಆಗ ಬೇಕೆಂಬ ನೆನಪು ಅವಳ ಮನಸ್ಸಿನಲ್ಲಿ ಹುಟ್ಟಿತು. ಆದರಿಂದ ಅವಳು ಅಂಥ ದೊಡ್ಡ ಕಾರ್ಯವನ್ನು ಮಾಡ ಬೇಕೆಂದು ಎಬ್ಬಿಸುವ ಅಶರೀರಿ ವಾಕ್ಯಗಳನ್ನು ತಾನು ಕಿವಿಯಾರ ಕೇಳಿದ್ದಾಗಿಯೂ, ತನ್ನನ್ನು ಉತ್ಸಾಹ ಪಡಿಸುವದಕ್ಕೆ ತನಗೆ ದರ್ಶನೆಯಾದ ಪರಲೋಕವಾಸಿಗಳನ್ನು ತಾನು ಕಣ್ಣಾರ ಕಂಡದ್ದಾಗಿಯೂ ಮನಸ್ಸಿನಲ್ಲಿ ಚಾಪಿಸಿ ಕೊಂಡಳು. ಹೀಗೆಯೇ ಮನಸ್ಸಿನಲ್ಲಿ ಎಣಿಸಿ ಕೊಂಡಿರುವ ಸಮಯದಲ್ಲಿ ಓರ್ಲೀನ್ಸ್ ಪಟ್ಟಣದವರು ಬಹು ಸಂಕಟ ಪಡುತ್ತಾರೆಂಬುವ ಸಮಾಚಾರ ಅವಳಿಗೆ ತಿಳಿಯ ಬಂತು. ಸಂಗಡಲೇ ಅವಳು ಎದ್ದು ಸ್ವಲ್ಪ ದೂರದಲ್ಲಿ ವಾಸಿಸುವ ಒಬ್ಬ ಬಂಧುವನನ್ನು ಹೋಗಿ ನೋಡಿ ಬರುವದಕ್ಕೆ ತಂದೆ ತಾಯಿಗಳ ಬಳಿಯಲ್ಲಿ ಅಪ್ಪಣೆ ಹೊಂದಿ, ಆ ನೆಂಟನ ಸಂಗಡ ನೆರೆ ಊರಿನ ಅಧಿಕಾರಿಯ ಬಳಿಗೆ ಹೋಗಿ, ಓರ್ಲೀನ್ಸ್ ಪಟ್ಟಣಕ್ಕೆ ಹಾಕಲ್ಪಟ್ಟಿರುವ ಮುತ್ತಿಗೆಯನ್ನು ನಿವರ್ತಿಸಿ ಆ ಊರಿನವರಿಗೆ ಸಹಾಯ ಮಾಡಲೂ (Rheims) ರೀಮ್ಸ್ ಪಟ್ಟಣದಲ್ಲಿ ಚಾರ್ಲ್ಸ್ ಎಂಬ ಅರಸನಿಗೆ ಪಟ್ಟಾಭಿಷೇಕ ಮಾಡಲೂ ತನಗೆ ದೇವರ ಅಪ್ಪಣೆ ಉಂಟಾಗಿದೆ ಎಂದೂ, ಅದನ್ನೆಲ್ಲಾ ಮಾಡಿ ತೀರಿಸುವದಕ್ಕೆ ತಾನು ಚಾರ್ಲ್ಸ್ ಅರಸನಿರುವ (Chinon) ಚಿನೋನ್ ಊರಿಗೆ ಹೋಗಿ ಅವನನ್ನು ಕಾಣ ಬೇಕೆಂದೂ, ಆ ಪಯಣಕ್ಕೆ ತನಗೆ ಸಹಾಯ ಮಾಡ ಬೇಕೆಂದೂ ಆ ಧೊರೆಗೆ ಹೇಳಿ ಕೊಂಡಳು.

ಆ ಧೊರೆಯು ಅವಳು ಹೇಳಿದ್ದನ್ನೆಲ್ಲಾ ಕೇಳಿ ಅದು ಬುದ್ಧಿಹೀನವಾದ ಮಾತೆಂದು ತಳ್ಳಿ ಬಿಟ್ಟನು. ಆದಾಗ್ಯೂ ಅಷ್ಟರಲ್ಲಿ ಅವಳ ಕಾರ್ಯ ಸ್ವಲ್ಪ ಪ್ರಬಲವಾಗುತ್ತಾ ಬಂದದರಿಂದ ಬೇರೆ ಇಬ್ಬರು ಧೊರೆಗಳು ಅವಳು ಹೇಳುವ ಮೇರೆಗೆ ದೇವರು ಅವಳಿಗೆ ಕಟಾಕ್ಷ ಮಾಡಿದ್ದಾನೆಂದು ನಂಬಿ (Chinon) ಚಿನೋನಿನ ಮಟ್ಟಿಗೂ ಅವಳಿಗೆ ಸಹಾಯವಾಗಿ ಬರುತ್ತೇವೆಂದು ಅವಳನ್ನು ಕರಕೊಂಡು ಹೋದರು. ಅವರು ದಾಟಿ ಹೋದ ಸೀಮೆಯನ್ನೆಲ್ಲಾ ಬರ್ಗುಂದಿಯರೂ ಇಂಗ್ಲಿಷರೂ ವಶ ಮಾಡಿ ಕೊಂಡಿದ್ದದರಿಂದ ಆ ಪ್ರಯಾಣವು ಬಹು ಮೋಸವುಳ್ಳದ್ದಾಗಿತ್ತು. ಆದಾಗ್ಯೂ ಏನೂ ಅಪಾಯವಿಲ್ಲದೆ ಆ ಸ್ಥಳಕ್ಕೆ ಹೋಗಿ ಸೇರಿದರು. ಅರಸನು

ಅವಳು ಬಂದ ಕಾರಣವನ್ನು ಕೇಳಿದಾಗ ಮೊದಲು ಸಂದೇಹ ಪಟ್ಟಾಗ್ಯೂ ತರುವಾಯ ಅವಳನ್ನು ತನ್ನ ಮುಂದೆ ತರ ಹೇಳಿದನು. ಅರಸನು ಅವಳ ಬಳಿಯಲ್ಲಿ ಮಾತಾಡಿದ ತರುವಾಯ ಸಕಲ ಶಾಸ್ತ್ರಪಂಡಿತಸಭೆಯವರೂ, (Poictiers) ಪೋಯಿಷ್ಟ್ರಿಯರ್ಸ್ ಊರಿನಲ್ಲಿ ಕೂಡಿ ಬಂದ ಪಾರ್ಲಿಮೆಂತ್ ಎಂಬುವ ಸಂಘದವರೂ ಅವಳನ್ನು ಬಹು ಖಂಡಿತವಾಗಿ ಶೋಧಿಸಿ, ಅವಳು ಮುಂಚೆ ನಡೆದು ಕೊಂಡ ವಿವರವನ್ನೂ ಅವಳ ಗುಣಾಗುಣಗಳನ್ನು ಕುರಿತು ವಿಚಾರಣೆ ಮಾಡಿದರು. ಹಾಗೆ ವಿಚಾರಿಸುವಲ್ಲಿ ಅವಳು ಅದು ವರೆಗೂ ಯಾವ ತಪ್ಪೂ ಮಾಡಿದ್ದಿಲ್ಲವೆಂದು ನಿಶ್ಚಯಿಸಿ, ಓರ್ಲೀನ್ಸ್ ಕೋಟೆಯಲ್ಲಿದ್ದ ಠಾಣ್ಯದವರಿಗೆ ಸಹಾಯವಾಗಿ ಆಗಲೇ ಹೊರಟು ಹೋಗುತ್ತಿದ್ದ ಸಣ್ಣ ದಂಡಿನ ಸಂಗಡ ಹೋಗ ಬಹುದೆಂದು ಅಪ್ಪಣೆ ಕೊಟ್ಟರು.

ಹಾಗೆ ಅಪ್ಪಣೆ ಕೊಟ್ಟ ಅಧಿಕಾರಿಗಳು ಅವಳು ಮುಖ್ಯವಾದ ವರವನ್ನು ಹೊಂದಿದವಳೆಂದು ಎಣಿಸಿದ ಹಾಗೆ ತೋಚಲಿಲ್ಲ. ಆದರೆ ಜನರೆಲ್ಲಾ ಇವಳು ನಮಗೆ ಸಹಾಯ ಮಾಡುವ ಹಾಗೆ ದೇವರ ಅನುಗ್ರಹ ಹೊಂದಿದವಳೆಂದು ದೃಢವಾಗಿ ನಂಬಿ ಕೊಂಡಿದ್ದರು. ಅವಳು ಓರ್ಲೀನ್ಸ್ ಊರಿಗೆ ಹೋಗಿ ಶೇರುವದಕ್ಕಿಂತ ಮುಂಚೆ ಅವಳ ಆಶ್ಚರ್ಯವಾದ ಬಲವನ್ನು ಕುರಿತು ಅನೇಕರು ಬಂದು ನಾನಾ ಪ್ರಕಾರ ಹೇಳಿ ಕೊಂಡದ್ದರಿಂದ ಇಂಗ್ಲಿಷ್ ದಂಡಿನ ಮುಟ್ಟಿಗೂ ಆ ಸುದ್ದಿ ಬಂದು ಮುಟ್ಟಿತು. ಮುತ್ತಿಗೆ ಹಾಕಿದ್ದ ಸೈನ್ಯದವರು ಅವಳಿಗೆ ಪಿಶಾಚನು ಸಹಾಯವಾಗಿದ್ದಾನೆಂದು ಹೇಳಿದರು. ಮುತ್ತಿಗೆ ಹಾಕಲ್ಪಟ್ಟ ಊರಿನವರು ಅವಳನ್ನು ಕಂಡಾಗಲೇ ತಿರಿಗಿ ಧೈರ್ಯಗೊಂಡು ಶೌರ್ಯವಾಗಿ ಯುದ್ಧ ಮಾಡ ಯತ್ನವಾದರು.

ಅವಳಿಗೆ ಶೇರಿದ ಸಣ್ಣ ದಂಡು ಇಂಗ್ಲಿಷ್ ಸೈನ್ಯದ ಹೊರಗಿನ ಕಾವಲಿಯನ್ನು ಅಡ್ಡಿ ಇಲ್ಲದೆ ದಾಟಿ ಹೋಗಿ ಮಧ್ಯಘ್ನಾವದಲ್ಲಿ ಊರಿನವರೆಲ್ಲರೂ ಉತ್ಸಾಹದಿಂದ ಆರವಾರ ಮಾಡಲು ಓರ್ಲೀನ್ಸ್ ಊರಿನೊಳಗೆ ಪ್ರವೇಶಿಸಿದಳು. ಆ ನೋಟವು ಆಶ್ಚರ್ಯವಾಗಿಯೂ ಪ್ರೇರಣೆಯಾಗಿಯೂ ಇತ್ತು. ಹ್ಯಾಗಂದರೆ, ಹತ್ತೊಂಬತ್ತು ವರುಷಪ್ರಾಯಕ್ಕೆ

ಕಡಿಮೆಯಾದ ಆ ಕನ್ನಿಕೆಯು ಬಹು ಅಲಂಕಾರವಾದ ಯುದ್ಧಕುದುರೆಯ ಮೇಲೆ ಏರಿ ಕಂಡವರೆಲ್ಲರೂ ಚ್ರಮೆ ಪಡ ತಕ್ಕ ಹಾಗೆ ಆ ಕುದುರೆಯನ್ನು ಯುದ್ಧವೀರರ ನಡುವೆ ನಡಿಸಿ, ಯುದ್ಧವೀರರು ಧರಿಸಿ ಕೊಳ್ಳುವ ಸರ್ವಾಯುಧಕವಚವನ್ನು ಧರಿಸಿ ಕೊಂಡವಳಾಗಿಯೂ ಬಹು ಒಳ್ಳೇ ಕತ್ತಿಯನ್ನು ಕಟ್ಟಿ ಕೊಂಡವಳಾಗಿಯೂ ಫ್ರಾನ್ಸ್ ರಾಜ್ಯಕ್ಕೆ ತಕ್ಕ ಗುರುತಾದ (Fleur de lis) ಫ್ಲೂರ್ ದಿ ಲೀ ಎಂಬ ಪುಷ್ಪವನ್ನೂ ಲೋಕರಕ್ಷಕನ ರೂಪವನ್ನೂ ಚಿತ್ರವಾಗಿ ಹೊಲಿದಿದ್ದ ಸರಿಗೆಯ ಕೆಲಸವಾದ ಬಿರುದಿನ ಝಂಡೆಯನ್ನು ಕೈಯಲ್ಲಿ ಹಿಡಿದವಳಾಗಿಯೂ ರಾಜಘೋರಣಿಯಾಗಿ ಆ ಪಟ್ಟದೊಳಗೆ ಪ್ರವೇಶ ಮಾಡಿದಳು. "ಸಣ್ಣ ಕಿಡಿ ಮಹಾ ಜ್ವಾಲೆಯಾಯಿತು" ಎಂಬ ಗಾದೆಯ ಪ್ರಕಾರ ಆ ಕನ್ನಿಕೆಯು ಅಲ್ಲಿ ಶೇರಿದ್ದು ಮೊದಲ್ಗೊಂಡು, ಆ ಊರಿನವರ ಕಾರ್ಯ ಬೇರೆ ಪ್ರಕಾರವಾಗಿ ನಡಿಯ ಯತ್ನವಾಯಿತು. ಹ್ಯಾಗಂದರೆ, ಇಂಗ್ಲಿಷ್ ಸೈನ್ಯದವರು ಅಂದಿನಿಂದ ಕಳವಳಪಟ್ಟು ಏನೋ ಕೇಡು ಪ್ರಾಪ್ತಿಸುವದೆಂದು ಭಯ ಪಟ್ಟಿದ್ದರು. ಮುಂಚೆ ಮನಸ್ಸು ಸಡ್ಲವಾಗಿದ್ದ ಫ್ರಾನ್ಸರು ತರುವಾಯ ಬಹಳ ದೃಢವಾದರು. ಆ ಕನ್ನಿಕೆಯು ತಾನೇ ತಾಣ್ಯದವರಿಗೆ ಸೈನ್ಯಾಧಿಪತಿಯಾದದ್ದಲ್ಲದೆ ಯುದ್ಧವು ಯಾವ ಪಕ್ಕದಲ್ಲಿ ಅಧಿಕ ಕಠಿಣವಾಗಿರುವದೋ ಅಲಿಯೇ ಅವಳು ಯುದ್ಧಮುಖದಲ್ಲಿರುವಳು. ಇದರಿಂದ ಇಂಗ್ಲಿಷ್ ರಾಣುವೆಯವರು ತಾವು ಭದ್ರ ಮಾಡಿ ಕೊಂಡಿದ್ದ ಒಂದೊಂದು ಆವರಣವನ್ನು ಪಡಿಪಡಿಯಾಗಿ ಬಿಟ್ಟು ಬಿಟ್ಟು, ಆ ಕನ್ನಿಕೆ ಆ ಊರಿಗೆ ಶೇರಿದ ಏಳು ದಿವಸಗಳೊಗಾಗಿ ಏಮಾರಿದವರಾಗಿಯೂ ಸೋತವರಾಗಿಯೂ ಆ ಊರನ್ನು ಬಿಟ್ಟು ಹೋದರು.

ಹೀಗೆ ಆ ಕನ್ನಿಕೆಯು ಎಣಿಸಿ ಕೊಂಡ ಎರಡು ಕಾರ್ಯಗಳಲ್ಲಿ ಒಂದು ಈಡೇರಿತು. ಇನ್ನೊಂದು ಕಾರ್ಯವನ್ನು ಮುಗಿಸ ಬೇಕೆಂದು ಹೇಳಿ ಅವಳು ಅರಸನ ಬಳಿಗೆ ಹೋಗಿ, ನಿನ್ನ ಪೂರ್ವಿಕರಾದ ಅರಸುಗಳೆಲ್ಲರೂ ರೀಮ್ಸ್ ಎಂಬ ಪಟ್ಟದಲ್ಲಿ ಪಟ್ಟಾಭಿಷೇಕ ಮಾಡಿ ಕೊಂಡರಲ್ಲ? ನೀನು ಸಹ ಹಾಗೆಯೇ ಮಾಡ ಬೇಕೆಂದು ಹೇಳಿದಳು. ಸುತ್ತಲೂ ಇದ್ದ ನಾಡುಗಳೆಲ್ಲಾ ಬರ್ಗುಂದಿಯರ ವಶದಲ್ಲಿ ಇದ್ದದರಿಂದ ಆ ಊರಿಗೆ

ಹೋಗಿ ಶೇರುವದು ಬಹು ಕಷ್ಟವಾದಾಗ್ಯೂ, ಅವಳ ಅಭಿಪ್ರಾಯಕ್ಕೆ ಸಮ್ಮತಿಸಿ ಅರಸನು ಹೊರಟು ಹೋಗುವಾಗ ಪ್ರತಿ ಪಟ್ಟಣಗಳಲ್ಲಿಯೂ ಊರಿನವರು ತಮ್ಮ ಬಾಗಲುಗಳನ್ನು ತೆರೆದು ಬಿಟ್ಟು ಅರಸನಿಗೆ ವಿಧೇಯರಾಗಿ ಬಂದರು. ಅರಸನು ಆ ಕನ್ನಿಕೆಯಿಂದ ನಡಿಸಲ್ಪಟ್ಟು ಕಾಯಲ್ಪಟ್ಟು ರೀಮ್ಸ್ ಪಟ್ಟಣದಲ್ಲಿ ಜಯೋತ್ಸಾಹನಾಗಿ ಪ್ರವೇಶ ಮಾಡಿ, ಆ ಕನ್ನಿಕೆಯು ತನ್ನ ಕೈಯಲ್ಲಿ ಮುಂಚೆ ಹೇಳಿದ ಬಿರುದಿನ ಝೂಂಡೆಯನ್ನು ಹಿಡಿದು ಕೊಂಡು ಪಕ್ಕದಲ್ಲಿ ನಿಂತು ಕೊಳ್ಳಲು ಶಿರಿಗ ಕಿರೀಟ ಧರಿಸಿದನು.

ಇದರ ತರುವಾಯ ಅವಳು ನನ್ನ ಕೋರಿಕೆ ಆಯಿತು. ಇನ್ನು ಮೇಲೆ ನನ್ನ ತಂದೆ ತಾಯಿಗಳ ಬಳಿಗೆ ಹೋಗಿ ಶೇರುವದಕ್ಕೆ ಅಪ್ಪಣೆಯಾಗಬೇಕೆಂದು ಕೇಳಿದ್ದಕ್ಕೆ ಅರಸನು ಇನ್ನೂ ನೀನು ಇಲ್ಲಿ ಇದ್ದು ನಮಗೆ ಸಹಾಯ ಮಾಡ ಬೇಕೆಂದು ಹೇಳಿ ಅವಳಿಗೆ ಅಪ್ಪಣೆ ಕೊಡಲಿಲ್ಲ.

ತರುವಾಯ ಸ್ವಲ್ಪ ಕಾಲದೊಳಗಾಗಿ ಆ ಯೋಹನ್ನಳು ಇಂಗ್ಲಿಷ್ ಸೈನ್ಯದಿಂದ ಶೆರೆಯಾಗಲ್ಪಟ್ಟು ಕೆಲವು ತಿಂಗಳು ಶೆರೆಯಲ್ಲಿದ್ದ ಮೇಲೆ ಗುರುವುಗಳಾದ ಕೆಲವು ಫ್ರಾನ್ಸರೂ ಇಂಗ್ಲಿಷರೂ ಶೇರಿದ ನ್ಯಾಯಸಭೆಯ ಮುಂದೆ ಶೂನ್ಯಗಾರ್ತಿ ಎಂಬ ಅಪರಾಧ ಹೊರಿಸಲ್ಪಟ್ಟು ವಿಚಾರಿಸಲ್ಪಟ್ಟಳು. ಆ ಸಭೆಯವರ ಮುಂದೆ ಅವಳು ತನ್ನನ್ನು ಶೂನ್ಯಗಾರ್ತಿ ಎಂದು ಒಪ್ಪಿ ಕೊಂಡದ್ದರಿಂದ ಶಿರಿಗ ಶೆರೆಯಲ್ಲಿ ಮುಚ್ಚಲ್ಪಟ್ಟಳು. ಮತ್ತು ಅವಳು ಪುರುಷನ ವಸ್ತ್ರಗಳನ್ನು ತಾನು ಇನ್ನು ಮೇಲೆ ಧರಿಸಿ ಕೊಳ್ಳುವದಿಲ್ಲವೆಂದು ಮಾತು ಕೊಟ್ಟಾಗ್ಯೂ ಶಿರಿಗ ಅವಳು ಆ ವಸ್ತ್ರಗಳನ್ನು ಧರಿಸಿ ಕೊಂಡದ್ದರಿಂದ ಅವಳು ಶಿರಿಗ ಶೂನ್ಯ ಮಾಡ ಹೋಗುತ್ತಾಳೆಂದು ಹೇಳಿ, ಅವಳನ್ನು ಸುಟ್ಟು ಬಿಡ ಬೇಕೆಂದು ತೀರ್ಪು ಮಾಡಿದರು. ಈ ಕ್ರೂರವಾದ ತೀರ್ಪಿನ ಪ್ರಕಾರ (Rouen) ರೂವೆನ್ ಎಂಬ ಊರಿನಲ್ಲಿ ಅಗ್ನಿಗೆ ಆಹಾರವಾಗ ಮಾಡಿದರು. ಇಂಗ್ಲಾಂಡರು ಫ್ರಾನ್ಸರು ಒಂದಾಗಿ ಆ ಕ್ರೂರ ಪಾಪ ಮಾಡಿದರು. ಇದಲ್ಲದೆ ಅವಳ ಮೂಲಕವಾಗಿ ದೊಡ್ಡ ಉಪಕಾರ ಹೊಂದಿದವರು ಅವಳನ್ನು ತಪ್ಪಿಸಿ ರಕ್ಷಿಸಲು ಒಂದು ಪ್ರಯತ್ನವೂ ಮಾಡಲಿಲ್ಲ. ಸೋಮಾರಿಯೂ ಧರ್ಮಗುಣವಿಲ್ಲದವನೂ

ಆದ ಆ ಅರಸನಿಗೆ ಜಹು ಚಕ್ತಿ ವಿಶ್ವಾಸದಿಂದ ಸೇವೆ ಮಾಡಿದ್ದೇ ಹೊರ್ತು ಬೇರೆ ಯಾವ ಅಪರಾಧವೂ ಅವಳು ಮಾಡಲಿಲ್ಲ. ಆದದರಿಂದ "ನೀಚರಿಗೆ ಮಾಡಿದ ಉಪಕಾರ ನೀರಿನ ಮೇಲೆ ಬರೆದ ಬರಹದಂತೆ" ಎಂಬುವ ಸಾಮತಿಯು ನಿಜವಾಯಿತು.

ಇದರ ತರುವಾಯ ಫ್ರಾನ್‌ಸಿನಲ್ಲಿ ಇಂಗ್ಲಿಷ್ ರಾಜ್ಯದವರ ಕಾರ್ಯವು ಬರಬರ ಕೆಟ್ಟು ಹೋಯಿತು. ಅನೇಕ ವರುಷಗಳ ಮಟ್ಟಿಗೂ ಅವರು ಯುದ್ಧ ಮಾಡುತ್ತಾ ಬಂದಾಗ್ಯೂ ಇಂಗ್ಲಾಂದರು ಮುಂಚಿನಂತೆ ವೈರಾಗ್ಯದಿಂದ ಯುದ್ಧ ಮಾಡಲಿಲ್ಲ. ಇದಲ್ಲದೆ ಬರ್ಗುಂದಿ ನಾಡಿನ ಅಧಿಪತಿಯೂ ತಮ್ಮ ಸಂಗಡ ಸಂಮ್ಮಂಧ ಪಟ್ಟವರಾದ ಇಂಗ್ಲಾಂದರ ಮೇಲೆ ವ್ಯಸನ ಪಟ್ಟು ಸ್ವದೇಶದ ಅರಸನ ಸಂಗಡ ಸಮಾಧಾನವಾದನು. ಈ ಸಂಗತಿ ಫ್ರಾನ್‌ಸರಿಗೆ ದೊಡ್ಡ ಉಪಕಾರವಾಯಿತು. ಇದಲ್ಲದೆ ಬೆದ್ಫೋರ್ಡ್ ಪಟ್ಟದ ಪ್ರಭುವಾದ ಇಂಗ್ಲಿಷ್ ಸೈನ್ಯಾಧಿಪತಿಯು ಆ ಕಾಲದಲ್ಲಿ ಸತ್ತು ಹೋದದರಿಂದ ಆ ಸೈನ್ಯವನ್ನು ನಡಿಸುವದಕ್ಕೆ ಸಾಮರ್ಥ್ಯವುಳ್ಳ ದಳಕರ್ತನು ಇಲ್ಲದ್ದರಿಂದ ಅವರು ವಶ ಮಾಡಿ ಕೊಂಡಿದ್ದ ದೊಡ್ಡ ಪಟ್ಟಗಳನ್ನೆಲ್ಲಾ ಒಂದೊಂದಾಗಿ ಬಿಟ್ಟು ಬಿಡ ಬೇಕಾಯಿತು. ಕಡೆಯಲ್ಲಿ (Calais) ಕಲೇ ಪಟ್ಟ ಮಾತ್ರ ಅವರ ವಶದಲ್ಲಿ ಇತ್ತು. ಅವರು ಹೀಗೆ ಫ್ರಾನ್‌ಸ್ ದೇಶವನ್ನು ಬಿಟ್ಟು ತಮ್ಮ ದೇಶಕ್ಕೆ ತಿರಿಗಿ ಹೋಗುವದಕ್ಕಿಂತ ಮುಂಚೆ ಮುಖ್ಯವಾದ ಸಂಗತಿ ಒಂದೂ ನಡಿಯಲಿಲ್ಲ. ಫ್ರಾನ್‌ಸ್ ದೇಶವನ್ನು ಸಹ ಕಟ್ಟಿ ಕೊಂಡು ಆಳ ಬೇಕೆಂದು ಆ ಕಾಲದಲ್ಲಿ ಇಂಗ್ಲಿಷರು ಕೋರಿದ ಅಧರ್ಮವಾದ ಅತ್ಯಾಶೆಯು ವ್ಯರ್ಥವಾದದ್ದು ಆ ಉಚಯತ್ತರಿಗೂ ಮೇಲು ಆಯಿತು.

# CHAPTER XII.

## WARS OF THE ROSES.

FROM A. D. 1445 TO A. D. 1483.

# 12 ಸಂಧಿ.

## ಗುಲಾಬಿಯುದ್ಧಗಳು.

ಕ್ರಿ. ಶ. 1455 ಮೊದಲು ಕ್ರಿ. ಶ. 1483 ವರೆಗೂ.

ಮುಖ್ಯ ತಾರೀಖುಗಳು: (Henry VI) ಆರನೇ ಹೆನ್ರಿ ಸಿಂಹಾಸನದಿಂದ ತೆಗೆದು ಹಾಕಲ್ಪಟ್ಟದ್ದು ಕ್ರಿ. ಶ. 1461. ಸತ್ತದ್ದು ಕ್ರಿ. ಶ. 1471. (Edward IV) ನಾಲ್ಕನೇ ಎದ್ವರ್ದನು ಹುಟ್ಟಿದ್ದು ಕ್ರಿ. ಶ. 1443. ಧೊರೆತನ ಮಾಡಿದ್ದು ಕ್ರಿ. ಶ. 1461—1483. ಆದೇ ಕಾಲದ ಇಂದ್ಯ ಚರಿತ್ರೆ: ಆದಿ ಮಹಮ್ಮದಿನವರ ಧೊರೆತನ. ಶ್ರೇಷ್ಟ ನಾಮಗಳು: ಛಾಪಿಸುವ ಯಂತ್ರವನ್ನು ನೂತನವಾಗಿ ಮಾಡಿದ (William Caxton) ಉಲ್ಲಿಯಮ್ ಕಾಕ್ಸ್ಟೊನ್ ಕ್ರಿ. ಶ. 1473.

ಮುಂಚೆ ಹೇಳಿದ ಆರನೇ ಹೆನ್ರಿ ಅರಸುತನ ಮಾಡಿದ ಹಿಂದಿನ ವರುಷಗಳಲ್ಲಿ ಸ್ವದೇಶಯುದ್ಧ ನಡೆದದ್ದು ಬಹು ದುಃಖವಾದ ಸಂಗತಿ. ಅದಕ್ಕೆ ಕಾರಣವೇನಂದರೆ, ಅವನು ದೊಡ್ಡವನಾದಾಗ ಎಚ್ಚರಿಕೆ ವಿವೇಕ ಧೈರ್ಯ, ಈ ಮೂರೂ ಅವನಿಗೆ ಇಲ್ಲದರಿಂದ ಅರಸುತನ ಮಾಡುವದಕ್ಕೆ ಸಾಮರ್ಥ್ಯವಿಲ್ಲದವನೆಂದು ಕಾಣ ಬಂತು. ಇದಲ್ಲದೆ ಅವನು ಮನೋದೃಢವಿಲ್ಲದವನಾದದರಿಂದ ತತ್ಕಾಲಕ್ಕೆ ರಾಜಸಭೆಯಲ್ಲಿ ಯಾರು ಅಧಿಕಾರ ಹೊಂದಿದರೋ ಅವರು ಹೇಳಿದಂತೆ ಆ ಅರಸನು ಆಡುವದೇ ಹೊರ್ತು ಸ್ವಂತವಾಗಿ ಒಂದನ್ನೂ ವಿಧಾನಿಸಲಾರನು. ಅವನಿಗೆ ಬಹು ಸಾಧುವಾದ ಸದ್ಗುಣವಿತ್ತು. ಮತ್ತು ನೀತಿ ನ್ಯಾಯವು ತಪ್ಪದೆ ಆಳ ಬಹು ಆಶೆಯಾಗಿದ್ದನು. ಆದಾಗ್ಯೂ ಯೋಗ್ಯದವರಾದ

ಆ ರಾಜ್ಯದವರನ್ನು ಆಳುವದಕ್ಕೆ ತಕ್ಕ ಧೀರತ್ವವೂ ವಿವೇಕವೂ ಅವನಿಗೆ ಇಲ್ಲವೇ ಇಲ್ಲ.

ಹೀಗಿರಲಾಗಿ ಅವನು ಕ್ರಿ. ಶ. 1445ನೇ ಸಂವತ್ಸರದಲ್ಲಿ (Anjou) ಅಂಜೌ ನಾಡಿನ ಅಧಿಪತಿಯ ಕುಮಾರ್ತೆಯಾದ (Margaret) ಮಾರ್ಗ್ರೆತ್ ಎಂಬವಳನ್ನು ಮದುವೆ ಮಾಡಿ ಕೊಂಡನು. ಈ ಮದುವೆಯು ಇಂಗ್ಲಾಂದರಿಗೆ ಪ್ರಿಯವಾದದ್ದಲ್ಲ. ಮತ್ತು ಅಂಜೌ ನಾಡು ಇಂಗ್ಲಾಂದ್ ರಾಜ್ಯಕ್ಕೆ ಶೇರಿದ ಫ್ರಾನ್ಸ್ ದೇಶದ ಶೀಮೆಗಳಲ್ಲಿ ಒಂದಾಗಿದ್ದಾಗ್ಯೂ, ಅರಸನು ಮದುವೆ ಮಾಡಿ ಕೊಂಡ ಸಮಯದಲ್ಲಿ ಆ ನಾಡನ್ನು ತೆರವಾಗಿ ಆ ಹೆಣ್ಣಿನ ತಂದೆಗೆ ಕೊಟ್ಟು ಬಿಟ್ಟದ್ದನ್ನು ಶಿಳಿದು ಬಹು ಮಂದಿ ವ್ಯಸನ ಪಟ್ಟರು. ಇದಲ್ಲದೆ ಆ ಕಾಲದಲ್ಲಿ ಇಬ್ಬರು ದೊಡ್ಡ ಪ್ರಭುಗಳಲ್ಲಿ ಯಾವನು ಧೊರೆತನ ಮಾಡ ಬೇಕೆಂದು ವ್ಯಾಜ್ಯವಾಡುತ್ತಾ ಬಂದರು. ಅವರಲ್ಲಿ ಅರಸನ ಚಿಕ್ಕಪ್ಪನಾದ (Gloucester) ಗ್ಲೋಸ್ಟ್ರರ್ ಪಟ್ಟದ ಶ್ರೇಷ್ಠಾಧಿಪತಿಯು ಜನಕ್ಕೆ ಬಹು ಪ್ರೀತಿಯುಳ್ಳವನಾದದರಿಂದ ಅವನನ್ನು (Humphrey) ಹಂಫ್ರಿ ಎಂಬ ಒಳ್ಳೆ ಪ್ರಭುವೆಂದು ಹೇಳುವರು. ಮತ್ತೊಬ್ಬನು ಅರಸನ ನೆಂಟನಾಗಿಯೂ, ಸಭೆಯಲ್ಲಿ (Cardinal) ಕಾರ್ಡಿನಲ್ ಎಂಬ ಶ್ರೇಷ್ಠ ಉದ್ಯೋಗವನ್ನು ಹೊಂದಿದ ಪ್ರಭುವಾಗಿಯೂ ಇದ್ದ (Beaufort) ಬೋಫೋರ್ತ್ ಎಂಬವನು ಅರಸನು ಮದುವೆ ಮಾಡಿದ ಸಮಯದಲ್ಲಿ ಅವನು ಆ ವಿವಾಹಕಾರ್ಯವನ್ನು ಮಾತಾಡಿ ಶೀರ್ಮಾನ ಮಾಡುವದಕ್ಕೆ ಕಾರಣನಾದದರಿಂದ, ರಾಣಿಯಾದವಳು ಅವನ ಮೇಲೆ ಪ್ರೀತಿ ಇಟ್ಟು, ಅವನಿಗೆ ಅಧಿಕ ದೊರಕ ಬೇಕೆಂದು ಕೋರಿ ಕೊಂಡಿದ್ದಳು. ಇದರಿಂದ ಮೇಲೆ ಹೇಳಿದ ಗ್ಲೋಸ್ಟ್ರರ್ ಎಂಬ ಪ್ರಭುವಿನ ಮೇಲೆ ನಾನಾ ವಿಧ ಅಪರಾಧ ಹೊರಿಸಿದರು. ಇದಲ್ಲದೆ ಆ ರಾಣಿಯು ಇಂಗ್ಲಾಂದಿಗೆ ಬಂದ ಸ್ವಲ್ಪ ಕಾಲದ ತರುವಾಯ ಅವನು ಸತ್ತು ಹೋದದರಿಂದ ಅವನ ಮರಣವನ್ನು ಕುರಿತು ಅನೇಕರು ಬಹು ಸಂಶಯ ಪಟ್ಟರು.

ಕಾರ್ಡಿನಲ್ ಬೋಫೋರ್ತ್ ಎಂಬವನು ತನ್ನ ಎದುರಿಯು ಸತ್ತ ಸ್ವಲ್ಪ ಕಾಲದ ತರುವಾಯ ಸತ್ತು ಹೋದದರಿಂದ, ರಾಣೀ ಪಕ್ಷದಲ್ಲಿದ್ದ

(Suffolk) ಸಫ್ಫೊಲ್ಕ್ ಎಂಬ ದೇಶಾಧಿಪತಿ ರಾಜಸಭೆಯಲ್ಲಿ ಪ್ರಧಾನಿ ಆದನು. ಆದಾಗ್ಯೂ ಇಂಗ್ಲಿಷ್ ಜನರು ಫ್ರಾನ್ಸ್ ದೇಶದಲ್ಲಿ ಉಂಟಾದ ಆಪತ್ತುಗಳಿಗೆಲ್ಲಾ ಇವನೇ ಕಾರಣನೆಂದು ಹೇಳಿ ಅವನನ್ನು ಹಗೆ ಮಾಡಿದ್ದರಿಂದ ಆ ಮೇಲಾದ ಅಂತಸ್ತಿನಲ್ಲಿ ಅವನು ಬಹಳ ದಿವಸ ನಿಲ್ಲಲಿಲ್ಲ. ತರುವಾಯ ಅವನು ಹಡಗವೇರಿ ತಪ್ಪಿಸಿ ಕೊಳ್ಳುವದಕ್ಕೆ ಯತ್ನಯಿಸುವ ವೇಳೆಯಲ್ಲಿ ಒಬ್ಬ ನಾವಿಕನು ಅವನನ್ನು ಹಿಡಿದು ಕೊಂದು ಹಾಕಿದನು.

ಆ ಕಾಲದಲ್ಲಿ ಪ್ರಜೆಗಳು ವ್ಯಸನ ಪಟ್ಟದ್ದಕ್ಕೆ (Kent) ಕೆನ್‌ತ್ ನಾಡಿನಲ್ಲಿ ಉಂಟಾದ ಕಲಹವೇ ದೃಷ್ಟಾಂತ. ಆ ಕಲಹಕ್ಕೆ ಮುಖ್ಯಸ್ತನು (Jack Cade) ಜಾಕ್ ಕೇದ್ ಎಂಬ ಹೆಸರುಳ್ಳವನು. ಅವನು ತನ್ನನ್ನು (Sir John Mortimer) ಸರ್ ಜಾನ್ ಮೊರ್ಟಿಮರ್ ಎಂಬ ಹೆಸರುಗೊಂಡವನಾದ ಮೂರನೇ ಎದ್ವರ್ದನೆಂಬ ಅರಸನ ಸಂತತಿಯವನೆಂದು ಹೇಳಿ ಕೊಂಡನು. ಆ ಕಲಹಗಾರರು ಲಂಡನ್ ಪಟ್ಟಣವನ್ನು ಹಿಡಿದು ಅಲ್ಲಿ ನಾನಾ ಕೇಡುಗಳನ್ನು ಮಾಡಿದ ತರುವಾಯ ಜಯಿಸಲ್ಪಟ್ಟು ಅವರ ಮುಖ್ಯಸ್ತನು ಕೊಲ್ಲಲ್ಪಟ್ಟನು.

ಕ್ರಿ. ಶ. 1453ನೇ ವರುಷದಲ್ಲಿ ಅರಸನು ಕೆಲವು ತಿಂಗಳ ವರೆಗೂ ರೋಗದಿಂದ ಬಹು ಬಲಹೀನನಾಗಿ ಬುದ್ಧಿ ಮರುಳಾಗಿ ಬಿದ್ದಿದ್ದನು. ಅವನು ಎಂಟು ವರುಷಕ್ಕೆ ಮುಂಚೆ ಮದುವೆ ಮಾಡಿ ಕೊಂಡಾಗ್ಯೂ ಅದು ವರೆಗೂ ಮಕ್ಕಳಾಗಲಿಲ್ಲ. ಆದಾಗ್ಯೂ ಆ ಕಾಲದಲ್ಲಿ ಅವನಿಗೆ ಒಬ್ಬ ಕುಮಾರನು ಹುಟ್ಟಿದನು. ಅವನು ಆ ಮಗುವು ಹುಟ್ಟಿದ ಸಮಯದಲ್ಲಿ ಸ್ಮರಣೆ ಇಲ್ಲದೆ ಬಿದ್ದಿದ್ದು ಅದರಿಂದ ಏನೂ ಸಂತೋಷ ಪಡಲಿಲ್ಲ. ಆ ಮಗುವಿಗೆ ಎದ್ವರ್ದನೆಂಬ ಹೆಸರು ಇಡಲ್ಪಟ್ಟಿತು. ಮತ್ತು ಅವನು ಪಟ್ಟಕ್ಕೆ ತಕ್ಕವನಾದದರಿಂದ ಮೇಲೆ ಹೇಳಿದ ಉಭಯ ಕಕ್ಷಿಗಾರರೂ ಮುಂಚಿಗಿಂತ ಅಧಿಕವಾಗಿ ಒಬ್ಬರನ್ನೊಬ್ಬರು ಹಗೆ ಮಾಡುವದಕ್ಕೆ ಇವನ ಹುಟ್ಟುವಿಕೆಯೇ ಹೇತುವೆಯಾಯಿತು.

ವೈರಿಗಳಾದ ಈ ಉಭಯ ಪಕ್ಷದವರೂ ಮಾಡಿದ ಹೋರಾಟವು ಆ ಸಮಯದಲ್ಲಿ ಅಧಿಕ ಬಲವಾಯಿತು. ಹ್ಯಾಗಂದರೆ, (Lancaster)

ಲಾಂಕೆಸ್ತೆರ್ ಎಂಬ ಪಕ್ಷದವರಿಗೆ ಮುಖ್ಯಸ್ತನಾಗಿದ್ದ (Somerset) ಸಮರ್ಸೆತ್ ನಾಡಿನ ಪ್ರಭುವನ್ನು ರಾಣಿಯು ಆಧರಿಸುತ್ತಾ ಬಂದಾಗ್ಯೂ, ಜನರು ಮುಂಚೆ (Suffolk) ಸಫ್ಫೊಲ್ಕ್ ಪ್ರಭುವನ್ನು ಹ್ಯಾಗೆ ಹಗೆ ಮಾಡಿದರೋ ಹಾಗೆಯೇ ಇವನನ್ನೂ ಹಗೆ ಮಾಡಿದರು. ಮತ್ತು ಇವನಿಗೆ ವೈರಿಯಾಗಿ ರಿಚಾರ್ಡ್ ಎಂಬುವ ದೇಶಾಧಿಪತಿಯು ಮೊದಲಲ್ಲಿ ತಾನು ಅರಸನ ಅಧಿಕಾರವನ್ನು ದೃಢ ಪಡಿಸುತ್ತೇನೆಂದು ತೋರಿಸಿದ್ದಾಗ್ಯೂ, ತರುವಾಯ ತಾನೇ ರಾಜ್ಯವನ್ನು ಹೊಂದ ಬೇಕೆಂದು ಸಾಧಿಸುತ್ತಾ ಬಂದನು. ತನಗೆ ಪಟ್ಟ ದೊರಕ ಬೇಕೆಂಬುವದಕ್ಕೆ ಇವನು ತನ್ನ ತಾಯಿಯ ಮಾರ್ಗವಾಗಿ (Lionel) ಲಿಯೋನೆಲ್ ಎಂಬ (Clarence) ಕ್ಲಾರೆನ್ಸ್ ಪ್ರಭುವಿನ ಸಂತತಿಯವನೆಂಬದಾಗಿಯೂ, ಆ ಲಿಯೋನೆಲ್ ಮೂರನೇ ಎದ್ವರ್ದನೆಂಬ ಅರಸನ ಮೂರನೇ ಕುಮಾರನೆಂಬದಾಗಿಯೂ ಈಗ ಅರಸುತನ ಮಾಡುವ ಆರನೇ ಹೆನ್ರಿ ಎಂಬವನು (Lancaster) ಲಾಂಕೆಸ್ತೆರ್ ಪ್ರಭುವಿನ ಸಂತತಿಯವನೆಂಬದಾಗಿಯೂ, ಆ ಲಾಂಕೆಸ್ತೆರ್ ಪ್ರಭುವು ಲಿಯೋನೆಲ್ ಎಂಬವನಿಗೆ ಚಿಕ್ಕವನಾಗಿದ್ದನೆಂಬದಾಗಿಯೂ ಹೇಳಿ ನ್ಯಾಯ ತೋರಿಸಿದನು. "ಒಂದು ಮುಖವ್ಯಾಜ್ಯ ನೂಲಿಗಿಂತ ನೆಟ್ಟಗೆ" ಎಂದು ಹೇಳುವರು. ಹಾಗೆಯೇ ಈ ನ್ಯಾಯವೆಲ್ಲಾ ಸರಿಯಾಗಿತ್ತು. ಆದರೆ ಪಾರ್ಲಿಮೆಂತ್ ಎಂಬುವ ದೊಡ್ಡ ಆಲೋಚನೇ ಸಂಘದವರೂ ದೇಶದವರೂ ಕೂಡ ಹಿರಿಯನ ಸಂತತಿಯವರನ್ನು ತಳ್ಳಿ ಬಿಟ್ಟು ಕಿರಿಯನ ಸಂತತಿಯವರನ್ನು ಆದು ಕೊಂಡಿದ್ದದರಿಂದ ಆ ನ್ಯಾಯವು ಸಲ್ಲಲಾರದು. ಈ ಹೋರಾಟ ಉಂಟಾದ ಮೊದಲಿಲ್ಲಿ ಮಾರ್ಗ್ರೆತ್ ಎಂಬುವ ರಾಣಿಯೂ ಮೇಲೆ ಹೇಳಿದ (York) ಯೊರ್ಕ್ ಎಂಬುವ ದೇಶಾಧಿಪತಿಯೂ ಯಾರಿಗೆ ಅಧಿಕಾರ ದೊರಕುವದೆಂದು ಹೋರಾಡಿದರೇ ಹೊರ್ತು ಬೇರೆ ಅಲ್ಲ. ತರುವಾಯ ಹೆಚ್ಚು ಕಡಿಮೆ ದೇಶದವರೆಲ್ಲರೂ ಆ ಕಾರ್ಯದಲ್ಲಿ ತಲೆ ಇಟ್ಟು ಕೊಂಡು, ಕೆಲವರು ಲಾಂಕೆಸ್ತೆರ್ ಪಕ್ಷದಲ್ಲಿಯೂ, ಬೇರೆ ಕೆಲವರು ಯೊರ್ಕ್ ಪಕ್ಷದಲ್ಲಿಯೂ ಶೇರಿ ಕೊಂಡದ್ದರಿಂದ ಬಹು ಕಠಿಣವಾದ ಸ್ವದೇಶಯುದ್ಧ ಉಂಟಾಯಿತು. ಹೀಗೆ ಯುದ್ಧ ಮಾಡಿದವರಲ್ಲಿ ಲಾಂಕೆಸ್ತೆರ್ ಪಕ್ಷದವರು ಕೆಂಪು ಗುಲಾಬಿಹೂ

ವನ್ನೂ, ಯೋರ್ಕ್ ಪಕ್ಷದವರು ಬಿಳೀ ಗುಲಾಬಿಹೂವನ್ನೂ ಗುರುತಾಗಿ ಶಿರಸ್ತ್ರಾಣದಲ್ಲಿ ಧರಿಸಿ ಕೊಂಡು ಯುದ್ಧ ಮಾಡಿದ್ದರಿಂದ, ಮೂವತ್ತು ವರುಷದ ಮಟ್ಟಿಗೂ ನಡೆದ ಈ ಅಘೋರವಾದ ಯುದ್ಧವು (War of the Roses) ಗುಲಾಬಿಯುದ್ಧವು ಎಂದು ಹೇಳಲ್ಪಟ್ಟಿತು. ಆ ಯುದ್ಧಕ್ಕೆ ಕೊಳ್ಳಿಯ ಯುದ್ಧವೆಂದು ಹೆಸರಿಡದೆ "ಹುಟ್ಟು ಕುರುಡನಿಗೆ ಸಾವಿರ ಕಣ್ಣು" ಎಂದು ಹೆಸರಿಟ್ಟಂತೆ, ಒಳ್ಳೇ ವಾಸನೆಯೂ ಸೌಂದರ್ಯವೂ ಉಳ್ಳ ಪುಷ್ಪದ ಹೆಸರಿಟ್ಟರು.

ಆ ಯುದ್ಧದಲ್ಲಿ ಮಧ್ಯ ತರದವರೂ ಕೀಳ್ತರದವರೂ ಮುಖ್ಯವಾಗಿ ಯೋರ್ಕ್ ಪ್ರಭುವಿನ ಸಂಗಡ ಶೇರಿ ಕೊಂಡರು. ಪ್ರಭುಗಳು ಬಹುಶಾ ಅರಸನ ಪಕ್ಷದಲ್ಲಿ ಶೇರಿದರು. ಆದರೂ (Salisbury) ಸಾಲ್ಸ್‌ಬರಿ ಪಟ್ಟದ ಪ್ರಭುವೂ ಅವನ ಮಗನಾದ (Warwick) ವಾರಿಕ್ ಪಟ್ಟದ ಪ್ರಭುವೂ ಯೋರ್ಕ್ ಎಂಬುವ ದೇಶಾಧಿಪತಿಯ ಪಕ್ಷವಾಗಿದ್ದರು. ಈ (Earl of Warwick) ವಾರಿಕ್ ಎಂಬುವ ಪ್ರಭುವು ಆ ಕಾಲದಲ್ಲಿ ಇಂಗ್ಲಾಂಡ್ ಪ್ರಭುಗಳಲ್ಲಿ ಬಹು ದೊಡ್ಡವನು. ಅವನು ಜನರಿಗೆ ಬಹು ಪ್ರಿಯನಾಗಿದ್ದದರಿಂದ ಅವನ ಅಪ್ಪಣೆಯ ಪ್ರಕಾರ ಅನೇಕರು ನಡೆದು ಕೊಳ್ಳುವರು. ಅವನಿಗೆ ಶೇರಿದ ಪರಿವಾರದವರ ಒಟ್ಟು, ಅರಸನ ಅರಮನೆಯಲ್ಲಿದ್ದ ಪರಿವಾರದವರ ಒಟ್ಟಿಗಿಂತ ಅಧಿಕವಾಗಿತ್ತು. ಅವನಿಗೆ ಶೇರಿದ ಕಕ್ಷಿಯವರು, ಮುಖ್ಯವಾಗಿ ಅವನ ಪರಾಕ್ರಮದಿಂದಲೇ ಮೇಲ್ಗೊಂಡದ್ದರಿಂದ ಅವನಿಗೆ "ಅರಸರಾಗ ಮಾಡುವವನೆಂಬ" ಹೆಸರಿಡಲ್ಪಟ್ಟಿತ್ತು.

ಅರಸನು ವ್ಯಾಧಿಯಾಗಿರುವ ಕಾಲದಲ್ಲಿ ಪಾರ್ಲಿಮೆಂತ್ ಎಂಬ ಸಂಘದವರು ಯೋರ್ಕ್ ಎಂಬ ಪ್ರಭುವನ್ನು ರಾಜ್ಯಪರಿಪಾಲಕನಾಗಿ ನೇಮಿಸಿ ಇಟ್ಟರು. ಆದಾಗ್ಯೂ ಒಂದುವರೆ ವರುಷದ ತರುವಾಯ ಹೆನ್ರಿ ಅರಸನಿಗೆ ಸ್ವಲ್ಪ ಗುಣವಾದ ವೇಳೆಯಲ್ಲಿ ರಾಣಿಯೂ, (Somerset) ಸಮರ್ಸೆತ್ ಎಂಬ ದೇಶಾಧಿಪತಿಯೂ ಅವರ ಕಕ್ಷಿಯವರೂ ಮುಖ್ಯಸ್ತರಾದರು. ಹೀಗೆ ಉಭಯ ಕಕ್ಷಿಗಳವರೂ ವಾಗ್ವಾದ ಮಾಡುತ್ತಾ ಬರುವ ಸಮಯದಲ್ಲಿ ಪಾರ್ಲಿಮೆಂತ್ ಸಂಘದವರು ಆ ವ್ಯಾಜ್ಯ ತಿರಿಸಿ ಅವರನ್ನು ರಾಜಿ ಮಾಡ ನೋಡಿದರು. ಆದಾಗ್ಯೂ ಅವರಲ್ಲಿ ಹೊತ್ತಿದ್ದ

ಅಧಿಕ ಹಗೆಯಿಂದ ಅವರು ಸಮಾಧಾನವಾಗ ಮನಸ್ಸಿಲ್ಲದವರಾಗಿ ಯುದ್ಧ ಮಾಡುವದಕ್ಕೆ ಯತ್ನವಾದರು.

ಆ ಯುದ್ಧದಲ್ಲಿ ಮೊದಲನೇ ದೊಡ್ಡ ಯುದ್ಧವು ಲಂದನ್ ಪಟ್ಟಕ್ಕೆ ಸಮೀಪವಾದ (Saint Albans) ಸಂತ್ ಆಲ್ಬನ್ಸ್ ಎಂಬ ಊರಿನಲ್ಲಿ ನಡೆಯಿತು. ಅರಸನ ರಾಣುವೆಯವರು ಕೂಡಿ ಕೊಂಡಿದ್ದ ಆ ಪಟ್ಟದ ಬೀದಿಗಳಲ್ಲಿ ಉಂಟಾದ ಆ ಯುದ್ಧದಲ್ಲಿ ಸ್ವಲ್ಪ ಕಾಲ ಜಯವು ಒಂದು ಪಕ್ಷಕ್ಕೂ ಶೇರಲಿಲ್ಲ. ತರುವಾಯ ವಾರಿಕ್ ಪ್ರಭುವೂ ಅವನ ಜನರೂ ಬಹು ವೇಗವಾಗಿ ಶತ್ರುಗಳ ಮೇಲೆ ಬಿದ್ದು ಓಡಿಸಿದ್ದರಿಂದ ಯೋರ್ಕ್ ಪಕ್ಷದವರಿಗೆ ಜಯವಾಯಿತು. ಆ ಯುದ್ಧದಲ್ಲಿ ಸಮರ್ಸೆತ್ ಪ್ರಭುವೂ, ಲಾಂಕೆಸ್ತೆರ್ ಪಕ್ಷದವರಲ್ಲಿ ಮುಖ್ಯಸ್ತರಾದ ಬೇರೆ ಅನೇಕರೂ ಸತ್ತು ಹೋದರು. ಮತ್ತು ಅರಸನ ವೈಗಾವಲಿಯವರೂ ಧ್ವಜ ಹಿಡಿಯುವವನೂ ಅವನನ್ನು ಬಿಟ್ಟು ಓಡಿ ಹೋದದರಿಂದ ಆತನು ಸಹ ಘಾಯ ಹೊಂದಿ ಶೆರೆಯಾಗಲ್ಪಟ್ಟನು. ತರುವಾಯ ಯೋರ್ಕ್ ಪ್ರಭುವು ಅರಸನಿಗೆ ಶಕ್ತಿ ಇಲ್ಲವೆಂಥೇಳಿ ಜಯಶೀಲನಾಗಿ ರಾಜ್ಯ ಪರಿಪಾಲನೆ ಮಾಡುತ್ತಾ ಬಂದನು.

ಹೀಗಾದದರಿಂದ ನಾಲ್ಕು ವರುಷಗಳ ಮಟ್ಟಿಗೂ ಯುದ್ಧವಿಲ್ಲದೆ ಇತ್ತು. ಆದಾಗ್ಯೂ ರಾಣಿಯೂ ಯೋರ್ಕ್ ಪ್ರಭುವೂ ಎಡೆ ಬಿಡದೆ ಹೇಗಾಡುತ್ತಲೇ ಇದ್ದರು. ಅದರಲ್ಲಿ ಶಾಂತ ಗುಣವೂ ದಯಾಳವೂ ಉಳ್ಳವನಾದ ಅರಸನು ಅವರನ್ನು ಸಮಾಧಾನ ಪಡಿಸುವದಕ್ಕೆ ಯಾವಾಗ್ಯೂ ಪ್ರಯಾಸ ಪಡುತ್ತಾ ಬಂದಾಗ್ಯೂ ಸಿದ್ಧಿಸಲಿಲ್ಲ. ಆದದರಿಂದ 1459ನೇ ಸಂವತ್ಸರ ಸೆಪ್ತೆಂಬರ್ ಶಿಂಗಳ 23ನೇ ತಾರೀಖಿನಲ್ಲಿ ಅರಸನ ಸೈನ್ಯವೂ ಯೋರ್ಕ್ ಪ್ರಭುವಿನ ಸೈನ್ಯವೂ (Stafford) ಸ್ಟಾಫೋರ್ಡ್ ಎಂಬ ನಾಡಿನಲ್ಲಿ (Bloreheath) ಬ್ಲೋರ್ಹೀತ್ ಎಂಬ ಮಂದೆಬೈಲಿನಲ್ಲಿ ಯುದ್ಧ ಮಾಡಿದಾಗ (Salisbury) ಸಾಲ್ಸ್‌ಬರಿ ಪ್ರಭುವು ಲಾಂಕೆಸ್ತೆರ್ ಪಕ್ಷದವರ ದಳಕರ್ತನಾದ (Audley) ಆದ್ಲಿ ಪ್ರಭುವನ್ನು ಪೂರ್ಣವಾಗಿ ಜಯಿಸಿದನು. ಆ ತರುವಾಯ ಉಭಯ ಕಕ್ಷಿಯವರೂ ಬಹು ಶೌರ್ಯವಾಗಿ ಯುದ್ಧ ತೊಡಗಿದರು. ಮುಂಚೆ ಹೇಳಿದ ಪ್ರಕಾ

ರ ಸಾಲ್ಸ್‌ಬರಿ ಪ್ರಭುವು ಜಯ ಹೊಂದಿದ ಸಂಗಡಲೇ ಯೋರ್ಕ್ ಎಂಬುವ ದೇಶಾಧಿಪತಿಯು ನಡಿಸಿ ಕೊಂಡು ಬಂದ ಸೈನ್ಯದೊಡನೆ ಶೇರಿದನು. ಆದಾಗ್ಯೂ ಲಾಂಕೆಸ್ತ್ರೆರ್ ಪಕ್ಷದವರ ಸೈನ್ಯವು ಎದುರಾಗಿ ಬಂದಾಗ ಅವರ ದಂಡು ಚದರಿ ಹೋಯಿತು. ಅವರ ದಂಡು ಸೋತು ಹೋದದರಿಂದ ಯೋರ್ಕ್ ಪಕ್ಷದವರ ಮುಖ್ಯಸ್ತರು ಓಡಿ ಹೋಗಿ ಬಚ್ಚಿಟ್ಟು ಕೊಂಡರು. ಸಂಗಡಲೇ ರಾಣಿಯು (Coventry) ಕೊವೆಂತ್ರಿ ಎಂಬ ಊರಿನಲ್ಲಿ ಪಾರ್ಲಿಮೆಂತ್ ಎಂಬುವ ಆಲೋಚನೇ ಸಂಘದವರನ್ನು ಕೂಡಿ ಬರ ಮಾಡಿ ಓಡಿ ಹೋದವರನ್ನೆಲ್ಲಾ ರಾಜದ್ರೋಹಿಗಳೆಂದು ಪ್ರಕಟ ಮಾಡಿದಳು.

ಆದಾಗ್ಯೂ ಅವರಿಗೆ ಉಂಟಾದ ಜಯವು ಬಹಳ ದಿವಸ ನಿಲ್ಲಲಿಲ್ಲ. ಹ್ಯಾಗಂದರೆ ವಾರಿಕ್ ಪ್ರಭುವೂ, ಯೋರ್ಕ್ ಪ್ರಭುವಿನ ಕುಮಾರನೂ (Calais) ಕಲೇ ಊರಿಗೆ ಓಡಿ ಹೋಗಿದ್ದು ತರುವಾಯ ಇಂಗ್ಲಾಂಡಿಗೆ ತಿರಿಗಿ ಬಂದು ತಮ್ಮ ಪರಿವಾರದವರನ್ನು ಮತ್ತೂ ಕೂಡಿಸಿ ಕೊಂಡು, (Northampton) ನೊರ್ತಾಂಪ್ಟನ್ ಊರಿನ ಅಂಚಿನಲ್ಲಿ ಅರಸನ ಸೈನ್ಯಗಳನ್ನು ಸೋಲಿಸಿ ಅರಸನನ್ನು ಶೆರೆ ಹಿಡಿದು ಕೊಂಡು, ರಾಣಿಯು ತನ್ನ ಮಗನನ್ನು ಕರಕೊಂಡು ಸ್ಕೊತ್ಲಾಂದಿಗೆ ಓಡಿ ಹೋಗ ಮಾಡಿದರು.

ಯೋರ್ಕ್ ಪ್ರಭುವು ಐರ್ಲಾಂದಿಗೆ ತಪ್ಪಿಸಿ ಕೊಂಡು ಓಡಿ ಹೋಗಿದ್ದನು. ತರುವಾಯ ತನ್ನ ಜನರು ಜಯ ಹೊಂದಿದ್ದನ್ನು ಕೇಳಿದಾಗಲೇ ಲಂದನ್ ಪಟ್ಣಕ್ಕೆ ತಿರಿಗಿ ಬಂದು, ಮತ್ತೂ ರಾಜ್ಯ ಪರಿಪಾಲನೆ ಮಾಡ ಪ್ರಾರಂಭಿಸಿದನು. ಇದಲ್ಲದೆ ತನಗೆ ರಾಜ್ಯಪಟ್ಟಾಭಿಷೇಕವು ದೊರಕಬೇಕೆಂದು ಬಹಿರಂಗವಾಗಿ ಹೇಳಿ ಕೊಂಡನು. ಅದಕ್ಕೆ ಪಾರ್ಲಿಮೆಂತ್ ಸಂಘದವರು ಸಮ್ಮತಿಸದೆ ಹೋದದರಿಂದ ಹೆನ್ರಿ ಅರಸನು ಜೀವದಿಂದಇರುವ ಮಟ್ಟಿಗೂ ಇವನೂ ಇವನ ಕುಮಾರನೂ ಪಟ್ಟ ಹೊಂದ ಬಹುದೆಂದು ಒಂದು ಒಡಂಬಡಿಕೆ ಮಾಡಲ್ಪಟ್ಟಿತು.

ಆದಾಗ್ಯೂ ಮಾರ್ಗ್ರೇತ್ ರಾಣಿಯು ಹಾಗೆ ಒಪ್ಪಿ ಕೊಳ್ಳುವದಕ್ಕೆ ಎಷ್ಟು ಮಾತ್ರವೂ ಮನಸ್ಸಿಲ್ಲದವಳಾಗಿ, ನನ್ನ ಕುಮಾರನ ಬಾಧ್ಯತೆಯನ್ನು ನಾನು ಬೇರೊಬ್ಬನಿಗೂ ಕೊಡುವದಕ್ಕೆ ಸಮ್ಮತಿಸಲಾರೆನೆಂದು ಹೇಳಿ,

ಮತ್ತೂ ಯುದ್ಧಕ್ಕೆ ಯತ್ನವಾದಳು. ಪ್ರಾರಂಭದಲ್ಲಿ ಜಯ ಹೊಂದಿದಳು. ಹ್ಯಾಗಂದರೆ, ಯೋರ್ಕ್ ಪ್ರಭುವು (Yorkshire) ಯೋರ್ಕ್‌ಷೀರ್ ನಾಡಿನಲ್ಲಿ ತನಗೆ ಉಂಟಾಗಿದ್ದ ಒಂದು ಕೋಟೆಯಲ್ಲಿ ಇದ್ದು ಅರಸನ ಸೈನ್ಯವಾದ ದೊಡ್ಡ ಸಮೂಹದ ಸಂಗಡ ಅವಿವೇಕವಾಗಿ ಯುದ್ಧ ಮಾಡ ಬಂದದ್ದರಿಂದ ಅವನು ಕೊಲ್ಲಲ್ಪಟ್ಟನು. ಮತ್ತು ಅವನ ದಂಡೆಲ್ಲಾ ನಾಲ್ಕು ದಿಕ್ಕುಗಳಲ್ಲಿಯೂ ಚದರಿಸಲ್ಪಟ್ಟರು.

ಇದರ ತರುವಾಯ ಒಂದು ಸಮಯದಲ್ಲಿ ಇವರಿಗೂ ಇನ್ನೊಂದು ಸಮಯದಲ್ಲಿ ಅವರಿಗೂ ಜಯವಾಗುವದು. ಒಂದು ದಿವಸ ಹೊಸದಾಗಿ ಯೋರ್ಕ್ ಪ್ರಭುವೆಂಬ ಪಟ್ಟ ಹೊಂದಿದವನು (Hereford) ಹೆರಿಫೋರ್ಡ್ ಪಟ್ಣದ ಸಮೀಪದಲ್ಲಿ ಇರುವ (Mortimer's Cross) ಮೊರ್ಟಿಮರ್ ಕ್ರಾಸ್ ಎಂಬ ಸ್ಥಳದಲ್ಲಿ ಲಾಂಕೆಸ್ತ್ರರ್ ಕಕ್ಷಿಯವರ ದಂಡನ್ನು ಮುರಿಯ ಬಡಿದನು. ಆದಾಗ್ಯೂ ಸಂಗಡಲೇ ರಾಣಿಯಾದವಳು ತಾನೇ ಉತ್ತರ ಶೀಮೆಗಳಿಂದ ಬಂದ ಧೈರ್ಯವೂ, ಕ್ರೂರವೂ, ಉಳ್ಳ ಯುದ್ಧ ವೀರರಾದ ಸೈನ್ಯದೊಡನೆ ಲಂದನ್ ಪಟ್ಣದಿಂದ ಹೊರಟು (St. Albans) ಸಂತ್ ಆಲ್ಬನ್ಸ್ ಊರಿನ ಬಳಿಯಲ್ಲಿ ಉಂಟಾದ ಎರಡನೇ ಯುದ್ಧದಲ್ಲಿ ಅವರನ್ನು ಚದರ ಬಡಿದು, ವಾರಿಕ್ ಪ್ರಭುವಿನ ದಂಡಿನಲ್ಲಿ ಶೆರೆಯಾಗಿದ್ದ ಅರಸನನ್ನು ಬಿಡಿಸಿ ಕೊಂಡಳು.

ಹಾಗೆ ಜಯ ಹೊಂದಿದ ಸಂಗಡಲೇ ಅವಳು ಲಂದನ್ ಪಟ್ಣಕ್ಕೆ ಹೋಗದೆ ಯುದ್ಧರಂಗದಲ್ಲಿಯೇ ತಂಗಿದ್ದು ತನ್ನ ರಾಣುವೆಯವರು ಸುತ್ತಲಿದ್ದ ಗ್ರಾಮಗಳನ್ನು ಅನ್ಯಾಯವಾಗಿ ಕೊಳ್ಳೆ ಮಾಡುವ ಹಾಗೆ ಸ್ಥಳ ಕೊಟ್ಟಳು.

ಎದ್ವರ್ದನೆಂಬುವ ಯೋರ್ಕ್ ಪಟ್ಣದ ಪ್ರಭುವು ವಾರಿಕ್ ಪ್ರಭುವಿನ ಸಂಗಡ ಶೇರಿ ಕೊಂಡು ನೆಟ್ಟಗೆ ರಾಜಧಾನಿಯ ಮೇಲೆ ಹೊರಟನು. ಆ ಪಟ್ಣದವರು ಅರ್ಚಟಿಸುತ್ತಾ ಅವನನ್ನು ಎದುರುಗೊಂಡು ಬಂದು ಅವನನ್ನು "ನಾಲ್ಕನೇ ಎದ್ವರ್ದನೆಂಬುವ" ಹೆಸರ್ಗೊಂಡ ಅರಸನಾಗಿ ಪ್ರಸಿದ್ಧ ಮಾಡಿದರು.

ಹೀಗೆ ಹೆನ್ರಿ ಅರಸನು ಶಾಂತನೂ ಯುದ್ಧಾಪೇಕ್ಷೆ ಇಲ್ಲದವನೂ ಆದದರಿಂದ ಅವನನ್ನು ತೆಗೆದು ಹಾಕಿ ಅಧಿಕ ಧೈರ್ಯವೂ ಮನೋದೃಢವೂ ಉಳ್ಳವನನ್ನು ಅರಸನಾಗ ಮಾಡಿದರು. ಆದದರಿಂದ ನ್ಯಾಯಕ್ಕಿಂತ ಕೆಲ ವೇಳೆ ಬಲವೇ ಹೆಚ್ಚು ಎಂದು ಕಾಣುತ್ತದೆ.

ಎದ್ವರ್ದನು ಅರಸನಾಗಿದ್ದಾಗ್ಯೂ ಸುಖವಾಗಿ ವಿಶ್ರಾಂತಿ ಹೊಂದುವದಕ್ಕೆ ಸಮಯವಿಲ್ಲ. ಹ್ಯಾಗಂದರೆ ಮಾರ್ಗ್ರೆತ್ ರಾಣಿಯು ವೀರರಾದ ದೊಡ್ಡ ಸೈನ್ಯದೊಡನೆ ಯುದ್ಧ ಮಾಡ ಸಿದ್ಧವಾಗಿ ನಿಂತಳು. ಎದ್ವರ್ದನು ಲಂದನ್ ಪಟ್ಣದೊಳಗೆ ಪ್ರವೇಶಿಸಿದ್ದನ್ನು ಅವಳು ಕೇಳಿದಾಗಲೇ ಉತ್ತರ ಶೀಮೆಗಳ ಮೇಲೆ ದಂಡು ನಡಿಸಿ ಕೊಂಡು ಹೊರಟಳು. ಎದ್ವರ್ದ್ ಅರಸನು ಇದನ್ನರಿತು (Warwick) ವಾರಿಕ್ (Norfolk) ನೊರ್ಫೋಲ್ಕ್ ಎಂಬ ಪ್ರಭುಗಳ ದಂಡುಗಳನ್ನೂ ರಾಣಿಯ ರಾಣುವೆಯವರು ಮುಂಚೆ ಮಾಡಿದ ಕೇಡುಗಳಿಗೆ ಮುಯ್ಯಿ ತೀರಿಸ ಬೇಕೆಂದು ಶಪಥ ಮಾಡಿ ಕೊಂಡಿದ್ದ ದಕ್ಷಿಣ ನಾಡುಗಳವರಾದ ಅನೇಕರನ್ನೂ ತನ್ನ ಸೈನ್ಯದ ಸಂಗಡ ಕೂಡಿಸಿ ಕೊಂಡು ಆ ರಾಣಿಯನ್ನು ಹಿಂದಟ್ಟಿ ಹೋದನು. ಆ ಎರಡು ಸೈನ್ಯಗಳೂ (Towton) ತೌತೊನ್ ಊರಿನ ಬಳಿಯಲ್ಲಿ ಮುಖಾಮುಖವಾಗಿ ನಿಂತವು. ಆ ಸಮಯದಲ್ಲಿ ಯೋರ್ಕ್ ಪಕ್ಷದವರಾದ ಐವತ್ತು ಸಾವಿರ ಮಂದಿ ಯುದ್ಧಸ್ಥರೂ, ಲಾಂಕೆಸ್ತೆರ್ ಪಕ್ಷದವರಾದ ಅರುವತ್ತು ಸಾವಿರ ಮಂದಿ ಯುದ್ಧಸ್ಥರೂ ಆದ ಒಂದು ಲಕ್ಷಕ್ಕಧಿಕವಾದ ಇಂಗ್ಲಿಷಿನವರು ಆ ರಣರಂಗದಲ್ಲಿ ಯುದ್ಧ ಮಾಡ ಆಯತ್ತವಾಗಿ ನಿಂತಿದ್ದರು. ಇವರು ಬಹಳ ಕಾಲ ಘೋರ ಯುದ್ಧ ಮಾಡಿದರು. ಮಧ್ಯಾಹ್ನದ ತರುವಾಯ ನಾಲ್ಕು ಘಂಟೆಗೆ ಯುದ್ಧ ಮಾಡ ಆರಂಭಿಸಿ ಆ ದಿವಸದ ರಾತ್ರಿ ಎಲ್ಲಾ ಯುದ್ಧ ಮಾಡುತ್ತಾ ನಿಂತರು. ಆ ಘೋರವಾದ ಯುದ್ಧದಲ್ಲಿ ಉಭಯ ಪಕ್ಷದವರೂ ಕನಿಕರವೆಷ್ಟು ಮಾತ್ರವೂ ತೋರಿಸದೆ, ನೆಂಟರಿಗೆ ವಿರೋಧವಾಗಿ ನೆಂಟರೂ, ಸ್ನೇಹಿತರಿಗೆ ವಿರೋಧವಾಗಿ ಸ್ನೇಹಿತರೂ ನಿಂತು ಕೊಂಡು ಮೂರ್ಖ ಲಹರಿಯುಳ್ಳವರಾಗಿ ಹೋರಾಡಿದ್ದರಿಂದ, ಆ ಸ್ಥಳದಲ್ಲಿ ಗಡ್ಡೆಯಾದ ಮಳೆ ಸುರಿಯಲು, ಬಿಳೀ ವರ್ಣವಾಗಿದ್ದ ನೆಲವೆಲ್ಲಾ ಸ್ವದೇಶದವರ ರಕ್ತದಿಂದ ಕೆಂಪಾಯಿತು.

ಮಾರಣೆ ದಿವಸ ಉದಯ ಹೊಸ ಅರಸನ ಸೈನ್ಯವು ಶತ್ರುಸೈನ್ಯದ ಮುಂದೆ ಹಿಂಜರಿದು ಹೋಗುವ ಸಮಯದಲ್ಲಿ ಅವರಿಗೆ ಸಹಾಯವಾಗಿ ನೋರ್ಫೋಲ್ಕ್ ಪ್ರಭುವು ಬೇರೆ ಕೆಲವು ಯುದ್ಧವೀರರನ್ನು ಕರಕೊಂಡು ಬಂದದರಿಂದ ಅವರಿಗೆ ಜಯ ಉಂಟಾಯಿತು. ಬಹು ನಿರ್ಭಾಗ್ಯರಾದ ಮಾರ್ಗ್ರೆತ್ ರಾಣಿಯೂ ಅವಳ ಪುರುಷನಾದ ಹೆನ್ರಿ ಅರಸನೂ ಸ್ಕೊತ್ಲಾಂದಿಗೆ ಓಡಿ ಹೋಗಲು, ಎದ್ವರ್ದ್ ಅರಸನು ಜಯಶೀಲನಾಗಿ ತಿರುಗಿದನು. ಆ ಯುದ್ಧವನ್ನು ಕುರಿತು ಯೋಚಿಸುವಾಗ ಇಂಗ್ಲಿಷಿನವರು ಮಾಡಿದ ಎಲ್ಲಾ ಯುದ್ಧಗಳಲ್ಲಿಯೂ ಇದೇ ಭಯಂಕರವಾದದ್ದೆಂದೂ, ಇದರಲ್ಲಿ ಸತ್ತವರ ಲೆಖ್ಖ ದೊಡ್ಡದೆಂದೂ, ಇದರಲ್ಲಿ ತೋರಿಸಿದ ಪರಾಕ್ರಮವು ಅಧಿಕವಾದದ್ದೆಂದೂ, ಚನ್ನಾಗಿ ವಿಧಾವಿಸಿ ನೋಡುವವರಿಗೆ ಇದರಿಂದ ಉಂಟಾಗುವ ವ್ಯಸನವು ಅತ್ಯಧಿಕವಾದದ್ದೆಂದೂ ಚನ್ನಾಗಿ ತೋರುತ್ತದೆ.

(Towton) ತೌತೋನ್ ಊರಿನ ಯುದ್ಧಕ್ಕೆ ಮೂರು ತಿಂಗಳಾದ ತರುವಾಯ ಎದ್ವರ್ದನೆಂಬವನು (Westminster) ವೆಸ್ತ್ಮಿನ್‌ಸ್ತರ್ ಎಂಬುವ ದೊಡ್ಡ ದೇವಾಲಯದಲ್ಲಿ ಪಟ್ಟಾಭಿಷೇಕ ಮಾಡಿ ಕೊಂಡದ್ದಲ್ಲದೆ, ಅವನ ಸಹೋದರರಲ್ಲಿ (George) ಜಾರ್ಜ್ ಎಂಬವನಿಗೆ (Clarence) ಕ್ಲಾರೆನ್‌ಸ್ ಪ್ರಭುವೆಂದೂ, ರಿಚಾರ್ದ್ ಎಂಬವನಿಗೆ (Gloucester) ಗ್ಲೋಸ್ತರ್ ಪ್ರಭುವೆಂದೂ ಪಟ್ಟ ಧರಿಸಲ್ಪಟ್ಟಿತು. ಇವರನ್ನು ಕುರಿತು ಇನ್ನು ಮೇಲೆ ಹೇಳಲ್ಪಡುವದು. ಮತ್ತು ತಮ್ಮ ಚಿತ್ತಕ್ಕೆ ವಿಧೇಯರಾದ ಬೇರೆ ಪಾರ್ಲಿಮೆಂತ್ ಎಂಬುವ ಸಂಘದವರನ್ನು ಕೂಡಿಬರ ಮಾಡಿ, ನಿವರ್ತಿಸಲ್ಪಟ್ಟ ಅರಸನನ್ನೂ, ರಾಣಿಯನ್ನೂ, ಲಾಂಕೆಸ್ತರ್ ಪಕ್ಷದವರಾದ ಅನೇಕ ಪ್ರಭುಗಳನ್ನೂ ಮರಣಕ್ಕೆ ವಿಧಿಸಲ್ಪಟ್ಟವರೆಂದು ತೀರ್ಪು ಮಾಡಿಸಿದನು.

ಹಾಗಿದ್ದಾಗ್ಯೂ ಮಾರ್ಗ್ರೆತ್ ರಾಣಿಯು ಮನ ಸಡ್ಲವಾಗದೆ ಇದ್ದು, ಫ್ರಾನ್‌ಸ್ ದೇಶಕ್ಕೆ ಓಡಿ ಹೋಗಿ ಮಾರಣೆ ವರುಷದಲ್ಲಿ ತ್ರಾಣೀಕರರಾದ ಸಣ್ಣ ದಂಡಿನ ಸಂಗಡ ಇಂಗ್ಲಾಂದಿಗೆ ತಿರಿಗಿ ಬಂದು ಉತ್ತರ ನಾಡುಗಳಲ್ಲಿದ್ದ ಕೆಲವು ಕೋಟೆಗಳನ್ನು ಹಿಡಿದು ಕೊಂಡಳು. ಆದಾಗ್ಯೂ

ಅವಳ ಸೈನ್ಯದವರು ಯುದ್ಧಾಭ್ಯಾಸ ಕಲಿಯದವರಾದದರಿಂದ ವಾರಿಕ್ ಎಂಬ ಸೈನ್ಯಾಧಿಪತಿಯು ತನ್ನ ಸೈನ್ಯದ ಸಂಗಡ ಎದುರಿಗೆ ಬಂದಾಗಲೇ ಅವರೆಲ್ಲರೂ ಚದರಿ ಹೋಗಲು ರಾಣಿಯು ಮತ್ತೂ ಓಡಿ ಹೋಗ ಬೇಕಾಯಿತು. ಹೀಗೆ ರಾಣಿಯೂ ಸಣ್ಣ ಹುಡುಗನಾದ ಅವಳ ಮಗನೂ ಓಡಿ ಹೋಗುವಾಗ ನಡೆದ ವರ್ತಮಾನವನ್ನು ಕುರಿತು ಫ್ರಾನ್ಸ್ ದೇಶದ ಚರಿತ್ರಗಾರನೊಬ್ಬನು ಬರೆದ ಒಂದು ಕಥೆಯುಂಟು. ಅದು ನಿಜವಾದ ಚರಿತ್ರೆ ಎಂದು ತೋರುವದರಿಂದ ಕೆಳಗೆ ಅದನ್ನು ಬರೆಯುತ್ತೇವೆ. ಏನಂದರೆ, ಒಬ್ಬ ಕೆಲಸದವನ ಹೊರ್ತು ಮಿಕ್ಕಾದವರೆಲ್ಲರೂ ಅವರನ್ನು ಬಿಟ್ಟು ಹೋದಾಗ, ಅವರು ಬಹು ಅಪಾಯದಲ್ಲಿ ಶಿಕ್ಕಿ ಸಮುದ್ರಥಡದ ಬಳಿಯಲ್ಲಿರುವ ಒಂದು ಕಾಡಿನಲ್ಲಿ ಅಲೆಯುವಾಗ ಕೆಲವು ಕೊಳ್ಳೆಗಾರರು ಬಂದು ಅವರ ಕೈಯ್ಯಲ್ಲಿದ್ದ ಹಣಗಳನ್ನೂ ಆಭರಣಗಳನ್ನೂ ಅಪಹರಿಸಿ ಕೊಂಡು, ಅವರನ್ನು ಸಹ ಹಿಡಿದು ಕೊಂಡರು. ಆ ಕೊಳ್ಳೆಗಾರರು ಕೊಳ್ಳೆ ಮಾಡಿದ ವಸ್ತುಗಳನ್ನು ಹಂಚಿ ಕೊಳ್ಳುವಾಗ ಜಗಳವಾಡಿ ಕೊಂಡಿರುವದನ್ನು ಕಂಡು ರಾಣಿಯು ತನ್ನ ಮಗನ ಸಹಿತವಾಗಿ ತಪ್ಪಿಸಿ ಕೊಂಡು ಹೋದಳು. ಆದಾಗ್ಯೂ ಸ್ವಲ್ಪ ಆಚೇ ಹೋಗುವಲ್ಲಿ ಬೇರೊಬ್ಬ ಕಳ್ಳನು ಎದುರಿಗೆ ಬರುವದನ್ನು ಕಂಡು, ರಾಣಿಯು ತನಗೆ ಸಹಾಯ ಮಾಡುವದಕ್ಕೆ ಒಬ್ಬರೂ ಇಲ್ಲವೆಂದು ತಿಳಿದು, ಯಾವಾಗಲೂ ಮನೋಧೈರ್ಯವೂ ದೃಢವೂ ಉಳ್ಳವಳಾದದರಿಂದ ಆ ಸಮಯದಲ್ಲಿ ಸ್ವಲ್ಪವಾದರೂ ಮನಸ್ಸಿನಲ್ಲಿ ಕಳವಳ ಪಡದೆ ಆ ಕಳ್ಳನನ್ನು ನೋಡಿ "ಸ್ನೇಹಿತನೇ! ಇಗೋ ನಿನ್ನ ಅರಸನ ಮಗನು ನಿನ್ನ ಶರಣು ಹೊಕ್ಕಿದ್ದಾನೆ" ಎಂದು ಆ ಸಣ್ಣ ಹುಡುಗನನ್ನು ಅವನ ಕೈಯಲ್ಲಿ ಒಪ್ಪಿಸಿ ಕೊಟ್ಟಳು. ಆ ಕಳ್ಳನು ಅರಸನ ಕುಮಾರನೆಂದು ಅಂಜಿ ಕೊಂಡದ್ದಲ್ಲದೆ, ಅವರ ಉಪದ್ರವನ್ನು ಕಂಡು ಮನಸ್ಸು ಕರಗಿ ಭಯ ಪಡ ಬೇಡಿರಿ, ನಾನೇ ನಿಮ್ಮನ್ನು ಕಾದು ಕೊಳ್ಳುತ್ತೇನೆ ಎಂದು ಹೇಳಿ ಅಪಾಯವಿಲ್ಲದೆ ಅವರನ್ನು ಅವರು ಸೇರ ಬೇಕಾದ ಆಶ್ರಯಕ್ಕೆ ಕರಕೊಂಡು ಹೋದನು.

ಕ್ರಿ. ಶ. 1464ನೇ ವರುಷದಲ್ಲಿ ಲಾಂಕೆಸ್ತೆರ್ ಪಕ್ಷದವರು ತಿರಿಗಿ ಮಹಾ ಬಲವಾಗಿ ಎದ್ದು ತಾವು ಕಳಕೊಂಡ ಅಧಿಕೃವನ್ನು ತಿರಿಗಿ ಸಂಪಾದಿ

ಸಿ ಕೊಳ್ಳ ಬೇಕೆಂದು ಯುದ್ಧ ಮಾಡ ಆರಂಭಿಸಿದರು. ಆ ಸಮಯದಲ್ಲಿ ಬಹು ದೃಢವೂ ಚುರುಕೂ ಉಳ್ಳವಳಾದ ಮಾರ್ಗ್ರೆತ್ ರಾಣಿಯು ಸ್ಕೊತ್ಲಾಂದಿಗೆ ಹೋಗಿ ಯುದ್ಧಪ್ರಯತ್ನಗಳನ್ನು ನೋಡಿ ಕೊಂಡು, ತನ್ನ ಪರಿವಾರದವರನ್ನು ದೃಢ ಪಡಿಸಿ ಕೊಂಡು ಬಂದಳು. ಎರಡು ಅಘೋರ ಯುದ್ಧಗಳು ಒಡನೊಡನೆ ನಡೆದವು. ಅವುಗಳಲ್ಲಿ ವಾರಿಕ್ ಪ್ರಭುವಿನ ಸಹೋದರನಾದ (Montague) ಮೊಂತೆಗು ಎಂಬ ಪ್ರಭುವು ಯೋರ್ಕ್ ಪಕ್ಷದ ಸೈನ್ಯಕ್ಕೆ ಮುಖ್ಯಸ್ತನಾಗಿ ಎರಡು ಯುದ್ಧಗಳಲ್ಲಿಯೂ ಜಯ ಹೊಂದಿದನು. ಮೊದಲನೇ ಯುದ್ಧವು (Hedgely) ಹೆಜ್ಲಿ ಎಂಬ ಮೈದಾನದಲ್ಲಿ ಉಂಟಾಯಿತು. ಅದರಲ್ಲಿ ಮುಂಚೆ ಎದ್ವರ್ದ್ ಅರಸನಿಗೆ ಶರಣಾಗತನಾದ ಲಾಂಕೆಸ್ತೆರ್ ಪಕ್ಷದವರಾದ (Sir Ralph Percy) ಸರ್ ರಾಲ್ಫ್ ಪೆರ್ಸಿ ಎಂಬವನೂ ಸಮರ್‌ಸೆತ್ ಎಂಬ ಶ್ರೇಷ್ಠ ಪ್ರಭುವೂ ಅಪಜಯ ಹೊಂದಿದರು. ಎರಡನೇ ಯುದ್ಧವು (Hexham) ಹೆಕ್ಸಮ್ ಎಂಬ ಊರಿನ ಬಳಿಯಲ್ಲಿ ನಡೆಯಿತು. ಅದರಲ್ಲಿ ಉಭಯ ಪಕ್ಷದವರೂ ಬಹು ಬಿಡುವಾದವಾಗಿ ಹೋರಾಡಿದ ತರುವಾಯ ಮಾರ್ಗ್ರೆತ್ ರಾಣಿಯ ಮುಖ್ಯ ಸೈನ್ಯವು ಬೆನ್ನು ಕೊಟ್ಟು ಓಡಿ ಹೋಯಿತು.

ಆ ಪರ್ಯಂತರ ಹೆನ್ರಿ ಅರಸನು ಮಾರ್ಗ್ರೆತ್ ರಾಣಿಯ ಸಂಗಡ ಇದ್ದನು. ಆದಾಗ್ಯೂ ಹೆಕ್ಸಮ್ ಊರಿನ ಯುದ್ಧದ ತರುವಾಯ ಅವನು (Lancashire) ಲಾಂಕೆಷೀರ್ ನಾಡಿಗೆ ಓಡಿ ಹೋಗಿ ಅಲ್ಲಿ ಬಚ್ಚಿಟ್ಟು ಕೊಂಡನು. ಮಾರಣೆ ವರುಷದಲ್ಲಿ ಅವನ ಪರಿಜನರಲ್ಲಿ ಒಬ್ಬನು ದ್ರೋಹ ಮಾಡಿ ಅವನನ್ನು ತೋರಿಸಿ ಕೊಟ್ಟನು. ಅದರ ತರುವಾಯ ಅವನನ್ನು ಶೆರೆಯಾಗಿ ಲಂದನ್ ಪಟ್ಟಕ್ಕೆ ತೆಗೆದು ಕೊಂಡು ಹೋದಾಗ ವಾರಿಕ್ ಎಂಬುವ ಪ್ರಭುವು, ಈಗ ಅವನು ಆಪತ್ತಿನಲ್ಲಿ ಬಿದ್ದರೂ ಮುಂಚೆ ಆಳಿದ ಚಕ್ರವರ್ತಿ ಎಂದು ಎಷ್ಟು ಮಾತ್ರವೂ ಎಣಿಸದೆ, ಅವನನ್ನು ಕುದುರೆಯ ಮೇಲೆ ಏರಿಸಿ ಎರಡು ಕಾಲುಗಳನ್ನೂ ಅಂಕೋಲೆಯಲ್ಲಿ ಕಟ್ಟಿಬಿಟ್ಟು ಬೀದಿಗಳಲ್ಲೆಲ್ಲಾ ತೆಗದು ಕೊಂಡು ಹೋಗಿ ಅವಮಾನ ಪಡಿಸಿದನು. ತರುವಾಯ ಐದು ವರುಷಗಳ ಪರ್ಯಂತರ ಅವನು ಲಂದನ್ ಪಟ್ಟದ ಕೋಟೆಯಲ್ಲಿ ಶೆರೆಯಾಗಿದ್ದನು. ಆ ಕೋಟೆಯಲ್ಲಿ ಅವರು ಅ

ವನನ್ನು ದಯವಾಗಿ ನಡಿಸಿದರು. ಅವನು ತನ್ನ ಇಷ್ಟದ ಪ್ರಕಾರ ನಾನಾ ಕೆಲಸಗಳನ್ನು ಮಾಡಿ ಕೊಂಡು, ಮುಂಚೆ ರಾಜ್ಯದ ಚಾರವನ್ನು ಹೊತ್ತು ಕೊಂಡಿದ್ದ ಕಾಲದಲ್ಲಿ ಅನುಭವಿಸಿದ ಸುಖಕ್ಕಿಂತ ಅಧಿಕ ಸುಖವನ್ನು ಹೊಂದಿದನೆಂಬುವದಕ್ಕೆ ಏನೂ ಸಂದೇಹವಿಲ್ಲ.

ಎಡ್ವರ್ಡ್ ಅರಸನು ಈ ಪ್ರಕಾರ ಆಕ್ಷೇಪಣೆ ಇಲ್ಲದೆ ಇಂಗ್ಲಾಂಡ್ ರಾಜ್ಯವನ್ನು ಆಳುತ್ತಾ ಬಂದನು. ಅವನಿಗೆ ಎದುರಾಳಿಯಾಗಿದ್ದವ... ಶೆರೆಯಲ್ಲಿ ಮುಚ್ಚಲ್ಪಟ್ಟಿದ್ದನು. ಮಾರ್ಗ್ರೆತ್ ರಾಣಿಯು ಅನ್ಯ ದೇ... ಓಡಿ ಹೋಗಿದ್ದಳು. ಮತ್ತು ಲಾಂಕೆಸ್ತ್ರರ್ ಪಕ್ಷದವರಾದ ಘನಪ... ಚುಗಳು ಅನೇಕರು ಪರದೇಶಿಗಳಾಗಿ ಭಿಕ್ಷ ಎತ್ತಿ ಕೊಂಡು ... ಇದಲ್ಲದೆ ಅವನು ಇಂಪಾದ ನಯ ವಚನಗಳನ್ನು ಹೇಳು... ಸೌಂದರ್ಯವಾದ ರೂಪವುಳ್ಳವನಾಗಿಯೂ ಇದ್ದದರಿಂದ ... ಅವನ ಮೇಲೆ ಬಹಳ ಪ್ರೀತಿ ಪಟ್ಟರು. ಆದರೆ ಹೆಚ್ಚಿದ ಕ... ಣ ಮಾರ್ಪಟ್ಟು ಕೆಟ್ಟು ಹೋದನು. ಅವನು ರಣರಂಗದಲ್ಲಿ ... ಶಾಲಿಯೂ ಮನೋದೃಢವುಳ್ಳವನೂ ಆಗಿದ್ದನು. ಯುದ್ಧ ನಿವರ್ತಿಯಾ... ಗಿ ಶಾಂತಿಯಾಗಿರುವ ಕಾಲದಲ್ಲಿ ದುರ್ಮಾರ್ಗನಾಗಿ ವ್ಯರ್ಥ ಖರ್ಚು ಮಾಡಿ, ರಾಜ್ಯಕಾರ್ಯಗಳನ್ನು ಕುರಿತು ಎಷ್ಟು ಮಾತ್ರವೂ ಚಿಂತಿಸದವನಾದನು.

1464ನೇ ವರುಷದ ಮೇ ತಿಂಗಳಲ್ಲಿ ಅವನು (St. Albans) ಸಂತ್ ಆಲ್ಬನ್ಸ್ ಊರಿನಲ್ಲಿ ನಡೆದ ಎರಡನೇ ಯುದ್ಧದಲ್ಲಿ ಲಾಂಕೆಸ್ತ್ರರ್ ಪಕ್ಷದವರ ಸಂಗಡ ಶೇರಿ ಕೊಂಡು ರಣರಂಗದಲ್ಲಿ ಮಡಿದು ಹೋದ (Sir John Grey) ಸರ್ ಜಾನ್ ಗ್ರೇ ಎಂಬವನ ವಿಧವೆಯಾದವಳು ತನ್ನ ಪುರುಷನು ರಾಜದ್ರೋಹಿ ಎಂದು ಕಳಕೊಂಡ ಭೂಮಿಗಳನ್ನು ಕುರಿತು ಒಂದು ದಿವಸ ಅರಸನಿಗೆ ವಿಜ್ಞಾಪನೆ ಮಾಡಿ ಕೊಳ್ಳುವದಕ್ಕೆ ರಾಜಸ್ಥಾನಕ್ಕೆ ಬಂದಾಗ ಅವಳನ್ನು ಅರಸನು ಬಹು ರೂಪವತಿ ಎಂದು ಕಂಡು, ಅವಳ ಮೇಲೆ ಆಶೆ ಪಟ್ಟು ರಹಸ್ಯವಾಗಿ ಮದುವೆ ಮಾಡಿ ಕೊಂಡನು. ಅದೇ ವರುಷದ ಸೆಪ್ತೆಂಬರ್ ತಿಂಗಳಲ್ಲಿ ಅವನು ಅವಳನ್ನು ಅರಸಿ ಎಂದು ಬಹಿರಂಗವಾಗಿ ಹೇಳಿದ್ದರಿಂದ ರಾಜಸಮ್ಮುಖದವರಾದ ಪ್ರ

ಭುಗಳು ಅನೇಕರು ವ್ಯಸನ ಪಟ್ಟರು. ಮತ್ತು ಅವನಿಗೆ ಯಾವಾಗಲೂ ಬಹು ದೃಢವಾಗಿ ಸಹಾಯ ಮಾಡುತ್ತಾ ಬಂದು, ಅವನು ರಾಜ್ಯವನ್ನು ಹೊಂದುವದಕ್ಕೆ ಮುಖ್ಯ ಕಾರಣನಾಗಿದ್ದು, ತರುವಾಯ ಅದನ್ನು ಸರಿಯಾಗಿ ಆಳುವದಕ್ಕೆ ತಕ್ಕ ಒಳ್ಳೇ ಆಲೋಚನೆ ಹೇಳಿದವನಾದ ವಾರಿಕ್ ಎಂಬ ಪ್ರಭುವಿಗೆ ಅದು ಬಹು ಬೇಸರಿಕೆಯಾಗಿತ್ತು. ಮತ್ತು ಅವನು ತನ್ನ ಅ ...ಸಿಯ ನೆಂಟರಿಗೆ ಬೇಕಾದ ದ್ರವ್ಯವನ್ನು ಕೊಟ್ಟು ಘನ ಪಡಿಸಿದ್ದರಿಂದ ಆ ...ಂಬವು ವಾರಿಕ್ ಪ್ರಭುವಿನ ಕುಟುಂಬದ ತರುವಾಯ ಆ ದೇಶದ ...ರ ಎಲ್ಲಾ ಕುಟುಂಬಗಳಿಗಿಂತ ಬಹು ಬಲವುಳ್ಳದ್ದಾಯಿತು. ಅರ ...ಯಿಯಾದ (Bedford) ಬೆಡ್ಫೋರ್ಡ್ ಊರಿನ ಮುಖ್ಯಸ್ಥ ...hard Woodville) ಸರ್ ರಿಚಾರ್ಡ್ ಉಡ್ವಿಲ್ ಎಂಬ ...ುವೆ ಮಾಡಿ ಕೊಂಡಿದ್ದಳು. ಇವನಿಗೆ ಅರಸನು (Earl ...ವೆರ್ಸ್ ಪ್ರಭು ಎಂಬ ಪಟ್ಟವನ್ನು ಧರಿಸಿ, ರಾಜ್ಯದ ಬೊಕ್ಕ ...ಸಾನಿಯಾಗ ಮಾಡಿದನು. ಮತ್ತು ಅರಸಿಯ ಸಹೋದರನಾದ ...thony) ಅಂತೋನಿ ಎಂಬವನಿಗೆ ಮೊದಲಾಗಿ (Lord Scales) ಸ್ಕೇಲ್ಸ್ ಪ್ರಭುವೆಂದೂ, ತರುವಾಯ ರಿವೆರ್ಸ್ ಪ್ರಭುವೆಂದೂ ಪಟ್ಟ ಕಟ್ಟಿದನು. ಮತ್ತು ಅವನು ಅರಸಿಯ ಸಹೋದರರನ್ನೂ ಸಹೋದರಿಗಳನ್ನೂ ದೊಡ್ಡ ಪ್ರಭುಗಳ ಕುಮಾರ್ತೆಗಳಿಗೂ ಕುಮಾರರಿಗೂ ಮದುವೆ ಮಾಡಿಸಿ ಕೊಟ್ಟನು. ಹೀಗೆ ಅರಸನು ತನ್ನಿಂದಲಾದ ಮಟ್ಟಿಗೂ ಆ (Woodville) ಉಡ್ವಿಲ್ ಎಂಬವರ ಕುಟುಂಬವನ್ನು ಹೆಚ್ಚಿಸಿದನು. ಅವರು "ಅಲ್ಪನಿಗೆ ಐಶ್ವರ್ಯ ಬಂದರೆ, ಅರ್ಧರಾತ್ರಿಯಲ್ಲಿ ಕೊಡೆ ಹಿಡಿಸಿ ಕೊಂಡ" ಎಂಬುವ ಗಾದೆಯ ಮೇರೆಗೆ ಬಹು ಗರ್ವಿಷ್ಠರಾಗಿ ನಡಿಯುತ್ತಾ ಬಂದರು.

ಹೀಗೆ ಲಾಂಕೆಸ್ಟರ್ ಪಕ್ಷದವರ ಆಶೆ ಭಂಗವಾಗಿರುವ ಕಾಲದಲ್ಲಿ ಅವರಿಗೆ ಮತ್ತೂ ಮನೋಧೈರ್ಯವನ್ನುಂಟು ಮಾಡಿದ ಬಹು ಆಶ್ಚರ್ಯವಾದ ಸಂಗತಿಯು ಯಾರೂ ನೆನಸದ ಕಾಲದಲ್ಲಿ ನಡೆಯಿತು. ಅದು ಏನಂದರೆ, ಆ ಪರ್ಯಂತರ ಮಾರ್ಗ್ರೆತ್ ರಾಣಿಗೆ ಬಹು ಹಗೆಯಾಗಿದ್ದ ವಾರಿಕ್ ಪ್ರಭುವು ಅವಳ ಕಡೆಯಲ್ಲಿ ಸೇರಿ ಕೊಂಡು ಅವಳ ಸಹಾಯಕನಾದನು. ಮತ್ತು ಕ್ಲಾರೆನ್ಸ್ ಊರಿನ ಪ್ರಭುವಾದ ಅರಸನ

ತಮ್ಮನಾದವನೂ ಕೆಲವು ಕಾಲ ಅವಳ ಕಡೆಗೆ ಬಂದನು. ಅದಕ್ಕೆ ಕಾರಣ ವೇನಂದರೆ, ನಾಲ್ಕನೇ ಎಡ್ವರ್ಡನು ತಾನು ಮಾಡಿ ಕೊಂಡ ಮದುವೆ ಯಿಂದಲೋ, ಅರಸಿಯ ಕುಟುಂಬಿದವರಿಗೆ ತೋರಿಸಿದ ದಯದಿಂದಲೋ, ಏನೋ ಉಪಚಾರ ಮಾಡದೆ ಬಿಟ್ಟದ್ದರಿಂದಲೋ, ತನಗೆ ಸಮಾನನಾದ ಆ ಬಲಿಷ್ಠ ಪ್ರಭುವಿಗೆ ವ್ಯಸನ ಬರ ಮಾಡಿದ್ದನು. ಇದಲ್ಲದೆ ಅರಸನ ಅಪ್ಪಣೆಗೆ ವಿರೋಧವಾಗಿ ಕ್ಲಾರೆನ್ಸ್ ಪ್ರಭುವು ವಾರಿಕ್ ಪ್ರಭುವಿನ ಜ್ಯೇಷ್ಠ ಪುತ್ರಿಯನ್ನು ವಿವಾಹ ಮಾಡಿ ಕೊಂಡದ್ದು ಅಧಿಕವಾದ ಮನ ಸ್ತಾಪಕ್ಕೆ ಹೇತುವೆಯಾಯಿತು. ಹೀಗಿರಲಾಗಿ ಉತ್ತರ ನಾಡುಗಳಲ್ಲಿ (Robin of Redesdale) ರೆದಸ್ಡೇಲ್ ಊರಿನವನಾದ ರೋಬಿನ್ ಎಂ ಬವನು ಕೆಲವರನ್ನು ಶೇರಿಸಿ ಕೊಂಡು ಕಲಹ ಮಾಡಿದ್ದರಲ್ಲಿ ಅರಸನ ಸೈ ನ್ಯವು ಸೋತು ಹೋಯಿತು. ಮತ್ತು ಅರಸಿಯ ತಂದೆಯೂ ಸಹೋ ದರನೂ ಯುದ್ಧರಂಗದಲ್ಲಿ ಮಡಿದು ಹೋದರು. ಆ ಕಲಹಗಾರರು ವಾರಿಕ್ ಪ್ರಭುವು ತಮ್ಮನ್ನು ಪ್ರೇರೇಪಿಸಿದನೆಂದು ಹೇಳಿ ಕೊಂಡರು. ಮತ್ತು ಸ್ವಲ್ಪ ಕಾಲದ ತರುವಾಯ ಆ ಪ್ರಭುವು ತನ್ನದಾದ ಒಂದು ಕೋಟೆಯಲ್ಲಿ ಅರಸನನ್ನು ಕೆಲವು ದಿವಸಗಳ ಮಟ್ಟಿಗೂ ಶೆರೆಯಾಗಿ ಇ ಟ್ಟದ್ದರಿಂದ ಅವರು ಹೇಳಿದ್ದು ನಿಜವೆಂದು ನಂಬುವದಕ್ಕೆ ಸ್ಥಳವುಂಟು. ಅದರ ತರುವಾಯ ಅರಸನೂ ವಾರಿಕ್ ಪ್ರಭುವೂ ಸಮಾಧಾನವಾದರು. ಆದಾಗ್ಯೂ ಮಾರಣೆ ವರುಷದಲ್ಲಿ (Lincolnshire) ಲಿನ್‌ಕೊಲನ್‌ಷೀ ರ್ ಎಂಬುವ ನಾಡಿನಲ್ಲಿ ಬೇರೆ ಒಂದು ಕಲಹ ಉಂಟಾಗಲು ಆ ಕಲಹ ಗಾರರು ಸೋತು ಹೋದಾಗ, ವಾರಿಕ್ ಪ್ರಭುವೂ ಕ್ಲಾರೆನ್ಸ್ ಎಂಬ ದೇಶಾಧಿಪತಿಯೂ ಫ್ರಾನ್ಸ್ ದೇಶಕ್ಕೆ ಓಡಿ ಹೋದರು.

ಇದರ ತರುವಾಯ ಎಡ್ವರ್ಡ್ ಅರಸನು ತನ್ನ ದೇಶದಲ್ಲೆಲ್ಲಾ ಶಾಂ ತಿಯಾಗಿರುವದನ್ನು ಕಂಡು, ಒಂದಕ್ಕೂ ಚಿಂತೆ ಪಡದೆ ಸಂಭ್ರಮವಾಗಿ ಬಾಳುತ್ತಾ ವ್ಯರ್ಥವಾಗಿ ಕಾಲ ಕಳೆದನು. ಬಹು ಬಲಿಶಾಲಿಯಾಗಿದ್ದ ವಾರಿಕ್ ಪ್ರಭು ಅರಸನ ಮೇಲೆ ಬಹು ಕೋಪಗೊಂಡು ತನ್ನ ಮನಸ್ಸಿ ನಲ್ಲಿ ಕ್ರೋಧವಿಟ್ಟು ಕೊಂಡು ಮುಯ್ಯಿ ಶೀರಿಸಿ ಕೊಳ್ಳ ಬೇಕೆಂದು ಪಂಚ ನೆ ಮಾಡುತ್ತಾ ಬಂದನು. ತಂತ್ರವಾದಿಯಾದ ಹನ್ನೊಂದನೇ(Louis XI)

ಲೂವಿಸ್ ಎಂಬುವ ಫ್ರಾನ್ಸ್ ದೇಶದ ಅರಸನು ಆ ಪ್ರಭುವನ್ನೂ ಮಾಗ್ರೆತ್ ಅರಸಿಯನ್ನೂ ಸಮಾಧಾನ ಪಡಿಸಿದನು. ಆಗ ವಾರಿಕ್ ಪ್ರಭುವಿನ ಚಿಕ್ಕ ಮಗಳನ್ನು ರಾಜಪುತ್ರನಾದ ಎಡ್ವರ್ಡನೆಂಬುವ ಬಾಲ್ಯ ಪ್ರಭುವಿಗೆ ನೇಮಿಸಲ್ಪಟ್ಟ ತರುವಾಯ ಅವನು ರಾಣಿಗೆ ತನ್ನಿಂದಲಾದ ಮಟ್ಟಿಗೂ ಸಹಾಯ ಮಾಡ ಮಾತು ಕೊಟ್ಟನು. ತರುವಾಯ ಇಂಗ್ಲಾಂಡಿನ ಮೇಲೆ ದಂಡೆತ್ತಿ ಕೊಂಡು ಹೋಗುವದಕ್ಕೆ ಬೇಕಾದ ಪ್ರಯತ್ನಗಳನ್ನೆಲ್ಲಾ ಮಾಡಿ ಮುಗಿಸಿ ಎಡ್ವರ್ಡ್ ಅರಸನು ತನಗೆ ಕೇಡು ಪ್ರಾಪ್ತಿಸುವದೆಂದು ಎಷ್ಟು ಮಾತ್ರವೂ ನೆನಸದೆ ಇದ್ದಾಗ ವಾರಿಕ್ ಪ್ರಭುವು (Dartmouth) ಡಾರ್ತ್‌ಮೌತ್ ಎಂಬ ರೇವಿನಲ್ಲಿ ದೊಡ್ಡ ಸೈನ್ಯದೊಡನೆ ಇಳಿದು, ಸಂಗಡಲೇ ಲಂಡನ್ ಪಟ್ಣಕ್ಕೆ ನಡಿಸಿ ಕೊಂಡು ಹೋದನು. ಅನೇಕ ಪ್ರಜೆಗಳು ಆ ಪ್ರಭುವಿನ ಮೇಲೆ ಪ್ರೀತಿ ಇಟ್ಟಿದ್ದದರಿಂದ ಹೇರಳವಾದ ಜನಕೂಟಗಳು ಅವನ ಬಳಿಯಲ್ಲಿ ಬಂದು ಶೇರಿದವು. ಮತ್ತು ವಾರಿಕ್ ಪ್ರಭುವಿನ ಸಹೋದರನಾದ (Montague) ಮೊಂತೆಗು ಪ್ರಭುವಿನಿಂದ ನಡಿಸಲ್ಪಟ್ಟ ಅರಸನ ರಾಣುವೆಯವರಲ್ಲಿ ಅನೇಕರು ಜಾರಿ ಕೊಂಡು ಎದುರಿಯ ಪಕ್ಷದಲ್ಲಿ ಶೇರಿ ಕೊಂಡರು. ಅದರಿಂದ ಅರಸನು ಜಯಪಟ್ಟು ಒಬ್ಬರಿಬ್ಬರು ಸೇವಕರನ್ನು ಕರಕೊಂಡು, ಬಹು ತ್ವರೆಯಾಗಿ (Burgundy) ಬರ್ಗುಂಡಿ ನಾಡಿಗೆ ಓಡಿ ಹೋದನು. ತರುವಾಯ ವಾರಿಕ್ ಪ್ರಭುವು ಜಯಶೀಲನಾಗಿ ಲಂಡನ್ ಪಟ್ಣದೊಳಗೆ ಪ್ರವೇಶಿಸಿ ತಿರಿಗಿ ಹೆನ್ರಿಯೇ ಅರಸನೆಂದು ಪ್ರಕಟ ಮಾಡಿದನು.

ವಾರಿಕ್, ಕ್ಲಾರೆನ್ಸ್ ಎಂಬ ಪ್ರಭುಗಳು ಹೀಗೆ ತಿರಿಗಿ ಬಂದ ಅರಸನ ಹೆಸರಿನಲ್ಲಿ ಆರು ತಿಂಗಳ ಮಟ್ಟಿಗೂ ರಾಜ್ಯಕಾರ್ಯಗಳನ್ನೆಲ್ಲಾ ನಡಿಸುತ್ತಾ ಬಂದರು. ಆದಾಗ್ಯೂ ಈ ಅರಸನು ಹ್ಯಾಗೆ ಆಕಸ್ಮಿಕವಾಗಿ ಘನ ಹೊಂದಿದನೋ ಹಾಗೆಯೇ ಆಕಸ್ಮಿಕವಾಗಿ ತಗ್ಗಿಸಲ್ಪಟ್ಟನು. ಹ್ಯಾಗಂದರೆ, ಮಾರಣೆ ವರುಷ ಮಾರ್ಚ್ ತಿಂಗಳ 14ನೇ ತಾರೀಖಿನಲ್ಲಿ, ಮುಂಚೆ ಓಡಿ ಹೋದ ಎಡ್ವರ್ಡನು ಹೆಚ್ಚು ಕಡಿಮೆ ಏಳು ನೂರು ರಾಣುವೆಯವರೊಡನೆ ಉತ್ತರ ನಾಡುಗಳಲ್ಲಿ ಇಳಿದು ಬಂದು, ನಾಡುಗಳ ಜನರು ಏನೂ ತಡೆ ಮಾಡಲಿಲ್ಲವೆಂದು ಕಂಡು ಯೋರ್ಕ್ ಪಟ್ಣದ ವರೆ

ಗೂ ದಂಡನ್ನು ನಡಿಸಿ ಕೊಂಡು ಬಂದು, ಅಲ್ಲಿ ಆ ಪಟ್ಣದವರ ಸಮ್ಮತಿಯ ಪ್ರಕಾರ ಸ್ವಲ್ಪ ಹೊತ್ತು ದಣುವಾರಿಸಿ ಕೊಂಡು, ತರುವಾಯ ಲಂಡನ್ ಪಟ್ಣದ ಕಡೆಗೆ ನೆಟ್ಟಗೆ ಹೊರಟು ಹೋದನು. ಹೋಗುವಾಗ ಅವನು ನನಗೆ ರಾಜ್ಯಾಧಿಕಾರ ಬೇಡ, ನನ್ನ ತಂದೆಯು ಯೋರ್ಕ್ ಪಟ್ಣದ ಪ್ರಭುವಾಗಿದ್ದದರಿಂದ ನನಗೆ ನ್ಯಾಯದ ಪ್ರಕಾರ ಸಲ್ಲಿ ಬೇಕಾದ ಭೂಮಿಗಳನ್ನು ಮಾತ್ರ ಕೇಳಿ ತೆಗದು ಕೊಳ್ಳ ಬಂದೆನು, ಎಂದು ಎಲ್ಲರ ಬಳಿಯಲ್ಲಿಯೂ ಹೇಳಿ ಕೊಂಡನು. ಅವನು ಮುಂದೆ ಹೋಗುವಲ್ಲಿ ಅನೇಕರು ಬಂದು ಶೇರಿದಲ್ಲದೆ, ಅವನು ವಾರಿಕ್ ಪ್ರಭುವಿನ ಸೈನ್ಯವಿಳಿದಿದ್ದ ಸ್ಥಳದ ಬಳಿಗೆ ಬಂದಾಗ ಕ್ಲಾರೆನ್ಸ್ ಪ್ರಭು ದ್ರೋಹ ಮಾಡಿ, ತಾನು ನಡಿಸಿದ ಸೈನ್ಯದೊಡನೆ ತನ್ನ ಸಹೋದರನ ಕಡೆಗೆ ಹೋಗಿ ಶೇರಿ ಕೊಂಡನು. ಆದದರಿಂದ ಕೆಲವು ದಿವಸಗಳ ತರುವಾಯ ಪಟ್ಣದವರು ಉತ್ಸಾಹ ಪಡಲು ಎದ್ವರ್ದನು ಲಂಡನ್ ಪಟ್ಣದೊಳಗೆ ಮತ್ತೂ ಪ್ರವೇಶಿಸಿ ಹೆನ್ರಿ ಅರಸನನ್ನು ಶೆರೆಯಲ್ಲಿಟ್ಟನು.

ಇದರ ತರುವಾಯ ಎದ್ವರ್ದ್ ಅರಸನು ಒಂದೆರಡು ತಾಸುಹೊತ್ತು ಮಾತ್ರ ಲಂಡನ್ ಪಟ್ಣದಲ್ಲಿದ್ದು (Barnet) ಬಾರ್ನೆತ್ ಊರಿನ ಬಳಿಯಲ್ಲಿ ದೊಡ್ಡ ಸೈನ್ಯದೊಡನೆ ದಂಡಿಳಿದಿದ್ದ ವಾರಿಕ್ ಪ್ರಭುವನ್ನು ಹುಡುಕ ಹೊರಟು ಹೋದನು. ಅಂದು ಸಾಯಂಕಾಲದಲ್ಲಿ ಕತ್ತಲಾಗುವ ಸಮಯಕ್ಕೆ ಅವನ ಸೈನ್ಯವು ಶತ್ರುಗಳಿಗೆದುರಾಗಿ ಬಂದು ದಂಡಿಳಿಯಿತು. ಆ ರಾತ್ರಿಯೆಲ್ಲಾ ವಾರಿಕ್ ಪ್ರಭುವಿನ ಪರಿವಾರದವರು ಆಗಾಗ್ಯೆ ಫಿರಂಗಿ ಸುಡುವದೇ ಹೊರ್ತು ಬೇರೆ ಶಬ್ದವೇನೂ ಇಲ್ಲದೆ, ಆ ಎರಡು ದೊಡ್ಡ ರಾಣುವೆಗಳು ಎದುರ ಬದುರಾಗಿ ಉದಯವಾಗುವದಕ್ಕೋಸ್ಕರ ಕಾದಿದ್ದವು. ಮಾರಣೆ ದಿವಸ ಉದಯದಲ್ಲಿ ಯುದ್ಧ ಕಲೆತಾಗ ಅಧಿಕವಾದ ಮಂಜು ಮುಚ್ಚಿ ಕೊಂಡಿದ್ದದರಿಂದ, ಹೋರಾಡಿದ ವೀರರು ತಮಗೆ ಎದುರುಮುಖವಾಗಿದ್ದ ವೀರರನ್ನು ಹೊರ್ತು ಬೇರೆ ಯಾವದನ್ನೂ ಕಾಣ ಕೂಡದೆ ಹೋಯಿತು. ಆ ಯುದ್ಧದಲ್ಲಿ ಎದ್ವರ್ದ್ ಅರಸನ ಸೈನ್ಯದಲ್ಲಿ ಮೂರರಲ್ಲೊಂದು ಭಾಗ ಬೆನ್ನು ಕೊಟ್ಟು ಓಡಿದರು. ಇದು ಅರಸನಿಗೆ ತಿಳಿಯದ್ದರಿಂದ ಅವನು ಇನ್ನೂ ಹಗೆಯವರ ನಡುವೆ ನಿಂತು ಹೋರಾಡಿದ

ನು. ತರುವಾಯ ವಾರಿಕ್ ಪ್ರಭು ಎದುರಾಗಿ ಬರುವ ತನ್ನ ಸೇವಕರಲ್ಲಿ ಒಂದು ಗುಂಪನ್ನು ಶತ್ರುಗಳೆಂದು ತಪ್ಪಾಗಿ ಎಣಿಸಿ ಅವರ ಮೇಲೆ ಬಿದ್ದು ಓಡಿಸಿದ್ದರಿಂದ ಎಡ್ವರ್ಡ್ ಅರಸನಿಗೆ ಜಯವಾಯಿತು. ಆ ದೊಡ್ಡ ಪ್ರಭುವೂ, ಮೊಂತೆಗು ಎಂಬ ಪ್ರಭುವೂ ಪದಾತಿಗಳ ಮಧ್ಯೆ ಪರಾಕ್ರಮವಾಗಿ ಯುದ್ಧ ಮಾಡುವಾಗ ಮಡಿದು ಹೋದರು.

ಹೀಗೆ ಎಡ್ವರ್ಡ್ ಅರಸನಿಂದ ರಾಜ್ಯವು ತಿರುಗಿಸಲ್ಪಟ್ಟಿತು. ಆದಾಗ್ಯೂ ಅದನ್ನು ಸ್ಥಿರ ಪಡಿಸುವದಕೋಸ್ಕರ ಇನ್ನೊಂದು ಯುದ್ಧ ಮಾಡಬೇಕಾಯಿತು. ಹ್ಯಾಗಂದರೆ ಮುಂಚೆ ವಾರಿಕ್ ಪ್ರಭುವು ಮಾರ್ಗ್ರೇತ್ ರಾಣಿ ಬರುವದಕ್ಕೆ ಬಹು ವಾಂಛೆಯಿಂದ ಕಾದಿದ್ದನು. ಅವನು ಸೋತು ಮಡಿದು ಹೋದ ಆ ದಿವಸ ಅವಳು ದೊಡ್ಡ ಸೈನ್ಯದ ಸಂಗಡ ಹಡಗದಿಂದ ಇಳಿದು ಬಂದಳು. ಆ ವರ್ತಮಾನವನ್ನು ಅರಸನು ತಿಳಿದು ಸಂಗಡಲೇ ಎದುರಾಗಿ ಹೋಗಿ (Tewkesbury) ತ್ಯೂಕ್ಸ್‌ಬರಿ ಊರಿನ ಬಳಿಯಲ್ಲಿ ಅವಳ ಸೈನ್ಯವನ್ನು ಓಡಿಸಿ ಬಿಟ್ಟನು. ಆ ದಿವಸ ಆ ರಾಣಿಯ ಮಗನಾದ ಎಡ್ವರ್ಡ್ ಎಂಬುವ ಬಾಲ್ಯ ಪ್ರಭುವು ಮಡಿದು ಹೋದನು. ಸ್ವಲ್ಪ ಹೊತ್ತಿನ ತರುವಾಯ ರಾಣಿಯು ಸಹ ಶೆರೆಯಾಗಿ ಹಿಡಿಯಲ್ಪಟ್ಟು, ಲಂದನ್ ಪಟ್ಣದ ಕೋಟೆಯಲ್ಲಿ ಮುಚ್ಚಲ್ಪಟ್ಟಳು. ಐದು ವರುಷಗಳ ತರುವಾಯ ಫ್ರಾನ್ಸ್ ದೇಶದ ಅರಸನಾದ ಲೂವಿಸ್ ಅವಳನ್ನು ಬಿಡಿಸುವದಕ್ಕೆ ಬಹಳ ಹಣ ಕೊಟ್ಟದ್ದರಿಂದ, ಅವಳು ಬಿಡುಗಡೆಯಾಗಿ ಸ್ವದೇಶಕ್ಕೆ ಹೋಗಿ ಶೇರಿದಳು. ನಾನಾ ವಿಧ ಸುಖ ದುಃಖಗಳನ್ನು ಅನುಭವಿಸಿ, ನಾನಾ ಸಂಗತಿಗಳನ್ನು ಕಂಡಿದ್ದ ಆ ರಾಣಿಯು ಆ ಸ್ಥಳದಲ್ಲಿಯೇ ಸತ್ತು ಹೋದಳು. ಹೆನ್ರಿ ಅರಸನು ತ್ಯೂಕ್ಸ್‌ಬರಿ ಯುದ್ಧವಾದ ಎರಡು ಮೂರು ದಿನಗಳ ತರುವಾಯ ಲಂದನ್ ಪಟ್ಣದ ಕೋಟೆಯಲ್ಲಿ ಸತ್ತು ಹೋದನು.

ಮೇಲೆ ಹೇಳಿದ ಪ್ರಕಾರ (Anjou) ಅಂಜೌ ದೇಶದ ಮಾರ್ಗ್ರೇತ್ ಶೆರೆಯಲ್ಲಿ ಇದ್ದದರಿಂದಲೂ, ನಿವರ್ತಿ ಮಾಡಲ್ಪಟ್ಟ ಬಲಿಷ್ಠನಾದ ಅರಸನು ಸತ್ತು ಹೋದದರಿಂದಲೂ, ನಾಲ್ಕನೇ ಎಡ್ವರ್ಡ್ ಅರಸನು ಸಮಾಧಾನವಾಗಿ ಆಳುತ್ತಾ ಬಂದನು. ಅವನ ಕುಟುಂಬದಲ್ಲಿ ಮಾತ್ರ

ಕೆಲವು ವಾಗ್ವಾದಗಳು ಉಂಟಾಗಿದ್ದವು. ಹ್ಯಾಗಂದರೆ, ಅರಸನು ತನ್ನ ಸಹೋದರನಾದ ಕ್ಲಾರೆನ್ಸ್ ಪ್ರಭುವಿನ ಸಂಗಡ ಮನಃಪೂರ್ವಕವಾಗಿ ಸಮಾಧಾನವಾಗಲಿಲ್ಲವೆಂದು ತೋರುತ್ತದೆ. ಇದಲ್ಲದೆ (Gloucester) ಗ್ಲೋಸ್ಟರ್ ಪ್ರಭುವು ಮುಂಚೆ ಆರನೇ ಹೆನ್ರಿಯ ಮಗನಿಗೆ ನೇಮಿಸಿದ್ದ ತನ್ನ ನಾದಿನಿಯನ್ನು ಮದುವೆ ಮಾಡಿ ಕೊಳ್ಳ ಯತ್ನಯಿಸಿದಾಗ, ಆ ಕ್ಲಾರೆನ್ಸ್ ಪ್ರಭುವು ಕೂಡದೆಂದು ಅಡ್ಡಿ ಮಾಡಿದ್ದರಿಂದಲೂ, ಅವನ ಹೆಂಡತಿ ಸತ್ತ ತರುವಾಯ ಬರ್ಗುಂದಿ ನಾಡಿಗೆ ಸ್ವತಂತ್ರಳನ್ನು ಅವನು ಮದುವೆ ಮಾಡಿ ಕೊಳ್ಳ ಬೇಕೆಂದು ಪ್ರಯತ್ನ ಮಾಡಿದ್ದರಿಂದಲೂ, ಅರಸನು ಈ ಪ್ರಭುವಿನ ಮೇಲೆ ಬಹು ಕೋಪಗೊಂಡಿದ್ದನು. ಇದರ ನಿಮಿತ್ತ ಅವನನ್ನು ರಾಜದ್ರೋಹಿ ಎಂದು ಹೇಳಿ, ಲಂಡನ್ ಪಟ್ಟದ ಕೋಟೆಯಲ್ಲಿ ಅವನನ್ನು ಕೊಂದು ಹಾಕಿದನು.

ಈ ಮಹಾ ಪಾತಕವನ್ನು ಮಾಡಿದ ತರುವಾಯ ಎದ್ವರ್ದ್ ಅರಸನಿಗೆ ಮನಸ್ಸು ಸಮಾಧಾನವಾಗಿರಲಿಲ್ಲ. ತನ್ನ ಸಹೋದರನನ್ನು ಕೊಲೆ ಮಾಡಿದ ತರುವಾಯ ಐದು ವರುಷಗಳ ಮಟ್ಟಿಗೂ ಮನೋಕ್ಲೇಶವುಳ್ಳವನಾಗಿಯೂ, ಸಂಪತ್ತಿನ ಭೋಗದಲ್ಲಿ ಮನಸ್ಸು ಬೇಸತ್ತವನಾಗಿಯೂ ಆಳಿ ಸತ್ತನು.

## CHAPTER XIII.

### UNION OF THE RIVAL ROSES.

FROM A. D. 1483 TO A. D. 1509.

## 13 ಸಂಧಿ.

### ಎದುರಾಳಿಗಳಾದ ವಂಶಸ್ಥರು ಐಕ್ಯವಾದದ್ದು.

ಕ್ರಿ. ಶ. 1483 ಮೊದಲು ಕ್ರಿ. ಶ. 1509 ವರೆಗೂ.

ಮುಖ್ಯ ತಾರೀಖುಗಳು: (Edward V) 5ನೇ ಎಡ್ವರ್ಡ್ 1483ನೇ ವರುಷದಲ್ಲಿ 2 ತಿಂಗಳು 12 ದಿವಸ ಮಾತ್ರ ಅರಸಾಗಿದದ್ದು. (Richard III) 3ನೇ ರಿಚಾರ್ಡ್ 1483 ಮೊದಲು 1485ನೇ ವರುಷದ ಮಟ್ಟಿಗೂ ಧೊರೆತನ ಮಾಡಿದ್ದು. (Henry VII) 7ನೇ ಹೆನ್ರಿಯ ಧೊರೆತನ 1485—1509. ಅದೇ ಕಾಲದ ಇಂದ್ಯ ಚರಿತ್ರೆ: (Vasco de Gama) ವಾಸ್ಕೋ ದಿ ಗಾಮ ಎಂಬವನು ಕಾಳಿಕೋಟಿಗೆ ಬಂದದ್ದು ಮೇ 22ನೇ 1498. (Portuguese) ಪೋರ್ಚಿಗೀಸ್ ಜನ (Goa) ಗೋವ ಊರನ್ನು ಭದ್ರ ಮಾಡಿದ್ದು 1509. ಶ್ರೇಷ್ಟ ನಾಮಗಳು: (Columbus) ಕೊಲಂಬಸ್ 1437—1506. ವಾಸ್ಕೋ ದಿ ಗಾಮ, (Americus Vespucius) ಆಮೆರಿಕಸ್ ವೆಸ್ಪೂಸಿಯಸ್. ಇವರೆಲ್ಲರು ಹೆಸರುಗೊಂಡ ನಾವಿಕರು.

ವೇಲ್‌ಸಿನ ಪ್ರಭುವಾದ (Prince of Wales) ಎಡ್ವರ್ಡ್ ತನ್ನ ತಂದೆ ಸಾಯುವಾಗ ಹನ್ನೆರಡು ವರುಷದವನಾಗಿದ್ದನು. ಆದದರಿಂದ ರಾಜ್ಯದಲ್ಲಿದ್ದ ಬೇರೆ ಬೇರೆ ಕಕ್ಷಿಯುವರು ತಮಗೆ ಅಧಿಕಾರ ಶಿಕ್ಕುವ ಹಾಗೆ ಬಹು ಪ್ರಯತ್ನ ಮಾಡಿದರು. ಆ ಕಾಲದಲ್ಲಿ ಯೌವನಸ್ಥನಾದ ಎಡ್ವರ್ಡ್ ಅರಸು, (Shropshire) ಶ್ರೊಪ್‌ಷೀರ್ ನಾಡಿನಲ್ಲಿದ್ದ (Ludlow Castle) ಲದ್ಲೋ ಕೋಟೆಯಲ್ಲಿ ವಾಸಿಸುತ್ತಿದ್ದನು. ಅಲ್ಲಿ ಆತನ ಸೋದರಮಾವನಾದ (Earl Rivers) ರಿವೆರ್ಸ್ ಪ್ರಭುವೂ ಆತನ

ಸಹೋದರನಾದ (Sir Richard Grey) ಸರ್ ರಿಚಾರ್ಡ್ ಗ್ರೇ ಎಂಬಾತನೂ, ರಾಣಿಯ ಕಡೆಯವರಿಗೆ ರಾಜ್ಯದ ಅಧಿಕಾರ ಹೊಂದ ಬೇಕೆಂದು ಅಪೇಕ್ಷಿಸಿದ ಬೇರೊಬ್ಬರೂ ಅರಸನ ಹತ್ತಿರವಿದ್ದರು.

ಆ ಸಮಯದಲ್ಲಿ ಬೇರೆ ಒಂದು ಕಕ್ಷಿಯವರಿದ್ದರು. ಇವರಿಗೆ (Richard) ರಿಚಾರ್ಡ್ ಎಂಬ (Duke of Gloucester) ಗ್ಲೋಸ್ಟರ್ ಪ್ರಭುವು ಮುಖ್ಯಸ್ಥನಾಗಿದ್ದನು. ಈತನು ಬುದ್ಧಿವಂತನಾಗಿಯೂ, ಜಾಗ್ರತೆಯುಳ್ಳವನಾಗಿಯೂ, ಸ್ಥಿರಚಿತ್ತನಾಗಿಯೂ ಇದ್ದದರಿಂದ ಅತಿ ಶೀಘ್ರವಾಗಿ ರಾಜ್ಯದಲ್ಲಿ ದೊಡ್ಡ ಹೆಸರುವಾಶಿಯನ್ನು ಹೊಂದಿದನು. ಆದರೆ ಅರಸನ ಸಭೆಯಲ್ಲಿದ್ದ ಪ್ರಭುಗಳು ಅಧಿಕಾರವನ್ನು ಹೊಂದ ಬೇಕೆಂದು ಅತ್ಯಾಶೆ ಪಡುವದರಿಂದ ತನ್ನನ್ನು ಕೆಡಿಸುವ ದುರಾಲೋಚನೆಗಳನ್ನು ತಿಳಿದು, ಅವರನ್ನು ಜಯಿಸುವದಕ್ಕೆ ಹೆಚ್ಚಾದ ತಂತ್ರೋಪಾಯಗಳನ್ನು ಮಾಡಿ, ತನ್ನ ಹೆಸರಿನ ಉತ್ತಮ ಕೀರ್ತಿಯನ್ನು ಕೆಡಿಸಿದನು. ಹೀಗಿದ್ದಾಗ್ಯೂ ತಾನು ಶಿಕ್ಕಿ ಕೊಂಡಿದ್ದ ತೊಂದರೆಗಳಿಂದ ಈ ಉಪಾಯಗಳನ್ನು ಕಲ್ಪಿಸಿದನೇ ಹೊರ್ತು ಅಷ್ಟು ಕೆಟ್ಟವನಲ್ಲವೆಂದು ತಿಳಿಸುವದಕ್ಕೆ ಕಾರಣ ಉಂಟು. ಯಾತಕ್ಕಂದರೆ, ಆತನು ತಾನೇ ಆಳ ಬೇಕೆಂಬುವ ಆಶೆಯನ್ನು ಬಿಟ್ಟು, ಅರಸನಿಗೆ ಮಂತ್ರಿ ಮಾತ್ರ ಆಗುವದಕ್ಕೆ ಸಮ್ಮತಿ ಪಡ ಬೇಕಾಗಿದ್ದರೂ, ಅನೇಕ ಬಲಶಾಲಿಗಳು ತನ್ನನ್ನು ಹ್ಯಾಗಾದರೂ ತಳ್ಳ ಬೇಕೆಂದಿದ್ದಾರೆಂದು ತಿಳಿದ್ದರಿಂದ, ಕಚ್ಚುವದಕ್ಕೆ ಬಂದ ಹಾವಿನ ತಲೆಯನ್ನು ಜಜ್ಜಿ ತನ್ನ ಪ್ರಾಣವನ್ನು ಕಾಪಾಡ ಬಹುದೆಂದು ಹೇಳಿರುವ ಪ್ರಕಾರ ಅವರನ್ನು ತಗ್ಗಿಸುವದಕ್ಕೆ ಪ್ರಯತ್ನ ಮಾಡಿದನಷ್ಟೇ. ಹೀಗಾದರೂ ಆತನು ಮಾಡಿದ್ದು ಪಾಪವೇ. ಆತನು ಸದ್ಗುಣವುಳ್ಳವನಾಗಿದ್ದದ್ದು ಉಂಟಾದರೆ ಇಷ್ಟು ದ್ರೋಹಿಯಾಗಲಾರನು.

ಅರಸನು ಸಾಯುವಾಗ ಆತನ ಸಹೋದರನಾದ (Duke of Gloucester) ಗ್ಲೋಸ್ಟರ್ ಪ್ರಭು ಇಂಗ್ಲಾಂದಿನ ಉತ್ತರ ಕಡೆಯಲ್ಲಿದ್ದನು. ಆದರೂ ಆ ಸಮಾಚಾರವನ್ನು ಕೇಳಿದ ಕ್ಷಣದಲ್ಲಿ ತನ್ನ ಸಹೋದರನ ಮಗನಾದ ಎಳೇ ಪ್ರಾಯದ ಅರಸನಿಗೆ ಸಹಾಯಕನಾಗಿರ ನೆನಸಿ ಕೊಂಡು, ಪ್ರಯಾ

ಣ ಮಾಡಿ ಆತನ ಬಳಿಗೆ ಬಂದನು. ಆದರೆ ಆತನು ಶೇರುವದಕ್ಕಿಂತ ಮುಂಚೆ ರಾಣಿಯ ಕಡೆಯವರು ಅರಸನನ್ನು ಲಡ್ಲೋ ಕೋಟೆಯಲ್ಲಿಂದ ಕರಕೊಂಡು ಹೋಗಿದ್ದರು. ಮತ್ತು ಆತನ ಚಿಕ್ಕಪ್ಪನು ಬಂದು ಆತನನ್ನು ಕಾಣುವದಕ್ಕಿಂತ ಮುಂಚೆ ಆತನು ಲಂಡನ್ ನಗರಕ್ಕೆ ಶೇರ ಬೇಕೆಂದು ಅಪೇಕ್ಷಿತರಾಗಿದ್ದರು. ಆದರೆ ಅವರು ಅಪೇಕ್ಷಿಸಿದ ಹಾಗೆ ಸಂಭವಿಸಲಿಲ್ಲ. ಅರಸನು (Northampton) ನೊರ್ಥಾಂಪ್ಟನ್ ಪಟ್ಟಣವನ್ನು ಬಿಟ್ಟ ಮಾರಣೆ ದಿವಸದಲ್ಲಿ (Duke of Gloucester) ಗ್ಲೋಸ್ತರ್ ಪ್ರಭು ಅಲ್ಲಿ ಶೇರಿ, (Earl Rivers) ರಿವೆರ್ಸ್ ಪ್ರಭು ಅರಸನ ಸಂಗಡ ಹೋಗದೆ ಇನ್ನು ಅಲ್ಲಿ ನಿಂತದ್ದನ್ನು ಕಂಡನು. ಇದನ್ನು ತಿಳಿದು, ಮರುದಿವಸದ ಹೊತ್ತಾರೆಯಲ್ಲಿ ಗ್ಲೋಸ್ತರ್ ಪ್ರಭೂ ಆತನ ಸಂಗಡ ಇದ್ದ (Duke of Buckingham) ಬಕ್ಕಿಂಗ್‌ಹಾಮ್ ಪ್ರಭೂ ಕೂಡಿ ಕೊಂಡು, (Earl Rivers) ರಿವೆರ್ಸ್ ಪ್ರಭುವನ್ನು ಹಿಡಿದು, ಅರಸನು ರಾತ್ರಿಯಲ್ಲಿ ಇಳಿದಿದ್ದ (Stony Stratford) ಸ್ಟೋನಿ ಸ್ಟ್ರಾತ್ಫೋರ್ಡ್ ಎಂಬ ಊರಿನ ಪರಿಯಂತರಕ್ಕೂ ಸವಾರಿ ಮಾಡಿ, ಆತನ ಸಂಗಡ ಇದ್ದ ಪಾರಿವಾರದ ಜನರನ್ನೆಲ್ಲಾ ಹಾಗೆಯೇ ವಶ ಮಾಡಿ ಕೊಂಡು ಎಲ್ಲರನ್ನು ಕಾವಲಿಯಲ್ಲಿ ಇಟ್ಟರು.

ಕೆಲವು ದಿವಸಗಳಾದ ಮೇಲೆ ಅರಸನಾದ (Edward V) 5ನೇ ಎಡ್ವರ್ಡ್ ಬಹು ಅಟ್ಟಹಾಸದಿಂದ ಗ್ಲೋಸ್ತರ್ ಪ್ರಭುವಿನ ಸಂಗಡ ಲಂಡನ್ ನಗರದಲ್ಲಿ ಶೇರಿದನು. ಅಷ್ಟರಲ್ಲಿ ರಾಜ್ಯದ ಮುಖ್ಯಸ್ಥರು ಕೂಡಿ ಬಂದು, ದೊಡ್ಡ ಸಂಘ ಮಾಡಿ ಕೊಂಡು, ಅರಸನು ಚಿಕ್ಕವನಾದದರಿಂದ ಆತನ ಹೆಸರಿನಲ್ಲಿ ರಾಜ್ಯಭಾರ ಮಾಡುವದಕ್ಕೆ ಗ್ಲೋಸ್ತರ್ ಪ್ರಭುವನ್ನು ದೊಡ್ಡ ಅಧಿಕಾರಿಯಾಗಿ ನೇಮಿಸಿದರು. ಹೀಗೆ ನೇಮಕ ಮಾಡಿದ ತರುವಾಯ ಹೊಸ ಅರಸನಿಗೆ ವಿಧೇಯರಾಗಿರ ಒಡಂಬಟ್ಟರು. ಅರಸನು ಮೇ ತಿಂಗಳಿನ 4ನೇ ತಾರೀಖಿನಲ್ಲಿ ಲಂಡನ್ ನಗರದಲ್ಲಿ ಪ್ರವೇಶಿಸಿದನು. ಮತ್ತು ಜೂನ್ ತಿಂಗಳಿನ 22ನೇ ತಾರೀಖಿನಲ್ಲಿ ಆತನಿಗೆ ಪಟ್ಟಾಭಿಷೇಕ ಕೊಡ ಬೇಕೆಂದು ದೊಡ್ಡ ಸಂಘದವರು ಗೊತ್ತು ಮಾಡಿದರು. ಆತನು ಪಟ್ಟಾಭಿಷೇಕವನ್ನು ಹೊಂದಿದ ಮೇಲೆ ಗ್ಲೋಸ್ತರ್ ಪ್ರಭುವಿನ ಅಧಿಕಾರ ನಿಂತು ಹೋಗುವದೆಂದು ನೆನಸಿ ಕೊಂಡರು. ಯಾಕಂದರೆ ಪೂರ್ವದಲ್ಲಿ

ಎಳೇ ಪ್ರಾಯವುಳ್ಳ ಅರಸರಿಗೆ ಬದಲಾಗಿ ಆಳಿದ ಅಧಿಕಾರಸ್ಥರು, ಅರಸರು ಪಟ್ಟಾಭಿಷೇಕವನ್ನು ಹೊಂದಿದ ಮೇಲೆ, ತಮ್ಮ ಅಧಿಕಾರವನ್ನು ಅರಸನ ಕೈಯಲ್ಲಿ ಒಪ್ಪಿಸಿ ಬಿಡುವದು ಪದ್ಧತಿಯಾಗಿತ್ತು.

ರಾಣಿಯ ಕಡೆಯವರು ಸೋತು ಹೋದ ಮೇಲೆ, ರಾಜ್ಯಭಾರದ ಕಾರ್ಯಗಳು ಗ್ಲೋಸ್ಟರ್ ಪ್ರಭುವಿನ ಕೈಕೆಳಗೆ ಕ್ರಮವಾಗಿಯೂ, ಸಮಾಧಾನವಾಗಿಯೂ ನಡಿಸಲ್ಪಟ್ಟವು. ಆದರೆ ಅರಸನು ಪಟ್ಟಾಭಿಷೇಕವನ್ನು ಹೊಂದ ತಕ್ಕ ಕಾಲ ಸಮೀಪಿಸುವಾಗ, ಗ್ಲೋಸ್ಟರ್ ಪ್ರಭುವಿನ ಸ್ನೇಹಿತರೆಂದು ತೋರಿದ ಶ್ರೇಷ್ಠರಲ್ಲಿ ಕೆಲವರು ಆತನಿಗೆ ವಿರೋಧವಾಗಿ ಒಳಸಂಚು ಮಾಡುತ್ತಾರೆಂದು ತಿಳಿಯ ಬಂತು. ತೀರಿ ಹೋಗಿದ್ದ ಅರಸನಿಗೂ ಗ್ಲೋಸ್ಟರ್ ಪ್ರಭುವಿಗೂ ಮಿತ್ರನಾಗಿದ್ದ (Lord Hastings) ಹೇಸ್ಟಿಂಗ್ಸ್ ಪ್ರಭು ಈ ಒಳಸಂಚಿನವರಿಗೆ ತಲೆಯಾಗಿದ್ದನು. ಇವರು ವಿನ್ನೇನು ತಂಟೆ ಮಾಡಿದರೋ ಚನ್ನಾಗಿ ತಿಳಿಯದು. ಆದರೆ ಗ್ಲೋಸ್ಟರ್ ಪ್ರಭುವಿನ ಅಧಿಕಾರವನ್ನು ತೆಗದು ಹಾಕ ಬೇಕೆಂದು ಆಲೋಚನೆ ಮಾಡುತ್ತಿದ್ದರೆಂದು ತೋರುತ್ತದೆ. ಹ್ಯಾಗಿದ್ದರೂ ಗ್ಲೋಸ್ಟರ್ ಪ್ರಭು ಬಹು ಯುಕ್ತಿವಂತನಾಗಿಯೂ ಸಮರ್ಥನಾಗಿಯೂ ಇದ್ದದರಿಂದ ಅವರ ಕಪಟವಾದ ಸ್ನೇಹದ ಕೋರಿಕೆಯಿಂದ ಮೋಸ ಹೋದವನಲ್ಲ. ಆತನು ತನ್ನ ಶತ್ರುಗಳನ್ನು ಜಯಿಸಿದ ರೀತಿಯು ಕೆಳಗೆ ವಿವರಿಸಲ್ಪಟ್ಟದೆ. ಈ ವಿವರವು ಕಣ್ಣುಸಾಕ್ಷಿಯು ಬರೆದ ಚರಿತ್ರೆಯೊಳಗಿಂದ ತೆಗೆಯಲ್ಪಟ್ಟ ಕಾರಣ ನಿಜವೆಂದು ನಂಬ ಬಹುದು. ಏನಂದರೆ,

ಜೂನ್ ತಿಂಗಳಿನ 13ನೇ ತೇದಿಯಲ್ಲಿ ಅರಸನ ಪಟ್ಟಾಭಿಷೇಕಕ್ಕಾಗಿ ಸಿದ್ಧ ಮಾಡುವ ಬಗ್ಗೆ ದೊಡ್ಡ ಸಂಘದವರು ಲಂಡನ್ ನಗರದಲ್ಲಿರುವ (Tower) ತವರ್ ಕೋಟೆಯಲ್ಲಿ ಕೂಡಿ ಬಂದಿರುವಾಗ, (Lord Hastings) ಹೇಸ್ಟಿಂಗ್ಸ್ ಪ್ರಭುವೂ ಆತನ ಕಡೆ ಜನರೂ ಸಂಘದವರಲ್ಲಿ ಕೂತು ಕೊಂಡಿರಲು, ಗ್ಲೋಸ್ಟರ್ ಪ್ರಭು ಸಭಾಸ್ಥಾನದಲ್ಲಿ ಸಂತೋಷ ಮುಖವುಳ್ಳವನಾಗಿ ಪ್ರವೇಶಿಸಿ, ಸಂಘದವರ ಸಂಗಡ ಸ್ವಲ್ಪ ಕಾಲಕ್ಕೆ ಸಂಭಾಷಣೆ ಮಾಡಿ, ಹೊರಗೆ ಹೋದನು. ಸುಮಾರು ಒಂದು ಘಂಟೆ ಆದ ತರುವಾಯ ತಿರಿಗಿ ಬಂದು, ಕೋಪದ ಮುಖವನ್ನು ತೋರಿಸಿ, 'ಬ

ಹಳೆ ಶಿಟ್ಟು ಇರುವಾಗ ಆತನು ಯಾವಾಗಲೂ ಮಾಡುವಪ್ಪಂದ ತನ್ನ ಕತ್ತಿಯ ಕೈಪಿಡಿಯನ್ನು ಆಡಿಸಿ, ತನ್ನ ಬಾಯಿ ಬಿಗಿದು, ಬಹು ರೌದ್ರವುಳ್ಳವನಾಗಿ ಕಾಣಿಸಿದನು. ಮೇಜಿನ ಹತ್ತರ ಕೂತು ಕೊಂಡು, ತನ್ನನ್ನು ಕೆಡಿಸುವದಕ್ಕೆ ಪ್ರಯತ್ನ ಮಾಡುತ್ತಿದ್ದವರು ಯಾವದಕ್ಕೆ ಪಾತ್ರರೆಂದು ವಿಚಾರಿಸಿದನು. ಅವರು ದ್ರೋಹಿಗಳಂತೆ ದಂಡಿಸಲ್ಪಡ ಬೇಕೆಂದು, (Lord Hastings) ಹೇಸ್ಟಿಂಗ್ಸ್ ಪ್ರಭು ಉತ್ತರ ಕೊಟ್ಟನು. ಅದಕ್ಕೆ ಗ್ಲೋಸ್ಟರ್ ಪ್ರಭು — ರಾಣಿಯೂ, ಶೀರಿ ಹೋದ ನನ್ನ ಸಹೋದರನ ಉಪಪತ್ನಿಗಳಲ್ಲಿ ಇಬ್ಬರೂ, ನನ್ನನ್ನು ಮಾಟದಿಂದ ಕೊಲ್ಲುವದಕ್ಕೆ ತಂತ್ರ ಮಾಡಿದ್ದಾರೆಂದು ನೀನು ಬಲ್ಲಿ ಅಂದನು. ಸ್ವಾಮೀ ಅವರು ಇಂಥ ದ್ರೋಹ ಮಾಡಿದ್ದುಂಟಾದರೆ ಕಠಿಣ ದಂಡನೆಗೆ ಯೋಗ್ಯರಾಗಿದ್ದಾರೆಂಬುವದಕ್ಕೆ ಸಂದೇಹವಿಲ್ಲವೆಂದು ಹೇಸ್ಟಿಂಗ್ಸ್ ಪ್ರಭು ಪ್ರತ್ಯುತ್ತರ ಕೊಟ್ಟನು. ಇದನ್ನು ಕೇಳಿ ಗ್ಲೋಸ್ಟರ್ ಪ್ರಭು ಮಹಾ ಕೋಪಿಷ್ಟನಾಗಿ — ಮಾಡಿದ್ದುಂಟಾದರೆ ಅಂತ ಹೇಳುತ್ತೀಯಾ? ದ್ರೋಹಿಯೇ! ಮಾಡಿ ಇದ್ದಾರೆಂದು ನೀನು ಚೆನ್ನಾಗಿ ಬಲ್ಲಿ, ನಾನು ಕೂಡ ಬಲ್ಲೆ, ಮತ್ತು ನಿನ್ನ ಶರೀರದ ಮೇಲೆ ಈ ಮಾತನ್ನು ಸ್ಥಾಪಿಸುತ್ತೇನೆ, ಎಂತಂದು ಮೇಜನ್ನು ಮುಷ್ಟಿಯಿಂದ ಬಡೆದನು. ಬಡೆಯಲು, ಸೈನ್ಯದವರು ಒಳಗೆ ಬಂದು, ಹೇಸ್ಟಿಂಗ್ಸ್ ಪ್ರಭುವನ್ನೂ ಗ್ಲೋಸ್ಟರ್ ಪ್ರಭು ತೋರಿಸಿದ ಬೇರೊಬ್ಬರನ್ನೂ ಹಿಡಿದು, ಹೇಸ್ಟಿಂಗ್ಸ್ ಪ್ರಭುವನ್ನು ಹೊರಗೆ ತಕ್ಕೊಂಡು ಹೋಗಿ ಆಗಲೇ ಹತ್ತಿರ ಬಿದ್ದಿದ್ದ ಒಂದು ಮರದ ತುಂಡಿನ ಮೇಲೆ ಅವನನ್ನು ಮಲಗಿಸಿ ತಲೆಯನ್ನು ಕಡಿದು ಹಾಕಿದರು.

ಈ ಕಾರ್ಯಗಳು ಹೀಗೆ ನಡಿಯುತ್ತಿರುವಾಗ ರಾಣಿಯು (Westminster Abbey) ವೆಸ್ಟ್‌ಮಿನ್‌ಸ್ಟರ್ ಅಬ್ಬಿ ಎಂದು ಹೇಳಲ್ಪಡುವ ದೇವಾಲಯದೊಳಗೆ ಆಶ್ರಯ ಮಾಡಿ ಕೊಂಡಳು. ಅಲ್ಲಿಗೆ (Duke of Gloucester) ಗ್ಲೋಸ್ಟರ್ ಪ್ರಭುವು ರಾಜ್ಯದ ಶ್ರೇಷ್ಠರಲ್ಲಿ ಅನೇಕರ ಸಂಗಡ ಆಕೆಯ ಬಳಿಗೆ ಬಂದು, (Duke of York) ಯೋರ್ಕ್ ಪ್ರಭುವೆಂಬ ಅರಸನ ತಮ್ಮನನ್ನು ತಮ್ಮ ವಶಕ್ಕೆ ಒಪ್ಪಿಸ ಬೇಕೆಂದು ಕೇಳಿ ಕೊಂಡು ಸಮ್ಮತಿ ಪಡಿಸಿದನು. ಈ ಪ್ರಕಾರ ರಾಜಪುತ್ರರಿಬ್ಬರು ತನ್ನ ಆಧೀನದೊ-

ಳಗಿರುವಾಗ (Parliament) ಪಾರ್ಲಿಮೆಂತ್ ಎಂಬುವ ನ್ಯಾಯಸಂಘವು ಅವರನ್ನು ತಳ್ಳಿ, ತನ್ನನ್ನು ಅರಸನಾಗಿ ನೇಮಿಸುವ ಹಾಗೆ ಮಾಡಿದನು. ಶೀರಿ ಹೋಗಿದ್ದ ಅರಸನ ಕುಮಾರರು ವ್ಯಭಿಚಾರದ ಮಕ್ಕಳೆಂದು ಶೀರಿಸಿದರು. ಯಾಕಂದರೆ ಸತ್ತಿದ್ದ ಅರಸನು ರಾಣಿಯನ್ನಲ್ಲದೆ ಇನ್ನೊಬ್ಬಳನ್ನು ಇಟ್ಟು ಕೊಂಡಿದ್ದನಂತೆ. ಗ್ಲೋಸ್ತರ್ ಪ್ರಭು ಹೀಗೆ ಅನ್ಯಾಯವಾಗಿ ರಾಜ್ಯವನ್ನು ಕಟ್ಟಿ ಕೊಂಡಾಗ್ಯೂ ಜನರ ಇಷ್ಟದ ಪ್ರಕಾರ ಮಾಡಿದನೆಂದು ತೋರುವದಕ್ಕಾಗಿ ಬಕ್ಕಿಂಗ್‌ಹಾಮ್ ಪ್ರಭೂ ಬೇರೆ ಶ್ರೇಷ್ಠರೂ ತನ್ನ ಬಳಿಗೆ ಬಂದು ರಾಜ್ಯಭಾರ ಮಾಡ ಬೇಕೆಂದು ತನ್ನನ್ನು ಬೇಡಿ ಕೊಂಡ ಹಾಗೆ ತೋರ ಮಾಡಿದನು. ಹೀಗೆ (Richard III) 3ನೇ ರಿಚಾರ್ಡ್ ಎಂಬಾತನು ಸಿಂಹಾಸನ ತಕ್ಕೊಂಡು, ಸ್ವಲ್ಪ ಕಾಲವಾದ ಮೇಲೆ (Earl Rivers) ರಿವೆರ್ಸ್ ಪ್ರಭುವನ್ನೂ ರಾಣಿಯ ಕಡೆಯವರಾದ ಇನ್ನು ಕೆಲವರನ್ನೂ ದ್ರೋಹಿಗಳೆಂದು ಅಪರಾಧ ಹೊರಿಸಿ ತಲೆ ಕೊಯಿಸಿದನು. ಗ್ಲೋಸ್ತರ್ ಪ್ರಭು ಹೀಗೆ ಉಪಾಯಗಳಿಂದ ಅರಸುತನವನ್ನು ಪಡೆಸಿದಾಗ್ಯೂ ಅವನು ಮಾಡಿದ್ದು ನ್ಯಾಯವಲ್ಲ. ತನ್ನ ಸಹೋದರನ ಮಗನಾದ ಎದ್ವರ್ಡ್ ನ್ಯಾಯವಾದ ಅರಸನೆಂದು ಒಪ್ಪಿ ಕೊಂಡಿದ್ದು, ಆತನಿಗೆ ವಿಧೇಯನಾಗಿರ ಒಡಂಬಟ್ಟು, ಎದ್ವರ್ಡನ ಹೆಸರಿನಲ್ಲಿ ಅಧಿಕಾರವನ್ನು ನಡಿಸಿ ಇದ್ದನು. ಆದರೆ ಶ್ರೇಷ್ಠ ಧೊರೆಗಳಲ್ಲಿ ಅನೇಕರು ಆತನ ಪಕ್ಷವಾಗಿದ್ದು, ಆತನು ಬುದ್ಧಿವಂತನಾಗಿಯೂ ಸಮರ್ಥನಾಗಿಯೂ ಇದ್ದದರಿಂದ ಎಳೇ ಪ್ರಾಯದವನಾದ ಎದ್ವರ್ಡ್ ಆಳುವದಕ್ಕಿಂತ ಈತನು ಧೊರೆತನ ಮಾಡುವದು ಉತ್ತಮವೆಂದು ನೆನಸಿದ ಹಾಗೆ ಕಾಣಿಸಿತು.

(Richard) ರಿಚಾರ್ಡ್ ಎಂಬ ಗ್ಲೋಸ್ತರ್ ಪ್ರಭು ಹೀಗೆ ಅರಸನಾಗಿ ಬಹು ಅಟ್ಟಹಾಸದಿಂದ ಪಟ್ಟಾಭಿಷೇಕವನ್ನೂ ಹೊಂದಿದನು. ಅದಾದ ಮೇಲೆ ಆತನು ಇಂಗ್ಲಾಂಡ್ ದೇಶದ ಮೇಲೆ ಹೊರಟು ಹೋಗಿ ಮುಖ್ಯವಾದ ಊರುಗಳಲ್ಲಿ ಇಳಿದು ತನ್ನನ್ನು ಜನಗಳಿಗೆ ತೋರಿಸಿದನು. ಆದರೆ ಈ ಪ್ರಕಾರ ಆತನು ಒಳ್ಳೇ ಹೆಸರನ್ನು ಹೊಂದುವದಕ್ಕೆ ಪ್ರಯತ್ನ ಮಾಡುತ್ತಿರುವಾಗ, ಆತನಿಗೆ ವಿರೋಧವಾಗಿ ಒಳಸಂಚು ಹುಟ್ಟುತ್ತಿತ್ತು. ಆತನು ನೆನಸದ ಕಾಲದಲ್ಲಿ, ಆ ಪರಿಯಂತರಕ್ಕೂ ತನ್ನ ಸ್ನೇಹಿತನಾಗಿದ್ದ ಬಕ್ಕಿಂಗ್

ಹಾಮ್ ಪ್ರಭು ಆತನಿಗೆದುರಾಗಿ ಕಲಹವನ್ನು ಎಬ್ಬಿಸಿದನು. (Richard) ರಿಚಾರ್ಡ್ ಈ ಬಕ್ಕಿಂಗ್‌ಹಾಮ್ ಪ್ರಭುವಿಗೆ ಅನೇಕ ಬಹುಮಾನಗಳನ್ನು ಕೊಟ್ಟಿದ್ದನು. ಮತ್ತು ಆತನು ನಂಬಿಗಸ್ತನೆಂದು ನೆನಸಿ, (Lord Hastings) ಹೇಸ್ಟಿಂಗ್ಸ್ ಪ್ರಭುವಿನ ದ್ರೋಹಕ್ಕೆ ಸಹಾಯ ಕೊಡುತ್ತಿದ್ದ (Bishop of Ely) ಈಲೈ ಅಧ್ಯಕ್ಷನಾದ (Morton) ಮೊರ್ತೋನ್ ಎಂಬಾತನನ್ನು ಆತನ ವಶಕ್ಕೆ ಒಪ್ಪಿಸಿ ಇದ್ದನು. ಈ (Morton) ಮೊರ್ತೋನ್ ಎಂಬವನು ತನ್ನ ಮೇಲೆ ಕಾವಲಿಯಾಗಿ ಇರಿಸಲ್ಪಟ್ಟವನನ್ನು ಶಿರುಗಾಟಕ್ಕೆ ಎಬ್ಬಿಸಿದ ಹಾಗೆ ತೋರುತ್ತದೆ. ಹ್ಯಾಗಂದರೆ, (Lancastrian Line) ಲಾಂಕೆಸ್ಟ್ರೆರ್ ಅರಸವಂಶಸ್ಥರೊಳಗೆ ಒಬ್ಬನೇ ಉಳಿದಿದ್ದ (Henry) ಹೆನ್ರಿ ಎಂಬ (Earl of Richmond) ರಿಚ್ಮೊಂದ್ ಪ್ರಭುವಿಗೆ ಅವರಿಬ್ಬರು ಬರೆದು, ಆತನು 4ನೇ ಎದ್ವರ್ದನ ಕುಮಾರ್ತೆಯಾದ (Elizabeth) ಎಲಿಸಬೇತಳನ್ನು ಮದುವೆ ಮಾಡಿ ಕೊಂಡು, ಹೀಗೆ ಒಬ್ಬರಿಗೊಬ್ಬರು ವಿರೋಧವಾಗಿದ್ದ (Houses of Lancaster and York) ಲಾಂಕೆಸ್ಟ್ರೆರ್ ಅರಸನ ವಂಶಸ್ಥರನ್ನೂ ಯೋರ್ಕ್ ವಂಶಸ್ಥರನ್ನೂ ಐಕ್ಯ ಮಾಡಿ, ತಾನೇ ಅರಸನಾಗಿ ಆಳುವ ಹಾಗೆ ಒಡಂಬಡಿಸಿದರು. ಆ ಕಾಲದಲ್ಲಿ ಈ ರಿಚ್ಮೊಂದ್ ಪ್ರಭು (France) ಫ್ರಾನ್ಸ್ ದೇಶದಲ್ಲಿ ಇದ್ದನು. ಯಾಕಂದರೆ ಶತ್ರುವಿನಂತೆ ಇಂಗ್ಲಾಂದಿನಿಂದ ಬಹಿಷ್ಕಾರ ಮಾಡಲ್ಪಟ್ಟಿದ್ದನು.

(Tower) ತವರ್ ಕೋಟೆಯಲ್ಲಿ ಶೆರೆಯಾಗಿದ್ದ ಎದ್ವರ್ದ್ ಅರಸನನ್ನೂ ಆತನ ತಮ್ಮನನ್ನೂ ಬಿಡಿಸುವದಕ್ಕಾಗಿ ಈ ಕಲಹವನ್ನು ಎಬ್ಬಿಸಿದ್ದೇವೆಂದು ಎದುರಾಳಿಗಳು ಮೊದಲು ಹೇಳಿದರು. ಆದರೆ ಕಲಹ ಉಂಟಾಗಿ ಸ್ವಲ್ಪ ಕಾಲವಾದ ಮೇಲೆ ಆ ಇಬ್ಬರು ಶೆರೆಯವರು ಸತ್ತು ಹೋಗಿದ್ದಾರೆಂದು ರಿಚಾರ್ಡ್ ಸುದ್ದಿಯನ್ನು ಹುಟ್ಟಿಸಿದನು. ಇದು ಹ್ಯಾಗಾಯಿತೋ ತಿಳಿಯಲಿಲ್ಲ. ಆದರೆ ಅವರಿಬ್ಬರನ್ನು ಆ ದಿನ ಮೊದಲುಗೊಂಡು ಒಬ್ಬರೂ ನೋಡಲಿಲ್ಲವೆಂಬುವದು ನಿಜವೇ. ಆಳಿದ ರಿಚಾರ್ದನ ಆಪ್ಞೆಯಿಂದ ಕೊಲ್ಲಲ್ಪಟ್ಟರೆಂದು ಎಲ್ಲರು ನಂಬಿದರು. ಈ ಅಪರಾಧಕ್ಕಾಗಿ ರಿಚಾರ್ದಿಗೆ ದಂಡನೆ ಬೇಗ ಉಂಟಾಯಿತು.

ಆದರೆ ಸದ್ಯ ಆತನ ಯುಕ್ತಿಯಿಂದಲೂ ಜಾಗ್ರತೆಯಿಂದಲೂ ಕಲಹ

ಗಾರರು ತಗ್ಗಿಸಲ್ಪಟ್ಟರು. (Earl of Richmond) ರಿಚ್ಮೊಂದ್ ಪ್ರಭು ಬಕ್ಕಿಂಗ್‌ಹಾಮ್ ಪ್ರಭುವನ್ನು ಸಂಧಿಸಿ ಕೊಳ್ಳುವದಕ್ಕಿಂತ ಮುಂಚೆ, ಈತನು ತನ್ನ ಕಡೆಯವರಿಂದ ಬಿಡಲ್ಪಟ್ಟು, ಅರಸನ ಕೈಯಲ್ಲಿ ದ್ರೋಹವಾಗಿ ಒಪ್ಪಿಸಲ್ಪಟ್ಟನು. ಕೆಲವು ದಿವಸಗಳಾದ ಮೇಲೆ ಅರಸನ ಅಪ್ಪಣೆಯಿಂದ ಬಕ್ಕಿಂಗ್‌ಹಾಮ್ ಪ್ರಭುವಿಗೆ ಪ್ರಾಣಾಜ್ಞೆ ಆದ ಕಾರಣ, ಆತನ ಕಡೆಯಲ್ಲಿದ್ದ ಮುಖ್ಯಸ್ಥರು ಓಡಿ ಹೋದರು. ಇಂಗ್ಲಾಂದಿಗೆ ಶೇರಿ ಇದ್ದ ರಿಚ್ಮೊಂದ್ ಪ್ರಭು ಶೀಘ್ರವಾಗಿ ಆ ದೇಶವನ್ನು ಬಿಟ್ಟು ತಾನಿದ್ದ ಸ್ಥಳಕ್ಕೆ ತಿರಿಗಿ ಹೋದನು. ತರುವಾಯ ಅನೇಕ ದೊಡ್ಡ ಮನುಷ್ಯರು, ಮುಖ್ಯವಾಗಿ ಶೇರಿ ಹೋಗಿದ್ದ 4ನೇ ಎದ್ವರ್ದನ ವಿಧವೆರಾಣಿಯ ಮಗನಾದ (Marquis of Dorset) ದೊರ್ಸೆತ್ ಪ್ರಭು ರಿಚ್ಮೊಂದ್ ಪ್ರಭುವಿನ ಹತ್ತಿರಕ್ಕೆ ಹೋಗಿ, ಆತನು ತಿರಿಗಿ ಕಲಹವನ್ನು ಎಬ್ಬಿಸಿ ಸಿಂಹಾಸನವನ್ನು ಹಿರುವದಕ್ಕೆ ಪ್ರಯತ್ನ ಮಾಡ ಬೇಕೆಂದು ನಿರ್ಣಯ ಮಾಡಿಸಿ ಕೊಂಡರು.

ರಿಚ್ಮೊಂದ್ ಪ್ರಭು ಪುನಹ ಇಂಗ್ಲಾಂದಿಗೆ ಬಂದು ತನ್ನ ಮೇಲೆ ಇನ್ನೊಂದು ಸಾರಿ ದಂಡೆತ್ತಿ ಕೊಳ್ಳುವನೆಂದು ರಿಚಾರ್ದ್ ಎದುರು ನೋಡುತ್ತಿದ್ದ ಸಮಯದಲ್ಲಿಯೂ, (France) ಫ್ರಾನ್ಸಿಗೆ ಶೇರಿದ (Duke of Brittany) ಬ್ರಿತ್ತನಿ ಪ್ರಭುವು ತನ್ನ ಶೀಮೆಯಲ್ಲಿ ವಾಸವಾಗಿದ್ದ ರಿಚ್ಮೊಂದ್ ಪ್ರಭುವನ್ನು ಒಪ್ಪಿಸಿ ಕೊಡುವದಕ್ಕೆ ಸಮ್ಮತಿ ಪಡ ಬೇಕೆಂದು ರಿಚಾರ್ದ್ ಪ್ರಯತ್ನ ಮಾಡುತ್ತಿದ್ದ ಸಮಯದಲ್ಲಿಯೂ, ರಿಚಾರ್ದನ ಕುಟುಂಬದಲ್ಲಿ ಬಹಳ ಕಷ್ಟ ಸಂಭವಿಸಿತು. ಹೇನಂದರೆ, ಮೊದಲು ಆತನ ಒಬ್ಬನೇ ಮಗುವೂ, ತರುವಾಯ ಆತನ ರಾಣಿಯೂ ಶೇರಿ ಹೋದರು. ಆತನು ಅವರಲ್ಲಿ ಬಹು ಪ್ರೀತಿ ಇಟ್ಟಿದದರಿಂದ ಅವರ ಮರಣವು ಆತನಿಗೆ ಬಹು ವ್ಯಸನಕರವಾದ ಕಾರ್ಯವೇ.

(Duke of Brittany) ಬ್ರಿತ್ತನಿ ಪ್ರಭು ತನ್ನನ್ನು ಒಪ್ಪಿಸಿ ಕೊಡುವದಕ್ಕೆ ಸಮ್ಮತಿ ಪಟ್ಟಿದ್ದನೆಂದು (Earl of Richmond) ರಿಚ್ಮೊಂದ್ ಪ್ರಭು ಕೇಳಿದಾಗ ಆ ಶೀಮೆಯನ್ನು ಬಿಟ್ಟು, (France) ಫ್ರಾನ್ಸ್ ದೇಶದ ಅರಸನ ಬಳಿಗೆ ಶೇರಿ ಆತನಿಂದ ಸಹಾಯ ಬೇಡಿದನು. ಇದಲ್ಲದೆ ರಿಚಾರ್ದನ ಬಳಿಯಲ್ಲಿದ್ದ (Earl of Northumberland) ನೊರ್ತಂಬ

ಲ್ಯಾಂಡ್ ಪ್ರಭು ಮೊದಲಾದವರಿಗೆ ಬರೆದು ಅವರನ್ನು ತನ್ನ ಕಡೆಗೆ ತಿರುಗುವ ಹಾಗೆ ಮಾಡಿದನು. (Henry) ಹೆನ್ರಿ ಎಂಬ ರಿಚ್ಮೊಂಡ್ ಪ್ರಭು 1485ನೇ ವರುಷ, ಅಗೊಸ್ತು 1ನೇ ತಾರೀಖಿನಲ್ಲಿ, (Harfleur) ಹಾರ್ಫ್ಲೂರ್ ಎಂಬ ರೇವನ್ನು ಬಿಟ್ಟು, ಏಳು ದಿವಸ ಹಡಗ ಪ್ರಯಾಣ ಮಾಡಿದ ಮೇಲೆ ವೇಲ್ಸಿನಲ್ಲಿರುವ (Milford Haven) ಮಿಲ್ಫೊರ್ಡ್ ಹೆವೆನಿಗೆ ಮೂರು ಸಾವಿರ ಸೈನ್ಯದವರ ಸಂಗಡ ಶೇರಿದನು. ಈ ಸೈನ್ಯದವರಲ್ಲಿ ಹೆಚ್ಚು ಭಾಗ ಫ್ರೆಂಚಿನವರಾಗಿದ್ದರು. ಅರಸನಾದ ರಿಚಾರ್ಡ್ ಈ ಸಮಾಚಾರವನ್ನು ಕೇಳಿದಾಗ ಬಹಳ ಆಶ್ಚರ್ಯ ಪಟ್ಟನು. ಯಾಕಂದರೆ (Henry) ಹೆನ್ರಿ ದಂಡೆತ್ತಿ ಕೊಂಡು ಬರುವಾಗ ವೇಲ್ಸಿನಲ್ಲಿ ಅಲ್ಲ, ಬೇರೆ ಕಡೆಗೆ ಧಡಕ್ಕೆ ಶೇರುವನೆಂದು ಎದುರು ನೋಡುತ್ತಿದ್ದನು.

(Henry) ಹೆನ್ರಿ ಇಂಗ್ಲಾಂದಿಗೆ ಬಂದ ಮೇಲೆ ತನ್ನ ಸೈನ್ಯದವರ ಸಂಗಡ ಬೇಗ ಒಳದೇಶಕ್ಕೆ ಹೋದನು. ಯಾಕಂದರೆ ರಿಚಾರ್ಡ್ ಇಂಗ್ಲಾಂದಿನ ಮಧ್ಯಪ್ರಾಂತ್ಯದಲ್ಲಿರುವ (Nottingham) ನೊಟ್ಟಿಂಗ್‌ಹಾಮ್ ಊರಿನಲ್ಲಿ ಇದ್ದನು. ಅತ್ತ ಕಡೆಗೆ ಹೋಗುವ ಸಮಯದಲ್ಲಿ ಇಂಗ್ಲಿಷರಲ್ಲಿ ಅನೇಕರು ತನಗೆ ಸಹಾಯ ಕೊಡುವದಕ್ಕೆ ಸಿದ್ಧವಾಗಿದ್ದರೆಂದು ಕಂಡು ಕೊಂಡನು. ಮತ್ತು ಅವರಲ್ಲಿ ಬಹು ಮಂದಿ ಆತನ ದಂಡಿನವರ ಸಂಗಡ ಕೂಡಿ ಕೊಂಡು ಹೋದರು. ಇದಲ್ಲದೆ ರಿಚಾರ್ಡ್ ತಂದಿದ್ದ ದೊಡ್ಡ ಸೈನ್ಯದ ಹತ್ತಿರ ಶೇರುವಾಗ ಅರಸನ ಕಡೆಯವರಲ್ಲಿ ಸಹ ಅನೇಕರು ತನ್ನ ಕಡೆಗೆ ಬಂದರು. ಅಗೊಸ್ತಿನ 22ನೇ ತಾರೀಖಿನಲ್ಲಿ (Leicestershire) ಲೆಸ್ಟೆರ್‌ಷೀರ್ ಎಂಬ ನಾಡಿನಲ್ಲಿರುವ (Bosworth Field) ಬೊಸ್ವೊರ್ಥ್ ಮೈದಾನಿನಲ್ಲಿ ದೊಡ್ಡ ಯುದ್ಧ ನಡೆಯಿತು. ರಿಚಾರ್ಡ್ ಶೂರನಂತೆ ಯುದ್ಧವನ್ನು ನಡಿಸಿದನು. ಆದರೂ ತನ್ನ ಸೈನ್ಯದಲ್ಲಿ (Earl of Northumberland) ನೊರ್ಥಂಬರ್ಲಾಂದ ಪ್ರಭೂ, (Sir William Stanley) ಸರ್ ಉಲ್ಲಿಯಮ್ ಸ್ತಾನ್‌ಲಿ ಮೊದಲಾದವರೂ ದ್ರೋಹಿಗಳಾಗಿದ್ದದರಿಂದ ಜಯವಾಗಲಿಲ್ಲ. (Plantagenet) ಪ್ಲಾಂತಜೆನೆತ್ ವಂಶಸ್ತರಲ್ಲಿ ಕಡೇ ಅರಸನಾದ ರಿಚಾರ್ಡ್ ಯುದ್ಧದಲ್ಲಿ ಘಾಯ ಹೊಂದಿ ಅಲ್ಲೇ ಸತ್ತನು. ಯುದ್ಧ ಪ್ರಾರಂಭಿಸಿದಾಗ ಕಿರೀಟವನ್ನು ತಲೆಯ ಮೇ

ಲಿಟ್ಟು ದಂಡಿಗೆ ಬಂದಿದ್ದನು. ಆತನು ಬಿದ್ದ ಮೇಲೆ (Sir William Stanley) ಸರ್ ಉಲ್ಲಿಯಮ್ ಸ್ಟಾನ್‍ಲಿ ಎಂಬವನು ಆ ಕಿರೀಟವು ರಕ್ತದಿಂದ ಮಾಸಿ ಹೋದದ್ದಾಗಿ ನೆಲದಲ್ಲಿ ಬಿದ್ದದ್ದನ್ನು ನೋಡಿ, ಅದನ್ನು ಕೈಯಿಂದ ಎತ್ತಿ ಕೊಂಡು ಅಲ್ಲಿಯೇ ರಿಚ್ಮೊಂದ್ ಪ್ರಭುವಿನ ತಲೆಯ ಮೇಲೆ ಇರಿಸಿದನು. ಜಯಶಾಲಿಗಳಾದ ಆತನ ಸೈನ್ಯದವರು ಇದನ್ನು ಕಂಡು, ಬಹಳ ಸಂತೋಷದಿಂದ ಆರ್ಭಟಿಸಿ, ಅರಸನಾದ (Henry the Seventh) 7ನೇ ಹೆನ್ರಿಯು ಬಾಳಲಿಯೆಂದು ವಂದನೆ ಮಾಡಿ ಕೂಗಿದರು.

(Bosworth Field) ಬೊಸ್ವೊರ್ಥ್ ಮೈದಾನಿನ ಯುದ್ಧವು ತೀರಿದ ತರುವಾಯ ಹೆನ್ರಿಯು (London) ಲಂಡನ್ ನಗರಕ್ಕೆ ಹೋಗ ಹೊರಟನು. ಅಲ್ಲಿಗೆ ಶೇರಿದ ಮೇಲೆ (Parliament) ಪಾರ್ಲಿಮೆಂಟಿಗೆ ಶೇರಿದ ಸರಕಾರದವರು ಕೂಡಿ ಬಂದು, ಆತನು ನ್ಯಾಯವಾಗಿ ಇಂಗ್ಲಾಂದಿನ ಅರಸನೆಂದು ಒಪ್ಪಿ ಕೊಂಡರು. ಈ ಪಾರ್ಲಿಮೆಂಟಿನವರು ಆಲೋಚಿಸ ತಕ್ಕದ್ದನ್ನು ಮುಗಿಸಿ, ತಮ್ಮ ತಮ್ಮ ಸ್ಥಳಗಳಿಗೆ ಹೋಗುವದಕ್ಕೆ ಅಪ್ಪಣೆ ಹೊಂದುವದಕ್ಕಿಂತ ಮುಂಚೆ, ಅವರು ಹೊಸ ಅರಸನಾದ ಹೆನ್ರಿಗೆ ಒಂದು ಮುಖ್ಯವಾದ ಅರ್ಜಿಯನ್ನು ಬರೆದು ಕಳುಹಿಸಿದರು. ಏನಂದರೆ, ಆತನು ಮುಂಚೆ ಒಪ್ಪಿ ಕೊಂಡಿದ್ದ ಪ್ರಕಾರ (Elizabeth) ಎಲಿಸಬೇತ್ ಎಂಬ ರಾಜಸ್ತ್ರೀಯನ್ನು ಮದುವೆ ಮಾಡಿ ಕೊಂಡು, ಈ ಪ್ರಕಾರ (Houses of Lancaster and York) ಪ್ಲಾಂಟಜೆನೆತ್ ರಾಜವಂಶಸ್ಥರನ್ನೂ, ಯೋರ್ಕಿನ ವಂಶಸ್ಥರನ್ನೂ ಒಂದಾಗ ಮಾಡ ಬೇಕೆಂಬುವದೇ. ಹೀಗೆ ಮಾಡುವದಕ್ಕೆ ಆತನಿಗೆ ಮನಸ್ಸಿಲ್ಲದ ಹಾಗೆ ತೋರುತ್ತದೆ. ಆದರೂ ಪಾರ್ಲಿಮೆಂಟಿನವರು ಆತನನ್ನು ಸಮ್ಮತಿ ಪಡಿಸಿದ್ದರಿಂದ ಕೆಲವು ದಿವಸವಾದ ಮೇಲೆ, ಅಂದರೆ, ಮಾರ್ಚಿ ಜನವರಿ ತಿಂಗಳಿನಲ್ಲಿ, ಮಾತು ಕೊಟ್ಟಿದ್ದ ಹಾಗೆ ಆಕೆಯನ್ನು ಮದುವೆ ಮಾಡಿ ಕೊಂಡನು.

ಹೆನ್ರಿಯು ಮಂದ ಗುಣವುಳ್ಳವನಾಗಿಯೂ, ನಿಧಾನದಿಂದಲೂ ಉಪಾಯದಿಂದಲೂ ಎಲ್ಲಾ ಕೆಲಸಗಳನ್ನು ನಡಿಸುವವನಾಗಿಯೂ ಇದ್ದನು. ಆದರೂ ಆ ಕಾಲದಲ್ಲಿ ಆಳುವದಕ್ಕೆ ತಕ್ಕವನೆಂದು ಹೇಳ ಬೇಕು.

ಹೀಗಂದರೂ ಆತನು ತನ್ನ ಧೊರೆತನದ ಪ್ರಾರಂಭದಲ್ಲಿ ಒಂದು ತಪ್ಪು ಮಾಡಿದನೆಂಬುವದು ನಿಜವೇ, ಏನಂದರೆ, (Yorkish Party) ಯೋರ್ಕಿನ ಕಕ್ಷಿಯವರಿಗೆ ದಯ ತೋರಿಸದೆ, ಅವರ ಕೋಪವನ್ನು ಎಬ್ಬಿಸಿ, ಇದರಿಂದ ತನಗೆ ಬಹು ತೊಂದರೆಯನ್ನು ಹುಟ್ಟಿಸಿದನು. ಸಿಂಹಾಸನಕ್ಕೆ ಬಂದಾಗಲೇ (Duke of Clarence) ಕ್ಲಾರೆನ್ಸ್ ಪ್ರಭುವಿನ ಕುಮಾರನಾದ (Earl of Warwick) ವಾರಿಕ್ ಪ್ರಭುವನ್ನು (Tower) ತವರ್ ಎಂಬುವ ಲಂಡನ್ ನಗರದ ಕೋಟೆಯಲ್ಲಿ ಇಟ್ಟನು. ಮತ್ತು ತನ್ನ ರಾಣಿಯು ಸಹ ಜನಗಳಿಗೆ ಮೆಚ್ಚಿಕೆಯಾದವಳಲ್ಲವೆಂದು ನೆನಸಿ, ಆಕೆಗೆ ಅರಸಿಪಟ್ಟವನ್ನು ಕೊಡುವದಕ್ಕೆ ಆಲಸ್ಯ ಮಾಡಿದನು.

(Yorkists) ಯೋರ್ಕಿನವರ ಮನಸ್ಸಿನಲ್ಲಿದ್ದ ಕ್ರೋಧವು ಬೇಗ ಈಚೆಗೆ ಬಂತು. ಹ್ಯಾಗಂದರೆ, ಅವರ ಪ್ರೇರೇಪಣೆಯಿಂದ (Oxford) ಒಕ್ಸ್‌ಫೋರ್ಡ್ ಊರಿನಲ್ಲಿದ್ದ ಸೀಮೋನನು ಎಂಬ ಒಬ್ಬ ಗುರುವು (Lambert Simnel ಲ್ಯಾಂಬೆರ್ತ್ ಸಿಮ್ನೆಲ್ ಎಂಬ ಒಬ್ಬ ಯೌವನಸ್ಥನನ್ನು ಬೋಧಿಸಿ, ಈತನು ತನ್ನನ್ನು (Tower) ತವರ್ ಕೋಟೆಯಿಂದ ತಪ್ಪಿಸಿ ಕೊಂಡಂಥ, ರಾಜಪಟ್ಟವನ್ನು ಹೊಂದ ತಕ್ಕಂಥ ವಾರಿಕ್ ಪ್ರಭುವೆಂದು ತೋರಿಸ ಮಾಡಿದರು. ಈ ಕಥೆಯನ್ನು ಮೊದಲು ಐರ್ಲಾಂಡಿನಲ್ಲಿ ಪ್ರಬಲಿಸಿದರು. ಅಲ್ಲಿ ದೊಡ್ಡ ಮನುಷ್ಯರಲ್ಲಿ ಅನೇಕರು ಅವರ ಮಾತುಗಳನ್ನು ನಂಬಿ, (Earl of Warwick) ವಾರಿಕ್ ಪ್ರಭುವಿನ ಹೆಸರನ್ನು ಮೋಸವಾಗಿ ತೆಗದು ಕೊಂಡಿದ್ದ ಇವನಿಗೆ ಸಹಾಯ ಕೊಟ್ಟು, ಇವನೇ ಅರಸನೆಂದು ರಾಜಪಟ್ಟ ಕೊಟ್ಟರು. (Edward the Fourth) ನಾಲ್ಕನೇ ಎದ್ವರ್ದನ ಸಹೋದರಿಯಾದ (Burgundy) ಬರ್ಗುಂದಿ ದೇಶದ (Margaret) ಮಾರ್ಗ್ರೇತ್ ಎಂಬವಳೂ, (Earl of Lincoln) ಲಿಂಕೋಲ್ನ್ ಪ್ರಭುವೂ ಮೊದಲಾದ ಸರದಾರರೂ, (Germany) ಜರ್ಮನಿ ದೇಶದಿಂದ ತಂದ ದಂಡಿನವರ ಸಂಗಡ ಅವನನ್ನು ಶೇರಿದರು. ಈ ದಂಡಿನವರ ಕೂಡ ಇಂಗ್ಲಾಂಡಿನ ಉತ್ತರ ಘಡಕ್ಕೆ ಬಂದು ಯುದ್ಧಕ್ಕೆ ನಿಂತರು. ಆದರೆ ಇಂಗ್ಲಾಂಡಿನಲ್ಲಿದ್ದ ಯೋರ್ಕಿನ ಕಕ್ಷಿಯವರು ವಾರಿಕ್ ಪ್ರಭುವು ನಿಜವಾಗಿ ತವರ್ ಕೋಟೆಯಲ್ಲಿ ಇನ್ನು ಇದ್ದಾನೆಂದೂ ಆತನ ಹೆ

ಸರನ್ನು ತೆಗೆದು ಕೊಂಡ ಈ ಯೌವನಸ್ಥನು ಮೋಸಗಾರನೆಂದೂ ತಿಳಿದ್ದರಿಂದ, ಅವನಿಗೆ ಏನೂ ಸಹಾಯ ಮಾಡಲಿಲ್ಲ. ಆದ ಕಾರಣ (Trent) ತ್ರೆಂತ್ ನದಿಯ ಸಮೀಪವಾದ (Stoke) ಸ್ಟೋಕ್ ಊರಿನ ಹತ್ತಿರ ಜಗಳವಾಡುವಾಗ ಈ ಮೋಸಗಾರನ ದಂಡು ಪೂರ್ಣವಾಗಿ ಸೋತು ಹೋಗಿ ಚದರಿಸಲ್ಪಟ್ಟಿತು. (Lambert Simnel) ಲಾಂಬೆರ್ತ್ ಸಿಮ್ನೆಲ್ ಸಹ ಸೆರೆಯಾಗಿ ಹಿಡಿಯಲ್ಪಟ್ಟು, ಅರಸನ ಅಡಿಗೇ ಮನೆಯಲ್ಲಿ ಹೀನ ಕೆಲಸ ಮಾಡುವದಕ್ಕೆ ಕಳುಹಿಸಲ್ಪಟ್ಟನು.

ಇದರ ತರುವಾಯ ಮೂರು ವರುಷಗಳ ಪರಿಯಂತರಕ್ಕೂ ಏನೂ ತೊಂದರೆ ಹುಟ್ಟದೆ ಇದ್ದದರಿಂದ ಬೇರೆ ರಾಜ್ಯಗಳ ಕಾರ್ಯಗಳನ್ನು ವಿಚಾರಿಸುವದಕ್ಕೆ ಹೆನ್ರಿಗೆ ಸಾವಕಾಶವಾಯಿತು. (France) ಫ್ರಾನ್ಸ್ ದೇಶದ ಅರಸನು (Brittany) ಬ್ರಿತ್ತನಿ ನಾಡನ್ನು ತನ್ನ ರಾಜ್ಯಕ್ಕೆ ಶೇರಿಸಬೇಕಾದ ಕಾರಣ ಹೆನ್ರಿಯು ಅದಕ್ಕೆ ಅಡ್ಡಿ ಮಾಡುವದಕ್ಕೆ ಪ್ರಯತ್ನ ಮಾಡಿದನು. ಹ್ಯಾಗಂದರೆ, ಮೊದಲು ಬ್ರಿತ್ತನಿ ದೇಶದ ರಾಣಿಯಾದ (Anne) ಆನ್ ಎಂಬವಳಿಗೂ ಫ್ರಾನ್ಸಿನ ಅರಸನಿಗೂ ಮಧ್ಯಸ್ತಿಕೆ ಮಾಡ ಎತ್ನೈಸಿದನು. ಇದು ಕೈಗೂಡಿ ಬಾರದ ಕಾರಣ ದಂಡನ್ನು ಕೂಡಿಸಿ (Anne) ಆನ್ ಎಂಬ ಅರಸಿಗೆ ಸಹಾಯ ಕೊಡ ಸಿದ್ಧ ಮಾಡಿದನು. ಆದರೆ ಆ ದಂಡು ಯುದ್ಧ ಮಾಡದೆ, ಹೆನ್ರಿಯ ಅಪ್ಪಣೆಯಿಂದ ಫ್ರಾನ್ಸ್ ದೇಶವನ್ನು ಬಿಟ್ಟು ತಿರಿಗಿ ಸ್ವದೇಶಕ್ಕೆ ಬಂತು. ಇದಕ್ಕೆಲ್ಲಾ ಬಿದ್ದ ಖರ್ಚು ಇಂಗ್ಲಿಷ್ ಜನರು ಹೆಚ್ಚಾದ ತೆರಿಗೆ ಕಟ್ಟುವದರಿಂದ ತೀರಿಸ ಬೇಕಾದ ಕಾರಣ ಆ ಖರ್ಚು ವ್ಯರ್ಥವಾದ ಅಟ್ಟಹಾಸಕ್ಕಾಗಿ ಉಂಟಾಯಿತೆಂದು ಹೇಳಿ, ಬಹಳವಾಗಿ ಗುಣುಗುಟ್ಟಿದ್ದರು. ಇದಕ್ಕಾಗಿ ಇಂಗ್ಲಾಂಡಿನ ಉತ್ತರ ನಾಡುಗಳಲ್ಲಿ ಕಲಹ ಉಂಟಾಯಿತು. ಆದರೆ ಈ ಕಲಹ ಬೇಗ ಅಣಗಿಸಲ್ಪಟ್ಟಿತು. ಸ್ವಲ್ಪ ಕಾಲದ ಮೇಲೆ ಇನ್ನೊಂದು ದಂಡು ಇಂಗ್ಲಾಂಡಿನಿಂದ ಫ್ರಾನ್ಸ್ ದೇಶಕ್ಕೆ ಕಳುಹಿಸಲ್ಪಟ್ಟಿತು. ಇದು ಸಹ ತಿರಿಗಿ ಸುಮ್ಮನೆ ಬಂದು ಬಿಟ್ಟಿತು. ಫ್ರಾನ್ಸಿನ ಅರಸನ ಸಂಗಡ ಯುದ್ಧ ಮಾಡುವದಕ್ಕೆ ಹೆನ್ರಿಗೆ ಮನಸ್ಸು ಇರಲಿಲ್ಲ. ಮತ್ತು ಫ್ರಾನ್ಸ್ ದೇಶದ ಅರಸನು ಇಂಗ್ಲಾಂಡಿನಲ್ಲಿ ಹುಟ್ಟಿದ ಇನ್ನೊಂದು ಕಲಹಕ್ಕೆ ಸಹಾ

ಯ ಕೊಡುವದಕ್ಕೆ ಮನಸ್ಸಾಗಿದ್ದ ಕಾರಣ ಆತನ ಸಂಗಡ ಒಂಡಬಡಿಕೆ ಮಾಡುವದು ಅವಸರವಾಯಿತು.

ಈ ಕಲಹಕ್ಕೆ ಕಾರಣವೇನಂದರೆ, 1492ನೇ ವರುಷದಲ್ಲಿ ಹೆನ್ರಿಯು ಫ್ರಾನ್ಸ್ ದೇಶದ ಮೇಲೆ ದಂಡೆತ್ತುವ ಸಮಯದಲ್ಲಿ ಬಹು ಸೌಂದರ್ಯವುಳ್ಳ ಮರ್ಯಾದಸ್ಥನಾದ ಒಬ್ಬ ಯೌವನಸ್ಥನು (Ireland) ಐರ್ಲಾಂದ್ ದೇಶದ (Cork) ಕೊರ್ಕ್ ಊರಿಗೆ ಬಂದು, ತಾನು ತನ್ನ ಸಹೋದರನು ಕೊಲ್ಲಲ್ಪಟ್ಟಾಗ (Tower) ತವರ್ ಕೋಟೆಯಿಂದ ತಪ್ಪಿಸಿಕೊಂಡಿದಂಥ ನಾಲ್ಕನೇ ಎದ್ವರ್ದನ ಕುಮಾರನಾದ (Richard, Duke of York) ಯೊರ್ಕ್ ಪ್ರಭುವಾದ ರಿಚಾರ್ದನೆಂದು ಹೇಳಿದನು. ಐರ್ಲಾಂದಿನವರು ಯೊರ್ಕಿನ ಕಕ್ಷಿಯವರಾದ ಕಾರಣ ಅವನ ಮಾತುಗಳನ್ನು ನಂಬಿ ಅವನಿಗೆ ಸಹಾಯ ಕೊಟ್ಟರು. ಫ್ರಾನ್ಸ್ ದೇಶದ ಅರಸನಾದ (Charles) ಚಾರ್ಲ್ಸ್ ಅವನನ್ನು ಕರೆದ ಕಾರಣ ಸ್ವಲ್ಪ ಕಾಲ ಆತನ ಅರಮನೆಯಲ್ಲಿ ವಾಸ ಮಾಡಿದನು. ತರುವಾಯ ಫ್ರಾನ್ಸ್ ಅರಸನಿಗೂ ಇಂಗ್ಲಾಂದಿನ ಅರಸನಿಗೂ ಸಮಾಧಾನವಾದದರಿಂದ ಅವನು ಫ್ರಾನ್ಸ್ ದೇಶವನ್ನು ಬಿಟ್ಟು (Burgundy) ಬರ್ಗುಂದಿ ರಾಜ್ಯದಲ್ಲಿ ಆಶ್ರಯ ಮಾಡಿ ಕೊಂಡನು. ಆ ರಾಜ್ಯವನ್ನಾಳಿದ (Margaret) ಮಾರ್ಗ್ರೆತ್ ಅವನನ್ನು ಸೇರಿಸಿ ಕೊಂಡು ಇವನು ತನ್ನ ಸಹೋದರನ ಕುಮಾರನೆಂದು ಹೇಳಿ, ಬಹಳ ಪ್ರೀತಿ ತೋರಿಸಿ (The White Rose of England) "ಈತನೇ ಇಂಗ್ಲಾಂದಿನ ಬಿಳಿ ಗುಲಾಬಿಹೂವು" ಎಂದು ಹೆಸರಿಟ್ಟಳು. ಅವನು ಯಾರೋ ಎಲ್ಲಿಯವನೋ ಎಂದು ಇವನ ಪೂರ್ವೋತ್ತರವನ್ನು ವಿಚಾರಿಸುವದಕ್ಕೆ ಹೆನ್ರಿಯು ಕೆಲವರನ್ನು ನೇಮಿಸಿದ ತರುವಾಯ, ಇವರು ತಿಳುಕೊಂಡದ್ದೇನಂದರೆ, ಇವನು ಅರಸನ ಕುಮಾರನು ಅಲ್ಲ. ಇವನ ಹೆಸರು (Perkin Warbeck) ಪೆರ್ಕಿನ್ ವಾರ್ಬೆಕ್ ಎಂದು ತಿಳಿಯ ಬಂತು. ಅರಸನ ಶತ್ರುಗಳು ಇವನನ್ನು ಪ್ರೇರೇಪಿಸಿ, ತನ್ನನ್ನು (Duke of York) ಯೊರ್ಕಿನ ಪ್ರಭುವೆಂದು ತೋರ ಮಾಡುವದಕ್ಕೆ ಬೋಧಿಸಿ ಇದ್ದರು. ಆದರೆ ಯಾರು ಈ ಪ್ರಕಾರ ಅವನನ್ನು ಎಬ್ಬಿಸಿದರೋ ಚನ್ನಾಗಿ ತಿಳಿಯಲಿಲ್ಲ. (Margaret) ಮಾರ್ಗ್ರೆತ್ ಎಂಬ

ವಳು ಹ್ಯಾಗಾದರೂ ಹೆನ್ರಿಯ ಸಿಂಹಾಸನವನ್ನು ಕೆಡವಿ ಬಿಡ ಬೇಕೆಂದು ಆಶೆಯುಳ್ಳವಳಾಗಿದ್ದ ಕಾರಣವೂ, ಮುಂಚಿತವಾಗಿ ಹುಟ್ಟಿದ ಮೋಸಗಾರನಾದ (Lambert Simnel) ಲಾಂಬೆರ್ತ್ ಸಿಮ್ನೆಲೆಂಬವನಿಗೆ ಸಹಾಯ ಕೊಟ್ಟವಳಾದ ಕಾರಣವೂ, ಈಕೆಯೇ (Warbeck) ವಾರ್ಬೆಕ್ ಎಂಬವನನ್ನು ಸಹ ಪ್ರೇರೇಪಿಸಿದವಳೆಂದು ಅನೇಕರು ನೆನಸುತ್ತಾರೆ.

ಅನೇಕ ದೊಡ್ಡ ಮನುಷ್ಯರು ಈ (Warbeck) ವಾರ್ಬೆಕ್ ಎಂಬವನ ಉಪಾಯಗಳಲ್ಲಿ ಪಾಲುಗಾರರಾಗಿದ್ದು, ಇದಕ್ಕಾಗಿ ಅರಸನ ಅಪ್ಪಣೆಯಿಂದ ಕೊಲ್ಲಲ್ಪಟ್ಟರು. ಇವರಲ್ಲಿ (Sir William Stanley) ಸರ್ ಉಲ್ಲಿಯಮ್ ಸ್ತಾನ್‌ಲಿ ಎಂಬವನು ಒಬ್ಬನಾಗಿದ್ದನು. ಇವನು 3ನೇ ರಿಚಾರ್ಡನಿಗೆ ದ್ರೋಹ ಮಾಡಿ, ಈಗ ಆಳುವ ಅರಸನ ಕೈಕೆಳಗೆ ದೊಡ್ಡ ಉದ್ಯೋಗವನ್ನು ಹೊಂದಿದ್ದನು. ಆದರೆ ಇವನು ನಿಜವಾಗಿ (Warbeck) ವಾರ್ಬೆಕ್ ಎಂಬವನ ಕಲಹದ ವಿಷಯ ಅಪರಾಧಿಯೋ ಏನೋ ತಿಳಿಯದು. ಮೊದಲು ವಾರ್ಬೆಕನು ಇಂಗ್ಲಾಂದಿನ ಮೇಲೆ ದಂಡೆತ್ತಲಿಲ್ಲ. ಸ್ಕೊತ್ಲಾಂದಿಗೆ ಹೋಗಿ ಆ ದೇಶದ ಅರಸನಿಂದ ದಯವಾಗಿ ಸೇರಿಸಲ್ಪಟ್ಟು, ರಾಜಸ್ತ್ರೀಯರಲ್ಲಿ ಒಬ್ಬಳನ್ನು ಮದುವೆ ಮಾಡಿ ಕೊಂಡನು. ಸ್ಕೊತ್ಲಾಂದ್ ಅರಸನಾದ (James IV) 4ನೇ ಜೇಮ್ಸ್ ಇವನಿಗೆ ದಯ ತೋರಿಸಿದ್ದಲ್ಲದೆ, ದಂಡನ್ನು ಕೂಡಿಸಿ, ಇಂಗ್ಲಾಂದಿಗೆ ಸೇರಿದ (Northumberland) ನೊರ್ತಂಬರ್ಲಾಂದಿಗೆ ಕಳುಹಿಸಿ, ಅಲ್ಲಿರುವವರನ್ನು ಕೊಳ್ಳೆ ಇಟ್ಟನು. ಇಂಗ್ಲಾಂದಿನ ಉತ್ತರ ದಿಕ್ಕಿನಲ್ಲಿ ಹೀಗೆ ಯುದ್ಧ ನಡೆಯುವಾಗ ದಕ್ಷಿಣ ದಿಕ್ಕಿನಲ್ಲಿರುವ (Cornwall) ಕೊರ್ನ್‌ವಾಲಿನಲ್ಲಿ ಜನಗಳು ಬಹಳ ತೆರಿಗೆ ಕಟ್ಟ ಬೇಕಾಗಿದ್ದದರಿಂದ ಗುಣುಗುಟ್ಟುವಿಕೆಯೂ ಕಲಹಗಳೂ ಉಂಟಾದವು.

ತನ್ನ ದಂಡು ಸ್ಕೊತ್ಲಾಂದಿಗೆ ತಿರಿಗಿ ಬಂದಾಗ ಆ ದೇಶದ ಅರಸನು ಹೆನ್ರಿಯ ಸಂಗಡ ಒಡಂಬಡಿಕೆ ಮಾಡಿದನು. ಆದದರಿಂದ (Warbeck) ವಾರ್ಬೆಕ್ ಎಂಬವನು ಆ ದೇಶವನ್ನು ಬಿಟ್ಟು ಐರ್ಲಾಂದಿಗೆ ಹೋದನು. ಅವನ ಹೆಂಡತಿಯು ಸಹ ಅವನ ಸಂಗಡ ಹೋಗಿ ಅವನಿಗೆ ಸಂಚವಿಸಿದ ಕಷ್ಟಗಳಲ್ಲಿ ಪಾಲು ಹೊಂದಿದಳು. ಐರ್ಲಾಂದಿನಲ್ಲಿ ಅವನ

ಕಾರ್ಯಗಳು ಕೈಗೂಡಿ ಬಾರದ ಕಾರಣ ಇಂಗ್ಲಾಂದಿಗೆ ಶೇರಿದ (Cornwall) ಕೋರ್ನ್‌ವಾಲಿಗೆ ಬಂದು ಸೈನ್ಯವನ್ನು ಕೂಡಿಸಿ, ಸಿಂಹಾಸನಕ್ಕಾಗಿ ಯುದ್ಧ ಮಾಡುವದಕ್ಕಿದ್ದನು. ಆದರೆ ಯುದ್ಧ ಪ್ರಾರಂಭಿಸುವದಕ್ಕಿದ್ದಾಗಲೇ ಭಯ ಪಟ್ಟು ಆಶ್ರಯಸ್ಥಾನಕ್ಕೆ ಓಡಿ ಹೋದನು. ಸ್ವಲ್ಪ ಕಾಲವಾದ ಮೇಲೆ ಅರಸನಾದ ಹೆನ್ರಿಯ ಸೈನ್ಯಾಧಿಪತಿಗಳು ಅವನನ್ನು ಹಿಡಿದು, ಲಂಡನ್ ನಗರಕ್ಕೆ ಶೆರೆಯಾಗಿ ತಕ್ಕೊಂಡು ಹೋದರು. ಅಲ್ಲಿ ಬೀದಿಯಲ್ಲಿ ಇರಿಸಲ್ಪಟ್ಟ ಕೋಳದಲ್ಲಿ ಹಾಕಲ್ಪಟ್ಟ ಮೇಲೆ, (Earl of Warwick) ವಾರಿಕ್ ಪ್ರಭುವಿನ ಸಂಗಡ ತವರ್ ಕೋಟೆಯಲ್ಲಿ ಬಂಧಿಸಲ್ಪಟ್ಟನು. ಕೆಲವು ತಿಂಗಳಾದ ತರುವಾಯ ಇವರಿಬ್ಬರು ತಪ್ಪಿಸಿ ಕೊಂಡು ಹೋಗುವದಕ್ಕೆ ಪ್ರಯತ್ನ ಮಾಡಿದ ಕಾರಣ ಇಬ್ಬರ ಮೇಲೆ ಪ್ರಾಣಾಜ್ಞೆ ಬಂತು.

ಅರಸನಾದ ಹೆನ್ರಿಯು ಅನ್ಯ ದೇಶದ ಅರಸುಗಳ ಸಂಗಡ ಮಾಡಿದ ಬಂಧುತ್ವಗಳಿಂದ ಮುಖ್ಯವಾದ ಸಂಗತಿಗಳು ನಡೆದ ಕಾರಣ ಅವುಗಳನ್ನು ಇಲ್ಲಿ ವಿವರಿಸ ತಕ್ಕದ್ದು. ಏನಂದರೆ, ಆತನ ಹಿರೇ ಮಗನಾದ (Arthur) ಆರ್ಥರ್ ಎಂಬವನು, ಹದಿನಾಲ್ಕು ವರುಷದವನಾಗಿದ್ದಾಗ, (Spain) ಸ್ಪೇನ್ ದೇಶದ ಅರಸ ಅರಸಿಗಳಾದ (Ferdinand) ಫೆರ್ದಿನಾಂದೂ (Isabella) ಇಸಬೇಲಳೂ ಇವರ ಮಗಳಾದ (Catherine) ಕತ್ತರೀನ್ ಎಂಬಾಕೆಯನ್ನು ಮದುವೆ ಮಾಡಿ ಕೊಂಡನು. ಆದರೆ ಸ್ವಲ್ಪ ಕಾಲದ ಮೇಲೆ (Arthur) ಆರ್ಥರ್ ಸತ್ತದದರಿಂದ ಆತನ ತಮ್ಮನು (Pope) ಪಾಪು ಎಂಬವನಿಂದ ಅಪ್ಪಣೆ ಹೊಂದಿ ವಿಧವೆಯಳಾದ (Catherine) ಕತ್ತರೀನಳನ್ನು ತನ್ನ ಹೆಂಡತಿಯಾಗಿ ತೆಗದು ಕೊಂಡನು. ಹೆನ್ರಿಯ ಎರಡನೇ ಕುಮಾರನಾದ ಈತನು ತರುವಾಯ ಇಂಗ್ಲಾಂದಿಗೆ ಅರಸನಾಗಿ 8ನೇ ಹೆನ್ರಿ ಎಂದು ಕರೆಯಲ್ಪಟ್ಟನು. ಇದಲ್ಲದೆ (Margaret) ಮಾರ್ಗ್ರೆತ್ ಎಂಬವಳಿಗೂ ಸ್ಕೊತ್ಲಾಂದಿನ ಅರಸನಾದ (James) ಜೇಮ್ಸ ಅರಸನಿಗೂ ಮದುವೆ ಆಯಿತು. ಇವರಿಬ್ಬರಿಂದ (Stuart) ಸ್ಟೂವರ್ತ್ ಮತ್ತು (Brunswick) ಬ್ರನ್ಸ್ವಿಕ್ ಎಂಬ ಇಂಗ್ಲಾಂದ್ ದೇಶದ ರಾಜವಂಶಗಳು ಹುಟ್ಟಿದವು. 7ನೇ ಹೆನ್ರಿಯು 1509ನೇ ವರುಷದಲ್ಲಿ ಶೀಘ ಹೋದನು.

## ಸಂಧಿ 13. ಏಳನೇ ಹೆನ್ರಿಯ ಧೊರೆತನ.

ಏಳನೇ ಹೆನ್ರಿಯು ತನ್ನ ಅಧಿಕಾರವನ್ನು ಬಲ ಪಡಿಸುವದಕ್ಕೂ ತನ್ನ ಕೈಕೆಳಗಿನ ಅಧಿಕಾರಸ್ಥರ ಅಧಿಕಾರವನ್ನು ತಗ್ಗಿಸುವದಕ್ಕೂ ಮುಖ್ಯವಾಗಿ ಪ್ರಯಾಸ ಪಟ್ಟನು. ಇಂಗ್ಲಾಂದಿನ ಅರಸನು ಸ್ವಂತ ಮನಸ್ಸಿನ ಹಾಗೆ ಆಳುವದಕ್ಕೆ ಸ್ವತಂತ್ರನಾಗಿರ ಬೇಕೆಂದು ಆತನ ಅಭಿಪ್ರಾಯವಾಗಿರುವದರಿಂದ ತನ್ನ ರಾಜ್ಯದ ಅಧಿಕಾರಿಗಳಲ್ಲಿ ಒಬ್ಬರಾದರೂ ತನಗಿಂತ ಹೆಚ್ಚಾದ ಅಟ್ಟಹಾಸವನ್ನಾದರೂ ಪರಾಕ್ರಮವನ್ನಾದರೂ ತೋರಿಸ ಸ್ಥಳ ಕೊಡುವದಿಲ್ಲ. ಇದರ ವಿಷಯ ಆತನ ಪ್ರಯತ್ನಗಳು ಕೈಗೂಡಿ ಬಂದವು. ಆ ಕಾಲ ಮೊದಲುಗೊಂಡು ಇಂಗ್ಲಾಂದಿನ ಅರಸುಗಳ ಮಹತ್ತನ್ನೂ ನ್ಯಾಯವಾದ ಅಧಿಕಾರವನ್ನೂ ಪ್ರಜೆಗಳಲ್ಲಿ ದೊಡ್ಡವರಾಗಲಿ ಚಿಕ್ಕವರಾಗಲಿ ಯಾರೂ ಎದುರಿಸದೆ, ಎಲ್ಲರು ತಮ್ಮ ಕೈಲಾಗುವಷ್ಟು ಅರಸನ ಘನವನ್ನು ಕಾಪಾಡುತ್ತಾರೆ. 7ನೇ ಹೆನ್ರಿಯ ಧೊರೆತನದ ಕಾಲವು ಯೂರೋಪಿನ ಚರಿತ್ರೆಯಲ್ಲಿ ಬಹು ಮುಖ್ಯವಾದದ್ದು. ಆ ಕಾಲದಲ್ಲಿ ಛಾಪಿಸುವ ಯಂತ್ರಗಳು ಮೊದಲು ಮಾಡಲ್ಪಟ್ಟು, ಅಚ್ಚು ಹಾಕಿದ ಪುಸ್ತಕಗಳಿಂದ ಜನಗಳೊಳಗೆ ತಿಳುವಳಿಕೆ ಹೆಚ್ಚಾಯಿತು. ಮತ್ತು (America) ಅಮೆರಿಕ ಎಂಬುವ ಹೊಸ ಭೂಮಿಯು ಅವಾಗ ಕಂಡು ಕೊಳ್ಳಲ್ಪಟ್ಟದ್ದರಿಂದ ಮನುಷ್ಯರ ಮನಸ್ಸುಗಳು ನೂತನವಾದವುಗಳನ್ನು ವಿಚಾರಿಸುವದಕ್ಕೆ ಎಬ್ಬಿಸಲ್ಪಟ್ಟವು. ಇದೆಲ್ಲಾದರಿಂದ ಬುದ್ಧಿ ವಿದ್ಯೆ ಚಮತ್ಕಾರಗಳು ಆ ಕಾಲದಿಂದ ಯೂರೋಪಿನಲ್ಲಿ ಬಹಳವಾಗಿ ಹೆಚ್ಚಾಗುತ್ತಾ ಬಂದವು.



## CHAPTER XIV.

### THE REFORMATION.

FROM A. D. 1509 TO A. D. 1547.

## 14 ಸಂಧಿ.

### ತಿದ್ದುಪಾಟು.

ಕ್ರಿ. ಶ. 1509 ಮೊದಲು ಕ್ರಿ. ಶ. 1547 ವರೆಗೂ

ಮುಖ್ಯ ತಾರೀಖುಗಳು: (Henry VIII) 8ನೇ ಹೆನ್ರಿ 1509—1547 ಆಳಿದ್ದು. (Luther) ಲುಥರ್ ಪ್ರಸಂಗ ಮಾಡುತ್ತಾನೆ 1517. (Wolsey) ವೊಲ್ಸಿ ಶೀರಿ ಹೋದದ್ದು 1530. (Protestant) ಪ್ರೊತೆಸ್ತಾಂತ್ ತಿದ್ದುಪಾಟು 1547. ಅದೇ ಕಾಲದ ಇಂದ್ಯ ಚರಿತ್ರೆ: (Mogul Dynasty) ಮೊಗಲರ ವಂಶಸ್ಥರ ಧೊರೆತನವು (Baber) ಬಾಬರನಿಂದ ಸ್ಥಾಪಿಸಲ್ಪಟ್ಟದ್ದು 1526. (Humayun) ಹ್ಯೂಮಾಯುನನ ಧೊರೆತನ 1530. (Akber) ಅಕ್ಬರನ ಜನನವು 1542. ಶ್ರೇಷ್ಟ ನಾಮಗಳು: (Cardinal Wolsey) ಕಾರ್ಡಿನಲ್ ವೊಲ್ಸಿ 1471—1530. ಪ್ರಧಾನ ಅಧ್ಯಕ್ಷನಾದ (Cranmer) ಕ್ರಾನ್ಮೆರ್ 1486—1556. ಸತ್ಯವೇದವನ್ನು ಇಂಗ್ಲಿಷ್ ಭಾಷೆಯಲ್ಲಿ ಟೀಕಿಸಿದ (William Tyndale) ವಿಲ್ಲಿಯಮ್ ತಿಂದೇಲ್ (Miles Coverdale) ಮತ್ತು ಮೈಲ್ಸ್ ಕವೆರ್ದೇಲ್ 1500—1536. (Martin Luther) ಮಾರ್ಶಿನ್ ಲುಥರ್ 1483—1546. ಜ್ಯೋತಿಷ್ಯನಾದ (Copernicus) ಕೊಪೆರ್ನಿಕಸ್ 1473—1543.

ಕೆಲವು ವರುಷಗಳ ಮಟ್ಟಿಗೂ ಮುಂಚೆ ಹೇಳಿದ ಏಳನೇ ಹೆನ್ರಿ ಎಂಬುವ ಅರಸನು ಎಲ್ಲರ ಬಳಿಯಲ್ಲಿಯೂ ಎಗಟಾಗಿ ಮಾತಾಡುವದರಿಂದಲೂ ಲೋಭಗುಣದಿಂದಲೂ ಪ್ರಜೆಗಳು ಅವನ ಮೇಲೆ ಹಗೆಯಾಗಿಯೂ ಕೋಪವಾಗಿಯೂ ಇದ್ದರು. ಆದರೆ ಅವನು ಸತ್ತ ತರುವಾಯ ಹದ್ದಿನೆಂಟು ವರುಷಕ್ಕಿಂತ ಕಡಿಮೆ ಪ್ರಾಯವುಳ್ಳ ಯೌವನಸ್ಥನಾದಂಥ

ಅವನ ಮಗನಾದ ಹೆನ್ರಿ ಎಂಬವನು ಸುಂದರನಾಗಿಯೂ ಅರಳಿದ ಮುಖವುಳ್ಳವನಾಗಿಯೂ ಎಲ್ಲರ ಬಳಿಯಲ್ಲಿಯೂ ಇಂಪಾಗಿ ಮಾತಾಡುವವನಾಗಿಯೂ ಇರುವದನ್ನು ಕಂಡು ಅವನ ಮೇಲೆ ಬಹು ಪ್ರೀತಿಯಾಗಿದ್ದರು. ಇದರಿಂದ "ಚಂದನವು ಜಗಕೆ ಶೀತಂ | ಚಂದನದಿಮ್ಮಿಗಿಲು ಶೀತ ಚಂದ್ರನ ಕಿರಣಂ | ಚಂದನ ಚಂದ್ರನಿಗಿಂದಲು | ಕುಂದದ ಮೃದುನುಡಿಯೆ ಶೀತ ಚೂಡಾರತ್ನಾ" ಎಂಬುವದು ದೃಷ್ಟಾಂತವಾಯಿತು.

ಆ ಯೌವನ ಅರಸನು ಸಿಂಹಾಸನ ಹತ್ತಿದ ಕೂಡ್ಲೆ ತಾನು ಮುಂಚೆ ಮಾತು ಕೊಟ್ಟಿದ್ದ ಪ್ರಕಾರವೇ ತನ್ನ ಸಹೋದರನ ವಿಧವೆಯಾದ (Catherine) ಕತ್ತರೀನ್ ಎಂಬುವ (Arragon) ಅರಗೊನ್ ನಾಡಿನ ಧೊರೆಯ ಮಗಳನ್ನು ಮದಿವೆ ಮಾಡಿ ಕೊಂಡ ತರುವಾಯ, ಅವನಿಗೂ ಅವನ ಹೆಂಡತಿಗೂ ಬಹು ಆಡಂಬರದಿಂದ ರಾಜ್ಯಪಟ್ಟಾಭಿಷೇಕದ ಆಚರಣೆಗಳೆಲ್ಲಾ ಮಾಡಲ್ಪಟ್ಟವು. ಅದರ ತರುವಾಯ ಕೆಲವು ಕಾಲ ಆ ಯೌವನ ಅರಸನೂ ಅವನ ರಾಜಸಭೆಯವರೂ ಬಹು ಮನೋಸಂಭ್ರಮದಿಂದ ಉಲ್ಲಾಸವಾಗಿದ್ದರು. ಆದಾಗ್ಯೂ ಆ ಅರಸನು ಆ ಕಾಲದ ಅರಸರು ಮುಂತಾದವರಿಗಿಂತಲೂ ವಿದ್ಯಾಧಿಕನಾಗಿದ್ದದರಿಂದ ಅವನು ವ್ಯರ್ಥವಾಗಿ ಕಾಲ ಕಳಿಯದೆ, ದಿನದಿನ ಹಿರಿಯರು ಮಾಡಿದ ಗ್ರಂಥಗಳನ್ನು ಕಲಿಯುತ್ತಾ ಬಂದನು. ಇದಲ್ಲದೆ ತನ್ನ ತಂದೆಯ ಬಳಿಯಲ್ಲಿದ್ದ ಮಂತ್ರಿಗಳಲ್ಲಿ ಅಧಿಕ ವಿವೇಕವುಳ್ಳವರನ್ನು ತನ್ನ ಬಳಿಯಲ್ಲಿ ಇಟ್ಟು ಕೊಂಡು ಅವರ ಆಲೋಚನೆಯ ಪ್ರಕಾರ ಅರಸುತನ ಮಾಡುತ್ತಾ ಬಂದನು. ಇದಲ್ಲದೆ ಅವನು ಅನ್ಯ ದೇಶದವರ ರಾಜ್ಯಕಾರ್ಯಗಳನ್ನು ಕುರಿತು ಬಹು ಪ್ರೀತಿಯಿಂದ ವಿಚಾರಿಸ ಪ್ರಾರಂಭಿಸಿ, ರೋಮಾಪುರಿ ಪಾಪು ಎಂಬವನು ಕೇಳಿ ಕೊಂಡ ಪ್ರಕಾರ ಫ್ರಾನ್ಸ್ ದೇಶದ ಅರಸನಿಗೆ ವಿರೋಧವಾಗಿ ನಾನಾ ಅರಸರು ಕೂಡಿ ಮಾಡಿ ಕೊಂಡ ಒಡಂಬಡಿಕೆಯಲ್ಲಿ ತಾನೂ ಶೇರಿದನು. ಅವನ ಮಾವನಾದ (Ferdinand) ಫೆರ್ದಿನಾಂದ್ ಎಂಬುವ ಸ್ಪೇನ್ ದೇಶದ ಅರಸನು ಸಹ ಆ ಒಡಂಬಡಿಕೆಯಲ್ಲಿ ಶೇರಿ ಇದ್ದದರಿಂದ, ಸ್ಪೇನ್ ದೇಶದ ರಾಣುವೆಯ ಸಂಗಡ ಶೇರಿ ಫ್ರಾನ್ಸ್ ದೇಶದ ಮೇಲೆ ದಂಡೆತ್ತಿ ಕೊಂಡು ಹೋಗಲಿಕ್ಕಾಗಿ ಇಂಗ್ಲಿಷ್

ರಾಣುವೆಯನ್ನು ಸ್ಪೇನ್ ದೇಶಕ್ಕೆ ಕಳುಹಿಸಿದನು. ಆದಾಗ್ಯೂ ಪೆರ್ದಿನಾಂದ್ ಅರಸನು, ಆ ಸೈನ್ಯವನ್ನು ಫ್ರಾನ್ಸ್ ದೇಶಕ್ಕೆ ಕಳುಹಿಸದೆ, ತಾನು ಕಟ್ಟಿ ಕೊಳ್ಳ ಅಪೇಕ್ಷಿಸಿದ (Navarre) ನವಾರ್ ಎಂಬ ಸಣ್ಣ ಶೀಮೆಯನ್ನು ಒಳಪಡಿಸುವದಕ್ಕಾಗಿ ಅಲ್ಲಿಗೆ ನಡಿಸಿ ಕೊಂಡು ಹೋದದರಿಂದ, ಅದರಲ್ಲಿ ಕಟ್ಟುಪಾಟೆಲ್ಲಾ ನಿವರ್ತಿಯಾಗಿ ಕೆಲವರು ಕಲಹ ಉಂಟು ಮಾಡಿದರು. ಇನ್ನು ಅನೇಕರು ವ್ಯಾಧಿಯಿಂದ ಕಷ್ಟ ಪಟ್ಟು ಸತ್ತು ಹೋದರು. ಮಿಕ್ಕಾದವರು ಇಂಗ್ಲಾಂದಿಗೆ ತಿರಿಗಿ ಬಂದರು. ಆದಾಗ್ಯೂ ಮಾರಣೆ ವರುಷದಲ್ಲಿ ಹೆನ್ರಿ ಅರಸನು ತಾನೇ ಒಂದು ಸೈನ್ಯವನ್ನು ನಡಿಸಿ ಕೊಂಡು, ಫ್ರಾನ್ಸ್ ದೇಶದ ಉತ್ತರ ಭಾಗದಲ್ಲಿ ಇಳಿದು, ಅವರ ರಾಹುತವೀರರನ್ನು ಚದರ ಬಡಿದನು. ಅವರು ಅಂಜಿ ತಾವು ಹಿಮ್ಮಡಿಗೆ ಕಟ್ಟಿದ್ದ ಮುಳ್ಳುಗಳಿಂದ ಕುದುರೆಗಳನ್ನು ಚುಚ್ಚಿ ಓಟ ಹಾಕಿದ್ದರಿಂದ, ಆ ಯುದ್ಧಕ್ಕೆ "ಹಿಮ್ಮಡಿ ಮುಳ್ಳುಗಳ ಯುದ್ಧ" ಎಂದು ಹೆಸರಾಯಿತು. ಇದಲ್ಲದೆ ಹೆನ್ರಿಯು ಎರಡು ಸಣ್ಣ ಪಟ್ಣಗಳನ್ನು ಹಿಡಿದ ತರುವಾಯ, ಇಂಗ್ಲಾಂದಿಗೆ ತಿರಿಗಿ ಬಂದು ಸ್ವಲ್ಪ ಕಾಲದೊಳಗಾಗಿ ಫ್ರಾನ್ಸರ ಸಂಗಡ ಸಮಾಧಾನದ ಒಡಂಬಡಿಕೆ ಮಾಡಿದನು.

ಇಷ್ಟರೊಳಗೆ ಫ್ರಾನ್ಸ್ ದೇಶದ ಅರಸನು ಯಾಕೋಬನೆಂಬ ಸ್ಕೊತ್ಲಾಂದ್ ದೇಶದ ಅರಸನ ಸಂಗಡ ಸ್ನೇಹ ಮಾಡಿ ಕೊಂಡು, ಇಂಗ್ಲಾಂದಿನ ಉತ್ತರ ನಾಡುಗಳ ಮೇಲೆ ದಂಡೆತ್ತಿ ಕೊಂಡು ಬರ ಪ್ರೇರೇಪಿಸಿದನು. ಆ ಉತ್ತರ ನಾಡುಗಳಲ್ಲಿದ್ದ ಸೈನ್ಯಕ್ಕೆ (Surrey) ಸರ್ರಿ ಎಂಬ (Earl) ಏರ್ಲ್ ಪ್ರಭುವು ದಳಕರ್ತನಾಗಿ ನೇಮಿಸಲ್ಪಟ್ಟಿರಲಾಗಿ, ಅವನು ಎದುರಿಗಳನ್ನು ಓಡಿಸಿ ಬಿಡುವದಕ್ಕೆ ಎಲ್ಲಾ ಸಿದ್ಧ ಮಾಡಿ ಕೊಂಡಿದ್ದನು. ಹೀಗೆ (Flodden) ಫ್ಲೊಡ್ಡೆನ್ ಊರಿನ ಬಳಿಯ ನಡೆದ ಬಹು ಘೋರ ಯುದ್ಧದಲ್ಲಿ ಸ್ಕೊತ್ಲಾಂದ್ ಅರಸನೂ, ಅವನ ಮುಖ್ಯ ಪ್ರಭುಗಳೂ, ಕೆಲವು ಶ್ರೇಷ್ಠ ವೀರರೂ ರಣರಂಗದಲ್ಲಿ ಮಡಿದು ಹೋದರು. ಮತ್ತು ಅವರ ಸೈನ್ಯವೆಲ್ಲಾ ಬೆನ್ನು ಕೊಟ್ಟು ಓಡಿ ಹೋಯಿತು.

ಆ ಕಾಲದಲ್ಲಿ ಹೆನ್ರಿ ಅರಸನ ಮೊದಲನೇ ಮಂತ್ರಿಗೆ (Thomas

Wolsey) ತೋಮಾಸ್ ವೊಲ್ಸಿ ಎಂಬ ಹೆಸರಿತ್ತು. ಅವನಿಗೆ ಚುರುಕಾದ ಬುದ್ಧಿಯೂ, ಘನ ಹೊಂದ ಬೇಕೆಂಬುವ ವಾಂಛೆಯೂ, ನ್ಯಾಯಪರಿಜ್ಞಾನವೂ ಉಂಟಾಗಿದ್ದವು. ಅವನು (Ipswich) ಇಪ್ಸ್‌ವಿಚ್ ಎಂಬ ಊರಿನಲ್ಲಿ ವಾಸಿಸಿಪ ಯಾರೋ ಒಬ್ಬನ ಮಗನಾಗಿದ್ದು, ಬರ ಬರ ಘನ ಹೊಂದಿ (York) ಯೋರ್ಕ್ ಪಟ್ಟದ ಶ್ರೇಷ್ಠ ಅಧ್ಯಕ್ಷನಾಗಿಯೂ, ಇಂಗ್ಲಾಂಡ್ ರಾಜ್ಯದ ಮೊದಲನೇ ನ್ಯಾಯಾಧಿಪತಿಯಾಗಿಯೂ ರೋಮಸಭೆಯ ಮುಖ್ಯ ಪ್ರಭುಗಳಲ್ಲಿ ಒಬ್ಬನಾಗಿಯೂ ಇದ್ದನು. ಯೂರೋಪಿನ ದೊಡ್ಡ ಅರಸರೆಲ್ಲರೂ ಅವನ ಯುಕ್ತಿ ವಿಶೇಷಗಳನ್ನೂ, ಬುದ್ಧಿಸೂಕ್ಷ್ಮವನ್ನೂ ತಿಳಿದು ಕೊಂಡು ಅವನ ಶಕ್ತಿಗೆ ಜಯ ಪಟ್ಟಿದ್ದರು. ಅನ್ಯ ದೇಶಗಳ ರಾಜ್ಯಕಾರ್ಯಗಳನ್ನು ಅವನು ಚುರುಕಾಗಿ ಶೋಧಿಸಿ ತಿಳಿದು ಕೊಂಡು, ಆಯಾ ಅರಸರಿಗೆ ಬಹು ಸೂಕ್ಷ್ಮವಾಗಿ ಉಪಯೋಗವಾದವುಗಳನ್ನು ಮಾಡಿ, ಆ ಉಪಕಾರಗಳನ್ನು ಅವರು ಗ್ರಹಿಸಿ ಕೊಳ್ಳುವಂತೆ ಮಾಡಿದ್ದರಿಂದ, ಅವನ ಯಜಮಾನನಾದ ಇಂಗ್ಲಾಂಡ್ ಅರಸನಿಗೆ ಮುಂಚೆ ಎಂದಿಗೂ ಇರದಂಥ ಘನವೂ ಕೀರ್ತಿಪ್ರತಾಪವೂ ಉಂಟಾದವು. ಇದಲ್ಲದೆ ಅರಸನು ಅವನ ಮೇಲೆ ಬಹು ಪ್ರೀತಿ ಪಟ್ಟದ್ದರಿಂದ, ತಾನು ಉಲ್ಲಾಸವಾಗಿರುವ ಕಾಲಗಳಲ್ಲಿಯೂ, ವಿನೋದ ಮಾಡುವ ಕಾಲಗಳಲ್ಲಿಯೂ ಅವನು ಅರಸನ ಜತೆಗಾರನಾಗಿರುವನು. ಮತ್ತು ರಾಜಸಮ್ಮುಖದವರು ಅವನಿಗೆ ಮಾಡ ತಕ್ಕ ಮರ್ಯಾದೆಗಳನ್ನೆಲ್ಲಾ ತಪ್ಪದೆ ಮಾಡುವರು. ಹೀಗೆ ಅವನು ಯಾವಾಗಲೂ ಅರಸನಿಗೆ ವಿಧೇಯನಾಗಿ ನಡಿಯುವದರಿಂದ ಲೆಖ್ಖವಿಲ್ಲದ ದ್ರವ್ಯಗಳನ್ನು ಸಂಪಾದಿಸಿದನು. ಆದಾಗ್ಯೂ ಅವನು ಆ ಆಸ್ತಿಗಳನ್ನು ತನಗೋಸ್ಕರ ಇಟ್ಟು ಕೊಳ್ಳದೆ ಧಾರಾಳವಾಗಿ ಖರ್ಚು ಮಾಡುವನು. ಅವನ ಅರಮನೆಯಲ್ಲಿ ಪರಿವಾರದವರಾದ ದೊಡ್ಡ ಗುಂಪು ಇದ್ದು ಬಹು ಸಂಭ್ರಮವಾಗಿ ಬದುಕುತ್ತಿದ್ದನು. ಬಡವರಾದ ವಿದ್ಯಾರ್ಥಿಗಳಿಗೂ ಪಂಡಿತರಿಗೂ ಪರಿಜನರಿಗೂ ಕೊರತೆ ಪಡುವವರೆಲ್ಲರಿಗೂ ಬಹು ಉದಾರವಾಗಿ ಸಹಾಯ ಮಾಡುವನು. ಇದಲ್ಲದೆ ಅಷ್ಟು ಅಹಂಕಾರವೂ ಅಟ್ಟಹಾಸವೂ ಉಳ್ಳವನಾಗಿದ್ದಾಗ್ಯೂ ಬಹಳ ಜಾಗ್ರತೆಯಿಂದ ನ್ಯಾಯಸಭೆಯ ಕೆಲಸಗಳನ್ನೂ ಶಿರುಸಭೆಯ

ಸೇವೆಗಳನ್ನೂ ಈಡೇರಿಸುವನು. ಅವನು ಅರಸನಿಗೆ ಸಹಾಯವಾಗಿ ಆ ಳಿದ್ದು ಪ್ರಜೆಗಳಿಗೆ ಉಪಯೋಗವಾದದ್ದೇ. ಅವನು ಮಂತ್ರಿಯಾಗಿದ್ದ ಕಾಲದ ವರೆಗೂ ಅರಸನು ಆಳಿದ ಕ್ರಮವನ್ನು ನೋಡುವಾಗ, ಹಿಂದಿನ ಕಾಲದಲ್ಲಿ ಇರದಂಥ ದಯವನ್ನೂ ಕನಿಕರವನ್ನೂ ಸಲಿಗೆಯನ್ನೂ ಅರಸ ನು ಅವನ ಕಾಲದಲ್ಲಿ ತೋರಿಸಿದ್ದರಿಂದ ಅವನಿಂದ ದೇಶದವರಿಗುಂಟಾದ ಮೇಲು ಎಷ್ಟೆಂದು ನಿಧಾನಿಸ ಬಹುದು.

ಕ್ರಿ. ಶ. 1515ನೇ ವರುಷದಲ್ಲಿ ಫ್ರಾನ್ಸ್ ದೇಶವನ್ನು ಆಳಿದ ವೃದ್ಧಾಪ್ಯನಾದ ಅರಸನು ಸಾಯಲಾಗಿ ವೀರಶೂರನಾದಂಥ ಯೌವ ನಸ್ಥನಾದಂಥ (Francis I) ಮೊದಲನೇ ಫ್ರಾಂಸಿಸ್ ಎಂಬವನು ಆ ದೇಶದಲ್ಲಿ ಧೊರೆತನ ಹೊಂದಿದನು. ಮಾರಣೆ ವರುಷದಲ್ಲಿ (Charles) ಚಾರ್ಲ್ಸ್ ಎಂಬವನ ತಾತನಾದ (Ferdinand) ಪೆರ್ಡಿನಾಂಡ್ ಸ ತ್ತು ಹೋದದರಿಂದ ಅವನೇ ಸ್ಪೇನ್ ದೇಶಕ್ಕೆ ಅರಸನಾದನು. ಇದಲ್ಲ ದೆ (Maximilian) ಮಕ್ಸಿಮಿಲ್ಲಿಯನ್ ಎಂಬ ಜರ್ಮನಿ ದೇಶದ ಚಕ್ರವ ರ್ತಿ ಮರಣ ಹೊಂದಿದಾಗ, ಯೌವನ ಅರಸರಾದ ಆ ಇಬ್ಬರೂ ಇಂ ಗ್ಲಾಂಡ್ ಅರಸನೂ ತಮಗೆ ಆ ಅಧಿಕೃವು ಆಗ ಬೇಕೆಂದು ಹುಡುಕಿದ ರು. ಆ ಪಟ್ಟವು ಚಾರ್ಲ್ಸ್ ಎಂಬುವ ಸ್ಪೇನ್ ದೇಶದ ಅರಸನಿಗೆ ಮಾ ತ್ರ ದೊರಕಿತು. ಅದರಿಂದ ಅವನಿಗೂ ಫ್ರಾಂಸಿಸ್ ಎಂಬುವ ಫ್ರಾನ್ ಸ್ ಅರಸನಿಗೂ ಹಗೆಯುಂಟಾದದರಿಂದ ಆ ಇಬ್ಬರೂ ಹೆನ್ರಿ ಎಂಬುವ ಇಂಗ್ಲಾಂಡ್ ಅರಸನ ಸಹಾಯವು ತಮಗೆ ಇದ್ದರೆ, ಎದುರಿಯನ್ನು ಮೇ ಲ್ಗೊಳ್ಳ ಬಹುದೆಂದು ಅವನ ಸಂಗಡ ಸ್ನೇಹವಾಗಿರ ಅಪೇಕ್ಷಿಸಿದರು. ಹೆ ನ್ರಿಯೂ ಅವನ ಮಂತ್ರಿಯೂ ರಹಸ್ಯವಾಗಿ ಆ ಇಬ್ಬರ ಸಂಗಡಲೂ ಸ್ನೇ ಹವಾಗಿದ್ದರು. ಆದಾಗ್ಯೂ (Charles V) ಐದನೇ ಚಾರ್ಲ್ಸ್ ಎಂ ಬುವ ಚಕ್ರವರ್ತಿ (Wolsey) ವೂಲ್ಸಿ ಎಂಬವನಿಗೆ ಕಾಗದ ಬರೆದು, ನೀನು ನನಗೆ ಸಹಾಯ ಮಾಡಿದರೆ, ಇನ್ನು ಮೇಲೆ ನಿನಗೆ (Pope) ಪಾಪು ಎಂಬುವ ಪಟ್ಟವು ದೊರಕುವ ಹಾಗೆ ಮಾಡುತ್ತೇನೆಂದು ಮಾ ತು ಕೊಟ್ಟನು. ಆಗ ವೂಲ್ಸಿ ಎಂಬವನು ಸ್ವದೇಶದಲ್ಲಿ ತನಗಿರುವ ಘ ನವು ಸಾಕೆಂದಿರದೆ, ಅನ್ಯ ದೇಶದಲ್ಲಿಯೂ ಅಧಿಕಾರ ಸಂಪಾದಿಸ ಬೇಕೆಂ

ದು ಅಪೇಕ್ಷಿಸಿದ್ದರಿಂದ ಸಂಗಡಲೇ ಚಾರ್ಲ್ಸ್ ಎಂಬವನ ಪಕ್ಷದಲ್ಲಿ ಶೇರಿ ಕೊಂಡು ಅವನಿಗೆ ಸಹಾಯ ಮಾಡ ಬೇಕೆಂದು ತೀರ್ಮಾನಿಸಿ ಕೊಂಡನು. ಹೆನ್ರಿ ಅರಸನು ಇನ್ನೂ ಯಾರ ಪಕ್ಷದಲ್ಲಿ ಶೇರ ಬೇಹುದೆಂದು ಸಂದೇಹ ಪಟ್ಟು ಕೊಂಡು, ಆ ಇಬ್ಬರು ಅರಸರನ್ನೂ ಕಂಡು ಮಾತಾಡ ಬೇಕೆಂದಿದ್ದನು, ಚಾರ್ಲ್ಸ್ ಎಂಬುವ ಚಕ್ರವರ್ತಿ ಸ್ಪೇನ್ ದೇಶದಿಂದ (Flanders) ಫ್ಲಾಂಡರ್ಸ್ ನಾಡಿಗೆ ಹೋಗುವಾಗ ಇಂಗ್ಲಾಂದಿಗೆ ಬಂದು ಕೆಲವು ದಿವಸ ಮಾತ್ರ ಅಲ್ಲಿ ತಂಗಿದ್ದು, ಹೆನ್ರಿಯನ್ನು ಕಂಡು ಮಾತಾಡಿದ್ದರಲ್ಲಿ ಅಷ್ಟು ಆಡಂಬರ ಮಾಡಲಿಲ್ಲ. ಆದಾಗ್ಯೂ ಅವನು ಫ್ರಾನ್ಸ್ ದೇಶದ ಅರಸನನ್ನು ಕಂಡು ಮಾತಾಡಿದ ಕಾಲದಲ್ಲಿ ಉಭಯತ್ರರೂ ಬಹು ಸಂಭ್ರಮದೊಡನೆ ರಾಜಠೀವಿಯಿಂದ ಬಂದು (Calais) ಕಲೇ ಎಂಬುವ ಊರಿನ ಬಳಿಯ ಇಂಗ್ಲಾಂದ್ ರಾಜ್ಯಕ್ಕೂ ಫ್ರಾನ್ಸ್ ರಾಜ್ಯಕ್ಕೂ ಮೇರೆಯಾಗಿರುವ ಒಂದು ಬೈಲಿನಲ್ಲಿ ಅರಸರಿಗೋಸ್ಕರ ರತ್ನಗಳು ಕೆತ್ತಿದ ಸ್ವರ್ಣಮಯವಾದ ಮಂಟಪಗಳನ್ನು ಕಟ್ಟಿಸಿ, ಆ ಸ್ಥಳದಲ್ಲಿ ಹದಿನಾಲ್ಕು ದಿವಸಗಳ ವರೆಗೂ ನಾನಾ ವಿಧ ವಿನೋದಗಳನ್ನೂ ತಮಾಷೆಗೆ ಜಟ್ಟಿಗಳು ಮಾಡಿದ ಕಾಳಗಗಳನ್ನೂ ನೋಡಿ, ಉಲ್ಲಾಸ ಪಟ್ಟು, ಔತಣಗಳನ್ನು ಮಾಡುತ್ತಾ ಬಂದದರಿಂದ ಆ ಇಬ್ಬರು ಯೌವನ ಅರಸರೂ ಬಹು ಸಂತೋಷದಿಂದ ಅನ್ಯೋನ್ಯವಾದ ಸ್ನೇಹದ ಒಡಂಬಡಿಕೆಯನ್ನು ಮಾಡಿ ಕೊಂಡು, ತರುವಾಯ ತಮ್ಮ ತಮ್ಮ ರಾಜಧಾನಿಪಟ್ಟಣಗಳಿಗೆ ತಿರಿಗಿ ಹೋದರು. ಆ ಬೈಲಿಗೆ ಜರತಾರುಹಚ್ಚಡದ ಮೈದಾನವೆಂದು ಹೆಸರಿಡಲ್ಪಟ್ಟಿತು. ಆದಾಗ್ಯೂ ಅದರ ತರುವಾಯ ಫ್ರಾಂಸಿಸ್ ಎಂಬುವ ಫ್ರಾನ್ಸ್ ಅರಸನಿಗೂ ಚಾರ್ಲ್ಸ್ ಎಂಬುವ ಚಕ್ರವರ್ತಿಗೂ ಯುದ್ಧ ಉಂಟಾದ ಕಾಲದಲ್ಲಿ ಹೆನ್ರಿ ಅರಸನು ಚಾರ್ಲ್ಸನ ಸಂಗಡ ಸಮಾಧಾನದ ಒಡಂಬಡಿಕೆ ಮಾಡಿ ಕೊಂಡನು. ಕೆಲ ವರುಷಗಳ ತರುವಾಯ ಅವನು ಫ್ರಾಂಸಿಸ್ ಅರಸನಿಗೆ ಸಹಾಯ ಮಾಡಿದನು. ಆದಾಗ್ಯೂ ಅವನು ರಾಹುತಸೈನ್ಯವನ್ನು ಕಳುಹಿಸಿದಾಗ್ಯೂ ಇವನಿಗಾದರೂ ಅವನಿಗಾದರೂ ಮುಖ್ಯ ಸಹಾಯ ಮಾಡುವದಕ್ಕೆ ಆಗಲಿಲ್ಲ. ಹ್ಯಾಗಂದರೆ ಅವನ ಸ್ವಂತರಾಜ್ಯದಲ್ಲಿ ಕೆಲವು ಮುಖ್ಯ ಸಂಗತಿಗಳು ನಡೆದಿದ್ದದರಿಂದ

## ಸಂಧಿ 14. ಬಕ್ಕಿಂಗ್‌ಹಾಮ್ ಪ್ರಭುವನ್ನು ಕೊಲೆ ಮಾಡಿದ್ದು.

ಅವನು ಪರರಾಜ್ಯಗಳ ಸಂಗತಿಗಳನ್ನು ಅಷ್ಟಾಗಿ ಚಿಂತಿಸ ಸಮಯವಿರಲಿಲ್ಲ. ಇದಲ್ಲದೆ ಅವನು ತನ್ನ ಬೊಕ್ಕಸದಲ್ಲಿದ್ದ ದ್ರವ್ಯವನ್ನು ವ್ಯರ್ಥವಾಗಿ ಖರ್ಚು ಮಾಡಿದ್ದರಿಂದ ದೊಡ್ಡ ಸೈನ್ಯಗಳನ್ನು ಕೂಡಿಸುವದಕ್ಕೆ ಹಣವಿರಲಿಲ್ಲ.

ಆ ಕಾಲದಲ್ಲಿ ರಾಜವಂಶದವನಾದ (Duke of Buckingham) ಬಕ್ಕಿಂಗ್ಹಾಮ್ ಪ್ರಭುವು ಅರಸನಿಗೆ ವಿರೋಧವಾಗಿ ಒಂದೆರಡು ಮಾತುಗಳನ್ನು ಹೇಳಿದನಂತೆ. ಮತ್ತು ಅವನು ಮುಂಚೆ ಹೇಳಿದ ವೊಲ್ಸಿ ಎಂಬ ಸಭೆಯ ಅಧಿಕಾರಿಯ ಅಹಂಕಾರವನ್ನು ಕಂಡು ಅವನನ್ನು ಕುರಿತು ಅಪಹಾಸ್ಯವಾಗಿ ಮಾತಾಡಿ ಇದ್ದನಂತೆ. ಹೆನ್ರಿ ಅರಸನು ಅದನ್ನು ಕೇಳಿ ಫ್ರಾನ್ಸ್ ದೇಶದಿಂದ ತಿರಿಗಿ ಬಂದ ಕೂಡಲೆ ಯಾವದೊಂದು ನ್ಯಾಯವಿಲ್ಲದೆ ಅವನನ್ನು ಕ್ರೂರವಾಗಿ ಕೊಲ್ಲಿಸಿದನು.

“ಬೆಳೆಯುವ ಪೈರು ಮೊಳಿಕೆಯಲ್ಲಿ ತೋರುವದು” ಎಂಬ ಗಾದೆಯ ಮೇರೆಗೆ ಆ ಬಾಲ್ಯ ಅರಸನು ಮಾಡಿದ ಈ ಕ್ರೂರವಾದ ಕಾರ್ಯದಿಂದ ಅವನ ಆಳಿಕೆಯ ವಿಧವನ್ನೆಲ್ಲಾ ತಿಳಿದು ಕೊಳ್ಳ ಬಹುದು. ಆ ಅರಸನು ಎಷ್ಟು ಮಾತ್ರವೂ ನೀತಿ ನ್ಯಾಯವನ್ನು ನೋಡದೆ ಮಹಾ ಕಠಿಣವಾಗಿ ಆಳಿದನು.

ಇದಲ್ಲದೆ ಆ ಕಾಲದಲ್ಲಿ ಯುರೋಪಿನಲ್ಲೆಲ್ಲಾ ಸಭೆಯವರ ಮನಸ್ಸಿನಲ್ಲಿ ದೊಡ್ಡ ಚಲನೆ ಉಂಟಾಗಿತ್ತು. ಹ್ಯಾಗಂದರೆ, ಯೂರೋಪಿನ ಅನೇಕ ದೇಶಗಳವರು ತಾವು ಅದು ವರೆಗೂ ಅನುಸರಿಸುತ್ತಾ ಬಂದ ಮತಾಚಾರಗಳನ್ನೂ ನೇಮನಿಷ್ಟೆಗಳನ್ನೂ ಕುರಿತು ಶೋಧಿಸಿ ನೋಡಿ, ಅವುಗಳಲ್ಲಿ ಅನೇಕ ಕಾರ್ಯಗಳು ಸರಿ ಇಲ್ಲವೆಂದು ಕಂಡು ಅವುಗಳನ್ನು ಮಾರ್ಪಡಿಸ ಬೇಕೆಂದು ಹೇಳಿ ಸಭೆಯನ್ನು ತಿದ್ದುಪಾಟು ಮಾಡ ಯತ್ನಯಿಸಿ ಕೊಂಡರು. ಈ ತಿದ್ದುಪಾಟು ಮುಖ್ಯವಾಗಿ ಇಂಗ್ಲಾಂಡಿನಲ್ಲಿ ಮಾಡಲ್ಪಟ್ಟಿತು. ಆ ಕಾಲದಲ್ಲಿ ಕಲಿತವರೂ ಕಲಿಯದವರೂ ಎಲ್ಲರೂ ಈ ಒಂದೇ ಕಾರ್ಯವನ್ನು ಮನಸ್ಸಿನಲ್ಲಿ ಚಿಂತಿಸುತ್ತಾ ಇದ್ದರು. ಇದು ಮಹಾ ಮುಖ್ಯ ಕಾರ್ಯವಾದದರಿಂದ ಎಲ್ಲರೂ ಅದಕ್ಕೆ ಕೈಹಚ್ಚಿದರು.

# ಸಂಧಿ 14. ತಿದ್ದುಪಾಟು.

ಇಂಗ್ಲಾಂಡಿನಲ್ಲಿರುವ ಸಭೆಯವರೊಳಗೆ ಎರಡು ವಿಧ ಅಭಿಪ್ರಾಯಗಳುಳ್ಳವರು ಎಲ್ಲಾ ಕಾಲಗಳಲ್ಲಿ ಇದ್ದರು ಎಂಬದಾಗಿಯೂ, ಅವರೊಳಗೆ ವಾಗ್ವಾದಗಳು ಆಯಾ ಸಮಯಗಳಲ್ಲಿ ಸಂಭವಿಸುವವೆಂಬದಾಗಿಯೂ, (Wickliffe) ವಿಕ್ಲಿಫ್ ಎಂಬ ಸತ್ಯವೇದಶಾಸ್ತ್ರಿಯು ಮಾಡಿದ ಉಪದೇಶದಿಂದ ಈ ಭೇದವು ಅಧಿಕವಾಗಿ ಪ್ರಕಟವಾಯಿತೆಂದೂ, ಮುಂಚಿನ ಸಂಧಿಗಳಲ್ಲಿ ತೋರಿಸಿ ಇದ್ದೇವಲ್ಲಿ? ಆ ಉತ್ತಮನು ಮಾಡಿದ ಉಪದೇಶಗಳು ಯೂರೋಪಿನ ನಾನಾ ದೇಶಗಳಲ್ಲಿಯೂ ಹಬ್ಬಿದವು. ಮತ್ತು ಇಂಗ್ಲಾಂಡಿನಲ್ಲಿ ಅನೇಕರು ಅವುಗಳನ್ನು ಬಹು ಭಕ್ತಿ ವಿಶ್ವಾಸದಿಂದ ಮನಸ್ಸಿನಲ್ಲಿ ಇಟ್ಟು ಕೊಂಡಿದ್ದರು. ಆದಾಗ್ಯೂ ಆ ಸತ್ಯವೇದಶಾಸ್ತ್ರಿ ಪ್ರಸಿದ್ಧಿ ಮಾಡಿದ ಉಪದೇಶಗಳು ಸತ್ಯವೇದದಲ್ಲಿ ಕಂಡ ಉಪದೇಶಗಳೇ ಹೊರ್ತು ನೂತನವಾದವುಗಳಲ್ಲ. ಹೊರಗೂ ಒಳಗೂ ಆ ಸತ್ಯವೇದವನ್ನು ಕುರಿತು ಉಂಟಾಗಿದ್ದ ಸಾಕ್ಷಿಗಳನ್ನು ಶೋಧಿಸಿ ನೋಡುವದರಿಂದಲೂ, ಅದರಲ್ಲಿರುವ ನಿಬಂಧನೆಗಳ ಪ್ರಕಾರ ನಡಿಯುವವರ ಗುಣ ಕ್ರಿಯೆಗಳು ಅದರಿಂದ ಪೂರ್ಣವಾಗಿ ತಿದ್ದುಪಾಟಾಗಿರುವದನ್ನು ನೋಡುವದರಿಂದಲೂ, ಅದು ದೇವರ ವಚನವಾದ ಕೃಪೆಯ ಸತ್ಯವೇದವೆಂದು ನಿಶ್ಚಯಿಸಿದ್ದೇವೆ. ಅದರ ವಚನಗಳನ್ನು ಸಭೆಯವರು ಓದ ಕೂಡದೆಂದು ಗುರುಗಳು ನಿಬಂಧನೆ ಮಾಡಿ ಕೊಂಡಿರುವದನ್ನು ಕಂಡು, (John Wickliffe) ಯೋಹಾನ್ ವಿಕ್ಲಿಫ್ ಎಂಬವನು ಸತ್ಯವೇದದಲ್ಲಿ ಅನೇಕ ಭಾಗಗಳನ್ನು ಇಂಗ್ಲಿಷ್ ಭಾಷಾಂತರ ಮಾಡಿ ಸ್ವದೇಶದವರಿಗೆ ಕೊಟ್ಟನು. ಇಂಗ್ಲಾಂಡಿನಲ್ಲಿಯೂ ಜರ್ಮನಿ ದೇಶದಲ್ಲಿಯೂ ಅನೇಕರು ಅದನ್ನು ಓದಿ ಅದರ ಉಪದೇಶಗಳನ್ನು ಧ್ಯಾನಿಸಿದ್ದರಿಂದ ಸಭೆಯಲ್ಲಿ ತಿದ್ದುಪಾಟು ಉಂಟಾಯಿತು.

ಆ ಪರ್ಯಂತರ ಜನರಿಗೆ ಕೊಡಲ್ಪಡದೆ ಇದ್ದದರಿಂದ ಅವರು ಮುಖ್ಯವಾಗಿ ಕಳ್ಳ ಉಪದೇಶಗಳನ್ನು ಅಂಗೀಕರಿಸಿ ವ್ಯರ್ಥವಾದ ಆಚಾರಗಳನ್ನು ಮಾಡುತ್ತಾ ಸತ್ಯವೇದಕಟ್ಟಳೆಗಳಿಗೆ ಬದಲಾಗಿ ಮನುಷ್ಯರು ಏರ್ಪಡಿಸಿದ ಪಾರಂಪರೆಯ ನ್ಯಾಯಗಳನ್ನು ಕಲಿತು ಕೊಂಡಿದ್ದರು. (Pope) ಪಾಪು ಎಂಬುವ ರೋಮಾಪುರಿಯ ಅಧ್ಯಕ್ಷನನ್ನು ಸಭೆಯ ಮೇಲೆ

ಶ್ರೇಷ್ಠಾಧಿಕಾರ ಹೊಂದಿದ ಯಜಮಾನನಾಗಿಯೂ, ಅರಸರನ್ನು ಇರಿಸ ಲೂ ತೆಗಿಯಲೂ ತಕ್ಕ ಅಧಿಕಾರ ಉಳ್ಳವನಾಗಿಯೂ ಎಣಿಸುವದೇ ಆ ತಪ್ಪಾದ ಅಭಿಪ್ರಾಯಗಳಲ್ಲಿ ಮುಖ್ಯವಾದದ್ದು.

ಯೂರೋಪು ಖಂಡದಲ್ಲಿ ತಿದ್ದುಪಾಟು ಮಾಡಿದವರಲ್ಲಿ (Luther) ಲುಥರ್ ಎಂಬ ಗುರುವೇ ಮುಖ್ಯಸ್ಥನು. ಅವನು ಪಾಪು ಎಂಬವನಿಂದ ಉಂಟಾದ ತಾರುಮಾರುಗಳನ್ನು ಬಹು ಧೈರ್ಯದಿಂದ ಖಂಡಿಸಿ ಸತ್ಯವೇದದ ಉಪದೇಶಗಳನ್ನು ಎಲ್ಲೆಲ್ಲಿಯೂ ಹಿಂಜರಿಯದೆ ಪ್ರಸಂಗಿಸುತ್ತಾ ಬಂದದರಿಂದ, ಅನೇಕ ದೇವಭಕ್ತರು ಅವನ ಸಂಗಡ ಸೇರಿ ಕೊಂಡು, ಇನ್ನು ಮೇಲೆ ರೋಮನ್ ಸಭೆಯವರು ಕಲಿಸಿ ಕೊಡುವ ತಪ್ಪಾದ ಅಭಿಪ್ರಾಯಗಳನ್ನು ನಾವು ಅಂಗೀಕರಿಸುವದಿಲ್ಲವೆಂದು ಒಂದೇ ತೀರ್ಮಾನವಾಗಿ ಹೇಳಿ ಬಿಟ್ಟರು. ಅದು ಮೊದಲುಗೊಂಡು ತಿದ್ದುಪಾಟಾದ ಸಭೆಯವರಿಗೆ "ಸಮ್ಮತಿ ಇಲ್ಲವೆಂದು ಎದುರಿಸುವವರು" ಎಂಬ ಅರ್ಥವುಳ್ಳ ಪ್ರೊತೆಸ್ತಾಂತರು ಎಂಬ ಹೆಸರಿಡಲ್ಪಟ್ಟಿತು. ಆ ಕಾಲದಲ್ಲಿ ಇಂಗ್ಲಾಂದಿನೊಳಗೆ ಅರಸನೂ ಪ್ರಜೆಗಳೂ ಪಾಪು ಎಂಬವನ ಅಧಿಕಾರವನ್ನು ತಳ್ಳಿ ಬಿಟ್ಟು ಸ್ವದೇಶಸಭೆಯನ್ನು ತಿದ್ದುಪಾಟು ಮಾಡಿದರು. ಹೀಗೆ ಇಂಗ್ಲಾಂದಿಗೆ ಸೇರಿದ ಸಭೆಯಲ್ಲಿ ಕಳ್ಳ ಉಪದೇಶಗಳನ್ನು ಬಳಿಸದೆ ಹೋದದರಿಂದಲೂ, ಎಲ್ಲರೂ ಅಡ್ಡಿ ಇಲ್ಲದೆ ಜೀವದ ಬೊಕ್ಕಸವಾದ ಸತ್ಯವೇದವನ್ನು ಓದುತ್ತಾ ಬಂದದರಿಂದಲೂ, ಆ ದೇಶದವರು ದೇವರ ಅನುಗ್ರಹದಿಂದ ಬರ ಬರ ಜೀವ ಹೊಂದಿ ಸೌಖ್ಯ ಹೊಂದಿದ್ದಾರೆ. ಈ ತಿದ್ದುಪಾಟು ಉಂಟಾದ ತರುವಾಯ ಇಂಗ್ಲಾಂದಿನ ಘನವು ಬಹಳ ತೇಜಸ್ಸಾಗಿ ಪ್ರಕಾಶಿಸುತ್ತದೆ. "ನನ್ನನ್ನು ಘನ ಪಡಿಸುವವರನ್ನು ನಾನು ಘನ ಪಡಿಸುವೆನು" ಎಂಬುವ ದೇವರ ವಾಕ್ಯದ ಪ್ರಕಾರ ಅಂದಿನಿಂದ ದೇವರು ಈ ದಿವಸದ ಮಟ್ಟಿಗೂ ಇಂಗ್ಲಾಂದಿನ ಮೇಲೆ ತನ್ನ ಕೃಪೆಯ ಸಂಪತ್ತನ್ನು ಸುರಿಸಿ ಇದ್ದಾನೆಂಬುವದು ಎಲ್ಲರಿಗೂ ಪ್ರತ್ಯಕ್ಷವಾಗಿ ತೋರುತ್ತದೆ.

ಹೆನ್ರಿ ಎಂಬ ಅರಸನು ಪ್ರಾರಂಭದಲ್ಲಿ ತಿದ್ದುಪಾಟು ಮಾಡುವವರು ಮಾಡಿದ ಉಪದೇಶವನ್ನು ಇಂಗ್ಲಾಂದಿನಲ್ಲಿ ಒಬ್ಬನಾದರೂ ಪ್ರಸಿದ್ಧಿ ಮಾಡ ಕೂಡದೆಂದು ಅಡ್ಡಿ ಮಾಡಿದನು. ಮತ್ತು ಅವನು ತಾನೇ

ಯೂರೋಪಿನಲ್ಲಿ ಉಂಟಾದ ತರ್ಕದಲ್ಲಿ ತಲೆ ಇಟ್ಟು ಕೊಂಡು ಲುಥರನಿಗೆ ವಿರೋಧವಾಗಿ ಒಂದು ಪುಸ್ತಕವನ್ನು ಬರೆದು ಪ್ರಸಿದ್ಧಿ ಮಾಡಿದನು. ಅದು ಪಾಪು ಎಂಬವಗೆ ಬಹು ಇಷ್ಟವಾಗಿದ್ದದರಿಂದ ಅವನು ಅರಸನಿಗೆ (Defender of the Faith) "ವಿಶ್ವಾಸ ಕಾಯುವವನೆಂಬ" ಹೆಸರನ್ನು ಕೊಟ್ಟನು. ಅದು ಮೊದಲ್ಗೊಂಡು ಇಂಗ್ಲಾಂದ್ ಅರಸರಿಗೆಲ್ಲಾ ಆ ಪಟ್ಟದ ಹೆಸರು ಹೇಳಲ್ಪಡುವದು. ಆದಾಗ್ಯೂ ಪಾಪು ನೆನಸಿದ ಪ್ರಕಾರವಾದ ವಿಶ್ವಾಸವನ್ನು ಕಾಯದೆ ನಿಜವಾದ ವಿಶ್ವಾಸಮಾರ್ಗವನ್ನು ಕಾದು ಕೊಳ್ಳುತ್ತಾರೆ. ಅದರ ತರುವಾಯ ಹೆನ್ರಿ ಅರಸನಿಗೂ ಪಾಪುವಿಗೂ ಜಗಳ ಉಂಟಾದದರಿಂದ ಅವನು ಇನ್ನು ಮೇಲೆ ಪಾಪುವಿಗೂ ಇಂಗ್ಲಾಂದ್ ಸಭೆಯವರಿಗೂ ಏನೂ ಸಮ್ಮಂಧವಿಲ್ಲವೆಂದು ಸಾಧಿಸಿ, ತನ್ನ ರಾಜ್ಯದಲ್ಲಿರುವ ಸಭೆಗೆ ತಾನೇ ಮುಖ್ಯಸ್ಥನಾಗಿರುವೆನೆಂದು ಹೇಳಿದನು. ಹೀಗೆ ಅರಸನು ಏರ್ಪಡಿಸಿದ ಹೊಸ ಕ್ರಮದಿಂದ ಸ್ವದೇಶದವರಿಗೆ ದೊಡ್ಡ ಮೇಲು ಉಂಟಾಯಿತು. ಆದಾಗ್ಯೂ ಅರಸನು ಆ ಕಾಲದಲ್ಲಿ ಮನಸ್ಸಿನಲ್ಲಿ ಮಾಡಿದ ನೆನಪು ಬಹು ನೀಚವಾದದ್ದು. ಹ್ಯಾಗಂದರೆ,

ಮುಂಚೆ ಹೇಳಿದ ಪ್ರಕಾರ ಹೆನ್ರಿಯು ರಾಜಪಟ್ಟವನ್ನು ಹೊಂದಿದ ಮೊದಲಲ್ಲಿ ಅವನು ತನ್ನ ಅಣ್ಣನ ವಿಧವೆಯಾದ (Catherine) ಕತ್ತರೀನ್ ಎಂಬ ರಾಜಕುಮಾರ್ತೆಯನ್ನು ಮದುವೆ ಮಾಡಿ ಕೊಂಡಿದ್ದನು. ಅವಳು ಅನೇಕ ವರುಷಗಳಾಗಿ ನಾನಾ ಉಪದ್ರಗಳನ್ನು ಸಹಿಸಿದವಳಾಗಿದ್ದು, ಸ್ಥೈರ್ಣೆಯೂ ಪ್ರೀತಿಯೂ ಉಳ್ಳವಳಾಗಿ, ಪುರುಷನಿಗೆ ವಿಧೇಯಳಾಗಿದ್ದಳು. ಆದಾಗ್ಯೂ ಅರಸಿಯ ಗೌಡಿಯರಲ್ಲಿ ಒಬ್ಬಳ ಮೇಲೆ ಅರಸನು ಮೋಹ ಪಟ್ಟು, ಅವಳನ್ನು ಮದುವೆ ಮಾಡಿ ಕೊಳ್ಳ ಬೇಕೆಂದು ಶೀರ್ಮಾನಿಸಿ, ಕತ್ತರೀನಳು ತನ್ನ ಅಣ್ಣನ ಹೆಂಡತಿಯಾದದರಿಂದ ತಾನು ಅವಳನ್ನು ಹೆಂಡತಿಯಾಗಿ ಆಳುವದು ನ್ಯಾಯವಲ್ಲವೆಂದು ತಾನು ಮನಸ್ಸಿನಲ್ಲಿ ಸಂಕೋಚ ಪಡುವದಾಗಿ ಹೇಳಿ, (Anna Boleyn) ಅನ್ನಾ ಬೊಲೀನ್ ಎಂಬ ಆ ಗೌಡಿಯನ್ನು ಮದುವೆ ಮಾಡಿ ಕೊಳ್ಳುವದಕ್ಕೆ ಕತ್ತರೀನಳನ್ನು ತ್ಯಜಿಸ ಯತ್ನ ಮಾಡಿದನು. ಆದಾಗ್ಯೂ ಕ್ರಮ ಪ್ರಕಾರ ಆ ಕಾರ್ಯ ಸಂಗಡಲೇ ಆಗಲಾರದು. ಅವನು ಮೊದಲು ಪ್ಲಾ

ವುಯೆಂಬ ಮಹಾ ಶ್ರೇಷ್ಠಾಧ್ಯಕ್ಷನು ಆ ಕಾರ್ಯವನ್ನು ವಿಚಾರಣೆ ಮಾಡಿ, ತ್ಯಾಗಪತ್ರವನ್ನು ಹುಟ್ಟಿಸ ಬೇಕೆಂದು ಕೇಳಿ ಕೊಂಡನು. ಪಾಪು, ಅರಸನು ಕೇಳಿ ಕೊಂಡದ್ದಕ್ಕೆ, ತಾನು ಒಡಂಬಟ್ಟರೆ, ಆ ಕತ್ತರೀನ್ ಎಂಬ ಅರಸಿಯ ಅಳಿಯನಾದ "ಐದನೇ ಚಾರ್ಲ್ಸ್" ಎಂಬ ಚಕ್ರವರ್ತಿಗೆ ವ್ಯಸನವಾಗುವದೆಂದು ಭಯ ಪಟ್ಟು, ಒಬ್ಬ ಸಭೆಯ ಶ್ರೇಷ್ಠನನ್ನು ಇಂಗ್ಲಾಂಡಿಗೆ ಕಳುಹಿಸಿ, ಅವನೂ, (Cardinal Wolsey) ಕಾರ್ಡಿನಲ್ ವೊಲ್ಸಿ ಎಂಬವನೂ ಆ ಸಂಗತಿಯನ್ನು ಪೂರ್ಣವಾಗಿ ವಿಚಾರಿಸಿ ತನಗೆ ತಿಳಿಯ ಪಡಿಸುವ ಹಾಗೆ ಆಜ್ಞಾಪಿಸಿದನು. ಅವರು ಪಾಪುವಿನ ಮನೋಭಿಪ್ರಾಯವನ್ನು ತಿಳಿದು ಕೊಂಡು ದಿನ ಜಾಪ್ಯ ಮಾಡುತ್ತಾ ಬಂದರು. ಇದರಿಂದ ಅರಸನಿಗೆ ಬಹು ಕೋಪ ಉಂಟಾಗಿ ವೊಲ್ಸಿ ಎಂಬವನು ತನ್ನ ಕಾರ್ಯದಲ್ಲಿ ಹೀಗೆ ಆಲಸ್ಯವಾಗಿರುವದರಿಂದ ಅವನನ್ನು ತಳ್ಳಿ ಬಿಟ್ಟು, ಬೇರೊಬ್ಬನನ್ನು ಶ್ರೇಷ್ಠ ನ್ಯಾಯಾಧಿಪತಿಯಾಗಿ ನೇಮಿಸಿದನು. ಅದರ ತರುವಾಯ ವೊಲ್ಸಿ ಎಂಬವನು ರಾಜದ್ರೋಹಿ ಎಂದು ಅಪರಾಧ ಹೊರಿಸಲ್ಪಟ್ಟು, ಅವನನ್ನು ಹಿಡಿದು ಲಂಡನ್ ಪಟ್ಟಣಕ್ಕೆ ತೆಗೆದು ಕೊಂಡು ಹೋಗುವ ಮಾರ್ಗದಲ್ಲಿ (Leicester) ಲೆಸ್ಟರ್ ಎಂಬ ಊರಿನಲ್ಲಿ ಸ್ವಲ್ಪ ಹೊತ್ತು ತಂಗಿ ಇದ್ದದರಲ್ಲಿ ಅವನ ಮನಸ್ಸು ಮುರಿದು ಆದರಣೆ ಇಲ್ಲದವನಾಗಿ ಸತ್ತು ಹೋದನು. ಅವನ ಮರಣಸಮಯದಲ್ಲಿ ಸುತ್ತಲೂ ನಿಂತವರನ್ನು ನೋಡಿ, ನಾನು ಬಹು ಚಿಂತೆಯಿಂದ ಅರಸನಿಗೆ ಸೇವೆ ಮಾಡಿದ ಪ್ರಕಾರ ನನ್ನ ದೇವರಿಗೆ ಸೇವೆ ಮಾಡಿ ಇದ್ದರೆ ಈ ಮುಪ್ಪಿನ ಕಾಲದಲ್ಲಿ ಹೀಗೆ ಅವನು ನನ್ನನ್ನು ಕೈ ಬಿಡನಲ್ಲ ಎಂದು, ಬಹು ಪರಿತಾಪವಾದ ಮಾತು ಹೇಳಿ ಸತ್ತು ಹೋದನು.

ಅರಸನು ತನ್ನ ಹೆಂಡತಿಯನ್ನು ತಳ್ಳಿ ಬಿಡ ಬಹುದೋ ಬಾರದೋ ಎಂದು ಇನ್ನೂ ಸಂದೇಹ ಪಡುತ್ತಾ ಇದ್ದನು. ಆ ಕಾಲದಲ್ಲಿ (Thomas Cranmer) ತೋಮಾಸ್ ಕ್ರಾನ್ಮರ್ ಎಂಬ ಒಬ್ಬ ಯೌವನಸ್ಥನಾದ ಗುರುವು ಆ ಕಾರ್ಯವನ್ನು ಕುರಿತು ಕೆಲವರೊಡನೆ ಸಂಭಾಷಿಸುವಾಗ, ನಮ್ಮ ಅರಸನು ಯುರೋಪಿನಲ್ಲಿರುವ ಆಯಾ ಸರ್ವಶಾಸ್ತ್ರವಿದ್ಯಾಶಾಲೆಗಳಲ್ಲಿರುವ ಪಂಡಿತರಿಗೆ ಈ ಕಾರ್ಯವನ್ನು ತಿಳಿಸಿ, ಅವರ ಅಭಿಪ್ರಾಯ

ವನ್ನು ಕೇಳಿದರೆ ವಾಸಿಯಾಗಿರುವದೆಂದು ಹೇಳಿದನು. ಅವನು ಅಂದ ದ್ದನ್ನು ಕೆಲವರು ಬಂದು ಅರಸನಿಗೆ ತಿಳಿಸಿದಾಗ, ಅವನು, ಬಹು ಸಂತೋಷ ಪಟ್ಟು, ಆಹಾ! ಇದೇ ಒಳ್ಳೇ ಬುದ್ಧಿ ಎಂಥೇಳಿ, ಅದೇ ಪ್ರಕಾರ ಆಯಾ ವಿದ್ಯಾಶಾಲೆಗಳಲ್ಲಿರುವ ಪಂಡಿತರಿಗೆ ಬರೆದು ಕೇಳಿದಾಗ, ಅವರಲ್ಲಿ ಹೆಚ್ಚಾದ ಮಂದಿ ಅವಳನ್ನು ನೀನು ತಳ್ಳಿ ಬಿಡ ಬೇಕೆಂದು ತೀರ್ಪು ಹೇಳಿದರು. ಆದಾಗ್ಯೂ ಪಾಪುವಿನ ಅಧಿಕಾರವನ್ನು ಪೂರ್ಣವಾಗಿ ತಳ್ಳಿ ಬಿಡ ಮನಸ್ಸಿಲ್ಲದವನಾಗಿ ಸ್ವಲ್ಪ ಕಾಲದ ಮಟ್ಟಿಗೂ, ಆ ಪಂಡಿತರು ಹೇಳಿದ ತೀರ್ಪಿನ ಪ್ರಕಾರ ಅವನು ಮಾಡಲಿಲ್ಲ. ಆದಾಗ್ಯೂ ಕಡೆಯಲ್ಲಿ ವೊಲ್ಸಿಯ ಕೆಲಸದವರಲ್ಲಿ ಒಬ್ಬನಾದ (Thomas Cromwell) ತೋಮಾಸ್ ಕ್ರೊಮ್‍ವೆಲ್ ಎಂಬವನು, ವೊಲ್ಸಿಯು ತಗ್ಗಿಸಲ್ಪಟ್ಟ ತರುವಾಯ, ದೊಡ್ಡ ಮಂತ್ರಿಯಾಗಿ ಅರಸನನ್ನು ನೋಡಿ ಪಾಪು ಎಂಬ ರೋಮಾಪುರಿಯ ಅಧ್ಯಕ್ಷನಿಗೂ ನಮ್ಮ ಸಭೆಗೂ ಏನೂ ಸಂಮಂಧವಿಲ್ಲವೆಂದೂ, ಇಂಗ್ಲಾಂಡ್ ಸಭೆಗೆ ಇಂಗ್ಲಾಂಡ್ ಅರಸನು ತಾನೇ ತಲೆ ಎಂದೂ, ನೀನು ಪ್ರಸಿದ್ಧಿ ಮಾಡಿ ಪಾಪುವಿನನ್ನು ಬಿಟ್ಟು ಬೇರೆಯಾಗುವದೇ ಸರಿ ಎಂದು ಆಲೋಚನೆ ಹೇಳಿದ್ದರಿಂದ, ಅರಸನು ಹಾಗೆಯೇ ನೂತನವಾದ ಏರ್ಪಾಟು ಮಾಡಿದಾಗ ಪಾರ್ಲಿಮೆಂತ್ ಎಂಬುವ ಸಂಘದವರು ನಮ್ಮ ಅರಸನೇ ನಮ್ಮ ಸಭೆಗೆ ತಲೆ ಎಂದು ನಿರ್ಣಯಿಸಿದರು.

ಕ್ರಾನ್‍ಮರ್ ತನಗೆ ಆ ಮೇಲಾದ ಉದ್ಯೋಗ ಬೇಡ ಎಂದು ಕೆಲವು ಸಾರಿ ಅರ್ಜಿ ಮಾಡಿದ್ದಾಗ್ಯೂ, (Canterbury) ಕಾನ್‍ತರ್‍ಬರಿ ಪಟ್ಟಣದ ಶ್ರೇಷ್ಠ ಅಧ್ಯಕ್ಷನಾದನು. ಅವನು ಕತ್ತರೀನ್ ಎಂಬವಳನ್ನು ಅರಸನು ಮದಿವೆ ಮಾಡಿ ಕೊಂಡದ್ದು ಅನೀತಿ ಎಂದು ತೀರ್ಪು ಮಾಡಿದ ತರುವಾಯ, 1533ನೇ ಸಂವತ್ಸರದ ಜನವರಿ ತಿಂಗಳಲ್ಲಿ ಅರಸನು ಅನ್ನಾ ಬೊಲೀನ್ ಎಂಬವಳನ್ನು ಮದುವೆ ಮಾಡಿ ಕೊಂಡನು. ಕತ್ತರೀನ್ ಎಂಬ ಅರಸಿಯು ಆ ತರುವಾಯ ಬೇರೊಂದು ಸ್ಥಳದಲ್ಲಿ ಒಂಟಿಯಾಗಿದ್ದಳು. ಆದಾಗ್ಯೂ ತನ್ನ ಮರಣದ ಮಟ್ಟಿಗೂ ನಾನೇ ಹೆನ್ರಿ ಅರಸನ ಹೆಂಡತಿಯು; ಬೇರೊಬ್ಬಳನ್ನು ಅವನು ಮದುವೆ ಮಾಡಿ ಕೊಂಡದ್ದು ನ್ಯಾಯವಲ್ಲವೆಂದು ಸಾಧಿಸುತ್ತಾ ಬಂದಳು. ಕೆಲವು ಕಾಲದ

ತರುವಾಯ ಆ ಅರಸಿಯ ಹಾಗೆಯೇ ಅನ್ನಾ ಬೊಲೀನ್ ಎಂಬವಳು ಸಹ ತಾನು ಹೊಂದಿದ ಮೇಲಾದ ಸ್ಥಿತಿಯಲ್ಲಿ ನಿಲ್ಲದೆ ತಗ್ಗಿಸಲ್ಪಟ್ಟು ಬಹು ಉಪದ್ರವನ್ನು ಅನುಭವಿಸಿದಳು. ಹ್ಯಾಗಂದರೆ, ಅರಮನೆಯಲ್ಲಿದ್ದ (Jane Seymour) ಜೇನ್ ಸೀಮರ್ ಎಂಬ ಧೊರೆಮಗಳನ್ನು ಅರಸನು ನೋಡಿ, ಅವಳ ಮೇಲೆ ಮೋಹ ಪಟ್ಟದ್ದರಿಂದ ಅನ್ನಾ ಬೊಲೀನ್ ಎಂಬವಳನ್ನು ವ್ಯಭಿಚಾರಿ ಎಂದು ಹೇಳಿ, ಅನ್ಯಾಯವಾಗಿ ಅವಳನ್ನು ಕೊಲ್ಲಿಸಿ, ಅವಳನ್ನು ಕೊಂದ ಮಾರಣೆ ದಿವಸ ಜೇನ್ ಸೀಮರ್ ಎಂಬವಳನ್ನು ಮದುವೆ ಮಾಡಿ ಕೊಂಡನು. ಅವಳು ಒಂದು ವರುಷದೊಳಗೆ ಒಬ್ಬ ಮಗನನ್ನು ಹೆತ್ತು ಪ್ರಸವಕಾಲದಲ್ಲಿಯೇ ಸತ್ತು ಹೋದಳು.

ಮುಂಚೆ ಹೇಳಿದ ಪ್ರಕಾರ ಹೆನ್ರಿ ಅರಸನು ಪಾಪುವಿನ ಅಧಿಕಾರವನ್ನು ತಳ್ಳಿ ಇದ್ದಾಗ್ಯೂ ಪ್ರೊತೆಸ್ತಾಂತ್ ಮಾರ್ಗದವರಾದ ತನ್ನ ಪ್ರಜೆಗಳನ್ನು ದಯವಾಗಿ ನಡಿಸದೆ ಉಭಯತ್ರರನ್ನೂ ಸಮವಾಗಿ ಉಪದ್ರಪಡಿಸಿದನು. ಶ್ರೇಷ್ಠ ನ್ಯಾಯಾಧಿಪತಿಯಾದ (Sir Thomas More) ಸರ್ ತೋಮಾಸ್ ಮೋರ್ ಎಂಬ ಭಾರೀ ಮನುಷ್ಯನೂ ನೆಟ್ಟಗಾದ ಮನಸ್ಸುಳ್ಳವನೂ ಆದ ಇವನೂ, ರೋಮನ್ ಮಾರ್ಗದವರಾದ ಬೇರೆ ಕೆಲವು ಮನುಷ್ಯರೂ ಇಂಗ್ಲಾಂಡ್ ಸಭೆಗೆ ಅರಸನೇ ತಲೆ ಎಂಬುವ ಅಭಿಪ್ರಾಯವನ್ನು ಒಪ್ಪಿ ಕೊಳ್ಳದೆ ಇದ್ದದರಿಂದ, ಅವರನ್ನು ಶಿರಚ್ಛೇದ ಮಾಡಿಸಿದನು. ಮತ್ತು ರೋಮನ್ ಮಾರ್ಗದ ಕೆಲವು ಮುಖ್ಯಾಭಿಪ್ರಾಯಗಳನ್ನು ಎದುರಿಸಿದ ಅನೇಕರನ್ನು ಪ್ರಾಣಾಜ್ಞೆ ಮಾಡಿಸಿದನು. ತರುವಾಯ ಕ್ರೊಮ್‌ವೆಲ್ ಎಂಬವನು ಹೇಳಿದ ಆಲೋಚನೆಯನ್ನು ಕೇಳಿ, ಅರಸನು ತನ್ನ ರಾಜ್ಯದಲ್ಲಿ ಇದ್ದ ಎಲ್ಲಾ ವಿರಕ್ತರ ಮಠಗಳನ್ನು ತೆಗದು ಹಾಕಿ, ಅವುಗಳ ಮಾನ್ಯಗಳನ್ನೂ ಆಧಿಕ್ಯಗಳನ್ನೂ ತಾನೇ ಗ್ರಹಿಸಿ ಕೊಂಡು, ಕೆಲವು ಮಾನ್ಯಗಳನ್ನು ತನ್ನ ರಾಜಸಭೆಗೆ ಶೇರಿದ ದುರ್ಮಾರ್ಗರಾದ ಕೆಲವು ಪ್ರಭುಗಳಿಗೆ ಕೊಟ್ಟು ಬಿಟ್ಟು, ಮಿಕ್ಕಾದದ್ದನ್ನೆಲ್ಲಾ ತಾನೇ ತೆಗದು ಕೊಂಡನು. ಆ ಮಠಗಳಲ್ಲಿ ಇದ್ದ ಅನೇಕರು ವ್ಯರ್ಥರಾಗಿಯೂ, ಅಪಭಕ್ತಿಯುಳ್ಳವರಾಗಿಯೂ, ಸೋಮಾರಿಗಳಾಗಿಯೂ ಇ

ದ್ದರು. ಹಾಗಿದ್ದಾಗ್ಯೂ ಆ ಮಠಗಳವರು ರೋಗಿಷ್ಠರಿಗೂ ದಿಕ್ಕಿಲ್ಲದವರಿಗೂ ಸಹಾಯ ಮಾಡಿ, ದೇಶಾಂತ್ರಿಗಳನ್ನೂ ಹಾದಿಹೋಕರನ್ನೂ ಸೇರಿಸಿಕೊಳ್ಳುವರು. ಆದದರಿಂದ ಆ ಮಠಗಳಲ್ಲಿ ನಡೆದ ಕಾರ್ಯಗಳನ್ನು ಕುರಿತು ಅರಸನು ವಿಚಾರಣೆ ಮಾಡ ತಕ್ಕದ್ದು. ಆದಾಗ್ಯೂ ರಾಜಸಭೆಯವರೂ, ಕ್ರೂರನಾದ ಆ ಅರಸನೂ ದ್ರವ್ಯಾಶೆಯುಳ್ಳವರಾಗಿ ಮಠಗಳ ಅಧಿಕೃಗಳನ್ನು ಲೆಕ್ಕವಿಲ್ಲದಷ್ಟು ಕಿತ್ತು ಕೊಂಡು ತಮ್ಮ ಇಷ್ಟದ ಪ್ರಕಾರ ಖರ್ಚು ಮಾಡಿದ್ದು ನ್ಯಾಯವಲ್ಲ.

ಆ ಮಠಗಳನ್ನು ಕೊಳ್ಳೆ ಇಡುವಂತೆ ಆಲೋಚನೆ ಹೇಳಿದ ಮಂತ್ರಿಯಾದ ಕ್ರೊಮ್‌ವೆಲ್ ಎಂಬವನು ಬಹಳ ದಿವಸಗಳು ರಾಜ್ಯಭಾರ ಮಾಡಲಿಲ್ಲ. ಅವನು ಆಕಸ್ಮಿಕವಾಗಿ ಘನ ಹೊಂದಿದ ಪ್ರಕಾರ ಆಕಸ್ಮಿಕವಾಗಿ ಕೆಟ್ಟು ಬಿದ್ದನು. ಹ್ಯಾಗಂದರೆ, ಅವನು ಜರ್ಮನಿ ದೇಶಕ್ಕೆ ಹೋಗಿ (Cleves) ಕ್ಲೀವ್‌ಸ್ ಪಟ್ಟದ (Anne) ಆನ್ ಎಂಬವಳನ್ನು ಅರಸನಿಗೆ ಹೆಂಡತಿಯಾಗುವದಕ್ಕೆ ಮಾತಾಡಿ ತೀರ್ಮಾನ ಮಾಡಿ ಇದ್ದನು. ತರುವಾಯ ಅವಳು ಸೌಂದರ್ಯವತಿ ಅಲ್ಲವೆಂದು ಅರಸನು ಕಂಡು, ಕ್ರೊಮ್‌ವೆಲನ ಮೇಲೆ ಬಹು ಕೋಪವುಳ್ಳವನಾಗಿ ಅವಳನ್ನು ತಳ್ಳಿ ಬಿಟ್ಟು, ಅವನನ್ನು ರಾಜದ್ರೋಹಿ ಎಂದು ಹೇಳಿ, ನ್ಯಾಯದ ಪ್ರಕಾರ ಏನೂ ವಿಚಾರಣೆ ಮಾಡದೆ, ಕೋಟೆಯ ಹತ್ತಿರ ಅವನನ್ನು ಕೊಲ್ಲಿಸಿದನು. ಇದರ ತರುವಾಯ ಅರಸನು ಬಹು ಶೀಘ್ರವಾಗಿ ಬೇರೆ ಮದುವೆ ಮಾಡಿ ಕೊಂಡನು. ಅವನು ತೆಗದು ಕೊಂಡ ಹೆಂಡತಿಯು (Norfolk) ನೋರ್‌ಪೋಲ್ಕ್ ಎಂಬ (Duke) ಡ್ಯೂಕ್ ಪ್ರಭುವಿನ ಸಹೋದರಿಯಾದ (Catherine Howard) ಕತ್ತರೀನ್ ಹೌವರ್ಡ್ ಎಂಬವಳು. ಅವಳು ವ್ಯಭಿಚಾರಿಯಾದದರಿಂದ ತರುವಾಯ ಶಿರಚ್ಛೇದ ಮಾಡಲ್ಪಟ್ಟಳು. ತರುವಾಯ ಅರಸನು (Catherine Parr) ಕತ್ತರೀನ್ ಪಾರ್ ಎಂಬ ಒಬ್ಬ ವಿಧವೆಯನ್ನು ಆರನೇ ಹೆಂಡತಿಯಾಗಿ ಮದುವೆ ಮಾಡಿ ಕೊಂಡನು. ಒಂದು ದಿವಸ ಅರಸನು ಅವಳ ಮೇಲೆ ಉಗ್ರಕೋಪವುಳ್ಳವನಾದಾಗ, ಅವಳು ಅರಸನಿಗೆ ಇಚ್ಛಕವಾದ ಕೆಲವು ಮಾತುಗಳನ್ನು ಹೇಳಿ ಪ್ರಾಣದಂಡನೆಗೆ ಆಶ್ಚರ್ಯವಾಗಿ ತಪ್ಪಿಸಿ ಕೊಂಡಳು.

ಹೆನ್ರಿಯು 1547ನೇ ಸಂವತ್ಸರ ಜನವರಿ ತಿಂಗಳ 27ನೇ ತಾರೀಖಿನಲ್ಲಿ ಸತ್ತು ಹೋದನು. ಅವನಿಗೆ ರೋಗ ಉಂಟಾಗಿ ಮರಣಕ್ಕೆ ಸಮೀಪ ವಾಗಿ ಇರುವಾಗ ಮೂರ್ಖವಾದ ಕೋಪದಿಂದ ಹತ್ತರ ಬಂದವರನ್ನು ಗದಿಮಿ ಗದರಿಸಿ ಮಾತಾಡುವದರಿಂದ, ಅವನನ್ನು ವಿಚಾರಿಸುವದಕ್ಕೆ ಒಬ್ಬನೂ ಅವನ ಸಮೀಪಕ್ಕೆ ಬರ ಧೈರ್ಯ ಮಾಡಲಿಲ್ಲ. ಮರಣದ ಮ ಟ್ಟಿಗೂ ಅವನ ಕ್ರೂರವಾದ ಸ್ವಭಾವವು ಮಾರ್ಪಡಲಿಲ್ಲ. ಅವನು ಸಾ ಯುವದಕ್ಕೆ ಕೆಲವು ದಿವಸಗಳಿಗೆ ಮುಂಚಿತಾಗಿ ಮಹಾ ಸುಶೀಲನೂ ಸಾ ಮರ್ಥ್ಯನೂ ಆದ (Earl of Surrey) ಸರ್ರಿ ಎಂಬ ಏರ್ಲ್ ಪ್ರಭುವ ನ್ನು ಕೊಲ್ಲಿಸಿದನು. ಇದಲ್ಲದೆ ನೋರ್‌ಫೋಲ್ಕ್ ಎಂಬುವ ಡ್ಯೂಕ್ ಪ್ರಭುವನ್ನು ಕೊಲ್ಲ ಅಪ್ಪಣೆ ಮಾಡಿ ಇದ್ದನು. ಆದಾಗ್ಯೂ ಅವನನ್ನು ಕೊಲ್ಲುವದಕ್ಕಿಂತ ಮುಂಚೆ ಅರಸನು ತಾನೇ ಸತ್ತು ಹೋದದರಿಂದ ಅ ವನು ತಪ್ಪಿಸಿ ಕೊಂಡನು. ಈ ಎಂಟನೇ ಹೆನ್ರಿ ಎಂಬವನು ಪ್ರಾರಂಭ ದಲ್ಲಿ ಉಲ್ಲಾಸವಾದ ಗುಣವುಳ್ಳವನಾಗಿಯೂ, ಯಥಾರ್ಥವಾಗಿ ಮಾ ತಾಡುವವನಾಗಿಯೂ ಇದ್ದನು. ಕಡೆಯಲ್ಲಿ ಅವನು ಬಹು ಕ್ರೂರನಾ ಗಿಯೂ, ಯಾವ ಒಳ್ಳೇ ಬುದ್ಧಿಯನ್ನಾದರೂ ಕೇಳದಂಥ ಪಿಡುವಾದ ಗಾರನಾಗಿಯೂ ನಡೆದದರಿಂದ, ಅವನು ಜೀವದಿಂದ ಇರುವ ಮಟ್ಟಿಗೂ ಒಬ್ಬನೂ ಅವನನ್ನು ಸ್ನೇಹಿಸಲಿಲ್ಲ. ಅವನು ಸತ್ತಾಗ ಒಬ್ಬನೂ ದುಃಖ ಪಡಲಿಲ್ಲ.

# CHAPTER XV.

## ENCOURAGEMENT AND TEMPORARY CHECK TO THE REFORMATION.

FROM A. D. 1547 TO A. D. 1558.

# 15 ಸಂಧಿ.

## ತಿದ್ದುಪಾಟಿಗೆ ಅನುಕೂಲವೂ, ಸ್ವಲ್ಪ ಕಾಲಕ್ಕೆ ವಿಘ್ನವೂ.

ಕ್ರಿ. ಶ. 1547 ಮೊದಲು ಕ್ರಿ. ಶ. 1558 ವರೆಗೂ.

ಮುಖ್ಯ ತಾರೀಖುಗಳು: (Edward VI) 6ನೇ ಎದ್ವರ್ದನು 1547—1553 ಆಳಿದ್ದು. (Mary) ಮೇರಿ ರಾಣಿ 1553—1558 ಆಳಿದ್ದು. ಕ್ರಾನ್ಮೆರ್ ಸುಡಲ್ಪಟ್ಟದ್ದು 1555. ಅದೇ ಕಾಲದ ಇಂದ್ಯ ಚರಿತ್ರೆ: 3ನೇ ಮೊಗಲು ಚಕ್ರವರ್ತಿಯಾದ ಅಕ್ಬರನು ಆಳಿದ್ದು 1556. ಶ್ರೇಷ್ಠ ನಾಮಗಳು: ರಕ್ತಸಾಕ್ಷಿಗಳಾದ (Cranmer) ಕ್ರಾನ್ಮೆರ್, (Latimer) ಲಾತಿಮರ್, (Ridley) ರಿದ್ಲಿ.

ಹಿಂದಿನ ಸಂಧಿಯಲ್ಲಿ ಹೇಳಿದ ಪ್ರಕಾರ ಎಂಟನೇ ಹೆನ್ರಿಯು ದೇಹವಿಯೋಗವಾದ ತರುವಾಯ, ಅವನ ಬಾಲ್ಯಕುಮಾರನಾದ ಎದ್ವರ್ದ್ ಎಂಬವನು ಅರಸುತನವನ್ನೂ ಕಿರೀಟವನ್ನೂ ಹೊಂದಿದನು. ಅವನು ಆಳಿದ ಕಾಲದಲ್ಲಿಯೂ ಸಭೆಯ ತಿದ್ದುಪಾಟುಕಾರ್ಯವು ಮಳೆಯ ಮುಖವನ್ನು ಕಂಡ ಪೈರಿನಂತೆ ಚನ್ನಾಗಿಯೂ ಕೋಮಲವಾಗಿಯೂ ಬೆಳೆಯಿತು. ಅವನ ತಂದೆಯಾದ ಅರಸನು ಬಾಲ್ಯವಯಸ್ಸಿನಲ್ಲಿ ಇವನನ್ನು ಆದರಿಸಿ ಸಂರಕ್ಷಣೆ ಮಾಡುವದಕ್ಕೆ ಹದಿನಾರು ಮಂದಿಯನ್ನು ಪರಿಪಾಲಕರಾಗಿ ನೇಮಿಸಿ, ಮರಣಸಾಧನವನ್ನು ಬರೆದು ಇರಿಸಿ ಸತ್ತನು. ಆ ಸಾಧನದಲ್ಲಿ ಸಂಘದವರೆಲ್ಲರಿಗೂ ಸರಿಯಾದ ಅಧಿಕಾರವು ಸಂಘದಲ್ಲಿ ನೇಮಕ ಮಾಡಿದ್ದಾಗ್ಯೂ ಆರನೇ ಎದ್ವರ್ದನ ಸೋದರಮಾವನಾದ (Earl of Hertford) ಹೆರ್ಟ್‌ಫೋರ್ದ್ ಏರ್ಲ್ ಪ್ರಭುವು ಬೇರೆ

ಪರಿಪಾಲಕರಿಗಿಂತ ತನಗೆ ಶ್ರೇಷ್ಠತ್ವವನ್ನು ಹುಡುಕಿ, ಅವರಲ್ಲಿ ಹೆಚ್ಚಾದ ಮಂದಿಯಿಂದ ತನ್ನನ್ನು ಇಂಗ್ಲಾಂದಿಗೆ ಪರಿಪಾಲಕಪ್ರಭುವಾಗಿಯೂ ಬಾಲ್ಯ ಅರಸನಿಗೆ ಪ್ರತಿ ಅರಸನಾಗಿಯೂ ನೇಮಿಸುವಂತೆ ಮಾಡಿ ಕೊಂಡನು.

ಇದರ ಮಧ್ಯೆ (Duke of Somerset) ಸಮರ್‌ಸೆತ್ ಡ್ಯೂಕ್ ಪ್ರಭು ಎಂಬುವ ಅಧಿಕೃವನ್ನು ಹೊಂದಿದ್ದ ಪರಿಪಾಲಕಪ್ರಭುವು ಸ್ಕೊತ್ಲಾಂದಿನಲ್ಲಿ ಧೊರೆತನ ಮಾಡಿದ ಯೌವನಸ್ಥಳಾದ ಅರಸಿಯನ್ನು ಬಾಲ್ಯ ಅರಸನಿಗೆ ನೂತನವಾಗಿ ಮದುವೆ ಮಾಡಿ, ಈ ವಿಧದಿಂದ ಎರಡು ರಾಜ್ಯಗಳನ್ನೂ ಒಂದಾಗಿ ಮಾಡ ಅಭಿಪ್ರಾಯವುಳ್ಳವನಾಗಿ, ಧೊರೆತನದ ಆರಂಭದಲ್ಲಿ ತಾನೇ ಸ್ಕೊತ್ಲಾಂದ್ ದೇಶದ ಸಂಗಡ ಯುದ್ಧ ಮಾಡಿ ಅದನ್ನು ವಶ ಮಾಡಿ ಕೊಳ್ಳುವದಕ್ಕೆ ಒಂದು ಸೈನ್ಯವನ್ನು ಕೂಡಿಸಿ ಕೊಂಡು ಹೋಗಿ (Edinburgh) ಎದಿನ್‌ಬರೊ ಎಂಬ ಪಟ್ಟಣಕ್ಕೆ ಸಮೀಪವಾದ (Pinkie) ಪಿನ್‌ಕಿ ಎಂಬ ಸ್ಥಳದಲ್ಲಿ ಶತ್ರುಗಳನ್ನು ಪೂರ್ಣವಾಗಿ ಜಯಿಸಿದನು. ಆದಾಗ್ಯೂ ತನಗುಂಟಾಗಿದ್ದ ಧೊರೆತನದ ವಿಷಯ ವಿರೋಧಿಗಳಾಗಿದ್ದವರು ಒಳಸಂಚು ಮಾಡುವದಕ್ಕೆ ಯತ್ನಯಿಸುವದನ್ನು ಕೇಳಿ, ತಾನು ನೆನಸಿ ಕೊಂಡು ಹೋಗಿದ್ದ ಯುದ್ಧದ ಕೆಲಸವನ್ನು ಪೂರ್ಣವಾಗಿ ಬಿಟ್ಟು ಬಿಟ್ಟು ವ್ಯರ್ಥವಾಗಿ ದಕ್ಷಿಣಾಭಿಮುಖವಾಗಿ ತಿರಿಗಿ ಬರಲಾಯಿತು. ಆ ತರುವಾಯ ಸ್ಕೊತ್ಲಾಂದ್ ಅರಸಿಯಾದ (Mary) ಮೇರಿ ಎಂಬವಳನ್ನು ಫ್ರಾನ್‌ಸ್ ದೇಶಾಧಿಪತಿಯಾದ (Dauphin) ದಾಫಿನ್ ಎಂಬವನಿಗೆ ಕೊಡಲೂ, ಫ್ರಾನ್‌ಸರಿಗೂ ಸ್ಕೊತ್ತರಿಗೂ ಸ್ನೇಹಸಮ್ಮಂಧ ಉಂಟಾಗಲೂ ಸ್ಥಳವಾಯಿತು.

ಹೀಗಿರುವ ಕಾಲದಲ್ಲಿ ಇಂಗ್ಲಾಂದ್ ದೇಶದವರ ಮತ ವಿಷಯಗಳಲ್ಲಿ ಉಂಟಾಗುತ್ತಾ ಬಂದ ತಿದ್ದುಪಾಟು (Cranmer) ಕ್ರಾನ್‌ಮರ್, (Ridley) ರಿದ್ಲಿ, (Latimer) ಲಾತಿಮರ್ ಮುಂತಾದ ಉತ್ತಮ ಪುರುಷರಿಂದ ನಡಿಸಲ್ಪಟ್ಟೂ, ಪರಿಪಾಲಕಪ್ರಭುವಿನಿಂದ ಆದರಿಸಲ್ಪಟ್ಟೂ ಬಂತು. ಈ ಕ್ರಿಯೆಯು ಮಹಾ ಜ್ಞಾನವಾಗಿಯೂ, ಸದ್ಗುಣಂಥ ದೃಢವಾಗಿಯೂ ನಡಿಸಲ್ಪಟ್ಟಿತು. ಅದು ಪೂರ್ವದ ಧೊರೆತನದ ಕಾಲದಲ್ಲಿ ಕೆ

ಲವು ದಿವಸಗಳು ಅಭ್ಯಂತರ ಪಟ್ಟಾಗ್ಯೂ, ಆ ಕಾಲ ಹೋಗಲಾಗಿ ಮಿಕ್ಕಾದ ಕಾಲಗಳಲ್ಲಿ ಅಧಿಕಾಧಿಕವಾಗಿ ಬೆಳೆದು ವೃದ್ಧಿಯಾಗಿ ಬಲ ಪಟ್ಟಿದ್ದರಿಂದ ಇಂಗ್ಲಾಂಡ್ ದೇಶದವರಿಗೆ ಲೆಖ್ಖವಿಲ್ಲದ ಮೇಲುಗಳೂ ಲಾಭವೂ ಉಂಟಾಗುವದಕ್ಕೆ ಸಹಾಯವಾಗಿತ್ತು. ರಾಜಸಭೆಗೆ ಶೇರಿದ ಅನೇಕ ಪ್ರಭುಗಳು ತಮ್ಮ ಆಧಿಕ್ಯವನ್ನೂ ಸ್ವಂತ ಲಾಭವನ್ನೂ ಅಪೇಕ್ಷಿಸಿದ್ದರಿಂದಲೇ ತಿದ್ದುಪಾಟಿನ ವಿಷಯವನ್ನು ಘಟ್ಟಿಯಾಗಿ ಹಿಡಿದರು. ಆದಾಗ್ಯೂ ಅದನ್ನು ವೃದ್ಧಿ ಪಡಿಸುವದರಲ್ಲಿ ಮುಖ್ಯ ಕಾರಣವಾಗಿದ್ದವರು ಭಕ್ತಿವಂತರು, ಬುದ್ಧಿವಂತರು, ಯಥಾರ್ಥವಂತರು, ಸನ್ಮಾರ್ಗರು ಒಳ್ಳೆಯವುಗಳಿಗೆ ಅಂಟಿ ಕೊಂಡು, ಕೆಟ್ಟವುಗಳನ್ನು ತ್ಯಜಿಸುವ ಮನೋಸಾಕ್ಷಿಯುಳ್ಳವರು. ಅವರು ಸತ್ಯವನ್ನು ವಿಶ್ವಾಸಿಸಿ, ಸತ್ಯಕ್ಕೆ ಆಧಾರ ಕೊಟ್ಟು ನಾಟಿದರು.

ಪರಿಪಾಲಕಪ್ರಭುವಿಗೆ ಶತ್ರುಗಳಾಗಿದ್ದವರಲ್ಲಿ ಬಹು ಹಗೆಯೂ ವೈರಾಗ್ಯವೂ ಸಾಧಿಸಿದವನು ಅವನೊಡ ಹುಟ್ಟಿದ (Lord Seymour) ಸೀಮರ್ ಪ್ರಭುವೇ. ಅವನು ಇಂಗ್ಲಾಂಡ್ ರಾಜ್ಯದ ಪ್ರಧಾನನಾವಿಕಸೈನ್ಯದ ಶ್ರೇಷ್ಠನು. ಈ ಅತ್ಯಾಶೆಯುಳ್ಳ ಪ್ರಭುವಾದವನು ಅರಸನ ವಿಧವೆಯಾದ (Catherine Parr) ಕತ್ತರೀನ್ ಪಾರ್ ಎಂಬವಳನ್ನು ಮದುವೆ ಮಾಡಿ ಕೊಳ್ಳ ತ್ರಾಣೀಕರಿಸಿದ್ದಲ್ಲದೆ, ಅವಳು ಸತ್ತ ತರುವಾಯ (Elizabeth) ಎಲಿಸಬೇತ್ ಎಂಬುವ ರಾಜಕನ್ನಿಕೆಯನ್ನು ಮದುವೆ ಮಾಡಿ ಕೊಳ್ಳುವದಕ್ಕೆ ತ್ರಾಣೀಕರವಾಗಿ ಆಶೆ ಪಟ್ಟವನೆಂದು ಹೇಳುತ್ತಾರೆ. ಅವನು ತನ್ನ ಸಹೋದರನ ಆಧಿಕ್ಯವನ್ನು ಅಪಹರಿಸಿ ಕೊಂಡು ಬಾಲ್ಯ ಅರಸನನ್ನು ಪೂರ್ಣವಾಗಿ ತನ್ನ ವಶ ಮಾಡಿ ಕೊಳ್ಳುವದಕ್ಕೆ ತನ್ನಿಂದಲಾಗುವಷ್ಟು ತಂತ್ರಗಳನ್ನು ನಡಿಸುತ್ತಾ ಬಂದನು. ಸಮರ್‌ಸೆಟ್ ಡ್ಯೂಕ್ ಪ್ರಭುವು ಇದನ್ನರಿತು ಅವನಿಗೆ ಬೇಕಾದ ಬುದ್ಧಿಮತಿಗಳನ್ನು ನಯದಲ್ಲಿಯೂ ಭಯದಲ್ಲಿಯೂ ಹೇಳಿದಾಗ್ಯೂ ಪ್ರಯೋಜನವಿಲ್ಲದೆ ಹೋದದ್ದನ್ನು ಕಂಡು, ಅವನ ಮೇಲೆ ಕಲಹಗಾರನೆಂಬುವ ದೂರನ್ನು ಎಬ್ಬಿಸಿ, ಅವನನ್ನು ನಿವರ್ತಿ ಮಾಡ ಬೇಕಾಯಿತು. ಅವನು ಸಹ ಅದೇ ಮೇರೆಗೆ ಲಂಡನ್ ಪಟ್ಟಣದ ಕೋಟೆಯ ಮಂಟಪದಲ್ಲಿ ಕಲಹಗಾರನೆಂದು ಶೀರ್ಘಾಗಿ ಕೊಲ್ಲಲ್ಪಟ್ಟನು.

ಹೀಗೆ ನಡೆದದರಿಂದ ಪರಿಪಾಲಕಪ್ರಭುವಿನ ಮೇಲೆ ಜನರಿಗುಂಟಾಗಿದ್ದ ಪ್ರೀತಿಯು ಬಹಳ ಕಡಿಮೆಯಾಯಿತು. ವಿರಕ್ತರ ಮಠಗಳಲ್ಲಿ ಬಡವರಿಗೆ ಉಂಟಾಗುತ್ತಾ ಬಂದ ಧರ್ಮಸಹಾಯವು ನಿಂತು ಹೋದದರಿಂದಲೂ, ಆ ಮಠಗಳಿಗೆ ಬಿಡಲ್ಪಟ್ಟಿದ್ದ ಸರ್ವಮಾನ್ಯಭೂಮಿಗಳನ್ನೆಲ್ಲಾ ಬೇರೆ ಮನುಷ್ಯರು ಹೊಂದಿ, ಮುಂಚಿನಂತೆ ಜನರು ಆ ಭೂಮಿಗಳಲ್ಲಿ ಕುರಿ ದನಗಳನ್ನು ಸುಮ್ಮನೆ ಮೇಯಿಸಿ ಕೊಳ್ಳುವದಕ್ಕೆ ಅವರು ಸಹಿಸದೆ ಹೋದದರಿಂದಲೂ, ಜನರಿಗೆ ನಾನಾ ವಿಧ ಕೊರತೆಗಳುಂಟಾಗಿ, ಅದರಿಂದ ಗುಣುಗುಟ್ಟುವಿಕೆಯೂ, ಮೋಸವಾದ ಕಲಾಪನೆಗಳೂ ಏಳುವದಕ್ಕೆ ಸ್ಥಳವಾಯಿತು. ಆ ಕಲಾಪನೆಗಳನ್ನೆಲ್ಲಾ ಅಧಿಕಾರವೆಂಬ ಬಲಾತ್ಕಾರದಿಂದ ಅಣಗಿಸ ಬೇಕಾಯಿತು. ಕೆಲವು ಸ್ಥಳಗಳಲ್ಲಿ ಮಾತ್ರ ಜನರು ತಮ್ಮ ಆಚರಣೆ ಪೂಜೆಗಳ ವಿಷಯಗಳಲ್ಲಿ ಹೊಸದಾಗಿ ಉಂಟಾದ ವಿಕಲ್ಪಗಳ ನಿಮಿತ್ತ ದೂರಿ ಕೊಂಡದ್ದು ಉಂಟು. ಆದಾಗ್ಯೂ ಪ್ರಜೆಗಳಿಗೆ ಉಂಟಾದ ಇಕ್ಕಟ್ಟನ್ನು ಕುರಿತೇ ಅವನ ಮೇಲೆ ಬಹಳ ದೂರುಗಳೂ ಕಲಾಪನೆಗಳೂ ಉಂಟಾದವು.

ಹೀಗಿರುವ ಕಾಲದಲ್ಲಿ ಆ ಪರಿಪಾಲಕಪ್ರಭುವು ತನ್ನ ಉದ್ದಂಡತನದಿಂದಲೂ, ಮನೋ ಅಹಂಕಾರದಿಂದಲೂ, ತನ್ನ ಜತೆಗಾರರೆಲ್ಲಾ ತನ್ನ ಮೇಲೆ ಹೊಟ್ಟೆಕಿಚ್ಚು ಪಡುವಂತೆ ನಡೆದು ಕೊಂಡನು. ಮತ್ತು ಅಲ್ಲಲ್ಲಿ ಉಂಟಾದ ಕಲಹಗಳನ್ನು ತ್ವರೆಯಾಗಿ ಅಣಗಿಸದೆ ಹೋಗಿ, ಪ್ರಜೆಗಳು ಕೇಳಿ ಕೊಂಡ ಪ್ರಕಾರ ಪ್ರಭುಗಳ ಸಮ್ಮತಿ ಇಲ್ಲದೆ ಅನೇಕ ಕಾರ್ಯಗಳನ್ನು ಮಾಡಿದ್ದರಿಂದ ಅವರಲ್ಲಿ ಅನೇಕರಿಗೆ ಅವನ ಮೇಲೆ ಮನೋಕ್ಲೇಶ ಉಂಟಾಗಿತ್ತು. ಆ ಕಲಹಗಳನ್ನು ಅಣಗಿಸಿದ ಸಂಘದವರಲ್ಲಿ (Earl of Warwick) ವಾರಿಕ್ ಏರ್ಲ್ ಪ್ರಭುವಾದವನೇ ಬಹು ಸಾಧನೆ ಮಾಡಿದವನು. ಅವನು ಸಹ ಆ ದಿವಸದಿಂದ ಪರಿಪಾಲಕಪ್ರಭುವನ್ನು ಜನ್ಮಹಗೆಯಾಗಿ ಹಗೆ ಮಾಡುತ್ತಾ ಬಂದನೆಂದು ತೋಚುತ್ತದೆ. ಇದಲ್ಲದೆ ಸಮರ್‌ಸೆತ್ ಡ್ಯೂಕ್ ಪ್ರಭುವಿಗೆ ವಿರೋಧವಾಗಿ ಸಂಘದವರಲ್ಲಿ ಒಂದು ಕಕ್ಷಿ ಉಂಟಾಗಿ, ಅವನು ತನ್ನ ಆಧಿಕ್ಯವನ್ನು ಬಿಟ್ಟು ಬಿಡುವ ಹಾಗೆ ಬಲವಂತ ಮಾಡಿ, ಅವನ ಮೇಲೆ ಬಹಳ ಅಪರಾಧವನ್ನು

ವಿಧಿಸಿ, ಅವನಿಗುಂಟಾಗಿದ್ದ ಸಮಸ್ತ ಅಧಿಕಾರವನ್ನೂ ಬಲವನ್ನೂ ಕಿತ್ತು ಕೊಂಡರು.

ಹೀಗೆ ಅವನು ತಗ್ಗಿಸಲ್ಪಟ್ಟ ತರುವಾಯ (Duke of Northumberland) ನೊರ್ಥಂಬರ್‌ಲಾಂಡ್ ಡ್ಯೂಕ್ ಪ್ರಭುವೆಂಬ ಪಟ್ಟವನ್ನು ಹೊಂದಿದ್ದ (Earl of Warwick) ವಾರಿಕ್ ಎರ್ಲ್ ಪ್ರಭು ಎಂಬವನೇ ಸಂಘದವರಲ್ಲಿ ಬಹಳ ಮಾತುಬರಿಯುಳ್ಳವನಾಗಿದ್ದನು. ಅವನು ತನ್ನ ವೈರಿಯು ತಿರಿಗಿ ಬಲ ಹೊಂದಿ ಮುಂಚಿನ ತನ್ನ ಅಧಿಕೃವನ್ನು ಹೊಂದದ ಹಾಗೆ ಬಹು ಎಚ್ಚರಿಕೆಯಾಗಿದ್ದನು. ತಾನೇ ಈ ದೊಡ್ಡ ಅಧಿಕಾರವನ್ನು ಒಂದು ವರುಷಕ್ಕಧಿಕವಾಗಿ ಹೊಂದಿದ್ದ ದಿವಸಗಳಲ್ಲಿ ಸಮರ್‌ಸೆತ್ ಡ್ಯೂಕ್ ಪ್ರಭುವಿನ ಮೇಲೆ ಕಲಹಗಾರನೆಂಬುವ ದೂರನ್ನು ಎಬ್ಬಿಸಿ, ಅವನನ್ನು ಅಪರಾಧಿ ಎಂದು ತೀರಿಸಿ, ಅವನನ್ನು ಸ್ನೇಹಿಸಿ ಘನವಾಗಿ ಎಣಿಸಿದ್ದ ಬಡ ಜನರೆಲ್ಲರೂ ಗೋಳಿಟ್ಟು ಅಳುವಂತೆ ಲಂದನ್ ಪಟ್ಟದ ಕೋಟೆಯ ಬಳಿಯಲ್ಲಿರುವ ಗುಡ್ಡದ ಮೇಲೆ ಅವನನ್ನು ಕೊಲ್ಲಿಸಿದನು.

ಆದಾಗ್ಯೂ ನೊರ್ಥಂಬರ್‌ಲಾಂಡ್ ಡ್ಯೂಕ್ ಪ್ರಭುವಿನ ಅಧಿಕಾರವು ಕ್ಲಿಪ್ತವಾಗಿತ್ತು. ಹ್ಯಾಗಂದರೆ, ತನ್ನ ರಾಜ್ಯಚಾರದಲ್ಲಿ ಮೊದಲು ಅಧಿಕೃ ಹೊಂದಿದವರೆಲ್ಲರೂ ತಮ್ಮ ಇಷ್ಟದ ಪ್ರಕಾರ ಮಾಡುವದಕ್ಕೆ ತನ್ನ ಚಿಕ್ಕತನದ ನಿಮಿತ್ತ ಸ್ಥಳ ಕೊಟ್ಟಿದ್ದ ಬಾಲ್ಯ ಅರಸನಾದ 6ನೇ ಎಡ್ವರ್ಡ್ ಎಂಬವನು ಸ್ವಭಾವದ ಪ್ರಕಾರ ಕೇವಲ ಬಲಹೀನದೇಹವುಳ್ಳವನಾಗಿ, ಚಿಕ್ಕಂದಿನಲ್ಲಿಯೇ ರೋಗದಿಂದ ಶರೀರ ಹೊಡಿಯಲ್ಪಟ್ಟು ಇದ್ದದರಿಂದ ಅವನು ಬಹಳ ದಿವಸ ಆಳಲಾರನೆಂಬುವದು ಎಲ್ಲರೂ ತಿಳಿಯತಕ್ಕ ಕಾರ್ಯವಾಗಿತ್ತು. ಹೀಗಿರಲಾಗಿ ಮೇಲೆ ಹೇಳಿದ ಮಂತ್ರಿಯಾದವನು ರಾಜವಂಶದವಳೂ, ಎಲಿಸಬೇತ್, ಮೇರಿ ಎಂಬ ರಾಜಕನ್ನಿಕೆಗಳ ಕಾಲದ ತರುವಾಯ ಪಟ್ಟಕ್ಕೆ ಬಾಧ್ಯಳೂ ಆಗಿರುವಂಥ (Lady Jane Grey) ಜೇನ್ ಗ್ರೇ ಎಂಬ ಧೊರೆಮಗಳಿಗೆ ತನ್ನ ನಾಲ್ಕನೇ ಕುಮಾರನಾದ (Guilford Dudley) ಗಲ್‌ಫೋರ್ಡ್ ದಡ್ಲಿ ಎಂಬ ಪ್ರಭುವನ್ನು ಮದುವೆ ಮಾಡಿಸಿದನು. ಮತ್ತು ಆ ಇಬ್ಬರು ರಾಜಕನ್ನಿಕೆಗಳಿಗೆ ಇಲ್ಲದೆ

ಎಂಟನೇ ಹೆನ್ರಿಯ ಮಾಶಿಗೂ ನೇಮಕ್ಕೂ ವ್ಯತಿರಿಕ್ತವಾಗಿ ಅವಳನ್ನೇ ಪಟ್ಟಕ್ಕೆ ಬಾಧ್ಯಳಾಗಿ ನೇಮಿಸುವಂತೆ ಆ ಬಾಲ್ಯ ಅರಸನಿಗೆ ಬೋಧಿಸಿದನು.

ಹೀಗೆ ನೊರ್ತಂಬರ್‌ಲಾಂಡ್ ದ್ಯೂಕ್ ಪ್ರಭುವು ತನ್ನ ಕೋರಿಕೆಗಳನ್ನೆಲ್ಲಾ ಈಡೇರಿಸಿದ ಸ್ವಲ್ಪ ದಿವಸಗಳಲ್ಲಿ ಎದ್ವರ್ದ್ ಎಂಬವನು ತನ್ನ ಹದಿನಾರನೇ ವರುಷದಲ್ಲಿ (Greenwich) ಗ್ರೀನ್‌ವಿಚ್ ಎಂಬ ಊರಿನಲ್ಲಿ ದೇಹವಿಯೋಗವಾದನು. ಹೀಗೆ ಅವನು ಚಿಕ್ಕ ವಯಸ್ಸಿನಲ್ಲಿ ಸತ್ತುದ್ದರಿಂದ ಅಪರೂಪವಾದ ಗುಣಾತಿಶಯಗಳನ್ನು ಹೊಂದಿದವನಾಗಿದ್ದು, ಇನ್ನು ಮೇಲೆ ನಮಗೆ ದೊಡ್ಡ ಮೇಲುಗಳನ್ನು ಮಾಡ ತಕ್ಕ ಅರಸನು ಸತ್ತು ಹೋದನೆಂದು ಆಗ ಇದ್ದವರು ಬಹುಶಾ ದುಃಖ ಪಟ್ಟರು. ಮತ್ತು ಇಂಗ್ಲಿಷರಿಗೆ ಅದು ದೊಡ್ಡ ವಿಪತ್ತೆಂದು ಈ ದಿವಸದ ವರೆಗೂ ಹೇಳ ತಕ್ಕದ್ದು. ಆ ಅರಸನು ಚಿಕ್ಕವನಾಗಿದ್ದಾಗ್ಯೂ ಬಹು ಪೌರುಷವೂ ಶಕ್ತಿಯೂ ಉಳ್ಳ ಸುಲಕ್ಷಣಗಳನ್ನು ಹೊಂದಿ ಯಾವದು ನ್ಯಾಯವೋ ಯಾವದು ನೆಟ್ಟಗೋ ಅದನ್ನೇ ಮಾಡುವದಕ್ಕೆ ದೃಷ್ಟಿಯುಳ್ಳವನಾಗಿದ್ದನು. ತನ್ನ ವಯಸ್ಸಿಗೆ ಮೀರಿದ ತಿಳುವಳಿಕೆಯೂ ಗ್ರಹಿಕೆಯೂ ಅವನಿಗೆ ಇತ್ತು. ವಿದ್ಯದಲ್ಲಿ ಅಭ್ಯಾಸವೂ, ದಾನ ಧರ್ಮಗಳಲ್ಲಿ ಉದಾರತ್ವವೂ ಉಳ್ಳವನಾಗಿದ್ದನು. ಅವನಿಗೆ ಆಯುಸ್ಸು ಮಾತ್ರ ದೀರ್ಘವಾಗಿದ್ದರೆ, ಅವನು ನೆಟ್ಟನೆತನವೂ ಸಾಮರ್ಥ್ಯವೂ ಉಳ್ಳವನಾಗಿ, ತಂದೆಗೆ ಇದ್ದ ದೃಢತ್ವದಿಂದಲೂ, ಸಾಧನೆಯಿಂದಲೂ, ತಂದೆಗೆ ಇಲ್ಲದಂಥಾ ನ್ಯಾಯ ವಿಧಾನಗಳುಳ್ಳವನಾಗಿಯೂ, ತಂದೆಗೆ ಇದ್ದ ಧೈರ್ಯ ಶೌರ್ಯಗಳೊಡನೆ, ತಂದೆಗೆ ಇಲ್ಲದಂಥ ದೇವಭಕ್ತಿಯೂ ಮನೋಶಾಂತಿಯೂ ಉಳ್ಳವನಾಗಿಯೂ ಇರುವನೆಂಬುವದಕ್ಕೆ ಏನೂ ಸಂದೇಹವಿಲ್ಲ.

ಎದ್ವರ್ದನು ಸತ್ತ ಕೆಲವು ದಿವಸಗಳಲ್ಲಿ ಅವಳ ಮಾವನೂ ಸಂಘದವರೂ ಕೂಡಿ ಜೇನ್ ಗ್ರೇ ಎಂಬುವ ಧೊರೆಮಗಳಿಗೆ ರಾಣಿ ಎಂದು ಕಿರೀಟ ಧರಿಸಿದರು. ಆ ಸೌಂದರ್ಯವುಳ್ಳ ಯೌವನಸ್ಥಳಾದ ಧೊರೆಮಗಳು ವಿದ್ಯದ ಮೇಲೆ ಅಪೇಕ್ಷೆಯುಳ್ಳವಳಾಗಿ, ವ್ಯರ್ಥ ಬಡಾಯಿಯನ್ನು ಎಷ್ಟು ಮಾತ್ರವೂ ಅಪೇಕ್ಷಿಸದೆ ಇದ್ದದರಿಂದ ಬಹು ಅರೋಚಿಕೆಯಿಂದ ಕಿರೀಟವನ್ನೂ ಮುದ್ರೆಯ ಕೋಲನ್ನೂ ವಹಿಸಿದಳು. ಆದಾಗ್ಯೂ ಅವ

ಳು ಬಹಳ ದಿವಸ ಆಳಿದವಳಲ್ಲ. ಹತ್ತು ದಿವಸ ಆಳಿದ ತರುವಾಯ ಆ ರಾಜತ್ವವನ್ನು ಬಿಡ ಬೇಕಾಗಿದ್ದಾಗ ಬಹು ಸಂತೋಷದಿಂದ ಅದನ್ನು ಬಿಟ್ಟು ಬಿಟ್ಟಳು. ಎಂಟನೇ ಹೆನ್ರಿಗೂ ಅವನ ಮೊದಲನೇ ಹೆಂಡತಿಯಾದ ಕತ್ತರೀನ್ ಎಂಬುವ ರಾಣಿಗೂ ಹುಟ್ಟಿದ ಮೇರಿ ಎಂಬವಳ ಮೇಲೆ ಜನರಿಗೂ ಸಂಘದವರಲ್ಲಿ ಅಧಿಕವಾದ ಮಂದಿಗೂ ಪ್ರೀತಿ ಇತ್ತು. ನೊರ್ಥಂಬರ್‌ಲಾಂಡ್ ಡ್ಯೂಕ್ ಪ್ರಭುವು ಆ ರಾಜಕನ್ನಿಕೆಗೆ ವಿರೋಧವಾದ ಸಾಧನೆಗಳನ್ನು ಮಾಡಿ ಕೊಂಡು, (Cambridge) ಕೆಂಬ್ರಿಜ್ ಎಂಬ ಊರಿಗೆ ಹೋದಾಗ ತನಗೆ ಸಹಾಯಕರಾದ ಮನುಷ್ಯರಿಲ್ಲದ್ದರಿಂದ ಹಿಡಿಯಲ್ಪಟ್ಟು ಲಂದನ್ ಪಟ್ಟಣಕ್ಕೆ ಸೆರೆಯಾಗಿ ತೆಗದು ಕೊಂಡು ಬರಲ್ಪಟ್ಟನು. ಇದರ ಮಧ್ಯೆ ಅದೇ ಪಟ್ಟಣದಲ್ಲಿಯೇ ಮೇರಿ ಎಂಬವಳು ಕಿರೀಟ ಧರಿಸಲ್ಪಟ್ಟಳು. ನೊರ್ಥಂಬರ್‌ಲಾಂಡ್ ಡ್ಯೂಕ್ ಪ್ರಭುವನ್ನು ಶಿರಚ್ಛೇದ ಮಾಡಿ, ಜೇನ್ ಗ್ರೇ ಎಂಬುವ ಧೊರೆಮಗಳನ್ನೂ ಅವಳ ಪುರುಷನನ್ನೂ ಶೆರೆಯಲ್ಲಿ ಹಾಕಿದರು. ಅವರು ಸಹ ಹೆಚ್ಚು ಕಡಿಮೆ ಒಂದು ವರುಷದ ತರುವಾಯ (Sir Thomas Wyatt) ಸರ್ ತೋಮಾಸ್ ವೈಯಾತ್ ಎಂಬವನು ತಲೆಯಾಗಿದ್ದು ಒಂದು ಕಲಹ ಉಂಟಾದಾಗ ಕೊಲ್ಲಲ್ಪಟ್ಟರು. ಆ ಕಲಹದಲ್ಲಿ ಅವರು ಎಷ್ಟು ಮಾತ್ರವೂ ಸಮ್ಮಂಧ ಪಟ್ಟವರಲ್ಲ. ರಾಣಿಯಾದ ಮೇರಿಯು ಮಾಡಿದ ಅನೇಕ ಕಾರ್ಯಗಳು, ತಮಗೆ ಸಮ್ಮತಿ ಇಲ್ಲದ್ದರಿಂದ, ಅವಳನ್ನು ತಳ್ಳಿ ಬಿಟ್ಟು ಅವಳ ಸಹೋದರಿಯನ್ನು ಸ್ಥಾಪಿಸ ಬೇಕೆಂದು ಅಪೇಕ್ಷೆಯುಳ್ಳ ಕೆಲವು ಮಂದಿಯಿಂದ ಆ ಕಲಹ ನಡೆದಿರಲಾಗಿ, ಎಷ್ಟು ಮಾತ್ರವೂ ಅಪರಾಧವಿಲ್ಲದ ಆ ಇಬ್ಬರ ಕೊಲೆಯು ಮಹಾ ಪಾತಕವೇ ಹೊರ್ತು ಬೇರೆ ಅಲ್ಲ. ಮೇರಿಯ ಹೆಸರನ್ನು ಅಪಕೀರ್ತಿ ಪಡಿಸ ತಕ್ಕದ್ದಾಗಿ ನಡೆದ ಹೇರಾಳವಾದ ದುಷ್ಕಾರ್ಯಗಳಲ್ಲಿ ಇದೇ ಮೊದಲನೇದು. ಧೊರೆಮಗಳಾದ ಜೇನ್ ಗ್ರೇ ಎಂಬವಳನ್ನು ಕೊಲೆ ಮಾಡಿದಾಗ ಉಂಟಾದ ಒಂದು ಕಾರ್ಯವು ಮುಖ್ಯವಾಗಿ ಬಹು ಪರಿತಪಿಸ ತಕ್ಕದ್ದು. ಅದು ಏನಂದರೆ, ಆ ಹೊತ್ತು ಅವಳ ಪುರುಷನನ್ನು ಮೊದಲು ಕೊಂದರು. ಅವಳನ್ನು ಸಹ ಕೊಲ್ಲುವ ಸ್ಥಳಕ್ಕೆ ತೆಗದು ಕೊಂಡು ಹೋಗುವಾಗ ಕೋಟೆಯ ಮಂಟಪದಲ್ಲಿ ಹೂಣಿಡುವದಕ್ಕೆ ಒಂದು

ಚಂಡಿಯ ಮೇಲೆ ಹಾಕಿ ತರಲ್ಪಟ್ಟ ತನ್ನ ಪುರುಷನ ಹೆಣವು ರಕ್ತ ಹರಿದು ಕೊಂಡು ಬರುವದನ್ನು ಕಣ್ಣಿನಿಂದ ಕಂಡಳು. ಆದಾಗ್ಯೂ ಆ ಕ್ರೂರವಾದ ನೋಟವನ್ನು ಕಂಡಾಗ ಮಹಾ ವೀರ್ಯಮನಸ್ಸುಳ್ಳವಳಾದ ಅವಳ ಮುಖನಾಡಿ ಮಾರ್ಪಟ್ಟದ್ದೂ ಇಲ್ಲ, ಧೈರ್ಯ ಕುಂದಿದ್ದೂ ಇಲ್ಲ.

ರಾಣಿಯಾದ ಮೇರಿಯು ಪಟ್ಟವನ್ನು ಹೊಂದಿದ ತರುವಾಯ ಅವಳ ಮದುವೆಯನ್ನು ಕುರಿತೇ ಮೊದಲು ಆಲೋಚನೆ ನಡೆಯಿತು. ಈ ವಿಷಯದಲ್ಲಿ ಅವಳು ತಳ್ಳ ಕೂಡದ ಆಲೋಚನೆ ಹೇಳಿದವನು ಅವಳ ಚಾವನಾದ ಐದನೇ ಚಾರ್ಲ್ಸ್ ಎಂಬುವ ಚಕ್ರವರ್ತಿಯು. ಅವಳನ್ನು ಫಿಲಿಪ್ ಎಂಬ ತನ್ನ ಮಗನಾದ ಸ್ಪೇನ್ ದೇಶದ ಅರಸನಿಗೆ ಕೊಡ ಬೇಕೆಂಬುವದು ಅವನ ಅಭಿಪ್ರಾಯವು. ಆ ಅಭಿಪ್ರಾಯದ ಪ್ರಕಾರ 1554ನೇ ವರುಷ ಜುಲಾಯಿ ತಿಂಗಳಲ್ಲಿ ಹೊಸ ಮದುವೆ ಆಯಿತು. ಸ್ಪೇನ್ ದೇಶದವರನ್ನು ಇಂಗ್ಲಿಷರು ಅಸಂಹ್ಯಿಸಿದ್ದರಿಂದ ಆ ಮದುವೆಯು ಅವರಿಗೆ ಮನೋಸಂಕಟವೂ ಕಠಿಯೂ ಆಗಿತ್ತು. ತರುವಾಯದ ಆಳಿಕೆಯಲ್ಲಿ ನಡೆದ ಕಾರ್ಯಗಳಿಂದ ಆ ಉಭಯ ದೇಶಸ್ಥರಿಗೂ ಅಧಿಕ ಹಗೆ ಉಂಟಾಯಿತು. ಫಿಲಿಪ್ ಅರಸನು ಇಂಗ್ಲಾಂದಿನಲ್ಲಿ ಸ್ವಲ್ಪ ದಿವಸ ಮಾತ್ರ ಇದ್ದಾಗ್ಯೂ ರಾಣಿಯಾದ ಮೇರಿಯನ್ನು ಪ್ರೀತಿಯಾಗಿ ನಡಿಸಲಿಲ್ಲ. ಮತ್ತು ಗರ್ವವೂ ಅಹಂಕಾರಗುಣವೂ ಉಳ್ಳ ಆ ಫಿಲಿಪ್ಪನ ನಡತೆಯು, ಮನೋಧಾರಾಳವೂ ಉದಾರತ್ವವೂ ಉಳ್ಳ ಇಂಗ್ಲಿಷರಿಗೆ ಬಹು ಅಸಂಹ್ಯ ಉಂಟು ಮಾಡಿದ್ದು ಆಶ್ಚರ್ಯವಲ್ಲ.

ಕೆಲವು ಕಾಲಕ್ಕೆ ಮುಂಚೆ ನಿವರ್ತಿ ಮಾಡಲ್ಪಟ್ಟಿದ್ದ ಆರಾಧನೆಯ ನೇಮಗಳಿಗೆ ತಕ್ಕ ಕ್ರಮಗಳನ್ನು ತಿರಿಗಿ ಸ್ಥಾಪಿಸಲೂ, ಕೆಲವು ದಿವಸಗಳಿಗೆ ಮುಂಚೆ ಸ್ವಲ್ಪ ಹೆಚ್ಚು ಕಡಿಮೆ ಎಲ್ಲರೂ ಬಿಟ್ಟು ಬಿಟ್ಟಿದ್ದ ತಪ್ಪಾದ ಉಪದೇಶಗಳನ್ನೇ ತಿರಿಗಿ ತನ್ನ ಪ್ರಜೆಗಳು ಅನುಸರಿಸ ಮಾಡಲೂ ಬೇಕೆಂಬುವದೇ ರಾಣಿಯಾದ ಮೇರಿಯ ಮನಸ್ಸಿನಲ್ಲಿದ್ದ ದೊಡ್ಡ ತಾತ್ಪರ್ಯ. ತನ್ನ ಸಹೋದರನ ಕಾಲದಲ್ಲಿ ಅಧೀನವನ್ನು ಕಳ ಕೊಂಡಿದ್ದ ಸಕಲ ಅಧ್ಯಕ್ಷರನ್ನು ತಿರಿಗಿ ಸ್ಥಾಪಿಸಿ, ಅವರ ಬೋಧನೆಯಿಂದಲೇ ತನ್ನ ಅಭಿಪ್ರಾಯವನ್ನು ಈಡೇರಿಸುವ ಉದ್ದಿಶ್ಯ ಅಧಿಕ ಉಗ್ರವಾದ ಚರ್ಯಗಳನ್ನೆಲ್ಲಾ

ಮಾಡಿದಳು. ಅವಳಿಗೆ ಇಷ್ಟವಿದ್ದರೆ ಆ ಕ್ರೂರ ಕೃತ್ಯಗಳನ್ನೆಲ್ಲಾ ತಡೆ ಮಾಡ ಕೂಡುವದು. ಹಾಗೆ ತಡೆ ಮಾಡ ಅವಳಿಗೆ ಇಷ್ಟವಿಲ್ಲ. ಮತವಿಷಯಗಳ ಉದ್ದಿಶ್ಯ ಉಂಟಾದ ಉಪದ್ರವನ್ನು ಕುರಿತು ಇಲ್ಲಿ ಕೆಲವು ನ್ಯಾಯಗಳನ್ನು ಹೇಳುವದು ತಕ್ಕದೆಂದು ಎಣಿಸುತ್ತೇವೆ. ಏನಂದರೆ, ಈ ಕಾರ್ಯಗಳು ಸಂಭವಿಸಿದ ಕಾಲದಲ್ಲಿ ಆ ಮನುಷ್ಯರು ಮತಾಚಾರಗಳಲ್ಲಿ ತಮ್ಮ ಅಭಿಪ್ರಾಯಗಳಿಗೆ ಬೇರೆಯಾದ ಅಭಿಪ್ರಾಯಗಳನ್ನು ಯಾರಾದರೂ ಕೈಕೊಂಡರೆ ಅದನ್ನು ಸಹಿಸಲಾರರು. ಬೇರೆಯಾದ ಉಪದೇಶಗಳನ್ನು ಅನುಸರಿಸುವವರನ್ನೆಲ್ಲಾ ಧಾರಾಳವಾಗಿ ಉಪದ್ರ ಪಡಿಸ ಬಹುದು, ಅದು ನ್ಯಾಯವೇ ಎಂದು ರೋಮನ್ ಸಭೆಗೆ ಸೇರಿದವರು ಬಹಿರಂಗವಾಗಿ ಅರಿಕೆ ಮಾಡಿದರು. ಮತ್ತು ಇಂಥಾ ಅಪರಾಧಕ್ಕಾಗಿ ಪ್ರೊತೆಸ್ತಾಂತ್ ಸಭೆಯವರಲ್ಲಿ ಕೆಲವರು ಬಾಧ್ಯ ಪಟ್ಟಿದ್ದದ್ದು ಉಂಟು. ಆದಾಗ್ಯೂ ಮತಾಭಿಪ್ರಾಯಗಳನ್ನು ಕುರಿತು ಒಬ್ಬರನ್ನು ಉಪದ್ರ ಪಡಿಸುವದು ಮಹಾ ಪಾತಕವೆಂದು ಅವರು ಶೀಘ್ರವಾಗಿ ಒಪ್ಪಿ ಕೊಂಡು ಅಂಥಾ ನಡತೆಯನ್ನು ಬಿಟ್ಟು ಬಿಟ್ಟರು. ಮತವಿಷಯಗಳನ್ನು ಕುರಿತು ಮತ್ತೊಬ್ಬರನ್ನು ಉಪದ್ರ ಪಡಿಸುವದು ಎಷ್ಟು ಮಾತ್ರ ತಕ್ಕದ್ದಲ್ಲ. ದೇವರ ಮುಂದೆ ಒಬ್ಬೊಬ್ಬನು ತನ್ನ ತನ್ನ ಮನಸ್ಸಾಕ್ಷಿಯ ಪ್ರಕಾರ ದೈವಭಯಭಕ್ತಿಯಿಂದ ನಡಿಯುವದೇ ಉತ್ತಮ ಸತ್ಯವೇದಮಾರ್ಗವು. ಆದದರಿಂದ ಯಾರನ್ನಾದರೂ ಅವನು ಅನುಸರಿಸಿದ ಮತಬೋಧನೆಗಳಿಗೆ ವಿರೋಧವಾದದ್ದನ್ನು ಮಾಡುವಂತೆ ಬಲಾತ್ಕಾರವಾದರೂ ಅನ್ಯಾಯವಾದರೂ ಮಾಡುವದು ತಪ್ಪಾಗಿರಲಾಗಿ, ಅವುಗಳಿಗೋಸ್ಕರ ಅವನನ್ನು ಉಪದ್ರ ಪಡಿಸುವದು ದೊಡ್ಡ ಅಪರಾಧವಲ್ಲವೋ? ಮತಾಭಿಪ್ರಾಯಗಳನ್ನು ಕುರಿತು ಹ್ಯಾಗೆ ವಿಧಾನಿಸಿದರೂ, ಅವುಗಳ ನಿಮಿತ್ತ ಬೇರೊಬ್ಬರನ್ನು ಹಿಂಸೆ ಪಡಿಸುವವನು ಸತ್ಯವೇದವನ್ನು ಗಲಿಬಿಲಿ ಮಾಡುವವನೆಂಬುವದು ಯಥಾರ್ಥವಾಗಿದೆ.

ಈ ಆಳಿಕೆಯಲ್ಲಿ ಯಾವ ಮೇಲೂ ಉಂಟಾಗದೆ ಇದ್ದಾಗ್ಯೂ ರೋಮಾಪುರಿ ಪಾಪುವಿನ ಅಧಿಕಾರವನ್ನು ಹಗೆ ಮಾಡಲೂ ಅದನ್ನು ತೆಗದು ಹಾಕಲೂ ಇಂಗ್ಲಿಷಿನವರು ಪ್ರೇರೇಪಿಸಲ್ಪಟ್ಟದ್ದು ಒಂದು ಮೇಲಾದ

ಕಾರ್ಯ. ಉಪದ್ರವೆಂಬುವ ಬಿರುಘಾಳಿ ಎದ್ದಾಗಲೇ ಪ್ರೊತೆಸ್ತಾಂತ್ ಸಭೆಯವರ ಉತ್ತಮ ಗುಣಾತಿಶಯಗಳು ಪ್ರತ್ಯಕ್ಷವಾಗಿ ಚಲಿಸದೆ ದೃಢವಾಗಿ ನಿಲ್ಲಲಾಯಿತು. ಅದನ್ನು ಕಂಡ ಬೇರೊಬ್ಬರಿಗೂ ಅವರನ್ನು ಹಿಂಬಾಲಿಸುವದಕ್ಕೆ ಧೈರ್ಯವೂ ಉಂಟಾಯಿತು. ಸತ್ಯಸಾಕ್ಷಿಗಳಾಗಿ ಹೆಚ್ಚು ಕಡಿಮೆ ಇನ್ನೂರ ಐವತ್ತು ಮಂದಿಯು ವರೆಗೂ ರಕ್ತ ಚಲ್ಲಿದರು. ಈ ಜಯಶೀಲರಾದ ಸಂಘದವರಲ್ಲಿ ಮುಖ್ಯಸ್ಥರು ಕ್ರಾನ್‌ಮರ್, ಲಾತಿಮರ್, ರಿದ್ಲಿ ಎಂಬ ಸತ್ಯವೇದಶಾಸ್ತ್ರಿಗಳೇ. ಇವರಲ್ಲಿ ಲಾತಿಮರ್, ರಿದ್ಲಿ ಎಂಬ ಇಬ್ಬರೂ ಒಂದೇ ಸಾರಿ ಸತ್ತರು. ವೃದ್ಧಾಪ್ಯನಾದ ಲಾತಿಮರ್ ತನಗೆ ಉಪದ್ರದಲ್ಲಿ ಜತೆಯವನಾಗಿದ್ದ ಮತ್ತೊಬ್ಬನನ್ನು ನೋಡಿ, ತಮ್ಮಾ! ಧೈರ್ಯವಾಗಿರು; ಪೌರುಷವನ್ನು ಬಿಡ ಬೇಡ! ಎಂದೆಂದಿಗೂ ಆರಿಸ ಕೂಡದ ಒಂದು ದೀಪವನ್ನು ಇಂದು ದೈವಕೃಪೆಯಿಂದ ಇಂಗ್ಲಾಂದ್ ದೇಶದಲ್ಲಿ ಮುಟ್ಟಿಸುತ್ತೇವಲ್ಲ? ಎಂದು ಧೈರ್ಯವೂ ಆದರಣೆಯೂ ಹೇಳಿದನು.

"ಮರ್ತ್ಯದ ಬೆಳಕು ಒಂದು ನಿಮಿಷ, ಸತ್ಯದ ಬೆಳಕು ಸಾರ್ವದಾ" ಎಂಬುವ ಪ್ರಕಾರ ಅವನು ಹೇಳಿದ ಬೆಳಕು ಸತ್ಯದ ಬೆಳಕು; ಆದದರಿಂದ ಆ ಬೆಳಕು ಆರಿಸಲ್ಪಡದೆ ಇನ್ನೂ ಪ್ರಕಾಶಿಸುವದಕ್ಕಾಗಿ ದೇವರಿಗೆ ಸ್ತೋತ್ರ!

ಕ್ರಾನ್‌ಮರ್ ಎಂಬ ಶ್ರೇಷ್ಠ ಅಧ್ಯಕ್ಷನ ಮರಣವು ಪರಿತಾಪವಾದದ್ದೇ. ಈ ದೊಡ್ಡ ಮನುಷ್ಯನು ತನ್ನನ್ನು ವಿಚಾರಣೆ ಮಾಡುವದಕ್ಕಿದ್ದ ಸಭೆಯವರ ಮುಂದೆ ಕ್ರೂರ ಮರಣಕ್ಕೆ ಭಯ ಪಟ್ಟು, ತಾನು ಅದು ವರೆಗೂ ದೃಢವಾಗಿ ವಿಶ್ವಾಸಿಸಿದ್ದ ಉಪದೇಶಗಳನ್ನು ಬೊಂಕುವದಕ್ಕೆ ಸಮ್ಮತಿಸಿದನು. ಒಬ್ಬನು ತನ್ನ ಪ್ರಾಣ ಉಳಿಸಿ ಕೊಳ್ಳುವದಕ್ಕಾಗಿ ಹೀಗೆ ಮಾಡುವದು ಆಶ್ಚರ್ಯವಲ್ಲ. ಆದಾಗ್ಯೂ ಅದು ದೊಡ್ಡ ತಪ್ಪೇ. ಅವನು ತನ್ನನ್ನು ತಾನು ತಗ್ಗಿಸಿ ಒಂದಾವರ್ತಿ ಬೊಂಕಿದಾಗ್ಯೂ ಶತ್ರುಗಳು ಇನ್ನೂ ಅವನನ್ನು ಬದುಕಲೀಸ ಮನಸ್ಸಿಲ್ಲದೆ, ಅವನು ಬರೆದ ಬೊಂಕುವಿಕೆಯ ಪತ್ರವನ್ನು ಬಹಿರಂಗವಾಗಿ ಸಭೆಯಲ್ಲಿ ಓದಲೂ, ತರುವಾಯ ಅವನ ಜತೆಗಾರರು ಯಾವ ಮೇರೆಗೆ ಸತ್ತರೋ ಅದೇ ಮರಣಾಜ್ಞೆಯಿಂದ ಅವನನ್ನು ಕೊಲ್ಲಲೂ ನೇಮಕ ಮಾಡಿದರು. ಆದಾಗ್ಯೂ ಉಪದ್ರದ ದಿ

ವನ ಸಮೀಪಿಸಲು ಅವನಿಗೆ ದೃಢವೂ ಧೈರ್ಯವೂ ಉಂಟಾಯಿತು. ಅವನು ಬಲಾತ್ಕಾರದಿಂದ ಹೊಸದಾಗಿ ಅನುಸರಿಸಿದ ಉಪದೇಶಗಳನ್ನು ಅವನ ಬಾಯಿಯಿಂದಲೇ ಕೇಳುವ ನಿಮಿತ್ತ ಕೂಡಿ ಬಂದಿದ್ದ ಸಭೆಯ ಮಧ್ಯದಲ್ಲಿ ನಿಲ್ಲಿಸಲ್ಪಟ್ಟಾಗ ಅವರು ನಂಬಿ ಕೊಂಡಿದ್ದದಕ್ಕೆ ಪೂರ್ಣ ವಿರೋಧವಾಗಿ, ತಾನು ಬೋಧಿಸಿ ಇದ್ದ ಸತ್ಯವೇದದ ಉಪದೇಶಗಳನ್ನೇ ಧೈರ್ಯವಾಗಿ ಅರಿಕೆ ಮಾಡಿ, ತಾನು ಭಯದಿಂದ ಮೇಲ್ಗೊಳ್ಳಲ್ಪಟ್ಟಾಗ ಬೇರೊಬ್ಬರ ಬಲವಂತದಿಂದ ಹಾಗೆ ಬೋಧಿಸಿದ್ದೇ ಹೊರ್ತು ಬೇರೆ ಅಲ್ಲವೆಂದು ಸ್ಥಿರವಾಗಿ ಹೇಳಿದನು. ಹೀಗೆ ಹೇಳಲಾಗಿ, ಹತ್ತರ ನಿಂತಿದ್ದ ಕೆಲವರು ಅವನ ನಾಲಿಗೆಯನ್ನು ಅಡಗಿಸಿ ಬಿಟ್ಟರು. ಅವನನ್ನು ಅಗ್ನಿಸ್ತಂಭದ ಬಳಿಗೆ ತೆಗೆದು ಕೊಂಡು ಹೋದಾಗ, ಅವನು ಹಾಗೆಯೇ ಧೈರ್ಯವಾಗಿ ನಿಂತು ತನ್ನ ಬಲಗೈಯನ್ನು ಉರಿಯುವ ಜ್ವಾಲೆಯಲ್ಲಿಟ್ಟು, "ಮೊದಲು ಈ ಕೈಯೇ ತಪ್ಪು ಮಾಡಿದ್ದರಿಂದ ಇದೇ ಮೊದಲು ಸುಡಲ್ಪಡಲಿ" ಎಂದು ಹೇಳಿ ಈ ಮೇರೆಗೆ ಪ್ರಾಣವಿದ್ದ ಮಟ್ಟಿಗೂ, ತಿದ್ದುಪಾಟಿನ ಕೆಲಸವನ್ನು ನಡಿಸಿದ ಶ್ರೇಷ್ಠರಲ್ಲಿ ಒಬ್ಬನಾಗಿಯೂ, ಅದಕ್ಕಾಗಿ ರಕ್ತಸಾಕ್ಷಿಗಳಾದ ಮುಖ್ಯಸ್ಥರಲ್ಲಿ ಒಬ್ಬನಾಗಿಯೂ ಇದ್ದ ಕ್ರಾನ್‍ಮರ್ ಎಂಬುವ ಶ್ರೇಷ್ಠ ಅಧ್ಯಕ್ಷನು ಪರಗತಿ ಹೊಂದಿದನು. (Gardiner) ಗಾರ್ಡಿನರ್ (Bonner) ಬೊನ್ನರ್ ಎಂಬುವ ಅಧ್ಯಕ್ಷರು ಇಂಥಾ ಕ್ರೂರ ಕೊಲೆಗಳನ್ನು ನಡಿಸುವದರಲ್ಲಿ ಮುಖ್ಯಸ್ಥರಾಗಿದ್ದರು.

ರಾಣಿಯಾದ ಮೇರಿಯ ಕಾಲದಲ್ಲಿ ನಡೆದ ಅನ್ಯ ದೇಶವರ್ತಮಾನಗಳೆಲ್ಲಾ, ಅವಳಿಗೆ ಸ್ಪೇನ್ ದೇಶದ ಅರಸನ ಬಳಿಯಲ್ಲಿ ಉಂಟಾದ ಸಂಬಂಧವೂ, ಫ್ರಾನ್ಸ್ ದೇಶದಲ್ಲಿ ನಡೆದ ಯುದ್ಧವೂ ಹೊರ್ತು ಬೇರೆ ವಿಶೇಷವಿಲ್ಲ. ಫ್ರಾನ್‍ಸರ ಸಂಗಡ ಮಾಡಿದ ಯುದ್ಧದಲ್ಲಿ ಇಂಗ್ಲಿಷರ ದಂಡುಗಳಿಗೆ ಅಪಜಯವಾಯಿತು. ಐದನೇ ಚಾರ್ಲ್ಸ್ ಎಂಬುವ ಚಕ್ರವರ್ತಿಯು ಸ್ಪೇನ್ ರಾಜ್ಯವನ್ನೂ, (Netherlands) ನೆದರ್‍ಲಾಂಡ್ ಸೀಮೆಯನ್ನೂ, ಇತಲಿಯಲ್ಲಿ ತನಗಿದ್ದ ಭೂಸ್ಥಿತಿಗಳನ್ನೂ, ತಾನು ಕಿರೀಟವನ್ನು ಬಿಟ್ಟು ವಾನಪ್ರಸ್ಥನಾದ ಕಾಲದಲ್ಲಿ ರಾಣಿಯಾದ ಮೇರಿಯ ಗಂಡನಾದ ತನ್ನ ಮಗನಿಗೆ ಕೊಟ್ಟಿದ್ದನು. ಹೀಗೆ ರಾಜ್ಯಪರಿ

ಪಾಲನೆ ಮಾಡಿದ ತನ್ನ ಗಂಡನ ಬೋಧನೆಯಿಂದ ಮೇರಿ ರಾಣಿಯು ಫ್ರಾನ್ಸರ ಸಂಗಡ ಯುದ್ಧ ಮಾಡಿದಳು. ಯೂರೋಪ್ ಖಂಡದಲ್ಲಿ ಬಹು ದಿವಸಗಳಿಂದ ಇಂಗ್ಲಿಷಿನವರು ಕಟ್ಟಿ ಕೊಂಡಿದ್ದ (Calais) ಕಲೇ ಪಟ್ಣವನ್ನು ಫ್ರಾನ್ಸರು ಹಿಡಿದು ಕೊಂಡದ್ದರಿಂದ, ಇಂಗ್ಲಾಂಡಿನಲ್ಲಿರುವ ಅವರ ರಾಣಿಗೆ ಉಂಟಾದ ದುಃಖವು ಹೇಳಲಶಕ್ಯವಾದದ್ದು. ಆ ವರ್ತಮಾನದಿಂದ ರಾಣಿಗೆ ಉಂಟಾದ ದುಃಖ ಎಂಥಾದ್ದಂದರೆ, ಅವಳು ಸಾಯುವ ಕಾಲದಲ್ಲಿ ಸಹ "ನನ್ನ ಶರೀರವನ್ನು ನೀವು ಶೀಳಿ ನೋಡಿದರೆ ಕಲೇ ಪಟ್ಣದ ಹೆಸರನ್ನು ನನ್ನ ಹೃದಯದಲ್ಲಿ ಕಾಣುವಿರಿ" ಎಂದು ಹೇಳಿದಳಂತೆ.

ಪುರುಷನಿಂದ ಕೈ ಬಿಡಲ್ಪಟ್ಟವಳಾಗಿಯೂ, ತನಗೊಬ್ಬ ಮಗನು ಹುಟ್ಟುವನೆಂಬ ಆಶೆ ಭಗ್ನವಾದವಳಾಗಿಯೂ, ರಾಣಿಯಾದ ಮೇರಿಯು ಫಿಲಿಪ್ಪನು ತನ್ನನ್ನು ಬಿಟ್ಟು ಅಗಲಿ ಹೋದ ಕಾಲವೆಲ್ಲಾ ಒಂಟಿಯಾಗಿದ್ದು ತನ್ನ ದಿವಸ ಕಳೆದಳು. ಕಲೇ ಪಟ್ಣವು ಹಿಡಿಯಲ್ಪಟ್ಟ ಸ್ವಲ್ಪ ಕಾಲದೊಳಗಾಗಿಯೇ ಸತ್ತಳು. ಅವಳು ಸತ್ತದ್ದಕ್ಕಾಗಿ ಮುಕ್ಕಾಲುಪಾಲು ಪ್ರಜೆಗಳು ದುಃಖಿಸಲಿಲ್ಲ, ಅಯ್ಯೋ! ಅನ್ನಲಿಲ್ಲ. ಅವಳ ಸ್ವಭಾವಿಕವಾದ ಗುಣವು ಯಾರಾದರೂ ಪ್ರೀತಿ ಮಾಡ ತಕ್ಕ ಗುಣವೇ. ಒಳ್ಳೇದನ್ನು ಅಪೇಕ್ಷಿಸಿ ನಡಿಸ ತಕ್ಕ ಪ್ರೀತಿಯು ಸಹ ಅವಳಿಗೆ ಇತ್ತು. ಆದಾಗ್ಯೂ ತನ್ನ ತಾಯಿ ಪಟ್ಟ ಅವಸ್ಥೆಯನ್ನು ನೋಡಿ ಇದ್ದದರಿಂದಲೂ, ರೋಮನ್ ಸಭೆಯ ಆಚಾರಗಳು ಸ್ವಲ್ಪವಾದರೂ ತಪ್ಪದೆ ಅವಳಲ್ಲಿ ನುಗಿಸಲ್ಪಟ್ಟಿದ್ದ ಕಲಿಕೆಯ ಸ್ವಭಾವದಿಂದಲೂ ಅವಳ ಗುಣವು ಚಿಕ್ಕ ಪ್ರಾಯದಲ್ಲಿಯೇ ಕಠಿಯಾಗಿ ಮುರಿದು ಹೋಯಿತು. ಇದಲ್ಲದೆ ಅವಳಿಗೆ ಹಲವು ಕಾರ್ಯಗಳು ಕೈಗೂಡದೆ ಆಶೆ ಭಗ್ನವಾದದರಿಂದ ಪ್ರೀತಿಯೂ ದಯೆಯೂ ಇಲ್ಲದ ಅವಳ ಗುಣವು ಮತ್ತೂ ಕೆಟ್ಟು ಹೋಯಿತು. ಮತ್ತು ಅವಳು ಅನ್ಯರ ಮಾತಿಗೂ ಅಭಿಪ್ರಾಯಗಳಿಗೂ ಪೂರ್ಣವಾಗಿ ಕಿವಿಗೊಟ್ಟು, ಅವರ ಕ್ರೂರ ಕೃತ್ಯಗಳನ್ನು ಅಣಗಿಸ ಅವಳಿಗೆ ಶಕ್ತಿ ಇದ್ದಾಗ್ಯೂ ಆ ಶಕ್ತಿಯನ್ನು ಬಳಿಸಿದವಳಲ್ಲ. ಈ ಮೇರೆಗೆ ಅವಳು ಆಳಿದ ಕಾಲದಲ್ಲಿ ಅನೇಕ ಕಠಿಣವಾದ ಕೇಡುಗಳು ಮಾಡಲ್ಪಟ್ಟದ್ದರಿಂದ ಆ ತಪ್ಪುಗಳನ್ನು ಕು

ರಿತು ನೆವನು ಹೇಳ ಸ್ಥಳವಿಲ್ಲ. ಅವುಗಳನ್ನು ನೆನಸುವಾಗಲೆಲ್ಲಾ ಒಳ್ಳೆಯವರೆಲ್ಲರೂ ವ್ಯಸನ ಹೊಂದಿ, ಅವುಗಳಿಂದ ಮೇರಿ ಎಂಬವಳಿಗೆ ಎಂದಿಗೂ ನಿವರ್ತಿಸ ಕೂಡದ ಅಪಕೀರ್ತಿಯುಂಟಾಯಿತು ಎಂದು ಹೇಳಬೇಕಾಯಿತು. ಅವಳು ಸ್ಥಾಪಿಸ ಯತ್ನಯಿಸಿದ್ದ ಮತವು ಪೂರ್ಣವಾಗಿ ವ್ಯರ್ಥವಾಯಿತು. ಮತ್ತು ಅವಳು ಕೊಲ್ಲಿಸಿದ-ಸತ್ಯಸಾಕ್ಷಿಗಳ ರಕ್ತವು ಇಂಗ್ಲಿಷ್ ತಿರುಸಭೆಗೆ ನಾಟಿದ ಬೀಜವಾಗಿ ಉದಯಿಸಿತು.



# CHAPTER XVI.

## THE TRIUMPH OVER SPAIN.

FROM A. D. 1558 TO A. D. 1625.

# 16 ಸಂಧಿ.

## ಸ್ಪೇನ್ ದೇಶದ ಮೇಲೆ ಜಯ.

ಕ್ರಿ. ಶ. 1558 ಮೊದಲು ಕ್ರಿ. ಶ. 1625 ವರೆಗೂ.

ಮುಖ್ಯ ತಾರೀಖುಗಳು: (Elizabeth) ಎಲಿಸಬೇತ್ ರಾಣಿ 1558—1603 ಆಳಿದ್ದು. (James I) 1ನೇ ಜೇಮ್ಸ್ 1603—1625 ಆಳಿದ್ದು. ಅದೇ ಕಾಲದ ಇಂದ್ಯ ಚರಿತ್ರೆ: ಅಕ್ಬರ್ ಶೀರಿ ಹೋದದ್ದು 1605. (Sir Thomas Roe) ಸರ್ ತೋಮಸ್ ರೊ ಎಂಬವನು ಇಂಗ್ಲಾಂದಿನಿಂದ ರಾಯಭಾರಿಯಾಗಿ ಮೊಗಲು ರಾಜಸ್ಥಾನಕ್ಕೆ ಬಂದದ್ದು 1615. ಶ್ರೇಷ್ಠ ನಾಮಗಳು: (Shakspeare) ಶೇಕ್‌ಸ್ಪೀರ್ 1564—1616. (Calvin) ಕಾಲ್ವಿನ್ 1509—1564. (Knox) ನೊಕ್ಸ್ 1505—1572. (Galileo.) ಗಾಲಿಲೀಯೊ 1564—1642. (Kepler) ಕೆಪ್ಲೆರ್ 1571—1620. (Lord Bacon) ಲೊರ್ಡ್ ಬೇಕೊನ್ 1561—1626.

ಇದರ ತರುವಾಯ ಮೇರಿ ರಾಣಿಗೆ ಎಳೆಯವಳಾದ ಎಲಿಸಬೇತ್ ಕಿರೀಟ ಧರಿಸಲ್ಪಟ್ಟಾಗ ಇಂಗ್ಲಾಂದ್ ದೇಶದವರಿಗೆ ಉಂಟಾದ ಸಂತೋಷವೂ ಉತ್ಸಾಹವೂ ದೊಡ್ಡದಾಗಿತ್ತು. ಲಂದನ್ ಪಟ್ಟಣದಲ್ಲೆಲ್ಲಾ ಎದ್ದ ಬಾಣಗಳೂ ಮತಾಬುಗಳೂ ಆಕಾಶಬಾಣಗಳೂ, ಆ ಪಟ್ಟಣದ ನಿವಾಸಿಗಳ ಸಂತೋಷಕ್ಕೆ ಗುರುತಾಗಿತ್ತು. ಗುಡಿಗಳ ಘಂಟೆಗಳೆಲ್ಲಾ ಹಬ್ಬದ ಧ್ವನಿಯಂತೆ ನಾದಿಸಲ್ಪಟ್ಟವು. ಈ ಕಾರ್ಯವು ಜನಪ್ರತಿನಿಧಿ ಸಂಘದವರ ಮುಂದೆ ಹೇಳಲ್ಪಟ್ಟಾಗಲೇ, ಆ ಸಂಘದವರು ಆಸನಗಳನ್ನು ಬಿಟ್ಟೆದ್ದು "ಎಲಿಸಬೇತ್ ರಾಣಿಯು ಬಾಳಲಿ, ಸಾರ್ವದಾ ಬಾಳಲಿ" ಎಂದು ಆರ್ಭಟಿಸಿದರು. ಕಳೆದ ಐದು ವರುಷಕಾಲವಾಗಿ

# ಸಂಧಿ 16. ಎಲಿಸಬೇತ್ ರಾಣಿಯಾದದ್ದು.

ಇಂಗ್ಲಾಂಡ್ ದೇಶದವರೆಲ್ಲರಿಗೂ ಉಂಟಾದ ವಿಪತ್ತುಗಳೂ ಕ್ರೂರಗಳೂ ಎಲ್ಲಾ ನಿವಾರಣೆಯಾದವೆಂದು ಚಿಕ್ಕವರೂ ದೊಡ್ಡವರೂ ಆದ ಸಮಸ್ತ ಜನಗಳೂ ಸಂತೋಷ ಪಟ್ಟು ನಗೆಮುಖವುಳ್ಳವರಾದರು. ಹೀಗೆ ಆ ರಾಜಕನ್ನಿಕೆಯಾದವಳು ಆಗ ಅವರಿಗೆ ರಾಣಿಯಾದಳು. ಆ ಪಟ್ಟವನ್ನು ಅವಳು ಹೊಂದ ಕೂಡದೆಂದು ಅಡ್ಡಿ ಹೇಳುವವರು ಒಬ್ಬರೂ ಇಲ್ಲ.

ಆರನೇ ಎಡ್ವರ್ಡ್ ಅರಸನ ಕಾಲ ಮೊದಲ್ಗೊಂಡು ಪ್ರೊತೆಸ್ತಾಂತ್ ಸಭೆಯವರು ಬಹಳ ಅಭಿವೃದ್ಧಿಯಾಗುತ್ತಾ ಬಂದರು. ಆದಾಗ್ಯೂ ರೋಮನ್ ಸಭೆಗೆ ಸೇರಿದವರ ಸಂಖ್ಯೆಯು ಸಹ ದೊಡ್ಡದಾಗಿತ್ತು. ಇದರಿಂದ ಆ ಉಭಯ ಕಕ್ಷಿಗಳವರೂ ತಿದ್ದುಪಾಟಿನ ವಿಷಯದಲ್ಲಿ ರಾಣಿಯಾದವಳ ಮನಸ್ಸೂ ಕ್ರಿಯೆಯೂ ಹ್ಯಾಗಿರುವದೋ ಎಂದು ಆಶೆಯಿಂದ ನೋಡಿ ಕೊಂಡಿದ್ದರು. ಪ್ರಾರಂಭದಲ್ಲಿ ಅದನ್ನು ಅನುಸರಿಸಿ ಅವಳು ಮಾಡಿದ ಕಾರ್ಯಗಳು ಸ್ವಲ್ಪ ಅನುಮಾನವಾಗಿದ್ದವು. ಆದಾಗ್ಯೂ ಸ್ವಲ್ಪ ದಿವಸಗಳಲ್ಲಿಯೇ ಈ ವಿಷಯದಲ್ಲಿ ಅವಳಿಗೆ ಉಂಟಾಗಿದ್ದ ಗ್ರಾಹಿಕೆಯು ಬೈಲಾಯಿತು. ಹ್ಯಾಗಂದರೆ ಅವಳು ಸಿಂಹಾಸನವೇರಿದ ಸಂಗಡಲೇ ದೇವಾರಾಧನೆಯ ಕಾರ್ಯಗಳನ್ನು ತನ್ನ ಪ್ರಜೆಗಳಿಗೆ ಹುಟ್ಟುಭಾಷೆಯಾದ ಇಂಗ್ಲಿಷ್ ಭಾಷೆಯಲ್ಲಿಯೇ ಗುರುಗಳು ನಡಿಸ ಬೇಕೆಂದು ಕಟ್ಲೆ ಮಾಡಿದಳು. ಅದಕ್ಕೆ ಮುಂಚೆ ಗುರುಗಳಲ್ಲಿ ವಿದ್ವಾಂಸರಾದ ಕೆಲವರಿಗೆ ಮಾತ್ರ ತಿಳಿದದ್ದ ಲಾತಿನ್ ಭಾಷೆಯಲ್ಲಿ ಆ ಆರಾಧನೆಗಳು ನಡಿಸುವದುಂಟು. ಆದಾಗ್ಯೂ ತಿದ್ದುಪಾಟುಕಾರ್ಯವು ಮುಖ್ಯವಾಗಿ ಬೆಳಿಯುವದಕ್ಕೆ ಪಾಪುವಿನ ಅಹಂಕಾರವೇ ಕಾರಣವಾಗಿತ್ತು. ಹ್ಯಾಗಂದರೆ, ಎಲಿಸಬೇತಿನ ಪಟ್ಟಾಭಿಷೇಕದ ಸುದ್ದಿಯನ್ನು ಅವನು ಕೇಳಿದಾಗಲೇ, ಇವಳ ತಾಯಿ (Anna Boleyn) ಅನ್ನಾ ಬೋಲೀನ್ ಎಂಬವಳ ಮದುವೆಯು ನ್ಯಾಯವಾದದ್ದಲ್ಲವೆಂದು ಮುಂಚೆ ಇದ್ದ ಪಾಪು ಹೇಳಿದ್ದ ಕಾರಣ ಇವಳು ಸಹ ಸರಿಯಾದ ಮಗಳಲ್ಲವೆಂಬದಾಗಿಯೂ, ಹಾಗಿದ್ದಾಗ್ಯೂ ಅವಳು ಪೂರ್ಣವಾಗಿ ಪಾಪುವಿಗೆ ವಿಧೇಯಳಾಗಿ ಅವನು ಮಾಡ್ದುವದೇ ನ್ಯಾಯವೆಂದು ಒಪ್ಪುವವಳಾ

ದರೆ ಅವಳನ್ನು ಪಟ್ಟಕ್ಕೆ ಬಾಧ್ಯಳಂತೆ ಅಂಗೀಕರಿಸುವೆನೆಂಬದಾಗಿಯೂ ಹೇಳಿ ಕಳುಹಿಸಿದನು. ಇಷ್ಟಕ್ಕೆ ಆ ಪಾಪು ತೋರಿಸಿದ ಉಪಕಾರವು ಬೊಂಕಲ್ಪಟ್ಟಿತು. ಅದರ ತರುವಾಯ ಇಂಗ್ಲಾಂಡ್ ಶೀಮೆಯಲ್ಲಿ ಶಿದ್ಧುಪಾಟಿನ ಕಾರ್ಯವು ನಿಧಾನವಾಗಿಯೂ ದೃಢವಾಗಿಯೂ ಬಹು ವಿವೇಕದಿಂದಲೂ ಜ್ಞಾನದಿಂದಲೂ ನಡಿಸಲ್ಪಟ್ಟಿತು. ಆರಾಧನೆಯ ಕ್ರಮಗಳು ಶಿದ್ಧಲ್ಪಟ್ಟವು. ಸಭೆಯ ಕಾರ್ಯಗಳು ಕ್ರಮ ಪಡಿಸಲ್ಪಟ್ಟವು. ಅದು ಮೊದಲ್ಗೊಂಡು ಸಭೆಯ ಕಾರ್ಯಗಳಲ್ಲಾದರೂ ರಾಜ್ಯಕಾರ್ಯಗಳಲ್ಲಾದರೂ ಅನ್ಯ ದೇಶಾಧಿಪತಿಗಳು ಬಂದು ಕೈ ಹಾಕುವದಕ್ಕೆ ಸ್ಥಳವಿಲ್ಲ.

ಒಬ್ಬನ ಹೊರ್ತಾಗಿ ಮಿಕ್ಕಾದ ಅಧ್ಯಕ್ಷರೆಲ್ಲರೂ ಈ ಹೊಸ ಏರ್ಪಾಟುಗಳಿಗೆ ಸಮ್ಮತಿಸಲಿಲ್ಲ. ಅದರಿಂದ ಹೊಸದಾಗಿ ಕಾನ್‌ತರ್‌ಬರಿ ಪಟ್ಟದ ಶ್ರೇಷ್ಠ ಅಧ್ಯಕ್ಷನಾಗಿ ನೇಮಿಸಲ್ಪಟ್ಟ (Matthew Parker) ಮತ್ತಾಯ ಪಾರ್ಕರ್ ಎಂಬವನು ಅವರಿಗೆ ಬದಲಾಗಿ ಬೇರೆ ಮನುಷ್ಯರನ್ನು ಸ್ಥಾಪಿಸಲು ಈ ವಿಧವಾಗಿ ಶಿದ್ಧುಪಾಟಿನ ಕಾರ್ಯವು ದೇಶವೆಲ್ಲೆಲ್ಲಿಯೂ ನಡಿಯುತ್ತಾ ಬಂತು. ಸಭೆಯ ಮುಖ್ಯಾಧಿಕಾರವು ರಾಣಿಗೆ ಮಾತ್ರ ಸ್ವಂತವಾದದ್ದೆಂದೂ, ಸಭೆಯಿಂದ ವಿಧಿಸಲ್ಪಟ್ಟ ಆರಾಧನೆಯ ಕ್ರಮಕ್ಕೆ ಸಮಸ್ತ ಜನರೂ ಒಳ ಪಡ ಬೇಕೆಂದೂ ಪಾರ್ಲಿಮೆಂಟಿನವರು ಪ್ರಮಾಣಗಳನ್ನು ಏರ್ಪಡಿಸಿದರು. ಹೀಗೆ ಪಾರ್ಲಿಮೆಂಟಿನವರು ಕೊಟ್ಟ ಅಧಿಕಾರವನ್ನು ಕ್ರಮವಾಗಿ ನಡಿಸುವದಕ್ಕೂ ಸಭೆಯ ವಿಷಯಗಳಲ್ಲಿ ತೀರ್ಪು ಮಾಡುವದಕ್ಕೂ "ಕಮ್ಮಿಷನ್" ಎಂದು ಅರಸಿಯಿಂದ ಅಧಿಕಾರ ಹೊಂದಿದ ಸಭೆ ಸ್ಥಾಪಿಸಲ್ಪಟ್ಟಿತು. ಈ ಸಭೆಯವರಿಂದ ಆ ತರುವಾಯ ಅನೇಕರಿಗೆ ಇಕ್ಕಟ್ಟುಗಳುಂಟಾದವು. ಅಂದಿನಿಂದ ಇಂಗ್ಲಾಂಡ್ ಸಭೆಯು ರೋಮನ್ ಸಭೆಯನ್ನು ಪೂರ್ಣವಾಗಿ ಬಿಟ್ಟು ಅಗಲಿ ಹೋಯಿತು.

(Act of Uniformity) "ಸಾಮಾನ್ಯ ಏರ್ಪಾಟು" ಎಂಬುವ ಒಂದು ಕಟ್ಟಳೆಯು ಆ ಕಾಲದಲ್ಲಿ ಪ್ರಸಿದ್ಧ ಮಾಡಲ್ಪಟ್ಟಿತು. ಅದರಲ್ಲಿ ಎರಡು ಬಗೆಯಾದವರು ಎಣಿಸಲ್ಪಟ್ಟಿದ್ದರು. ಅವರು ಯಾರಂದರೆ, ರೋಮನ್ ಸಭೆಯವರೂ; ಇಂಗ್ಲಾಂಡಿನಲ್ಲಿ ಶಿದ್ಧುಪಾಟು ಪೂರ್ಣ

ವಾಗಿ ನಡಿಯಲಿಲ್ಲ, ಇನ್ನೂ ಕೆಲವನ್ನು ತಿದ್ದ ಬೇಕೆಂದು ಎಣಿಸಿದವರೂ ಆದವರೇ. ಈ ನೆನವುಳ್ಳವರು ಬೇರೆ ಬೇರೆ ಅಭಿಪ್ರಾಯಗಳುಳ್ಳವರಾಗಿದ್ದಾಗ್ಯೂ, ಸಾಧಾರಣವಾಗಿ ಅವರು ಇಂಗ್ಲಿಷ್ ಸಭೆಯು ಪೂರ್ಣವಾಗಿ ಪರಿಶುದ್ಧವಾಗಲಿಲ್ಲವೆಂದು ನೆನಸಿದ್ದರಿಂದ "ಶುದ್ಧರು" ಎಂಬ ಅರ್ಥವುಳ್ಳ (Puritans) "ಪ್ಯೂರಿತಾನರು" ಎಂಬ ಹೆಸರನ್ನು ಧರಿಸಿಕೊಂಡರು. ಇವರ ಸಂಖ್ಯೆಯು ಹೆಚ್ಚಲಾಗಿ ಆ ದೇಶದಲ್ಲಿ ಅವರು ಬಹು ಬಲವಾದ ದೊಡ್ಡ ಕಕ್ಷಿಯವರಾದರು.

ಎಲಿಸಬೇತ್ ರಾಣಿಯು ತಾನು ಆಳ ಪ್ರಾರಂಭಿಸಿದ ದಿವಸದಿಂದ ಜ್ಞಾನವೂ ವಿಸ್ತಾರವಾದ ತಿಳುವಳಿಕೆಯೂ ಉಳ್ಳ ಮಂತ್ರಿಗಳನ್ನು ಇಟ್ಟುಕೊಂಡು, ಅವರು ಹೇಳಿದ ಆಲೋಚನೆಯಲ್ಲಿ ನಿಂತು ನಡೆದಳು. ಆ ಮಂತ್ರಿಗಳಲ್ಲಿ (Lord Burleigh) ಬರ್ಲೆ ಪ್ರಭು ಎಂಬ ಪಟ್ಟವನ್ನು ತರುವಾಯ ಹೊಂದಿದವನಾದ (Sir William Cecil) ಸರ್ ವಿಲ್ಲಿಯಮ್ ಸೆಸಿಲ್ ಎಂಬ ಹೆಸರನ್ನು ಹೊಂದಿದವನೇ ಅಧಿಕ ಪ್ರಬಲಕ್ಕೆ ಬಂದವನು. ಸಂಸ್ಥಾನಕ್ಕೆ ತಕ್ಕ ಅನೇಕ ವಿಷಯಗಳನ್ನು ರಾಣಿಯೇ ಇದ್ದುಕೊಂಡು ನಡಿಸಿದಳು. ಅವಳ ತಂದೆಯಾದ ಅರಸನಂತೆಯೇ ಅವಳು ಸಹ ನಾನಾ ಸಮಯಗಳಲ್ಲಿ ಕ್ರೂರವಾದ ಆಜ್ಞೆಗಳನ್ನು ಹುಟ್ಟಿಸುವವಳಾಗಿದ್ದಾಗ್ಯೂ, ಆ ಆಜ್ಞೆಗಳು ಜನರಿಗೆ ಇಷ್ಟವಿಲ್ಲವೆಂದು ಗ್ರಹಿಸಿದರೆ, ಎಚ್ಚರಿಕೆಯಾಗಿಯೂ ವಿವೇಕವಾಗಿಯೂ ಆ ಆಜ್ಞೆಗಳನ್ನು ಮಾರ್ಪಡಿಸಿ, ಆ ಆಜ್ಞೆಗಳನ್ನು ಬದಲು ಮಾಡುವವಳಂತೆ ತೋರಿಸದೆ, ಪ್ರಜೆಗಳಿಗೆ ಯಾವದೋ ಒಂದು ಉಪಕಾರವನ್ನು ಮಾಡುವವಳಂತೆ ತೋರ ಮಾಡುವ ಬಹು ರಾಜತಂತ್ರವೂ ಅವಳಿಗೆ ಇತ್ತು. ಚಿಕ್ಕ ವಯಸ್ಸಿನಲ್ಲಿಯೇ ತಾನು ವಿವಾಹಸ್ಥಿತಿಯಲ್ಲಿ ಒಳಪಡುವದಕ್ಕೆ ಮನಸ್ಸಿಲ್ಲದೆ "ಕನ್ಯರಾಣಿ" ಆಗಿದ್ದು ಸಾಯ ಅಪೇಕ್ಷಿಸುತ್ತೇನೆಂದು ಹೇಳಿದಳು. ಅನೇಕ ಅನ್ಯದೇಶಗಳ ರಾಜಪುತ್ರರು ಅವಳನ್ನು ಮದುವೆ ಮಾಡ ಅಪೇಕ್ಷಿಸಿದರು. ಸತ್ತು ಹೋದ ಅವಳ ಅಕ್ಕನ ಗಂಡನಾದ ಫಿಲಿಪ್ ಅರಸನು ಅಂಥಾ ವಾಂಛೆಯುಳ್ಳವನಾಗಿದ್ದನು. ಅವಳು ಆಗದೆಂದು ಹೇಳಿದ ಮೇಲೆ ಅವನು ಬಹಳ ಕೋಪಗೊಂಡನು.

## ಸಂಧಿ 16. ಸ್ಕೊತ್ಲಾಂದಿನ ರಾಣಿಯಾದ ಮೇರಿಯು.

ಎಲಿಸಬೇತ್ ರಾಣಿಗೆ ನಾದಿನಿಯಾದ ಸ್ಕೊತ್ಲಾಂದ್ ಅರಸಿಯಾದ ಮೇರಿ ಎಂಬವಳಿದ್ದಳು. ಇವಳು ಮೇರಿ ಎಂಬುವ ಇಂಗ್ಲಾಂದ್ ದೇಶದ ರಾಣಿ ಸತ್ತ ಕಾಲದಲ್ಲಿ ತನ್ನನ್ನೇ ಇಂಗ್ಲಾಂದ್ ರಾಣಿ ಎಂದು ಹೇಳಿ ಕೊಂಡವಳು. ಇದರಿಂದ ಎಲಿಸಬೇತ್ ರಾಣಿಯು ಆಳ ಪ್ರಾರಂಭಿಸಿದ ಕಾಲದಲ್ಲಿ ಅವಳ ಮೇಲೆ ಮನೋವ್ಯಸನ ಪಟ್ಟಿದ್ದಳು. ಇದಲ್ಲದೆ ಸ್ಕೊತ್ಲಾಂದಿನಲ್ಲಿ ತಿದ್ದುಪಾಟಿನ ಕಾರ್ಯವು ಬಹುಶಾ ಬೆಳೆಯುತ್ತಾ ಬಂದದರಿಂದಲೂ, ಮೇರಿ ಎಂಬವಳು ರೋಮನ್ ಸಭೆಯವಳಾದದರಿಂದಲೂ, ಅವಳ ಪ್ರಜೆಗಳಲ್ಲಿ ಹೆಚ್ಚಾದ ಸಂಖ್ಯೆಯುಳ್ಳ ಜನರು ಅವಳ ಮೇಲೆ ದ್ವೇಷ ಪಟ್ಟಿದ್ದರು. ತನ್ನ ಗಂಡನಾದ ಫ್ರಾನ್ಸ್ ಅರಸನು ಸತ್ತ ತರುವಾಯ ಅವಳು ಸ್ಕೊತ್ಲಾಂದಿಗೆ ಬಂದಾಗ ಅವಳ ಜನರಲ್ಲಿ ಅನೇಕರು ಅವಳನ್ನು ನಿರ್ಭಯವಾಗಿ ಎದುರಿಸಿ ಕಲಹ ಮಾಡಿದರು. ಈ ಬಗೆಯಲ್ಲಿ ಅನೇಕ ವರುಷಗಳ ಮಟ್ಟಿಗೂ ಬಹಳ ತೊಂದರೆಯೂ ಕಸ್ಟಿಯೂ ಪಟ್ಟು, ನಾನಾ ಮಾರುವೇಷಗಳೆಲ್ಲಾ ಹಾಕಿ ಕೊಂಡು ಕಡೆಯಲ್ಲಿ ಇಂಗ್ಲಾಂದಿಗೆ ಹೋಗಿ ಆಶ್ರಯ ಹೊಂದಿದಳು. ಎಲಿಸಬೇತ್ ರಾಣಿಯು ಅವಳಿಗೆ ಸ್ವಲ್ಪವಾದರೂ ಉಪಚಾರ ಮಾಡದೆ ಇದ್ದಳು. ಮತ್ತು ಆ ಪರಿತಾಪವಾದ ಅರಸಿಯ ನಿರ್ವಾಹಗಳ ವಿಷಯ ಕರುಣಿಸಿ ಅವಳಿಗೆ ಮರ್ಯಾದೆ ಮಾಡ ಬೇಕಾಗಿರುವಲ್ಲಿ ಅವಳನ್ನು ಮರಣದ ಮಟ್ಟಿಗೂ ಶೆರೆಯಲ್ಲಿ ಹಾಕಿದಳು. ಹೀಗೆ ಎಲಿಸಬೇತ್ ರಾಣಿಯು ಮಾಡಿದ ಕಾರ್ಯವು ಒಂದು ವೇಳೆ ಅವಳ ಧೊರೆತನವನ್ನು ಬಲ ಪಡಿಸುವದಕ್ಕೆ ಅವಶ್ಯವಾಗಿದ್ದರೂ ಅದು ಧರ್ಮವಲ್ಲವಷ್ಟೆ.

ರಾಣಿಯಾದ ಎಲಿಸಬೇತಳು ಆಳಿದ ಮೊದಲನೇ ಹತ್ತು ವರುಷಗಳಲ್ಲಿ ರಾಜ್ಯದಲ್ಲಿ ಯಾವದೊಂದು ಕಲಾಪನೆಯೂ ಕಲಹವೂ ಉಂಟಾಗಲಿಲ್ಲ. 1569ನೇ ವರುಷದಲ್ಲಿ (Duke of Norfolk) ನೊರ್ಫೋಲ್ಕ ದ್ಯೂಕ್ ಪ್ರಭುವಾದವನು ಸ್ಕೊತ್ಲಾಂದ್ ಅರಸಿಯಾದ ಮೇರಿ ಎಂಬವಳನ್ನು ಮದುವೆ ಮಾಡಿ ಕೊಳ್ಳುವ ಹಾಗೆ ಒಂದು ಉಪಾಯ ಮಾಡಿದನು. ಆ ಉಪಾಯವು ಭಂಗವಾಗಿ ಆ ದ್ಯೂಕ್ ಪ್ರಭುವು ಕೋಟೆಯ ಶೆರೆಯಲ್ಲಿ ಹಾಕಲ್ಪಟ್ಟನು. ಅದರ ತರುವಾಯ ಇಂಗ್ಲಾಂದಿನ

ಉತ್ತರ ಕಡೆಯಲ್ಲಿ ಒಂದು ಕಲಹ ಉಂಟಾಯಿತು. ಅದು ಸಹ ಸಂಗ
ಡಲೇ ಅಣಗಿಸಲ್ಪಟ್ಟಿತು. ಆ ಕಲಹಕ್ಕೆ ತಲೆಯಾದವನು ಸಹಾಯಕ್ಕೋ
ಸ್ಕರ ಸ್ಪೇನ್ ದೇಶಕ್ಕೆ ಓಡ ಹೋಗಿದ್ದನು. ಈ ಪ್ರಕಾರವಾಗಿ ಆ ಅರಸಿ
ಯ ಕಾಲದಲ್ಲಿ ಬಿದ್ದ ಕಲಹಗಳಲ್ಲೆಲ್ಲಾ ಕಲಹಗಾರರು ಸ್ಪೇನ್ ದೇಶದ
ಲ್ಲಿ ಸಹಾಯ ಹುಡುಕುವದು ಬಳಿಕೆಯಾಗಿತ್ತು. ರೋಮನ್ ಸಭೆಗೆ
ಶೇರಿದವರು ತಮ್ಮ ಸಭೆಯ ಆರಾಧನೆಗಳನ್ನು ಮತ್ತೂ ಸ್ಥಾಪಿಸಲೂ,
ಸ್ಕೊತ್ಲಾಂದ್ ಅರಸಿಯಾದ ಮೇರಿಯನ್ನು ಬಿಡಿಸಲೂ ಎಣಿಸಿ ಅವರೇ
ಇಂಥ ಕಲಹಗಳನ್ನು ಸಾಧಾರಣವಾಗಿ ಎಬ್ಬಿಸುವವರು. ಹೀಗೆ ಮೇಲೆ
ಹೇಳಿದ ಮೇರಿ ಅರಸಿಯ ಸ್ಥಿತಿಯು ಕಲಹಕ್ಕೆ ಕಾರಣವಾಯಿತು. ಮ
ತ್ತು ಎಲಿಸಬೇತ್ ರಾಣಿಯನ್ನು ಸ್ನೇಹಿಸದೆ ಕಲಹ ಮಾಡ ಅಪೇಕ್ಷಿಸಿದ
ವರ ಬಾಯಿಯಲ್ಲಿ ಮೇರಿ ಎಂಬುವದು ಯಾವಾಗಲೂ ಉಚ್ಚರಿಸುವ
ಮಾತಾಯಿತು. ಎಲಿಸಬೇತಳಿಗೆ ವಿರೋಧವಾಗಿ ಉಂಟಾದ ಕೇಡಾ
ಲೋಚನೆಗಳಲ್ಲಿ ಅವಳು ಸಹ ಶೇರಿದವಳೆಂದು ಎಣಿಸಲ್ಪಟ್ಟಿದ್ದದರಿಂದ
ಆ ಮೋಸಗಳೆಲ್ಲಾ ನಾಶವಾದ ತರುವಾಯ ಶೆರೆಯಾಗಿದ್ದ ಅರಸಿಯ
ನ್ನು ಕೊಂದು ಇನ್ನು ಮೇಲೆ ಕಲಹ ಉಂಟಾಗದಂತೆ ಅದನ್ನು ಬೇ
ರೊಂದಿಗೆ ಕಿತ್ತು ಹಾಕ ಬೇಕೆಂದು ರಾಣಿಯೂ ಅವಳ ಮಂತ್ರಿಗಳೂ ನಿ
ರ್ಣಯಿಸಿದರು. ಆದದರಿಂದ ಆ ಬಡ ಅರಸಿಯು 1587ನೇ ವರುಷ ಫೆ
ಬ್ರವರಿ ತಿಂಗಳ 8ನೇ ತಾರೀಖಿನಲ್ಲಿ ಶಿರಚ್ಛೇದ ಮಾಡಲ್ಪಟ್ಟಳು. ಮಾ
ಯವಿದ್ಯೆಗಳು ಮಾಡುವದು ಎಲಿಸಬೇತ್ ರಾಣಿಗೆ ಬಳಿಕೆಯಾಗಿದ್ದದ
ರಿಂದ ಈ ಸಮಯದಲ್ಲಿ ಅವಳು ತೋರಿಸಿದ ವ್ಯಸನವು ಯಥಾರ್ಥವಾ
ದದ್ದೆಂದು ನಾವು ತಿಳಿದು ಕೊಳ್ಳುವದಕ್ಕೆ ಸ್ಥಳವಿಲ್ಲ. ತನ್ನ ನಾದಿನಿ ಸಾ
ಯ ಬೇಕಾದದ್ದು ಅಸಂದರ್ಭವಾದ ಅವಶ್ಯಕವೆಂದು ಅವಳು ಬಹುಶಾ
ವ್ಯಸನವೂ ದುಃಖವೂ ಉಳ್ಳವಳಂತೆ ತೋರಿಸಿದಳು. ಆದಾಗ್ಯೂ ಬಹ
ಳ ದಿವಸಗಳಿಂದ ತನ್ನ ಆಧೀನವಾಗಿದ್ದ ಆ ಶೆರೆಯವಳನ್ನು ಹೊಟ್ಟೆಕಿಚ್ಚಿ
ನಿಂದ ನಡಿಸಿದ ಅಪರಾಧವು ಅವಳದೇ. ಮತ್ತು ಆ ನಿರ್ಭಾಗ್ಯವುಳ್ಳ ಅ
ರಸಿಯನ್ನು ಕೊಲ್ಲುವ ಕ್ರೂರತ್ವವಿಲ್ಲದೆ ತನ್ನ ರಾಜ್ಯದಲ್ಲಿ ಉಂಟಾದ ಸಕ
ಲ ವಿಧ ಕಲಾಪನೆಗಳನ್ನು ಅಣಗಿಸಿ ಬಿಡುವದಕ್ಕೆ ಅವಳಿಗೆ ಶಕ್ಯ ಬಲವಿತ್ತು.

ಇಂಗ್ಲಿಷರಿಗೂ ಸ್ಪಾನಿಯರಿಗೂ ಬಹು ದಿವಸಗಳಿಂದ ಉಂಟಾಗಿದ್ದ ವೈರವು ಈಗ ಅಘೋರವಾಗುವದಕ್ಕೆ ಪ್ರಾರಂಭವಾಯಿತು. ಹ್ಯಾಗಂದರೆ ಸ್ಪಾನಿಯರು ಆ ಕಾಲದಲ್ಲಿ ಭೂಲೋಕದಲ್ಲೆಲ್ಲಾ ಮೊದಲನೇ ಹೆಸರ್ವಾಶಿಯುಳ್ಳವರಾಗಿದ್ದರು. ಅವರ ಅರಸರಲ್ಲಿ ಒಬ್ಬನು ಸ್ವಲ್ಪ ದಿವಸಗಳಿಗೆ ಮುಂಚೆ ಜರ್ಮನಿ ರಾಜ್ಯವನ್ನು ಆಳಿದವನು. ಯೂರೋಪಿನಲ್ಲಿ ದೊಡ್ಡ ಭಾಗವು ಅವರ ಮಿರಾಶಿಯಾಗಿತ್ತು. ಅಮೇರಿಕ ಎಂಬುವ ಹೊಸ ಖಂಡವನ್ನು ಮೊದಲು ಒಕ್ಕಲು ಸೇರಿಸಿದವರು ಅವರೇ. (Mexico) ಮೆಕ್ಸಿಕೋ (Peru) ಪೆರು ಎಂಬ ಸೌಖ್ಯವಾದ ಸೀಮೆಗಳಲ್ಲಿ ಅವರ ಧೊರೆತನ ನಡಿಯುತ್ತದೆ. ಅವರ ಹಡಗಗಳು ಎಲ್ಲಾ ಸಮುದ್ರಗಳಲ್ಲಿಯೂ ಸಂಚಾರ ಮಾಡುತ್ತವೆ. ಹಿಂದೂ ದೇಶದ ಸ್ವರ್ನಾಭರಣಗಳೆಲ್ಲಾ ಅವರ ಸೀಮೆಯ ಧಡದಲ್ಲಿ ವ್ಯಾಪಾರಕ್ಕಾಗಿ ಬಂದು ಬೀಳುತ್ತವೆ. ಹೀಗಿರಲಾಗಿ ಇಂಗ್ಲಿಷಿನವರು ಸಹ ಸಮುದ್ರದ ಮೇಲೆ ತಮ್ಮ ಅಧಿಕಾರ ನಡಿಸ ಪ್ರಾರಂಭಿಸಿದರು. ಇಂಗ್ಲಿಷ್ ನಾವಿಕರು ಸಹ ನೂತನವಾದ ಭೂಮಿಗಳನ್ನು ಕಂಡು ಹಿಡಿದಿದ್ದರು. ಇಂಗ್ಲಿಷ್ ನಾವಿಕರೇ ಮೊದಲು ಭೂಗೋಳವನ್ನು ಸುತ್ತಿ ಯಾತ್ರೆ ಮಾಡಿದವರು. ಇಂಗ್ಲಿಷ್ ನಾವಿಕರು ಆಗಾಗ್ಯೆ ಸ್ಪಾನಿಯ ನಾವಿಕರನ್ನು ಸಮುದ್ರದ ಮೇಲೆ ಎದುರಿಸಿದರು. ಸ್ಪಾನಿಯರು ಇಂದಿಯರಿಗೆ ತೋರಿಸಿದ ಕ್ರೂರದಿಂದಲೂ ತಮಗೆ ತೋರಿಸಿದ ಅಹಂಕಾರದಿಂದಲೂ ಇಂಗ್ಲಿಷಿನವರು ಬಹು ಕೋಪಗೊಂಡರು. ಹೀಗೆ ಆ ಎರಡು ಜಾತಿಗಳಿಗೂ ಆಗಾಗ್ಯೆ ಝುಗಳಗಳು ಉಂಟಾಗುವವು. ಆ ಝುಗಳಗಳಲ್ಲಿ ಸಾಧಾರಣವಾಗಿ ಇಂಗ್ಲಿಷರೇ ಜಯಿಸುವರು. ಇಂಗ್ಲಿಷಿನವರ ಹಡಗಗಳು ಸ್ಪಾನಿಯರ ನಾವೆಗಳಿಗಿಂತ ಚಿಕ್ಕವುಗಳೂ, ತೇಲುವದಕ್ಕೆ ಲೇಸಾದವುಗಳೂ. ಮತ್ತು ಅವು (Hawkins) ಹಾಕಿನ್ (Drake) ಡ್ರೇಕ್ (Raleigh) ರಾಲೆ ಎಂಬ ಹೆಸರ್ವಾಶಿಯಾದ ನಾವಿಕರಿಂದ ನಡಿಸಲ್ಪಟ್ಟವು. ಮತ್ತು ಅವು ಯಾವದನ್ನಾದರೂ ಮಾಡುವದಕ್ಕೂ ಎಲ್ಲಾ ಕಾರ್ಯಗಳಿಗೂ ತೃಣೀಕರವೂ ಧೈರ್ಯವಾದ ಮನಸ್ಸೂ ಉಳ್ಳ ವೀರರಾದ ಹಡಗದವರಿಂದ ತಿರುಗಿಸಲ್ಪಟ್ಟವು. ಹೀಗೆ ಗೊತ್ತಿಲ್ಲದೆ ಇಲ್ಲಿಯೂ ಅಲ್ಲಿಯೂ ಉಂಟಾಗುವ ಝುಗಳವನ್ನು ತೀರಿಸಿ

ಮುಗಿಸ ಬೇಕೆಂದು ಸ್ಪಾನಿಯ ಅರಸನು ಬಹು ಯುದ್ಧಸಾಧನೆಗಳನ್ನು ಮಾಡಿ ಕೊಂಡಿದ್ದಾನೆಂದು ಇಂಗ್ಲಾಂದಿನಲ್ಲಿ ಬಹು ದಿವಸಗಳ ಮಟ್ಟಿಗೂ ಸುದ್ದಿಯಾಗಿತ್ತು. ಆ ಉಭಯ ದೇಶಗಳವರೂ ತಮ್ಮ ತಮ್ಮ ಬಲವನ್ನು ಪರೀಕ್ಷೆ ಮಾಡುವದಕ್ಕೆ ಆಶೆಯಾಗಿದ್ದರು. ಅದಾಗ್ಯೂ ಆ ಯುದ್ಧ ಉಂಟಾದ ಗುರಿಯನ್ನು ನೋಡಿದರೆ ಅದು ಆಳಿಕೇ ವಿಷಯವಾದ ಯುದ್ಧವಲ್ಲ. ರೋಮನ್ ಸಭೆಗೂ ಪ್ರೊತೆಸ್ತಾಂತ್ ಸಭೆಗೂ ಉಂಟಾದ ಮತದ್ವೇಷದ ಯುದ್ಧವಾಗಿ ಮುಗಿಯಿತು, ಇದು ಅಂಧಕಾರಯುಗದ ದಾಸತ್ವವೆಂಬದು ಕೂಡಿ ಕೊಂಡು ಒಂದು ರೂಪದಿಂದ ಎದ್ದು ಬಂದು, ಇಂಗ್ಲಿಷಿನವರು ಮೊದಲು ನಿಂತು ಸಹಿಸಿದ ಹೊಸ ಯುಗದ ಸ್ವಾಧೀನದ ಸಂಗಡ ಝುಗಳಕ್ಕೆ ನಿಂತ ಹಾಗೆ ಕಾಣಲ್ಪಟ್ಟಿತು.

ಸ್ಪಾನಿಯರಿಗೆ ವಿರೋಧವಾಗಿ ನೆದರ್ಲಾಂದ್ ಶೀಮೆಯವರಿಗೆ ರಾಣಿಯು ಸಹಾಯ ಮಾಡಿದ್ದರಿಂದ ಸ್ಪೇನ್ ಅರಸನು ಇಂಗ್ಲಿಷಿನವರ ಸಂಗಡ ಯುದ್ಧ ಮಾಡುವದಕ್ಕೆ ಅದೇ ಕಾರಣವಾಯಿತು. ನೆದರ್ಲಾಂದಿನಲ್ಲಿದ್ದ ಇಂಗ್ಲಿಷರ ಸೈನ್ಯವನ್ನು ನಡಿಸಿದವನು ರಾಣಿಯ ಇಷ್ಟನಾದ (Earl of Leicester) ಲೆಸ್ತರ್ ಎರ್ಲ್ ಪ್ರಭುವಾದವನೇ. ಅವನು ಯುದ್ಧಕ್ಕೆ ಏನೂ ಕೆಲಸಕ್ಕೆ ಬಾರದ ಸೈನ್ಯಾಧಿಪತಿಯಾಗಿದ್ದನು. ಅದಾಗ್ಯೂ ಆ ರಾಣುವೆಯಲ್ಲಿ ವೀರತ್ವವುಳ್ಳ ಅನೇಕ ಧೊರೆಮಕ್ಕಳಿದ್ದರು. ಅವರಲ್ಲಿ (Sir Philip Sidney) ಸರ್ ಫಿಲಿಪ್ ಸಿದ್ನಿ ಎಂಬವನು ಎಂದಿಗೂ ಸ್ಥಿರವಾದ ಕೀರ್ತಿಯುಳ್ಳವನಾಗಿದ್ದನು. ಅವನು ರಣರಂಗದಲ್ಲಿ ಘಾಯ ಪಟ್ಟು ಏಳಲಾರದೆ ಬಿದ್ದಿರುವಾಗ ಶುದ್ಧ ಶೌರ್ಯಕ್ಕೆ ಸ್ವಭಾವಿಕವಾದ ಪರೋಪಕಾರವನ್ನು ತೋರಿಸಿದ್ದು ಹ್ಯಾಗಂದರೆ, ಅವನಿಗೆ ದಾಹಕ್ಕೆ ಸ್ವಲ್ಪ ನೀರು ತರಲ್ಪಟ್ಟಾಗ ತನ್ನ ಸಮೀಪದಲ್ಲಿ ಯುದ್ಧವೀರನೊಬ್ಬನು ಮರಣಾವಸ್ಥೆಯಲ್ಲಿರುವದನ್ನು ಕಂಡು ಅವನಿಗೆ ಕೊಡಿರಿ; ಅವನ ಆಪತ್ತು ನನ್ನದಕ್ಕಿಂತ ದೊಡ್ಡದು ಎಂಧೇಳಿ, ಆ ಪಾತ್ರೆಯನ್ನು ಕೈಯಿಂದ ಮೆಲ್ಲಗೆ ತನ್ನ ಬಾಯಿಯಿಂದ ದೂರ ಮಾಡಿದನಂತೆ.

ಇಂಗ್ಲಾಂದನ್ನು ಘುಶ್ತಿಗೆ ಹಾಕುವದಕ್ಕೆ ಬಲವಾದ ನಾವಿಕಸೈನ್ಯವನ್ನು ಸಿದ್ಧ ಮಾಡಿದ ಸಾಧನೆಗಳು ಅನೇಕ ತಿಂಗಳುಗಳಾಗಿ ಸ್ಪೇನ್

ದೇಶದ ಧಡಗಳಲ್ಲೆಲ್ಲಿಯೂ ಜಾಗ್ರತೆಯಾಗಿ ನಡಿಯುತ್ತಾ ಬಂದವು. ಆ ಹಡಗಗಳಲ್ಲಿ ದೊಡ್ಡ ರಾಣುವೆಯೂ ನೆದರ್ಲಾಂದಿನಿಂದ ಮತ್ತೊಂದು ರಾಣುವೆಯೂ ಕೂಡ ಬಂದು ಸಹಾಯ ಮಾಡಲೂ ಗೊತ್ತು ಮಾಡಲ್ಪಟ್ಟಿತ್ತು. ಇದರ ಮಧ್ಯೆ ಇಂಗ್ಲಾಂದಿನಲ್ಲಿಯೂ ಯುದ್ಧಸಾಧನೆಗಳು ಮಾಡಲ್ಪಡದೆ ಇರಲಿಲ್ಲ. ಇಂಗ್ಲಾಂದಿನ ಧಡವನ್ನು ಸಮೀಪಿಸಿ ಒಬ್ಬ ಶತ್ರು ಬರುತ್ತಾನೆಂಬ ಶಬ್ದವನ್ನು ಕೇಳಿದ ಕೂಡ್ಲೆ ಕಲಾಪನೆ ಎಂಬ ಹೆಸರೇ ಇಲ್ಲದೆ ಹೋಯಿತು. ರೋಮನ್ ಸಚೆ ಪ್ರೊತೆಸ್ತಾಂತ್ ಸಚೆ ಎಂಬ ಮತಕಕ್ಷಿಗಳೂ ನಿವರ್ತಿಯಾದವು. ಎಲ್ಲರಿಗೂ ತಮ್ಮ ಜನನದೇಶದ ಮೇಲೆ ಒಂದೇ ಅಭಿಮಾನ ಉಂಟಾಯಿತು. ಆಯುಧಗಳನ್ನು ಹಿಡಿಯ ತಕ್ಕ ವಯಸ್ಸೂ ತ್ರಾಣವೂ ಉಳ್ಳ ಒಬ್ಬೊಬ್ಬ ಇಂಗ್ಲಿಷಿನವನು ಸಹ ಸ್ವದೇಶವನ್ನು ಕಾಯ ಸಿದ್ಧವಾದನು. ನಾನಾ ನಾಡುಗಳಲ್ಲಿಯೂ ದಂಡುಗಳು ಕೂಡಿಸಲ್ಪಟ್ಟವು. ಥೇಮ್ಸ್ ನದಿಗೆ ಶೇರಿದ (Tilbury) ತಿಲ್ಬರಿ ಊರಿನ ಬಳಿಯ ರಾಜಧಾನಿಯನ್ನು ಕಾಯುವದಕ್ಕಾಗಿ ಒಂದು ದೊಡ್ಡ ಸೈನ್ಯವು ನಿಲ್ಲಿಸಲ್ಪಟ್ಟಿತು. ತಿಲ್ಬರಿಯಲ್ಲಿ ನಿಂತ ಆ ಫೌಜುಗಳ ಮಾರ್ಗವಾಗಿ ಎಲಿಸಬೇತ್ ರಾಣಿಯು ತಾನೇ ಕುದುರೆಸವಾರಿ ಮಾಡಿ ತನ್ನ ಸಮ್ಮುಖದಿಂದ ಯುದ್ಧವೀರರಿಗೆ ಧೈರ್ಯ ಕೊಟ್ಟು, ಅವರನ್ನು ನೋಡಿ, "ರಣರಂಗದಲ್ಲಿ ನಿಮ್ಮ ನಡುವೆ ಇದ್ದು ನನ್ನ ದೇವರಿಗಾಗಿಯೂ, ನನ್ನ ರಾಜ್ಯಕ್ಕಾಗಿಯೂ, ನನ್ನ ದೇಶದ ಪ್ರಜೆಗಳಿಗಾಗಿಯೂ, ಪ್ರಾಣವುಳ್ಳ ಮಟ್ಟಿಗೂ ಯುದ್ಧ ಮಾಡ ತೀರ್ಮಾನಿಸಿದ್ದೇನೆ. ಬಲಹೀನವಾದ ಸ್ತ್ರೀ ಶರೀರವು ನನಗಿದ್ದಾಗ್ಯೂ ಅದರಲ್ಲಿ ಅರಸುತನದ ಮನಸ್ಸುಂಟು. ಹಾದು, ಇಂಗ್ಲಾಂದ್ ದೇಶವನ್ನು ಆಳುವ ಅರಸನ ಮನಸ್ಸೇ ಉಂಟು" ಎಂದು ಹೇಳಿದಳು. ಆದಾಗ್ಯೂ ಪದಾತಿಸೈನ್ಯಕ್ಕಿಂತ ನಾವಿಕಸೈನ್ಯದಲ್ಲಿಯೇ ಇಂಗ್ಲಾಂದಿನವರಿಗೆ ಅಧಿಕ ಬಲವಿತ್ತು. ಅವುಗಳಲ್ಲಿ ಮುಕ್ಕಾಲುವಾಶಿ ಹಡಗಗಳು (Plymouth) ಪ್ಲಿಮೌತ್ ರೇವಿನಲ್ಲಿ ನಿಲ್ಲಿಸಲ್ಪಟ್ಟಿದ್ದವು. (Ephingham) ಎಫ್ಫಿಂಗ್‌ಹಾಮ್ ಊರಿನ (Lord (Howard) ಹೌವಾರ್ಡ್ ಪ್ರಭುವು ಇಂಗ್ಲಾಂದಿನ ಹಡಗಗಳಿಗೆಲ್ಲಾ ಸೈನ್ಯಾಧಿಪತಿಯಾಗಿದ್ದನು. ಈ ಅಧಿಪತಿಗೆ ಸಹಾಯವಾಗಿ ಅನೇಕ ಮೋ

ಸವುಳ್ಳ ಯಾತ್ರೆಗಳಲ್ಲಿಯೂ, ಅನೇಕ ಭಯಂಕರವಾದ ಯುದ್ಧಗಳಲ್ಲಿಯೂ ಇದ್ದು, ಇಂಗ್ಲಿಷಿನವರ ಹೆಸರಿಗೆ ಘನವನ್ನು ಉಂಟು ಮಾಡಿದ್ದ ಧೈರ್ಯಶಾಲಿಗಳಾದ ಅನೇಕ ನಾವಿಕರು ಇದ್ದರು.

ಒಂದು ದಿವಸ ಸರ್ ಫ್ರಾಂಸಿಸ್ ಡ್ರೇಕ್ ಹಾಕಿನ್ಸ್ ಎಂಬುವ ನಾವಿಕಸೈನ್ಯಾಧಿಪತಿ ಮೊದಲಾದ ಕೆಲವು ಉದ್ಯೋಗಸ್ಥರು ಪ್ಲಿಮೌತ್ ಊರಿನ ಬಳಿಯಲ್ಲಿ ಒಂದು ಹುಲ್ಲಿನ ಬೈಲಿನಲ್ಲಿ ಗುಂಡೆಸದು ಆಡಿ ಕೊಂಡಿರುವ ಸಮಯದಲ್ಲಿ, ಒಬ್ಬ ದೂತನು ಬ್ರಿಟಿಷ್ ಕಾಲುವೆಯಲ್ಲಿ, ಸೋತು ಹೋಗದ (Armada) ಆರ್ಮೇದಸೈನ್ಯವು* ಬಂದಿರುವದನ್ನು ಕಣ್ಣಿಂದ ಕಂಡೆನು ಎಂದು ಓಟವಾಗಿ ಓಡಿ ಬಂದು ದಮ್ಮಿನಿಂದ ಶ್ವಾಸ ಬಿಡುತ್ತಾ ತಿಳಿಸಿದನು. ಸಂಗಡಲೇ ಅಲ್ಲಿದ್ದ ಕೆಲವರು ಕಳವಳ ಪಟ್ಟು ತಡಿಕಾಡಿ ನಾಲ್ಕು ಮೂಲೆಗಳಲ್ಲಿಯೂ ಆಯುಧಗಳನ್ನು ಎತ್ತಿ ಕೊಳ್ಳ ಓಡುವದಕ್ಕೆ ಆರಂಭಿಸಿದರು. ಆದಾಗ್ಯೂ ಡ್ರೇಕ್ ಎಂಬವನು ಅವರನ್ನು ಅಭ್ಯಂತರಿಸಿ, ಸ್ನೇಹಿತರೇ! ನಿಲ್ಲಿರಿ, ನಮ್ಮ ಆಟವನ್ನು ಆಡಿ ಮುಗಿಸಿ ಬಿಟ್ಟು ಅದರ ಮೇಲೆ ಸ್ಪಾನಿಯರನ್ನು ಹೊಡೆದು ಓಡಿಸುವ. ಬೇಕಾದ ಸಮಯ ಉಂಟು ಎಂದು ಹೇಳಿದನು. ಇದೇ ಪ್ರಕಾರ ಆಟ ಮುಗಿಸಿದ ತರುವಾಯ ದಳಕರ್ತರೆಲ್ಲರು ಹಡಗಗಳಲ್ಲಿ ಏರಿದ ಕೂಡ್ಲೆ ಇಂಗ್ಲಿಷಿನವರ ಹಡಗಗಳೆಲ್ಲಾ ಪಠಗಳನ್ನು ಬಿಚ್ಚಿ ಓಡಲು ಶತ್ರುಗಳಿಗೆ ಸಮೀಪಿಸಿದರು. ಆರ್ಮೇದ ಎಂಬ ಶತ್ರುಗಳ ನಾವಿಕದಂಡು ಸಹ ಸ್ಪೇನ್ ದೇಶದ ಥಡದ ಬಳಿಯಲ್ಲಿ ಹೊಡೆದ ಬಿರುಘಾಳಿಯಿಂದ ಕೆಲವು ಹಡಗಗಳು ಒಡೆದು ಹೋಗಲಾಗಿ ಕಡಿಮೆಯಾಗಿದ್ದಾಗ್ಯೂ, ಇಂಗ್ಲಿಷಿನವರ ಹಡಗಗಳು ನಿಂತು ಅನುಕೂಲವಾಗಿ ಎದುರಿಸುವದಕ್ಕೆ ಕೂಡದಂತೆ ಸಂಖ್ಯೆಯಲ್ಲಿ ಇನ್ನೂ ಅಧಿಕವಾಗಿಯೇ ಇದ್ದವು. ಆದಾಗ್ಯೂ ಇಂಗ್ಲಿಷ್ ಹಡಗದ ಅಧಿಪತಿಯು ಆ ಮಹಾ ನಾವಿಕದಳವನ್ನು ಸ್ವಲ್ಪ ದೂರದಲ್ಲಿ ಸಮೀಪಿಸಿ, ಒಂಟಿಯಾಗಿ ಶಿಕ್ಕಿದ ಸಕಲ ಹಡಗಗಳನ್ನೂ ಹಿಡಿದು ಕೊಂಡು, ಓಡಿ ಓಡಿ ಯುದ್ಧ ಮಾಡಿ ಶತ್ರುಗಳನ್ನು ತೊಂದರೆ ಮಾಡಿ ಕೊಂಡಿದ್ದನು. ಹೀಗೆ ಅನೇಕ

* ಆರ್ಮೇದ=ನಾವಿಕಸೈನ್ಯ. ಇದು ಸ್ಪಾನಿಯರು ಅಹಂಕಾರದಿಂದ ತಮ್ಮ ನಾವಿಕಸೈನ್ಯಕ್ಕೆ ಇಟ್ಟು ಕೊಂಡ ಹೆಸರು.

## ಸಂಧಿ 16. ಆರ್ಮೇದ ಸೋತದ್ದೂ ರಾಣಿಯ ಇಷ್ಟರೂ.

ದಿವಸಗಳು ಓಡುತ್ತಿದ್ದು, ಶತ್ರುಗಳ ಹಡಗಗಳಲ್ಲಿ ಕೆಲವನ್ನು ಹಿಡಿದು ಕೊಂಡ ಮೇಲೆ ಹೌವಾರ್ಡ್ ಪ್ರಭುವು ಸ್ಪಾನಿಯರ ಪೂರ್ಣ ನಾವಿಕ ಸೈನ್ಯದೊಡನೆ ಯುದ್ಧ ಮಾಡ ಆರಂಭಿಸಿದನು. ಸ್ಪಾನಿಯರ ನಾವಿಕ ದಳಕರ್ತನು ಸಹ ಈ ತೊಂದರೆಯನ್ನು ತಾಳಲಾರದೆ, ಯತ್ನಯಿಸಿದ ಕಾರ್ಯವನ್ನು ಬಿಟ್ಟು ಬಿಟ್ಟು, ಸ್ಕೊತ್ಲಾಂದನ್ನು ಸುತ್ತಿ ಕೊಂಡು ತನ್ನ ಸೀಮೆಗೆ ಹೋಗಿ ಬಿಡ ತೀರ್ಮಾನಿಸಿದನು. ಆ ಮೇಲೆ ಎದ್ದ ಅಘೋರವಾದ ಬಿರುಘಾಳಿಯಿಂದ ಅವನ ಹಡಗಗಳಲ್ಲಿ ಅನೇಕವಾದವುಗಳು ನಷ್ಟವಾದವು. ಉಳಿದ ಕೆಲವು ಹಡಗಗಳು ಮಾತ್ರ ತಿರುಗಿ ಕೊಂಡು ತಮ್ಮ ಚಕ್ರವರ್ತಿಯ ಬಳಿಗೆ ಹೋಗಿ, ಸೋತು ಹೋಗಲಾರದಂಥ ಆರ್ಮೇದ ಸೋತು ಹೋಯಿತೆಂದು ತಿಳಿಸಿದವು. ಆ ತರುವಾಯ ಎಂದೆಂದಿಗೂ ಸ್ಪಾನಿಯರು ಬಂದು ಇಂಗ್ಲಾಂದ್ ಸೀಮೆಯನ್ನು ಮುತ್ತಿಗೆ ಹಾಕುವದಕ್ಕೆ ಧೈರ್ಯ ಪಡಲಿಲ್ಲ.

ಎಲಿಸಬೇತ್ ರಾಣಿಯು ಗಂಡಸಿಗೆ ತಕ್ಕ ವಿದ್ಯಸಾಮರ್ಥ್ಯವೂ, ದೃಢವಾದ ಚಿತ್ತವೂ ಉಳ್ಳವಳಾಗಿದ್ದಾಗ್ಯೂ, ಬಹಳ ಗರ್ವವೂ ಡಂಭವೂ ಉಳ್ಳವಳಾಗಿದ್ದಳು. ತನ್ನ ಆಸ್ಥಾನದಲ್ಲಿ ಯೌವನಸ್ಥರೂ ಉಲ್ಲಾಸಪ್ರಿಯರೂ ಆದವರು ಬಂದು ತನ್ನನ್ನು ಸುತ್ತಿ ಕೊಂಡಿರ ಪ್ರೀತಿ ಪಟ್ಟು, ತನ್ನ ಮಂತ್ರಿ ಪ್ರಧಾನಿಗಳಲ್ಲಿ ಅಧಿಕ ಸೌಂದರ್ಯವಾದವರನ್ನು ನೋಡಿ, ತನಗೆ ಇಷ್ಟರನ್ನು ಸಂಪಾದಿಸಿ, ಅವರಿಗೆ ನಾನಾ ವಿಧ ದಾಕ್ಷಿಣ್ಯಗಳನ್ನು ತೋರಿಸುವಳು. ಅವರಲ್ಲಿ ಮುಖ್ಯನಾದವನು ಲೆಸ್ತರ್ ಎಂಬ ಎರ್ಲ್ ಪ್ರಭುವಾದ (Robert Dudley) ರೋಬರ್ತ್ ದದ್ಲಿ ಎಂಬವನೇ. ಅವನು ಗೌರವವಿಲ್ಲದ ಯೌವನಸ್ಥನು. ಅವನು ಒಂದು ಸಾರಿ ರಾಣಿಯನ್ನು ಮದುವೆ ಮಾಡಿ ಕೊಳ್ಳ ಬಹುದೆಂದು ತೃಣೀಕರಿಸಿದವನು. ಅವನು ಸತ್ತ ತರುವಾಯ ಎಸ್ಸೆಕ್ಸ್ ಎರ್ಲ್ ಪ್ರಭುವಿನಲ್ಲಿ ಪ್ರೀತಿ ಇಟ್ಟಳು. ಅವನು ಧೈರ್ಯಶಾಲಿಯಾಗಿ ಬೊಗ್ಗದ ಗುಣವುಳ್ಳವನು. ಅವನು ರಾಜಸಭೆಗೆ ಸಮ್ಬಂಧವಾದ ಸಂತೋಷಗಳಿಗಿಂತ ಯುದ್ಧಕಷ್ಟಗಳನ್ನು ಅನುಭವಿಸ ಪ್ರೀತಿಯುಳ್ಳವನು. ಅವನ ಪ್ರೇರಣೆಯಿಂದಲೇ ಸ್ಪೇನ್ ದೇಶದ ಸಂಗಡ ಬಹು ಮೂರ್ಖವಾದ ಯುದ್ಧ ನಡಿಸಲ್ಪಟ್ಟು, ಧೊರೆತನದ ಕಡೇ ಮಟ್ಟಿಗೂ ತೀರದೆ ನಿಂತಿತು.

## ಸಂಧಿ 16. ಎಲಿಸಬೇತ್ ರಾಣಿಯ ಮರಣ.

ಇದರ ಮಧ್ಯದಲ್ಲಿ ಐರ್ಲಾಂದಿನಲ್ಲಿ ಕಲಾಪನೆಗಳು ಉಂಟಾಗಿ ಎಲ್ಲಾ ತಾರುಮಾರಾಗಿಯೂ ಗಲಿಬಿಲಿಯಾಗಿಯೂ ಇದ್ದದರಿಂದ (Earl of Essex) ಎಸ್ಸೆಕ್ಸ್ ಏರ್ಲ್ ಪ್ರಭುವು ಇಂಗ್ಲಿಷಿನವರ ಸೈನ್ಯಾಧಿಪತಿಯಾಗಿ ಆ ಸ್ಥಳಕ್ಕೆ ಕಳುಹಿಸಲ್ಪಟ್ಟನು. ಅವನು ಹೋದ ಕೂಡ್ಲೆ ತನ್ನನ್ನು ಕುರಿತು ವಿರೋಧವಾದ ಮಾತುಗಳನ್ನು ರಾಣಿಯ ಕಿವಿಯಲ್ಲಿ ತನ್ನ ಶತ್ರುಗಳು ಹಾಕುತ್ತಾರೆಂದು ಸುದ್ದಿಯನ್ನು ಕೇಳಿ ತನ್ನ ಸೈನ್ಯಾಧಿಪತ್ಯವನ್ನು ಥಕ್ಕನೆ ಬಿಟ್ಟು ಬಿಟ್ಟು ತಿರಿಗಿ ರಾಜ್ಯಸಭೆಗೆ ಬಂದು ತನ್ನ ಮುಖವನ್ನು ತೋರಿಸಿದನು. ಹೀಗೆ ನಡೆದದರಿಂದ ರಾಣಿಯು ಬಹು ಕೋಪಗೊಂಡು ಅಂದಿನಿಂದ ರಾಜಸಭೆಯಿಂದ ಅವನನ್ನು ತಳ್ಳಿ ಬಿಟ್ಟು, ತನ್ನ ಮುಖದ ಎದುರಿಗೆ ಬಾರದಂತೆ ಮಾಡಿ ಬಿಟ್ಟಳು. ಇದಕ್ಕೆ ಮುಂಚೆ ರಾಣಿಯ ಬಳಿಯಲ್ಲಿ ವಿಶೇಷವಾದ ಪ್ರೀತಿಯನ್ನೂ ದಯವನ್ನೂ ಹೊಂದುತ್ತಾ ಬಂದಿದ್ದವನು ಈಗ ಇಷ್ಟು ಕಠಿಣವಾಗಿ ನಡಿಸಲ್ಪಟ್ಟದ್ದರಿಂದ ಆ ಏರ್ಲ್ ಪ್ರಭುವು ಕಲಹ ಮಾಡುವದಕ್ಕೆ ಆರಂಭಿಸಿದನು. ಅವನು ಮಾಡಿದ ಕೇಡಾಲೋಚನೆ ಅನರ್ಥವಾಗಿ, ಅವನು ಈ ಕಾರ್ಯದಲ್ಲಿ ವಿಚಾರಣೆ ಮಾಡಲ್ಪಟ್ಟು ಕಲಹಗಾರನೆಂಬ ತೀರ್ಪು ಹೊಂದಿ ಕೊಲ್ಲಲ್ಪಟ್ಟನು.

ಎಸ್ಸೆಕ್ಸ್ ಏರ್ಲ್ ಪ್ರಭುವು ಮರಣ ಹೊಂದಿದ ತರುವಾಯ ರಾಣಿಯ ದೇಹವು ಕ್ಷೀಣವಾಗಿ, ಅದರ ತರುವಾಯ ಅವಳು ಎಲ್ಲರ ಮೇಲೆಯೂ ಪ್ರೀತಿ ಇಲ್ಲದವಳಾಗಿ ಏಕಾಂತವಾಗಿ ವಾಸಿಸ ಅಪೇಕ್ಷಿಸಿದಳು. ಕಡೆಯಲ್ಲಿ ಅವಳು ಬಹಳ ವಯಸ್ಸುಳ್ಳವಳಾಗಿ ಬಹು ಘನ ಹೊಂದಿದವಳಾಗಿ ಎಲಿಸಬೇತೆಂಬುವ ರಾಣಿಯು 1603ನೇ ಸಂವತ್ಸರ ಮಾರ್ಚಿ ತಿಂಗಳ 24ನೇ ತಾರೀಖಿನಲ್ಲಿ ಪರಗತಿ ಹೊಂದಿದಳು. ತನ್ನ ತರುವಾಯ ಪಟ್ಟಕ್ಕೆ ಸ್ವತಂತ್ರನಾದ ಜೇಮ್ಸ್ ಎಂಬುವ ಸ್ಕೊತ್ಲಾಂದ್ ಅರಸನಿಗೆ ಕಿರೀಟ ಧರಿಸ ಬೇಕೆಂದು ಅವಳು ಸಾಯುವಾಗ ಕೋರಿದಳು. ಅವಳ ದೀರ್ಘವಾದ ಧೊರೆತನದ ಕಾಲದಲ್ಲಿ ಇಂಗ್ಲಾಂದ್ ಸೀಮೆಯು ಲೋಕದಲ್ಲಿ ಬಾಳುವ ಜಾತಿಗಳೊಳಗೆ ಶ್ರೇಷ್ಠತ್ವವನ್ನು ಹೊಂದಲಾಯಿತು. ಇದಲ್ಲದೆ ಆ ಕಾಲದಲ್ಲಿ ನಡೆದ ವಿಷಯಗಳು ಲೋಕಚರಿತ್ರೆಯ ವರ್ತಮಾನಗಳಲ್ಲಿ ಬಹು ಧೈರ್ಯವಾಗಿಯೂ ನೆಟ್ಟಗಾಗಿಯೂ ನಡಿಸಲ್ಪಟ್ಟ ವಿಷ

ಯಗಳಾಗಿರುವದರಿಂದ ಒಬ್ಬೊಬ್ಬ ಇಂಗ್ಲಿಷಿನವನು ಆ ಕಾಲವನ್ನೇ ಸ್ವದೇಶಚರಿತ್ರೆಯಲ್ಲಿ ಮಹಾ ಘನವುಳ್ಳದ್ದೆಂದು ನೆನಸಿ ಹೊಗಳುವದಕ್ಕೆ ಸ್ಥಳವುಂಟು. ಇದಲ್ಲದೆ ಆ ಕಾಲದಲ್ಲಿ ಅನೇಕ ವಿದ್ವಾಂಸರು ಇದ್ದು ನಾನಾ ಉಪಯೋಗವಾದ ಗ್ರಂಥಗಳನ್ನು ಮಾಡಿದರು. ಇಂಗ್ಲಾಂದಿನಲ್ಲಿ ಹುಟ್ಟಿದ ಜ್ಞಾನಕವಿಯಾದ (Shakespeare) ಶೇಕ್ಸ್ಪೀರ್ ಎಂಬವನೂ, ಪೂರ್ಣ ವಿದ್ಯಾಶಾಸ್ತ್ರಿಯಾದ (Bacon) ಬೇಕೊನ್ ಎಂಬವನೂ, ವಿಸ್ತಾರವಾದ ತಿಳುವಳಿಕೆಯುಳ್ಳ ಸತ್ಯವೇದಶಾಸ್ತ್ರಿಯಾದ (Hooker) ಹೂಕರ್ ಎಂಬವನೂ, ಉತ್ತಮಳಾದ ಎಲಿಸಬೇತ್ ಎಂಬುವ ರಾಣಿಯ ಕಾಲದಲ್ಲಿ ಬದುಕಿದ್ದರು.

ಇಂಗ್ಲಾಂದ್, ಐರ್ಲಾಂದ್, ಸ್ಕೊತ್ಲಾಂದ್ ಎಂಬ ಮೂರು ಶೀಮೆಗಳನ್ನೂ ಒಂದಾಗಿ ಆಳಿದ ಮೊದಲನೇ ಅರಸನಾದ ಜೇಮ್ಸ್ ಎಂಬವನು ಯಾವದೊಂದು ವಿಘ್ನವೂ ಅಡ್ಡಿಯೂ ಇಲ್ಲದೆ ಪಟ್ಟಾಭಿಷೇಕವನ್ನು ಹೊಂದಿದನು. ರಾಣಿಯು ಸತ್ತ ಸುದ್ದಿಯನ್ನು ಕೇಳಿ, ಉತ್ತರ ಶೀಮೆಯಲ್ಲಿದ್ದ ಇವನು ಮೆಲ್ಲಗೆ ಪ್ರಯಾಣ ಮಾಡುತ್ತಾ ಬಂದದರಿಂದ, ರಾಜಧಾನಿಗೆ ಬಂದು ಶೇರುವದಕ್ಕೆ ಕೆಲವು ದಿವಸ ಹಿಡಿಯಿತು. ಹೀಗೆ ತಾಮಸ ಮಾಡಿದ್ದರಿಂದ ಪ್ರಜೆಗಳಲ್ಲಿ ಕೆಲವರಿಗೆ ಮನಸ್ತಾಪ ಉಂಟಾಯಿತು. ಯಾಕಂದರೆ ಅವನು ಸಿಂಹಾಸನವೇರಿದ ಕೆಲವು ದಿವಸಗಳಲ್ಲಿ ಅವನನ್ನು ತಳ್ಳಿ ಅವನಿಗೆ ಸಮ್ಮಂಧಬಂಧುವಾದ ಒಬ್ಬನನ್ನು ಅರಸನಾಗ ಮಾಡುವದಕ್ಕೆ, ಒಂದು ದುರಾಲೋಚನೆ ಉಂಟಾಯಿತು. ಅದನ್ನು ಕುರಿತ ಸಾಕ್ಷಿಗಳು ದೃಢವಾದವುಗಳಲ್ಲ. ಆದಾಗ್ಯೂ ಆ ದುರಾಲೋಚನೆಯಲ್ಲಿ ಕೈ ಹಾಕಿದ್ದವನೆಂದು ಎಣಿಸಲ್ಪಟ್ಟ (Sir Walter Raleigh) ಸರ್ ವಾಲ್ತರ್ ರಾಲೆ ಎಂಬವನು ಅದಕ್ಕೋಸ್ಕರ ಅನೇಕ ವರುಷಗಳ ಮಟ್ಟಿಗೂ ಶೆರೆಯಲ್ಲಿ ಹಾಕಲ್ಪಟ್ಟು, ಅದರ ತರುವಾಯ ಅದೇ ಅಪರಾಧಕ್ಕಾಗಿ ಶಿರಚ್ಛೇದ ಮಾಡಲ್ಪಟ್ಟನು.

ರೋಮನ್ ಸಭೆಯವರೂ, ಪ್ಯೂರಿತನ್ಸ್ ಎಂಬವರೂ ತಮಗೆ ವ್ಯತಿರಿಕ್ತವಾಗಿದ್ದ ಪ್ರಮಾಣಗಳನ್ನೆಲ್ಲಾ ಜೇಮ್ಸ್ ಅರಸನು ಮಾರ್ಪಡಿಸುವನೆಂದು ಪರೀಕ್ಷಿಸಿ ಕೊಂಡಿದ್ದರು. ಆದ್ದಾಗ್ಯೂ ಅವರ ನಂಬಿಕೆ ವ್ಯರ್ಥ

ವಾಗುವಂತೆ ಅವನು ಸತ್ತು ಹೋದ ರಾಣಿಗಿಂತ ಕಠಿಣವಾಗಿ ಅವರನ್ನು ನಡಿಸಿದನು. ರೋಮನ್ ಸಭೆಯವರು ಅದರಿಂದ ಬಹು ಕ್ರೋಧ ಪಟ್ಟು, ಕೆಲವರು ಅರಸನಿಗೂ ಅವನ ಮಂತ್ರಿಗೂ ವಿರೋಧವಾಗಿ ಒಂದು ತಂತ್ರೋಪಾಯ ಮಾಡ ಯತ್ನಯಿಸಿದರು. ಏನಂದರೆ, ಅರಸನನ್ನೂ ಪಾರ್ಲಿಮೆಂಟ್ ಎಂಬುವ ಸಂಘವನ್ನೂ ಕರೀ ಮದ್ದಿನಿಂದ ನಿರ್ಮೂಲ ಮಾಡ ಬೇಕೆಂಬುವದೇ ಅವರ ಗುರಿಯಾಗಿತ್ತು. ಆ ದುಷ್ಟರು ಪಾರ್ಲಿಮೆಂಟ್ ಕೂಡುವ ದೊಡ್ಡ ಮೇಲುಮಾಳಿಗೆಗೆ ಕೆಳಗಡೆ ನೆಲಕೊಠಡಿಗಳಿದ್ದ ಒಂದು ಕಟ್ಟುವಿಕೆಯನ್ನು ಬಾಡಿಗೆಗೆ ಮಾತಾಡಿ, ಆ ಕೊಠಡಿಗಳಲ್ಲಿಲ್ಲಾ ಕರೀ ಮದ್ದನ್ನು ರಹಸ್ಯವಾಗಿ ತುಂಬಿದರು. ಪಾರ್ಲಿಮೆಂಟ್ ಸಂಘದವರು ಕೂಡಿ ಬರುವ ದಿವಸದಲ್ಲಿ ಒಂದು ಬೆಂಕಿಕಡ್ಡಿಯಿಂದ ಅದನ್ನು ಹತ್ತಿಸಿ ಬಿಡುವದಕ್ಕೆ (Guy Fawkes) ಗೈ ಫಾಕ್ಸ್ ಎಂಬ ಹೆಸರುಳ್ಳ ಒಬ್ಬನನ್ನು ಆರಿಸಿ ಕೊಂಡರು. ಆಗ ಪಾರ್ಲಿಮೆಂಟ್ ಸಂಘದವರು ಫೆಬ್ರವರಿ ತಿಂಗಳಲ್ಲಿ ಕೂಡಿ ಬರ ಬೇಕೆಂದು ಕೊಟ್ಟಿದ್ದ ಕಟ್ಟಳೆಯನ್ನು ಮಾರ್ಪಡಿಸಿ, ನವಂಬರ್ ತಿಂಗಳಲ್ಲಿ ಕೂಡಿ ಬರ ಬೇಕೆಂದು ಕಟ್ಟಳೆ ಹುಟ್ಟಿದ್ದರಿಂದ ಅದರ ಮಧ್ಯೆ ಆ ಮೋಸಕ್ಕೆ ಕಲೆಯುವಂತೆ ಬೇರೆ ಜನರು ಸಹ ಶೇರಿ ಕೊಂಡರು. ಅವರಲ್ಲಿ ಒಬ್ಬನು ಆ ಕಾರ್ಯವನ್ನು ಬಹಿರಂಗ ಮಾಡಿದನು. ಹ್ಯಾಗಂದರೆ, ಅವನು ತನಗೆ ಬಂಧುವನಾಗಿದ್ದ ಒಬ್ಬನಿಗೆ ಹೆಸರಿಲ್ಲದ ಒಂದು ಪತ್ರಿಕೆಯನ್ನು ಬರೆದು, "ನೀನು ಇನ್ನು ಮೇಲೆ ಕೂಡುವ ಪಾರ್ಲಿಮೆಂಟ್ ಸಂಘಕ್ಕೆ ಹೋಗದೆ ಇರ ಬೇಕು. ಹೋದರೆ ಅದೃಶ್ಯವಾದ ಕೈಯಿಂದ ತಿಳಿಯದ ವಿಧವಾಗಿ ಒಂದು ಆಪತ್ತು ಸಂಭವಿಸುವದು," ಎಂದು ದ್ವಂದ್ವಾರ್ಥವಾಗಿ ಎಚ್ಚರಿಸಿದನು. ಆ ಪತ್ರಿಕೆಯು ಅರಸನಿಗೂ ಅವನ ಮಂತ್ರಿಗೂ ತಿಳಿಸಲ್ಪಟ್ಟಿತು. ಅವರಿಗೆ ಆ ಮೋಸವು ಒಂದಾವರ್ತಿ ಸೂಚನೆ ತಿಳಿದಿರ ಬಹುದು. ಅವರು ಆ ಪತ್ರಿಕೆಯ ಅರ್ಥವನ್ನು ಗ್ರಹಿಸಿ ಕೊಂಡು ಏನೂ ಮಾತಾಡದೆ ಮೌನವಾಗಿದ್ದರು. ಪಾರ್ಲಿಮೆಂಟಿನವರು ಕೂಡಿದ ದಿನವಾದ ನವಂಬರ್ ತಿಂಗಳ 5ನೇ ತಾರೀಖಿನ ವರೆಗೂ ಆ ದುರಾಲೋಚನೆ ತಡೆಯಲ್ಪಡದೆ ನಡಿಯುತ್ತಾ ಬಂತು. ಆ ತಾರೀಖಿನ ಉದಯದಲ್ಲಿ ಅದಕ್ಕೆ ಮುಂಚೆ ಆ ಭಯಂಕರವಾದ ನೆಲ

ಮಾಳಿಗೆಗೆ ಆಗಾಗ್ಯೆ ಬರುತ್ತಾ ಇದ್ದ ಗೈ ಫಾಕ್ಸ್ ಎಂಬವನನ್ನು ನ್ಯಾಯಸ್ಥಳದ ಶೇವಕರು ಬಂದು ಆ ಕಳ್ಳತನದ ಸಹಿತವಾಗಿ ಹಿಡಿದು ಕೊಂಡರು. ಅವನು ತನ್ನ ಸಂಗಡ ಒಡಂಬಟ್ಟಿದ್ದವರ ಹೆಸರುಗಳನ್ನು ಬೈಲು ಪಡಿಸಲಾಗಿ, ಅವರನ್ನು ಸಹ ಹಿಡಿದು, ಅವರು ಯೋಚಿಸಿದ್ದ ಅಪರಾಧಕ್ಕಾಗಿ ತಕ್ಕ ಶಿಕ್ಷೆ ಕೊಟ್ಟರು. ಕರೀ ಮದ್ದಿನ ಮೋಸದಂತೆ ಇಂಗ್ಲಾಂಡ್ ದೇಶಚರಿತ್ರೆಯಲ್ಲಿ ಇಂಗ್ಲಿಷಿನವರಿಂದ ನೆನಪು ಮಾಡಲ್ಪಡುವದು ಬೇರೊಂದು ಇಲ್ಲ. ಈ ದಿನದ ವರೆಗೂ ಇಂಗ್ಲಾಂದಿನಲ್ಲಿ ನವಂಬರ್ ತಿಂಗಳ 5ನೇ ತಾರೀಖಿನಲ್ಲಿ ಗೈ ಫಾಕ್ಸ್ ಎಂಬವನ ಚಾಪನೆಯಾಗಿ ಗೊಂಬೆಯನ್ನು ಮಾಡಿ ಬೆಂಕಿ ಹಾಕಿ ಸುಟ್ಟು, ಸಂತೋಷ ಪಟ್ಟು ಕುಣಿಯದೆ ಇರುವ ಸಾಲೆಹುಡುಗರು ಒಬ್ಬರೂ ಇಲ್ಲ.

ಜೇಮ್ಸ್ ಅರಸನು ಪೂರ್ಣ ಕಠಿಣತ್ವವಾಗಿ ಆಳಿ, ಒಬ್ಬರ ಆಲೋಚನೆಯನ್ನೂ ಕೇಳದೆ ತನ್ನ ಇಚ್ಛೆಯ ಪ್ರಕಾರ ಮಾಡುವವನಾಗಿದ್ದನು. ಅವನಿಗೂ ಜನಪ್ರತಿನಿಧಿಸಂಘದವರಿಗೂ ಆಗಾಗ್ಯೆ ವಾಗ್ವಾದಗಳು ಸಂಭವಿಸಿದವು. ಇಂಗ್ಲಿಷ್ ಪ್ರಜೆಗಳ ಸ್ವಾಧೀನಕ್ಕೆ ವಿರೋಧವಾಗಿ ಧೊರೆತನದ ಅಧಿಕಾರವು ನಡಿಸಲ್ಪಟ್ಟದ್ದರಿಂದ ಪ್ರಜೆಗಳ ಕೋರಿಕೆಗಳನ್ನು ತಿಳಿಸುವದಕ್ಕೆ ಆ ಸಂಘದವರು ಅರಸನ ಅಧಿಕಾರವನ್ನು ಕಡಿಮೆ ಮಾಡ ಹುಡುಕಿದರು. ಮತ್ತು ಆ ಅರಸನು ತಾನು ದೇಶದ ಪ್ರಮಾಣಗಳಿಗೆ ವ್ಯತಿರಿಕ್ತವಾಗಿಯೂ ಅನೀತಿಯಾಗಿಯೂ ಕೊಟ್ಟ ತನ್ನ ಕಟ್ಟಳೆಗಳನ್ನು ಸಮಾಧಾನವಾಗಿ ಮಾರ್ಪಡಿಸದೆ ಅನೇಕ ಸಾರಿ ವಿವೇಕಹೀನವಾಗಿ ನಡಿಯುತ್ತಾ ಬಂದನು. ಈ ಪ್ರಕಾರ ಧೊರೆತನದ ಮೇಲೆ ಪ್ರಜೆಗಳಿಗೆ ಹಗೆಯುಂಟಾಗಲು ಅದು ಕಡೆಯಲ್ಲಿ ಆ ಅರಸನ ಸತ್ಪುತ್ರನ ಕಾಲದಲ್ಲಿ ದುಬ್ಬವಾಗಿ ಮುಗಿಯಿತು.

ಇದೆಲ್ಲಾ ಅಲ್ಲದೆ ರಾಜಸಭೆಯು ಆಗಾಗ್ಯೆ ಕೇಳಿಕೆಗಳಿಗೂ ದುಂದೌತನಗಳಿಗೂ ಕಾರಣವಾಯಿತು. ಅಯೋಗ್ಯರಾದ ಸ್ನೇಹಿತರು ಕೂಡಿ ಆ ಅರಸನನ್ನು ಅನೇಕ ಸಮಯಗಳಲ್ಲಿ ತಮ್ಮ ಇಷ್ಟದ ಪ್ರಕಾರ ಮಾಡ ಪ್ರೇರೇಪಿಸಿದರು. ಅವರಲ್ಲಿ (Rochester) ರೋಚೆಸ್ಟರ್ ಎಂಬುವ ಏರ್ಲ್ ಪ್ರಭುವೂ, ಬಕ್ಕಿಂಗ್ ಹಾಮ್ ಡ್ಯೂಕ್ ಪ್ರಭುವೂ ಮುಖ್ಯಸ್ಥ

ರಾಗಿದ್ದರು. ಇದಲ್ಲದೆ ಆ ಅರಸನು ಅಭಿಷೇಕ ಹೊಂದಿದ ಕೂಡ್ಲೆ ಸ್ಪಾನಿಯರ ಸಂಗಡ ಸಮಾಧಾನ ಮಾಡಿ ಕೊಂಡು ಆ ಜಾತಿಯವರಿಗೆ ಘನ ಮಾಡುತ್ತಾ ಬಂದನು. ಈ ವಿಷಯ ಇಂಗ್ಲಾಂದಿನವರಿಗೆ ಪ್ರಿಯವಾಗಿರಲಿಲ್ಲ. ಅವನು ಯುದ್ಧಸಾಧನೆಗಳನ್ನು ಅಪೇಕ್ಷಿಸದ ಸಾತ್ವಿಕ ಗುಣವುಳ್ಳವನು. ಅದರಿಂದ ಮುಂಚಿನ ಧೊರೆತನದಲ್ಲಿ ಆರಂಭಿಸಿದ್ದ ಯುದ್ಧಗಳನ್ನು ಬಲವಾಗಿ ನಡಿಸಿ ಮುಗಿಸಲಿಲ್ಲವೆಂಬುವದು ಇಂಗ್ಲಿಷಿನವರಿಗೆ ಅಸಮ್ಮತವಾದ ಕಾರ್ಯವಾಗಿತ್ತು. ಜೇಮ್ಸ್ ಅರಸನು ಮನೋಸಾಮರ್ಥ್ಯವಿಲ್ಲದ ಕೇವಲವಾದ ಅರಸನಾಗಿದ್ದನು. ಅವನಿಗೆ ಬಹಳ ವಿದ್ಯಾಜ್ಞಾನವಿದ್ದಾಗ್ಯೂ ಅದು ಕೆಲಸಕ್ಕೆ ಬಾರದೆ ಹೋಯಿತು. ಅವನನ್ನು ಒಂದು ಕಾಲಕ್ಕೂ ಪ್ರಜೆಗಳು ಸ್ನೇಹಿಸಿ ಒಳ್ಳೆಯವನು ಅಂದದಿಲ್ಲ. ಅವನು ಮಾತನಾಡುವಾಗ ಸರಿಯಾಗಿ ಇಂಗ್ಲಿಷ್ ಭಾಷೆಯನ್ನು ಉಚ್ಚರಿಸಲೂ ಇಲ್ಲ. ಮರ್ಯಾದೆಯೂ ನಾಗರೀಕವಾದ ನಡತೆಯೂ ಅವನಿಗಿಲ್ಲ. ಅವನು ಆಳಿದ ಪ್ರಜೆಗಳ ಗುಣವನ್ನೂ ರೀತಿಯನ್ನೂ ನೋಡಿದರೆ ಅವನು ಅವರಿಗೆ ತಕ್ಕ ಅರಸನಲ್ಲವೆಂದು ಪ್ರತ್ಯಕ್ಷವಾಗಿ ತಿಳಿಯುವದು.

---

## CHAPTER XVII.

### THE ENGLISH REVOLUTION.

FROM A. D. 1625 TO A. D. 1649.

## 17 ಸಂಧಿ.

### ಇಂಗ್ಲಿಷ್ ಧೊರೆತನದಲ್ಲಿ ಉಂಟಾದ ಮಾರ್ಪಡುವಿಕೆ.

ಕ್ರಿ. ಶ. 1625 ಮೊದಲು ಕ್ರಿ. ಶ. 1649 ವರೆಗೂ.

ಮುಖ್ಯ ತಾರೀಖುಗಳು: (Charles I) 1ನೇ ಚಾರ್ಲ್‌ಸ್ 1600 ಹುಟ್ಟಿದ್ದು. 1625 ಸಿಂಹಾಸನಕ್ಕೆ ಬಂದದ್ದು. 1649 ಕೊಲ್ಲಲ್ಪಟ್ಟದ್ದು. ಅದೇ ಕಾಲದ ಇಂದ್ಯ ಚರಿತ್ರೆ: (Jehangir) ಜಿಹಾಂಗಿರ್ ಮತ್ತು (Shah Jehan) ಷಾಜಿಹಾನ್ ಆಳಿದ್ದು. ಶ್ರೇಷ್ಠ ನಾಮಗಳು: (Lord John Hampden) ಲಾರ್ಡ್ ಯೋಹಾನ್ ಹಾಂಪ್ಡೆನ್, (Oliver Cromwell) ಒಲಿವೆರ್ ಕ್ರೊಮ್ವೆಲ್, (Bishop Hall) ಹಾಲ್ ಅಧ್ಯಕ್ಷನು, (Hugo Grotius) ಹ್ಯೂಗೊ ಗ್ರೋಸಿಯಸ್, (Rubens) ರೂಬೆನ್ಸ್.

ಮೊದಲನೇ ಜೇಮ್ಸ್ ಅರಸನ ತರುವಾಯ ಆ ಪಟ್ಟವನ್ನು ಹೊಂದಿದವನು ಅವನ ಮಗನಾದ (Charles) ಚಾರ್ಲ್‌ಸ್ ಎಂಬವನು. ಅವನ ಆಳಿಕೆಯು ಇಂಗ್ಲಾಂಡ್ ದೇಶಚರಿತ್ರೆಯಲ್ಲಿ ಮಹಾ ಮುಖ್ಯವಾದದ್ದೂ, ಅತಿ ದುಃಖಕರವಾದದ್ದೂ ಆಗಿತ್ತು. ಈ ಪರಿತಾಪವಾದ ಧೊರೆತನವು ಆರಂಭದಿಂದ ಅಂತ್ಯದ ಮಟ್ಟಿಗೂ ಜನರಿಗೂ ಅರಸನಿಗೂ ಪ್ರಾಪ್ತಿಸಿದ ಎಡೆಬಿಡದ ವಿಲ್ಲಂಗವಾಗಿ ಮುಗಿಯಿತು. ಅರಸನ ಕ್ರೂರವಾದ ಅಧಿಕಾರವನ್ನು ಪ್ರಜೆಗಳು ಸಡ್ಲ ಬಿಡದೆ ನಿಂತು ಎದುರಿಸಿದ್ದರಿಂದ, ಇಂಗ್ಲಿಷ್ ಅರಸರಿಗಿದ್ದ ಅಧಿಕಾರವು ದೇಶಪ್ರಮಾಣಗಳ ಪ್ರಕಾರ ಇಂಥಾದ್ದೆಂದು ಮುಂಚೆಗಿಂತ ಅಧಿಕ ಸ್ಪಷ್ಟವಾಗಿ ತೀರ್ಮಾನಿಸ ತಕ್ಕಂಥ ಉಪಯೋಗವುಂಟಾಗುವದಕ್ಕೆ ಹೇತುವೆಯಾಯಿತು. ಅದರಿಂದ ಜನರ ಸ್ವಾಧೀನಕ್ಕೆ

ದೃಢವೂ ಕಾವಲೂ ಉಂಟಾಯಿತು. ಇಂಗ್ಲಾಂದ್ ದೇಶದವರ ಮೇಲೆ ಇದರ ವಿಷಯ ರಕ್ತಾಪರಾಧ ಹೊತ್ತಾಗ್ಯೂ ತರುವಾಯ ಎದ್ದ ಸಂತತಿಯವರಿಗೆ ದೊಡ್ಡ ಮೇಲುಗಳು ಬೆಳೆದವು. ಆ ಕಾಲದಲ್ಲಿ ನಡೆದ ಕ್ರೂರತ್ವದ ಮೂಲಕವಾಗಿ ಮೇಲು ದೈವಾಧೀನದಿಂದ ಉಂಟಾಯಿತು. ಆದಾಗ್ಯೂ ಈ ಪ್ರಕಾರ ಉಂಟಾದ ಮೇಲನ್ನು ನೋಡಿ, ಆ ಕಾಲದ ಜನರು ಅದನ್ನು ಬಹುಶಾ ಕ್ರಿಯಾಡಿದ ಕಾರಣವು ಸರಿ ಎಂದು ಹೇಳ ಕೂಡದು. ಮೇಲು ಉಂಟಾಗುವದಕ್ಕೆ ಕೇಡು ನಡಿಸುವದು ಯಾರಿಗೂ ನ್ಯಾಯವಲ್ಲ. ತಮ್ಮ ಮೇಲೆ ಅರಸನಾಗಿ ನೇಮಿಸಲ್ಪಟ್ಟ ರಾಜನಿಗೆದುರಾಗಿ ಆ ಕಾಲದ ಮನುಷ್ಯರು ಕಲಹ ಎಬ್ಬಿಸಿದ್ದು ಕೇಡಾದದ್ದೇ. ಆ ಕಾಲದಿಂದ ಈ ಕಾಲದ ಮಟ್ಟಿಗೂ ಇಂಗ್ಲಿಷಿನವರು ಅನುಭವಿಸುತ್ತಾ ಬರುವ ಸ್ವಾಧೀನವೂ, ಸುಖವೂ, ಭಾಗ್ಯವೂ ಅದರಿಂದ ಉಂಟಾದ ಮೇಲು ಆಗಿದೆ.

ಮೊದಲನೇ ಚಾರ್ಲ್ಸ್ ಅರಸನ ಕಾಲದಲ್ಲಿ ಆರಂಭಿಸಿದ ವೃಶಿರಿಕ್ತವಾದ ಮಹಾ ಭೇದವು ಅವನು ಸತ್ತಾಗಲೇ ಮುಗಿಯಿತೆಂದು ಎಣಿಸಲಾಗದು. ಅವನು ಅಭಿಷೇಕ ಹೊಂದಿದ ಸ್ವಲ್ಪ ಕಾಲದೊಳಗೆ ಆರಂಭಿಸಿದ್ದು, ಇಂಗ್ಲಾಂದ್ ಶೀಮೆಗೆ ಅರಸನಾಗಿ (William III) ಮೂರನೇ ಉಲ್ಲಿಯಮ್ ಆರಿಸಿ ಕೊಳ್ಳಲ್ಪಟ್ಟ ಕಾಲಕ್ಕೆ ಮುಂಚೆ ಅದು ಪೂರ್ಣವಾಗಿ ಮುಗಿಯಲಿಲ್ಲ. ಚಾರ್ಲ್ಸ್ ಅರಸನ ಕುಮಾರನಾದ ಒಬ್ಬನು ಆಳಿದ ಕಾಲದಲ್ಲಿ ಇಂಗ್ಲಾಂದಿನಲ್ಲಿ ಯುದ್ಧವಿಲ್ಲದೆ ಇದ್ದಾಗ್ಯೂ, ತರುವಾಯ ಆಳಿದ ಅವನ ಬೇರೆ ಕುಮಾರನು ಅರಸುತನವನ್ನು ಬಿಟ್ಟು ನಿವರ್ತಿಯಾಗುವ ಮಟ್ಟಿಗೂ, ಆ ಸ್ವದೇಶಕಲಹದಿಂದ ನಡೆದ ಕಾರ್ಯಗಳು ಪ್ರಜೆಗಳು ಕೋರಿದ ಪ್ರಕಾರ ಪೂರ್ಣವಾಗಿ ಸಿದ್ಧಿಸಲಿಲ್ಲ. ಆದದರಿಂದ ಈ ಮೂರು ಮಂದಿ ಅರಸರು ಮಾಡಿದ ಧೊರೆತನದ ವಿವರವನ್ನು ಈ ವಿಷಯದಲ್ಲಿ ಸಮ್ಮಂಧಿಸಿ ನಿಧಾನಿಸ ಬೇಕು.

ಆ ಕಾಲದಲ್ಲಿ ತಮ್ಮ ಅರಸನನ್ನು ವಹಿಸಿ ಕೊಂಡಿದ್ದ ಅರಸಕಕ್ಷಿಯೂ, ಅವನನ್ನು ಎದುರಿಸುತ್ತಾ ಇದ್ದ ಪ್ರಜೆಕಕ್ಷಿಯೂ ಎಂದು ಎರಡು ಕಕ್ಷಿಗಳು ರಾಜ್ಯದಲ್ಲಿ ಇದ್ದವು. ಅವರಲ್ಲಿ ಮೊದಲನೇ ಕಕ್ಷಿಯವರು ತಮ್ಮ ಅರಸನಿಗೆ ಸಲ್ಲ ತಕ್ಕ ಸ್ವಾತಂತ್ರ್ಯಗಳನ್ನು ಕಾದು ಕೊಂಡು ಸ್ಥಿರಪ

ಡಿಸುವ ಉದ್ದಿಶ್ಯ ತಮಗುಂಟಾದದ್ದನ್ನೆಲ್ಲಾ ಕೊಟ್ಟು, ಅದೇ ಚಿಂತೆಯಾಗಿದ್ದು, ತಮ್ಮಿಂದಲಾದ ಸಾಧನೆಗಳನ್ನೆಲ್ಲಾ ಮಾಡುತ್ತಾ ಬಂದರು. ಅವರಲ್ಲಿ ಅನೇಕರು ಅರಸನು ಮಾಡುವಂಥ ನಾನಾ ಕಾರ್ಯಗಳೂ, ಪ್ರಜೆಗಳಿಗೆ ಯಾವ ವಿಷಯದಲ್ಲಾದರೂ ಸಮ್ಮತವಾಗದಂತೆ ನಡೆಯುವ ನಡತೆಯೂ, ತಮಗೆ ಸರಿ ಬೀಳದೆ ಇದ್ದಾಗ್ಯೂ, ಅವನ ಅಧಿಕಾರವನ್ನು ನಿರಾಕರಿಸುವದೂ, ಅವನ ಮಾತನ್ನು ಮೀರುವದೂ ಪಾಪವೆಂದು ಎಣಿಸಿ, ರಾಜಘನವೂ, ಮುಖವಶೀಕರವೂ ಉಳ್ಳ ತಮ್ಮ ಅರಸನಾದ ಚಾರ್ಲ್ಸ್ ಎಂಬವನನ್ನು ಅತ್ಯಂತ ಚಕ್ತಿಯಿಂದ ಸ್ನೇಹಿಸಿದ್ದರಿಂದ ಅವನ ಪಕ್ಷವು ಕೇವಲ ಅಶಕ್ತವಾಗಿರುವಾಗ ಸಹ, ಧಾರಾಳವಾದ ದ್ರುಥದಿಂದಲೂ, ವೈರಾಗ್ಯದಿಂದಲೂ ಕೈ ಹಿಡಿದು ಸಾಧಿಸಿದರು. ಅರಸಕಕ್ಷಿಗೆ ಶೇರಿದವರಲ್ಲಿ ಮುಕ್ಕಾಲುಪಾಲು ಜನರು ಐಶ್ವರ್ಯವುಳ್ಳ ಇಂಗ್ಲಿಷ್ ಧೊರೆಮಕ್ಕಳಾಗಿದ್ದರು. ಅವರು ಯುದ್ಧಮುಖದಲ್ಲಿ ತಮಗೆ ಶೇರಿದವರ ಸಂಗಡ ದೊಡ್ಡ ರಾಣುವೆಯಾಗಿ ಹೋಗ ತಕ್ಕವರಾಗಿದ್ದರು. ಅವರಲ್ಲಿ ಅನೇಕರು ಘನಹೀನವಾದ ಕೃತ್ಯಗಳನ್ನು ಸ್ವಪ್ನದಲ್ಲಿಯೂ ನೆನಸಲಾರದಷ್ಟು ದೊಡ್ಡಸ್ತಿಕೆಯುಳ್ಳವರು. ಆದಾಗ್ಯೂ ಅವರಲ್ಲಿ ಕೆಲವರು ಕೇಳಿಕೆಗಳಲ್ಲಿಯೂ ಯುದ್ಧದಲ್ಲಿಯೂ ಪ್ರೀತಿಯುಳ್ಳ ಡಂಚಾಚಾರಿಗಳಾದ ವೀರರು. ಪ್ರಜೆಕಕ್ಷಿಯವರು ತಾವು ನ್ಯಾಯವೆಂದು ಎಣಿಸಿದ ಒಂದು ಮುಖಾಂತ್ರದಿಂದ ಅರಸನನ್ನು ಎದುರಿಸಿದರು. ಅರಸನು ದೇವರ ಅನುಮತಿಯಿಂದಲೇ ಪ್ರಜೆಗಳಿಗೆ ನೇಮಿಸಲ್ಪಟ್ಟಿರುವದು ನಿಜವಾಗಿದ್ದಾಗ್ಯೂ, ಆ ಅರಸನು ಅನ್ಯಾಯವಾಗಿ ಆಳ ಯತ್ನಯಿಸುವಾಗಲು ಅವನನ್ನು ಎದುರಿಸುವದು ನೀತಿ ಎಂದೂ, ತಾವು ಹ್ಯಾಗೋ ಹಾಗೆಯೇ ಅರಸನು ಸಹ ದೇಶಪ್ರಮಾಣಗಳಿಗೆ ಅಣಗಿ ನಡಿಯುವದು ಕ್ರಮವೆಂದೂ, ಅವನು ಅರಸನಾಗಿರುವ ಕಾರಣದಿಂದ ತಮ್ಮ ಸ್ವಾಧೀನಕ್ಕೂ ಸ್ವತಂತ್ರ್ಯಕ್ಕೂ ವಿರೋಧವಾಗಿ ಯಾವದೊಂದನ್ನೂ ಮಾಡ ಕೂಡದೆಂದೂ, ರೈತರಿಗೆ ಪ್ರತಿನಿಧಿಗಳಾಗಿರುವ ಸಂಘದವರಿಗೆ ಸಲ್ಲ ತಕ್ಕ ಅಧಿಕಾರವನ್ನೂ ಶ್ಲಾಘ್ಯಗಳನ್ನೂ ಮೀರಿದ ಅರಸನ ಸಂಗಡ ಯುದ್ಧ ಮಾಡುವದು ನ್ಯಾಯವೆಂದೂ, ಅರಸನು ತನ್ನ ಅಧಿಕಾರನನ್ನು ಮೀರಿ ನಡಿಯುವಾಗ, ಪೂರ್ವಸ್ಥಾಪನೆಯಾದ ಆ ರಾಜನೀತಿ

ಗಿಂತಲೂ, ಪ್ರಜೆಗಳಿಂದ ಆಳಲ್ಪಡುವ ಧೊರೆತನವು ಯುಕ್ತವಾದದ್ದೆಂದೂ, ಈ ಪ್ರಕಾರ ಎಣಿಸಿದರು.

ಈ ದುಃಖಕರವಾದ ಯುದ್ಧದಲ್ಲಿ ರಾಜ್ಯಕಾರ್ಯಗಳ ಸಂಗಡ ಮತಸಮ್ಮಂಧವಾದ ಕಾರ್ಯಗಳು ಸಹ ಕಲೆತು ಕೊಂಡಿದ್ದವು. ಹ್ಯಾಗಂದರೆ, ಇಂಗ್ಲಿಷ್ ಸಭೆಗೆ ಶೇರಿದವರೇ ಬಹುಶಾ ಅರಸ ಪಕ್ಷಿಯಲ್ಲಿ ಶೇರಿದ್ದರು. ಆದದರಿಂದ ಅದನ್ನು ಎದುರಿಸಿದ ಸಭೆಯವರೆಲ್ಲರೂ ಎದುರುಪಕ್ಷಿಯವರಿಗೆ ಕೂಡಿ ಕೊಂಡರು. ಸ್ವಲ್ಪ ಕಾಲಕ್ಕೆ ಮುಂಚೆ ಪ್ಯೂರಿತನ್ಸ್ ಎಂಬವರು ಲೆಖ್ಖದಲ್ಲಿಯೂ ಮಾತುಬರಿಯಲ್ಲಿಯೂ ಬಲವಾದರು. ಸಭೆಯು ಸಾಧಾರಣ ಆರಾಧನೆಯ ಕ್ರಮಗಳಿಂದಲೂ ಅದಕ್ಕೆ ರಾಜಾಂಗದಲ್ಲಿ ಶೇರಿದ ಸಮ್ಮಂಧದಿಂದಲೂ ಮಾತ್ರವಲ್ಲ, ರೋಮನ್ ಸಭೆಯ ಆರಾಧನೆಗಳಿಗೆ ಸಮವಾಗಿ ಇಂಗ್ಲಿಷ್ ಸಭೆಯ ಕ್ರಮಗಳನ್ನು ಮಾರ್ಪಡಿಸುವದಕ್ಕೆ ಈ ಕಾಲದಲ್ಲಿ ಕೆಲವು ಸಾಧನೆಗಳು ಮಾಡಲ್ಪಟ್ಟದರಿಂದಲೂ, ಸತ್ಯಮಾರ್ಗದ ಸ್ಥಿತಿಯು ಕೆಡುವದಕ್ಕೆ ಹೇತುವೆಯಾಗಿರುತ್ತದೆ ಎಂದು ಎಣಿಸಿದರು. ಅರಸನ ಪಕ್ಷದಲ್ಲಿದ್ದವರು ಇಂಗ್ಲಿಷ್ ಸಭೆಗೋಸ್ಕರವೇ ಹೋರಾಡುತ್ತೇವೆಂದು ಅರಿಕೆ ಮಾಡಿದರು. ಅವರಲ್ಲಿ ಅನೇಕರು ಅದೇ ಪ್ರಕಾರ ಯಥಾರ್ಥವಾಗಿ ಹೋರಾಡಿದರು. ಅವರಲ್ಲಿ ಅನೇಕರು ಶುದ್ಧ ನ್ಯಾಯಗಾರರಾಗಿದ್ದರು. ಬೇರೆ ಅನೇಕರು ಸತ್ಯವೇದವಾಕ್ಯಗಳನ್ನು ತೆಗೆದು ಹೇಳುವದರಲ್ಲಿ ಷಟ್ಟಿಗರಾಗಿದ್ದ ಪ್ರಕಾರವೇ ಯುದ್ಧದ ಕೆಲಸದಲ್ಲಿಯೂ ಸಾಮರ್ಥ್ಯರಾಗಿದ್ದರು. ಅರಸ ಪಕ್ಷಿಯವರು ತಮ್ಮ ಮತವೈರಾಗ್ಯದಲ್ಲಿ ಮತಸಮ್ಮಂಧವಾದ ಪರಿಶುದ್ಧ ಕಾರ್ಯಗಳ ಸಂಗಡ ಪರಿಶುದ್ಧ ಸ್ಥಳಗಳನ್ನೂ ಘನ ಪಡಿಸಿದರು. ಪ್ಯೂರಿತನ್ಸ್ ಎಂಬವರು ಪ್ರಾರ್ಥನೆಯ ಮನೆಗಳನ್ನು ಅಮರ್ಯಾದೆ ಮಾಡಿ, ಹೊರಗಿನ ಆಚಾರಗಳ್ಯಾವದೂ ಇರ ಕೂಡದೆಂದು ಸಾಧಿಸಿದ ತಮ್ಮ ಕುರುಡತನವಾದ ವೈರಾಗ್ಯದಲ್ಲಿ ನೆಟ್ಟಗಿರುವದು ಇಂಥಾದ್ದು, ಚನ್ನಾಗಿರುವದು ಇಂಥಾದ್ದು ಎಂದು ಅರಿಸಿ ಕೊಳ್ಳದೆ ನೆನವು ತಪ್ಪಿ ಹೋದರು.

ಅರಸನು ಸಿಂಹಾಸನವೇರಿದ ಸ್ವಲ್ಪ ದಿವಸಗಳಲ್ಲಿ ಫ್ರಾನ್ಸ್ ಅರಸನ ಸಹೋದರಿ (Henrietta Maria) ಹೆನ್ರಿಯೆತ್ತ ಮರೈಯ ಎಂಬ

ಒಬ್ಬಳನ್ನು ಮದುವೆ ಮಾಡಿ ಕೊಂಡನು. ಆ ರಾಜ್ಯಕನ್ನಿಕೆಯು ಪ್ರೊತೆಸ್ತಾಂತ್ ಸಭೆಯವಳಲ್ಲದರಿಂದಲೂ, ಬಹಳ ಗರ್ವವೂ ಅಹಂಕಾರವೂ ಉಳ್ಳವಳಾಗಿದ್ದದರಿಂದಲೂ, ಆ ಮದುವೆಯು ಇಂಗ್ಲಿಷಿನವರಿಗೆ ಸಮ್ಮತಿಯಾದ ಕಾರ್ಯವಾಗಿರಲಿಲ್ಲ. ಸತ್ತು ಹೋದ ಅರಸನ ಇಷ್ಟನಾದ ಬಕ್ಕಿಂಗ್ ಹಾಮ್ ದ್ಯೂಕ್ ಪ್ರಭುವು ಚಾರ್ಲ್ಸನಿಂದ ಘನ ಹೊಂದಿದವನಾಗಿದ್ದನು. ಹೋದ ಧೊರೆತನದಲ್ಲಿ ಸ್ಪಾನಿಯರ ಸಂಗಡ ತೊಡಗಿದ ಯುದ್ಧವು ಸಹ ಅವನ ಬೋಧನೆಯಿಂದಲೇ ನಡಿಸಲ್ಪಟ್ಟಿತು. ಆದಾಗ್ಯೂ ಅದರಲ್ಲಿ ಯಾರಿಗೆ ಜಯವಾಯಿತು ಎಂಬುವದು ಸಂದೇಹವಾಗಿಯೇ ಇತ್ತು. ಸ್ಪಾನಿಯರ ಸಂಗಡ ಯುದ್ಧ ಮಾಡುವದಕ್ಕೆ ಶಿದ್ಧವಾದ ಒಂದು ನಾವಿಕದಂಡು (Rochelle) ರೊಷಿಲ್ ಊರಿನಲ್ಲಿ ಇದ್ದ ಕೆಲವು ಪ್ರೊತೆಸ್ತಾಂತ್ ಪ್ರಜೆಗಳನ್ನು ಅಣಗಿಸಿ ಕುಂದಿಸುವದಕ್ಕೋಸ್ಕರ ಫ್ರಾನ್ಸ್ ಅರಸನಿಗೆ ಕೊಡಲ್ಪಟ್ಟದರಿಂದ ಇಂಗ್ಲಿಷಿನವರು ತಮ್ಮ ಅರಸನ ಮೇಲೆ ಮಿತಿಇಲ್ಲದ ಕೋಪ ಗೊಂಡರು. ಮುತ್ತಿಗೆಯಲ್ಲಿದ್ದ ಆ ಪಟ್ಟದವರಿಗೆ ಸಹಾಯವಾಗಿ ಒಂದು ಸೈನ್ಯವು ಹಿಂದಿನಿಂದ ಕಳುಹಿಸಲ್ಪಟ್ಟಾಗ್ಯೂ, ಅದನ್ನು ನಡಿಸಿಕೊಂಡು ಹೋದವನಾದ ಬಕ್ಕಿಂಗ್ ಹಾಮ್ ದ್ಯೂಕ್ ಪ್ರಭುವು ಅಪಜಯವಾಗಿ, ಸೈನ್ಯವು ಕಡಿಮೆಯಾಗಿ ಅಧೈರ್ಯವಾಗಿ ಬಂದದರಿಂದ, ಅದು ವರೆಗೂ ಅವನನ್ನು ಅಪೇಕ್ಷಿಸದೆ ಇದ್ದ ಆ ಜನರು ಇನ್ನೂ ಅವನನ್ನು ಅಸಂಹಿಸಿದರು. ಈ ಪ್ರಕಾರ ಜನಪ್ರಿಯವಿಲ್ಲದವನಾಗಿದ್ದ ಆ ರಾಜಯಿಷ್ಟನು ತನ್ನಿಂದ ವಿಮಾರಿಸಲ್ಪಟ್ಟಿದ್ದ ಒಬ್ಬ ದಳಕರ್ತನಿಂದ (Portsmouth) ಪೋರ್ತ್ಸ್‌ಮೌತ್ ಊರಿನಲ್ಲಿ ವಂಚನೆಯಾಗಿ ಕೊಲ್ಲಲ್ಪಟ್ಟನು.

ಮೇಲೆ ಹೇಳಿದ ಯುದ್ಧಗಳನ್ನು ನಡಿಸುವ ಉದ್ದಿಶ್ಯ ಬೇಕಾದ ದ್ರವ್ಯವನ್ನು ಅರಸನು ಪಾರ್ಲಿಮೆಂತಿನವರ ಬಳಿಯಲ್ಲಿ ಕೇಳ ಬೇಕಾಯಿತು. ಜನಪ್ರತಿನಿಧಿಸಂಘದವರು ಯಾವಾಗಲೂ ಅವನು ಕೇಳುವದಕ್ಕೆ ಇಲ್ಲವೆಂಬ ಉತ್ತರವೇ ಹೇಳುತ್ತಾ ಬಂದರು. ಮೂರು ಸಾರಿಯೂ ಪಾರ್ಲಿಮೆಂತಿನವರು ಸಂಘ ಕೂಡಿದರು. ಅರಸನು, ತಾನು ಆಳುವ ಕ್ರೂರತ್ವವನ್ನು ಬಿಟ್ಟು ಶಾಂತವಾಗಿ ಆಳುವೆನೆಂದು, ಅರಿಕೆ ಮಾಡಿದರೇ ಹೊರ್ತು ಬೇರೆ ಪ್ರಕಾರ ಅವನಿಗೆ ದ್ರವ್ಯಸಹಾಯ ಮಾಡುವದಿಲ್ಲವೆಂದು

ಒಂದೊಂದು ಸಾರಿಯೂ ಶೀರ್ಮಾನಿಸಿದರು. ಆ ಸಂಘ ಚದರಿದ ಒಂದೊಂದು ಸಾರ್ತಿಯೂ ಅರಸನು ಪ್ರಜೆಗಳ ಮನಸ್ಸಿಗೆ ವಿರೋಧವಾಗಿ ತೆರಿಗೆಯನ್ನು ಕೂಡಿಸಿದನು. ಆ ತೆರಿಗೆಯನ್ನು ಕೊಡದವರೆಲ್ಲರನ್ನೂ ವಿಚಾರಣೆ ಇಲ್ಲದೆ ಅಪರಾಧ ಹಾಕಲೂ ಶೆರೆಯಲ್ಲಿ ಹಾಕಲೂ ಪ್ರಾರಂಭಿಸಿದನು. (Star Chamber) ಸ್ಟಾರ್ ಚೇಂಬರ್, ಮೇಲಾದ ಅಧಿಕಾರಿಗಳ ಕೋರ್ಟುೞ ಎಂಬ ಎರಡು ಕೋರ್ಟಿನವರಿಂದ ಪ್ರಜೆಗಳಿಗೆ ಅನೇಕ ಇಕ್ಕಟ್ಟುಗಳೂ ಕೊರತೆಗಳೂ ಪ್ರಾಪ್ತಿಸಿದವು. ಒಂದರಲ್ಲಿ ಸಂಸ್ಥಾನದ ವಿಷಯವಾದ ಅಪರಾಧಗಳೂ, ಮತ್ತೊಂದರಲ್ಲಿ ಮತವಿಷಯವಾದ ಅಪರಾಧಗಳೂ ವಿಚಾರಣೆ ಮಾಡಲ್ಪಟ್ಟವು. ಅವರಿಂದ ಅಪರಾಧಿಗಳೆಂದು ಶೀರಿಸಲ್ಪಟ್ಟವರಿಗೆ ಮಹಾ ಕ್ರೂರವಾದ ಶಿಕ್ಷೆಗಳು ವಿಧಿಸಲ್ಪಟ್ಟವು.

ಮೂರನೇ ಸಾರಿ ಪಾರ್ಲಿಮೆಂತ್ ಸಂಘವು ಚದರುವದಕ್ಕೆ ಮುಂಚೆಯೇ ಅವರು ಅರಸನಿಗೆ ಕೊಟ್ಟ (Petition of Right) ಸ್ವತಂತ್ರ ಅರ್ಜಿ ಎಂಬ ಒಂದು ವಿಜ್ಞಾಪನೆಯನ್ನು ಅರಸನು ತೆಗದು ಕೊಂಡು, ಅದರಲ್ಲಿ ಕಂಡಿರುವದು ನ್ಯಾಯವೆಂದೂ, ಅದರ ಪ್ರಕಾರವೇ ತಾನು ಯಥಾರ್ಥವಾಗಿ ನಡೆದು ಕೊಳ್ಳುವೆನೆಂದೂ, ದೃಢವಾದ ಮಾತು ಕೊಟ್ಟದರಿಂದ ಆ ಅರಸನಿಗೆ ದ್ರವ್ಯಸಹಾಯ ಮಾಡ ಬಹುದೆಂದು ಶೀರ್ಮಾನಿಸಿದರು. ಆ ಸ್ವತಂತ್ರ ಅರ್ಜಿಯು ಮಹಾ ಮುಖ್ಯವಾದ ಪತ್ರಿಕೆ. ಅದರಿಂದ ಪಾರ್ಲಿಮೆಂಶಿನವರ ಅನುಮತಿ ಇಲ್ಲದೆ ಅರಸನು ಪ್ರಜೆಗಳ ಬಳಿಯಲ್ಲಿ ತೆರಿಗೆ ತೆಗದು ಕೊಳ್ಳ ಕೂಡದೆಂದೂ, ವಿಚಾರಣೆ ಇಲ್ಲದೆ ಇನ್ನು ಮೇಲೆ ಒಬ್ಬರನ್ನಾದರೂ ಶೆರೆಯಲ್ಲಿ ಹಾಕ ಕೂಡದೆಂದೂ, ಅದಕ್ಕೆ ಮುಂಚೆ ಶೆರೆಯಲ್ಲಿ ಹಾಕಲ್ಪಟ್ಟಿರುವವರು ಬಿಡುಗಡೆಯಾಗ ಬೇಕೆಂದೂ, ದೃಢವಾಯಿತು. (Great Charter) "ಮಹಾನಿಬಂಧನೆ" ಎಂಬ ಪತ್ರನೇಮಕಗಳನ್ನು ಅರಸರು ಆಗಾಗ್ಯೆ ಹೋದ ಕಾಲಗಳಲ್ಲಿ ಮೀರಿ ನಡೆದಿರಲಾಗಿ ಇನ್ನು ಮೇಲೆ ಅರಸನು ಆ ಪ್ರಕಾರ ನಡಿಯದೆ ಕೈಕೊಳ್ಳುವ ಹಾಗೆ ಮಾತು ಕೊಟ್ಟದರಿಂದ ಪಾರ್ಲಿಮೆಂಶಿನವರೂ ಪ್ರಜೆಗಳೂ ಬಹು ಸಂತೋಷ ಪಟ್ಟರು. ಆದಾಗ್ಯೂ ಚಾರ್ಲ್ಸ್ ಅರಸನು ತನ್ನ ಮಾತನ್ನೂ ತಾನು ಸಮ್ಮತಿಸಿದ ನಿಬಂಧನೆಗಳನ್ನೂ ಮೀರಿ ನಡೆದನು. ಅದರಿಂದ ಮುಂಚಿನಂತೆ ಅ

ಧಿಕ ವೈರವಾದ ವ್ಯಾಜ್ಯವು ಅವನಿಗೂ ಪಾರ್ಲಿಮೆಂಟಿನವರಿಗೂ ಸಂಭವಿಸಿತು. ಅವನು ಸಹ ಬಹು ಕೋಪಬ್ರಾಂತನಾಗಿ ಉಭಯ ಸಂಘಗಳನ್ನೂ ನಾಶ ಮಾಡಿದನು.

ಇಂಗ್ಲಾಂಡ್ ದೇಶಚರಿತ್ರೆಯಲ್ಲಿ ಇನ್ನು ಮೇಲೆ ನೂತನ ವಿಧವಾಗಿ ಆಳಿಕೆ ಮಾಡ ಆರಂಭಿಸಿತು. ಹ್ಯಾಗಂದರೆ, ಅರಸನು ತನಗೆ ಮುಂಚೆ ಇದ್ದ ಅರಸುಗಳಂತೆ ಈ ವಿಧದಲ್ಲಿ ತನಗೆ ದ್ರವ್ಯ ಸಿಕ್ಕುವದಿಲ್ಲವೆಂದು ಕಂಡು, ಇನ್ನು ಮೇಲೆ ಪಾರ್ಲಿಮೆಂಟ್ ಸಂಘದ ಸಹಾಯವಿಲ್ಲದೆ ಒಂಟಿಯಾಗಿ ತನ್ನ ಚಿತ್ತದ ಪ್ರಕಾರ ಆಳ ಯತ್ನಯಿಸಿದನು. ಹನ್ನೊಂದು ವರುಷಗಳ ಮಟ್ಟಿಗೂ ಯಾವ ಪಾರ್ಲಿಮೆಂಟ್ ಸಂಘವೂ ಕೂಡಲಿಲ್ಲ. ಆ ಕಾಲವೆಲ್ಲಾ ಚಾರ್ಲಿಸನು ಏಕಚಕ್ರವರ್ತಿಯ ಹಾಗೆ ಧೊರೆತನ ಮಾಡಿ, ತನಗೆ ಇಷ್ಟವಿದ್ದ ಪ್ರಕಾರ ತೆರಿಗೆಗಳನ್ನು ವಿಧಿಸಿ, ತನ್ನ ಕೋರಿಕೆಯ ಪ್ರಕಾರ ಪ್ರಜೆಗಳ ಮೇಲೆ ತನಗೆ ಸರ್ವಾಧಿಕಾರವು ದೊರಕಿತೆಂದು ಎಣಿಸಿ ಕೊಂಡಿದ್ದನು. ಹೀಗಿರುವ ಕಾಲದಲ್ಲಿ ಇವನಿಗೆ ಮುಖ್ಯ ಮಂತ್ರಿಗಳು ಯಾರಂದರೆ, (Strafford) ಸ್ಟ್ರಾಫೋರ್ಡ್ ಪಟ್ಟದ (Earl) ಏರ್ಲ್ ಪ್ರಭುವಾದ (Thomas Wentworth) ತೋಮಾಸ್ ವೆಂತ್ವರ್ತ್ ಎಂಬವನೂ, ಮುಖ್ಯಾಧ್ಯಕ್ಷನಾದ (Laud) ಲಾದ್ ಎಂಬವನೂ. ಇವರಲ್ಲಿ ತೋಮಾಸ್ ವೆಂತ್ವರ್ತ್ ಎಂಬವನು ಅರಸನಿಗೆ ತಕ್ಕ ಸಂಸ್ಥಾನ ವಿಷಯಗಳಲ್ಲೆಲ್ಲಾ ಸಹಾಯವಾಗಿದ್ದು, ಅವನನ್ನು ಏಕಚಕ್ರಾಧಿಪತಿಯಾಗ ಮಾಡುವದಕ್ಕೆ ಯಾವ ಕಷ್ಟವೂ, ಏನು ಖರ್ಚು ಹಿಡಿದಾಗ್ಯೂ, ಅದಕ್ಕೆಲ್ಲಾ ಸಮ್ಮತಿ ಪಟ್ಟು ಮುಗಿಸ ಬೇಕೆಂದು ಸಾಧಿಸಿದವನು. ತನ್ನ ಅಭಿಪ್ರಾಯಗಳುಳ್ಳ ವಿಸ್ಪಾರ್ಟುಗಳಿಗೆ (Thorough) "ಪೂರ್ಣ ರಾಜಸುಂದರ" ಎಂಬುವ ಹೆಸರನ್ನು ಕೊಟ್ಟನು. ಯಾತಕ್ಕಂದರೆ, ಪ್ರಜೆಗಳೆಲ್ಲರ ಮೇಲೆಯೂ ಅರಸನ ಅಧಿಕಾರ ಪೂರ್ಣವೆಂಬುವದೂ, ದ್ರವ್ಯ ಬೇಕಾದಾಗ ಅರಸನು ಪ್ರಜೆಗಳಿಗೆ ತೆರಿಗೆ ಮುಂತಾದವುಗಳನ್ನು ವಿಧಿಸುವದಕ್ಕೆ ತಕ್ಕ ಅಧಿಕಾರವು ಪೂರ್ಣವೆಂಬುವದೂ, ಪ್ರಜೆಗಳು ಅರಸನ ಆಜ್ಞಾಚಕ್ರಕ್ಕೆ ಅಣಗಿ ವಿಧೇಯವಾಗಿರುವದು ಪೂರ್ಣವೆಂಬುವದೂ ಅವನ ವಿಸ್ಪಾರ್ಟಿನ ತಾತ್ಪರ್ಯವಾಗಿತ್ತು. ಕಾನ್‌ತರ್‌ಬರಿಯ ಶ್ರೇಷ್ಠ ಅಧ್ಯಕ್ಷನಾದ

ಲಾಡ್ ಎಂಬವನೂ ಅದೇ ಮೇರೆಗೆ ಮತಸಮ್ಮಂಧವಾದ ವಿಷಯಗಳಲ್ಲಿ ಒಂದು ಏರ್ಪಾಟು ಮಾಡಿ, ಅದಕ್ಕೆ ಮುಂಚೆ ಇದ್ದದಕ್ಕಿಂತ, ಇಂಗ್ಲಿಷ್ ಸಭಾರಾಧನೆಯ ಕ್ರಮಗಳನ್ನು ರೋಮನ್ ಸಭೆಯ ಕ್ರಮಗಳಿಗೆ ಅಧಿಕವಾಗಿ ಸಮ್ಮಂಧವಾಗ ತಕ್ಕ ಮಾರ್ಪಡುವಿಕೆಗಳನ್ನು ಮಾಡ ಪ್ರಾರಂಭಿಸಿದನು. ಹೀಗೆ ತನ್ನ ಯೋಚನೆಯನ್ನು ಈಡೇರಿಸುವದಕ್ಕೆ (Court of High Commission) "ಮೇಲಾದ ಅಧಿಕಾರಗಳ ಕೋರ್ಟು" ಎಂಬ ಸಭೆಯವರಿಂದ ತನಗೆ ಎದಿರಿಗಳಾಗಿದ್ದವರನ್ನೆಲ್ಲಾ ಕನಿಕರವಿಲ್ಲದೆ ಶಿಕ್ಷೆ ಮಾಡಿಸಿದನು.

ಈ ಕ್ರೂರವಾದ ಏರ್ಪಾಟುಗಳನ್ನು ಸ್ಥಾಪಿಸುವ ಉದ್ದಿಶ್ಯ ಒಂದು ಸೈನ್ಯವು ಅವಶ್ಯವಾಗಿ ಇರ ಬೇಕಾದ ಹೇತುವೆಯಾಯಿತು. ಅರಸನು ಪಾರ್ಲಿಮೆಂಟಿನವರ ಸಹಾಯವಿಲ್ಲದೆ, ಪ್ರಜೆಗಳ ಇಷ್ಟಕ್ಕೆ ವಿರೋಧವಾಗಿ ಆಳಿಕೆ ಮಾಡುವಾಗ ರಾಣುವೆಯ ಸಹಾಯವಿಲ್ಲದೆ ಪ್ರಜೆಗಳನ್ನು ಒಳಪಡಿಸಿ ಕೊಂಡು ಆಳುವದು ಕೂಡದ ಕಾರ್ಯ. ಇದಕ್ಕಾಗಿ ಒಂದು ರಾಣುವೆಯನ್ನು ಸ್ಥಾಪಿಸುವದಕ್ಕೆ, ಪೂರ್ವದಲ್ಲಿ ಕೂಡಿಸುತ್ತಾ ಬಂದದ್ದು ಒಂದು ವಿಧವಾದ ತೆರಿಗೆ. ಅದರಿಂದ ಅನೇಕ ಸಮಯಗಳಲ್ಲಿ ನಾವಿಕಸೈನ್ಯಗಳು ಕೂಡಿಸಲ್ಪಟ್ಟದ್ದು ಉಂಟು. ಅದು ಏನಂದರೆ, ಸಮುದ್ರದ ರೇವುಗಳಲ್ಲಿರುವ ಪಟ್ಣಗಳಲ್ಲೆಲ್ಲಾ ಒಂದೊಂದು ಪಟ್ಣಕ್ಕೆ ಇಷ್ಟು ಹಡಗಗಳು, ಅಥವಾ, ಆ ಹಡಗಗಳನ್ನು ಸಂಪಾದಿಸುವದಕ್ಕೆ ಇಷ್ಟು ದ್ರವ್ಯ ಎಂದು ತೆರಿಗೆ ವಿಧಿಸಲ್ಪಟ್ಟದ್ದು ಉಂಟು. ಈ ವಿಧವಾದ ಬಳಿಕೆಯನ್ನು ತಿರಿಗಿ ಸ್ಥಾಪಿಸ ಬೇಕೆಂದು ಅರಸನಿಗೆ ಆಲೋಚನೆ ಹೇಳಿದರು. ಆ ತೆರಿಗೆಯು ದೇಶದ ಒಳನಾಡುಗಳಲ್ಲಿ ವಾಸಿಸುವ ಜನರ ಬಳಿಯಲ್ಲಿಯೂ, ಆ ತೆರಿಗೆಗೆ ಸಮ್ಮಂಧವಿಲ್ಲದವರ ಬಳಿಯಲ್ಲಿಯೂ ಅನ್ಯಾಯವಾಗಿ ಕೂಡಿಸಲ್ಪಟ್ಟಿತು. ಐಶ್ವರ್ಯವಂತನಾದ (John Hampden) ಯೋಹಾನ್ ಹಾಂಪ್ಡೆನ್ ಎಂಬವನೇ ಈ ಅಯುಕ್ತವೂ ಅನ್ಯಾಯವೂ ಆದ ತೆರಿಗೆಯನ್ನು ಮೊದಲು ಕೊಡುವದಿಲ್ಲವೆಂದು ಎದುರಿಸಿದವನು. ಈ ಕಾರ್ಯವನ್ನು ನ್ಯಾಯಸಭೆಯವರ ಮುಂದೆ ವಿಚಾರಣೆಗೆ ತರುವಂಥ ಧೈರ್ಯಶಾಲಿಯಾಗಿ, ಅವನು ಧೊರೆತನದಲ್ಲಿ ಎಲ್ಲಾ ಅಧಿಕಾರವನ್ನು ಎದುರಿಸಿದನು. ಈ ಕಾರ್ಯವು ವಿಚಾರಣೆಯಲ್ಲಿರುವಾಗ ಸಮಸ್ತ ಜನರೂ

ಇದು ಹ್ಯಾಗೆ ಮುಗಿಯುವದೋ ಎಂದು ರಾತ್ರಿ ಹಗಲು ಅದೇ ಚಿಂತೆಯಾಗಿದ್ದರು. ಯಾಕಂದರೆ ಆ ನ್ಯಾಯಸಭೆಯವರು ತೀರಿಸುವ ತೀರ್ಪಿಗೆ ಸಮ್ಮಂಧ ಪಡದವರು ಯಾರೂ ಇಲ್ಲ. ಹನ್ನೆರಡು ದಿವಸಗಳು ವಿಚಾರಣೆಯಾದ ಮೇಲೆ ಅದು ಧೊರೆತನದವರ ಪಕ್ಷವಾಗಿಯೇ ತೀರ್ಪಾಯಿತು. ಆದಾಗ್ಯೂ, ಏಳು ಮಂದಿ ನ್ಯಾಯಾಧಿಪತಿಗಳು ಧೊರೆತನದವರ ಪಕ್ಷವಾಗಿ ತೀರಿಸುವಾಗ ಐದು ಮಂದಿ ನ್ಯಾಯಾಧಿಪತಿಗಳು ಹಾಂಪ್ಡೆನ್ ಪಕ್ಷದಲ್ಲಿ ಇದ್ದದರಿಂದ ಧೊರೆತನದವರ ಜಯವು ದೊಡ್ಡದಲ್ಲ. ಅಧಿಕವಾದ ಮಂದಿ ಎಲ್ಲರೂ ಜಯ ಪಟ್ಟು, ಅರಸನಿಗೆ ವಿಧೇಯವಾಗಿರುವ ಕಾಲದಲ್ಲಿ ಕೆಲವರು ಧೈರ್ಯವಾಗಿ ನಿಂತದ್ದರಿಂದ ಇಂಥಾ ಜಯ ಹೊಂದುವದಕ್ಕಿಂತ ಪೂರ್ಣವಾಗಿ ಅಪಜಯವಾಗುವದೇ ಧೊರೆತನಕ್ಕೆ ಅನುಕೂಲವಾಗಿರ ಬಹುದು.

ಹೀಗಿರುವ ಕಾಲದಲ್ಲಿ ಸ್ಕೊತ್ಲಾಂಡ್ ದೇಶದಲ್ಲಿ ಮಾತ್ರ ಒಂದು ಕಲಹ ಏಳದೆ ಇದ್ದರೆ, ಧೊರೆತನದ ಕ್ರೂರವು ಬಹಳ ದಿವಸಗಳು ಮುಗಿಯದೆ ನಡಿಯುತ್ತಾ ಇರ ಬಹುದು. ನಾವು ಮುಂಚೆ ಹೇಳಿದ ಪ್ರಕಾರ ಸ್ಕೋತರು ತಿದ್ದುಪಾಟಿನ ಕ್ರಿಯೆಯಲ್ಲಿ ಮಹಾ ವಾಂಛೆಯುಳ್ಳವರಾಗಿ, ಇಂಗ್ಲಾಂಡಿನಲ್ಲಿದ್ದ ತಮ್ಮ ಜತೆಯವರ ಕ್ರಿಯೆಗಿಂತ ಸ್ವಲ್ಪ ಮಿಂಚಿ ಪೂರ್ವಸ್ಥಾಪನೆಯಾದ ದೇವಾರಾಧನೆಯ ಕ್ರಮಗಳನ್ನೆಲ್ಲಾ ಪೂರ್ಣವಾಗಿ ನಿವರ್ತಿ ಮಾಡಿ ಬಿಟ್ಟರು. ಹೀಗಿರುವಲ್ಲಿ ಅರಸನೂ ಶ್ರೇಷ್ಠ ಅಧ್ಯಕ್ಷನಾದ ಲಾಡ್ ಎಂಬವನೂ ಕೂಡಿ ಕೊಂಡು, ಇಂಗ್ಲಾಂಡಿನಲ್ಲಿ ಬಳಿಕೆಯಾಗಿರುವ ದೇವಾರಾಧನೆಯ ಕ್ರಮವನ್ನು ಆ ದೇಶದಲ್ಲಿಯೂ ಸ್ಥಾಪಿಸುವದಕ್ಕೆ ತೀರ್ಮಾನಿಸಿದರು. ಅವರು ಅದಕ್ಕೋಸ್ಕರ ಮಾಡಿದ ಸಾಧನೆಯಿಂದ ಆ ದೇಶದ ಜನರು ಕೋಪಗೊಂಡು, ಸಂಗಡಲೇ ಕಲಹ ಮಾಡ ಪ್ರಾರಂಭಿಸಿ, ಹೇರಾಳವಾದ ರಾಣುವೆಯನ್ನು ಶೇರಿಸಿ ಕೊಂಡು ದಕ್ಷಿಣಾಭಿಮುಖವಾಗಿ ಹೊರಟರು. ಆ ಮೇರೆಗೆ ಬಂದ ಮತಭ್ರಾಂತರಾದ ಸ್ಕೋತರ ಸೈನ್ಯಗಳಿಗೆ ಹೊಸದಾಗಿ ದಂಡಿನಲ್ಲಿ ಬರೆಯಲ್ಪಟ್ಟು ಯುದ್ಧದ ಕೆಲಸಗಳಲ್ಲಿ ಏನೂ ಅಭ್ಯಾಸವಿಲ್ಲದ ಅರಸನ ಸೈನ್ಯವು ಸಮಾನವಲ್ಲ. ಆದ್ದರಿಂದ ಸಂಗಡಲೇ ಸ್ಕೋತರ ದಳಕರ್ತರಿಗೆ ಸಮಾಧಾನ ಹೇ

ಳಲ್ಪಟ್ಟಿತು. ಚಾರ್ಲ್‌ಸ್ ಅರಸನು ಯುದ್ಧವನ್ನು ನಡಿಸ ಪ್ರಿಯವುಳ್ಳವನಾಗಿ ಅದಕ್ಕೆ ಬೇಕಾದ ದ್ರವ್ಯಕ್ಕೋಸ್ಕರ ಪಾರ್ಲಿಮೆಂತಿನವರನ್ನು ತನ್ನ ಮನಸ್ಸಿಗೆ ಪೂರ್ಣ ಅಸಮ್ಮತವಾಗಿಯೇ ಕರೆಯ ಕಳುಹಿಸಿದನು. ಆದಾಗ್ಯೂ ಉಭಯ ಸಂಘದವರೂ ಗತಿಸಿದ ಹನ್ನೊಂದು ಸಂವತ್ಸರಗಳಲ್ಲಿ ಅರಸನಿಂದ ಪ್ರಜೆಗಳಿಗಾದ ಹಿಂಸೆಗಳನ್ನೆಲ್ಲಾ ತಾವು ವಿಚಾರಣೆ ಮಾಡುವದಕ್ಕೆ ಮುಂಚೆ ಅರಸನಿಗೆ ಸಹಾಯವಾಗಿ ಹಣಗಳನ್ನು ಪ್ರಜೆಗಳ ಬಳಿಯಲ್ಲಿ ಕೂಡಿಸ ಸಮ್ಮತಿಸುವದಿಲ್ಲ ಅಂದರು. ಅದೇ ಮೇರೆಗೆ ಅವರು ಆ ವಿಚಾರಣೆಯನ್ನು ಶಾಂತವಾಗಿ ನಡಿಸಿದರು. ಆದಾಗ್ಯೂ ಅವರು ಹಿಡಿದ ಪಿಡಿವಾದದಿಂದಲೂ ಮೂರ್ಖತ್ವದಿಂದಲೂ ಅರಸನು ರೌದ್ರನಾಗಿ, ಪಾರ್ಲಿಮೆಂತಿನವರು ಕೂಡಿ ಮೂರು ವಾರಗಳಾಗುವದಕ್ಕಿಂತ ಮುಂಚೆಯೇ ಅದನ್ನು ಚದರಿಸಿ ಬಿಟ್ಟನು.

ಆದಾಗ್ಯೂ ಪಾರ್ಲಿಮೆಂತಿನವರ ಸಹಾಯವಿಲ್ಲದೆ ತಾನು ಎಣಿಸಿದ ಯುದ್ಧಗಳನ್ನು ನಡಿಸುವದು ಕೂಡದ ಕಾರ್ಯವೆಂದು ತಿರಿಗಿ ಗ್ರಹಿಸಿದನು. ಅದಕ್ಕೆ ಜನಪ್ರತಿನಿಧಿಸಂಘವನ್ನು ಬಿಟ್ಟು ಪ್ರಭುಗಳ ಸಂಘವನ್ನು ಮಾತ್ರ ಕರೆಯ ಕಳುಹಿಸಿ, ಅವರ ಮೂಲಕವಾಗಿಯೇ ತಾನು ಬೇಕಾದ ದ್ರವ್ಯವನ್ನು ಹೊಂದ ಬಹುದೆಂದು ಎಣಿಸಿದನು. ಆದಾಗ್ಯೂ ಅದು ಬಲಹೀನವಾಗಿ ಮುಗಿದದರಿಂದ ಅವನು ಉಭಯ ಸಂಘದವರನ್ನೂ ಕರೆಯ ಕಳುಹಿಸ ಬೇಕಾಯಿತು. 1640ನೇ ವರುಷ ನವಂಬರ್ ತಿಂಗಳಲ್ಲಿ ದೊಡ್ಡ ಪಾರ್ಲಿಮೆಂತ್ ಎಂಬ ಸಂಘವು ಕೂಡಿತು. ಆ ಸಂಘದವರು ಕೂಡಿದ ಕೂಟಗಳಲ್ಲಿ ಆ ಕಾಲದಲ್ಲಿ ಕೂಡಿದ ಕೂಟವೇ ಮಹಾ ಮುಖ್ಯವಾದದ್ದು. ಆ ಸಂಘದವರೆಲ್ಲರೂ ಆರಂಭದಲ್ಲಿ ಒಂದೇ ಗುರಿಯುಳ್ಳವರಾಗಿ, ಆ ಕಾಲದಲ್ಲಿ ಉಂಟಾಗಿದ್ದ ಕೇಡುಗಳನ್ನು ಮಾರ್ಪಡಿಸುವ ಉದ್ದಿಶ್ಯ ದೃಢವಾದ ಸಾಧನೆಯೊಡನೆ ಉದ್ಯುಕ್ತರಾದವರು. ಮೂರು ವರುಷಗಳಿಗೆ ಅಧಿಕವಾಗಿ ಪಾರ್ಲಿಮೆಂತಿನವರು ಸಂಘವು ಕೂಡದೆ ಇರ ಬಾರದೆಂದು ತೀರ್ಮಾನಿಸಿದರು. (Star Chamber) "ಸ್ಟಾರ್ ಚೇಂಬರ್" (Court of High Commission) "ಮೇಲಾದ ಅಧಿಕಾರಿಗಳ ಕೋರ್ಟು" ಎಂಬ ಎರಡು ಸಭೆಗಳನ್ನೂ ತೆಗದು ಹಾಕಿದರು.

ಗತಿಸಿದ ವರುಷಗಳಲ್ಲಿ ಅರಸನಿಗೆ ಆಲೋಚನೆ ಹೇಳುತ್ತಾ ಬಂದ ಮುಖ್ಯ ಮಂತ್ರಿಗಳನ್ನು ಅಪರಾಧಸ್ಥರೆಂದು ತೀರಿಸಿದರು. ಶ್ರೇಷ್ಠ ಅಧ್ಯಕ್ಷನಾನಾದ ಲಾಡ್ ಎಂಬವನನ್ನೂ ಸ್ಟ್ರಾಫೋರ್ಡ್ ಏರ್ಲ್ ಪ್ರಭುವನ್ನೂ ಶೆರೆಯಲ್ಲಿ ಹಾಕಿಸಿ ತರುವಾಯ ಕೊಲ್ಲಿಸಿದರು. ಇಂಥಾ ಪರಿಹಾರ ವಿರ್ಪಾಟುಗಳನ್ನೆಲ್ಲಾ ಮಾಡಿದ ಮೇಲೆ ಕೆಲವು ದಿವಸಗಳ ಮಟ್ಟಿಗೂ ಪಾರ್ಲಿಮೆಂಟಿನವರ ಸಂಘವು ಕೂಡದೆ ನಿಲ್ಲಿಸಲ್ಪಟ್ಟಿತ್ತು. ತರುವಾಯ ತಿರಿಗಿ ಕೂಡಿದಾಗ ಆ ಸಂಘದವರೆಲ್ಲರೂ ಮುಂಚೆ ಇದ್ದ ಹಾಗೆ ಒಂದೇ ಮನಸ್ಸುಳ್ಳವರಾಗಿರಲಿಲ್ಲ. ಮೇಲೆ ಹೇಳಿದ ಉಭಯ ಕಕ್ಷಿಗಳೂ ಜನಪ್ರತಿನಿಧಿಸಂಘದಲ್ಲಿ ವೈರಕಕ್ಷಿಯಾದರು. ಅರಸನ ಕಕ್ಷಿಯವರಿಗೆ (Cavaliers) ಕಾವಲೀರ್ಸ್ ಎಂದೂ, ಪ್ರಜೆಗಳ ಕಕ್ಷಿಗೆ (Round heads) ರೌಂಡ್ ಹೆಡ್ಸ್ ಎಂದೂ, ನಿಂದೆಯಾದ ಹೆಸರುಗಳು ಉಂಟಾದವು. ಅರಸನು ಮಾಡುತ್ತಾ ಬರುವ ಕ್ರಿಯೆಗಳಿಗಾಗಿ ಅವನನ್ನು ಬಂಧಿಸಲೂ, ಅವನ ನಡತೆಯನ್ನು ಕುರಿತು ಪ್ರಜೆಗಳ ಅಭಿಪ್ರಾಯವನ್ನು ಅವನಿಗೆ ತಿಳಿಸಲೂ ಬೇಕೆಂದು ಒಂದು ಕೋರಿಕೆ ಉಂಟಾದಾಗ ಮೊದಲು ಮೊದಲು ಉಭಯ ಕಕ್ಷಿಗಳಿಗೂ ವಾಗ್ವಾದಗಳು ಸಂಭವಿಸಿದವು.

ಆರಂಭದಲ್ಲಿ ಅರಸಕಕ್ಷಿಯಾದ ಸಂಘದವರೇ ಅಧಿಕ ಮಾತುಬರಿಯುಳ್ಳವರು. ಅವರಲ್ಲಿ ಅಧಿಕ ಪ್ರಬಲವಾಗಿದ್ದ (Hyde) ಹೈದ್, (Falkland) ಫಾಲ್ಕ್‌ಲಾಂಡ್, (Colepepper) ಕೋಲ್‌ಪೆಪ್ಪರ್ ಎಂಬ ಮೂವರನ್ನು ತನಗೆ ಮುಖ್ಯವಾದ ಆಲೋಚನೆಗಾರರಾಗಿ ಆರಿಸಿಕೊಂಡು, ಅವರ ಸಮ್ಮತಿಯ ಹೊರ್ತು ತಾನು ಯಾವದೊಂದೂ ಮಾಡುವದಿಲ್ಲವೆಂದು ಮಾತು ಕೊಟ್ಟನು. ಕೊಟ್ಟ ಮಾತಿನ ಪ್ರಕಾರ ಆ ಅರಸನು ನಡೆದು ಕೊಂಡಿದ್ದರೆ, ಇನ್ನು ಮೇಲೆ ಯಾವ ಕಲಹವೂ ಹಗೆಯೂ ಸಂಸ್ಥಾನದಲ್ಲಿ ಉಂಟಾಗಲಾರದು. ಯಾಕಂದರೆ, ಮೇಲೆ ಹೇಳಿದ ಮೂವರು ಪುರುಷರೂ ತಮ್ಮ ದೇಶದ ಮೇಲೆಯೂ, ದೇಶದವರ ಮೇಲೆಯೂ, ಬಹಳ ಅಭಿಮಾನವುಳ್ಳವರಾಗಿದ್ದರು. ಮತ್ತು ತಮ್ಮ ಅರಸನು ಕಾಲಿನಿಂದ ತೋರಿಸಿದ್ದನ್ನು ತಲೆಯಿಂದ ನಡೆದು ಮಾಡ ತಕ್ಕ ಬುದ್ಧಿಯುಳ್ಳವರಾಗಿದ್ದರು. ಆದಾಗ್ಯೂ ಚಾರ್ಲ್ಸ್ ಅರಸನು ತನ್ನ

ಮಾತನ್ನು ಮತ್ತೂ ಮಿಾರಿದನು. ತನ್ನ ಮಂತ್ರಿಗಳ ಯೋಚನೆ ಕೇಳದೆ, ಪ್ರಜೆಕಕ್ಷಿಗೆ ಶೇರಿದ ಐದು ಮಂದಿ ಸಂಘದವರನ್ನೂ ತಪ್ಪೇರಿಸಿ, ಜನಪ್ರತಿನಿಧಿ ಸಂಘದಲ್ಲಿದ್ದ ಅವರನ್ನು ಹಿಡಿಯುವಧಕ್ಕೆ ತಾನೇ ಆಯುಧಪಾಣಿಗಳಾದ ಸೇವಕರ ಸಂಗಡ ಹೋದನು. ಅವನು ಹೋಗುವದಕ್ಕಿಂತ ಸ್ವಲ್ಪ ಮುಂಚೆಯೇ ಆ ಸಂಘದವರು ಸಂಘವನ್ನು ಬಿಟ್ಟು ಹೋಗಿದ್ದರು. ಆದ್ದರಿಂದ ಹಿಂದು ಕಲಹವು ಸಂಗಡಲೇ ಉಂಟಾಗುವದಕ್ಕೆ ಸ್ಥಳವಿಲ್ಲ. ಆದಾಗ್ಯೂ ಇಂಗ್ಲಿಷಿನವರಲ್ಲಿ ಮುಕ್ಕಾಲು ಪಾಲು ಜನರು ಕಲಹಕ್ಕೆ ಪ್ರೇರೇಪಿಸಲ್ಪಟ್ಟರು. ಲಂದನ್ ಪಟ್ಟದವರು ಆಯುಧಪಾಣಿಗಳಾದರು. ಅರಮನೇ ಬಾಗಲುಗಳಲ್ಲಿ ಅಗಾಗ್ಯೆ ಲಹರಿಯಾದ ಗುಂಪುಗಳು ಕೂಡಿಬಂದವು. ಪ್ರಜೆಯ ಕಕ್ಷಿಗೆ ಶೇರಿದ ಸಂಘದವರ ಲೆಖ್ಖವೇ ಸಂಘದಲ್ಲಿ ಅಧಿಕವಾಯಿತು. ಮತ್ತು ಸಂಸ್ಥಾನದಲ್ಲಿಯೂ ಅವರಿಗೆ ಆಧಾರ ಉಂಟಾಯಿತು. ಅರಸನು ಲಂದನ್ ಪಟ್ಣವನ್ನು ಬಿಟ್ಟು ಓಡಿ ಹೋದನು. ಅರಸನಿಗೂ ಪಾರ್ಲಿಮೆಂಟಿನವರಿಗೂ ಕೆಲವು ಕಾಗದಗಳಿಂದ ಸಮಾಚಾರಗಳು ನಡಿಯುತ್ತಾ ಇದ್ದಾಗ್ಯೂ ಅವುಗಳಿಂದ ಏನೂ ಕಾರ್ಯವಿಲ್ಲ. ಉಭಯ ಪಕ್ಷದವರೂ ತಿರುಗ ಕೂಡದಂತೆ ಮಿತಿ ಮಿಾರಿದರು. ಅಂತರ್ಯದ ಹಗೆಯೊಡನೆ ಒಳಯುದ್ಧವೂ ದೇಶದಲ್ಲಿ ಆರಂಭಿಸಿತು. 1642ನೇ ವರುಷ ಅಗೋಸ್ತು ತಿಂಗಳ 25ನೇ ತಾರೀಖಿನಲ್ಲಿ ಅರಸನು ತನ್ನ ಧ್ವಜವನ್ನು (Nottingham) ನೊಟ್ಟಿಂಗ್ಹಾಮ್ ಊರಿನಲ್ಲಿ ನಿಲ್ಲಿಸಿದನು. ಅದರ ತರುವಾಯ ಉಂಟಾದದ್ದು ಚರಿತ್ರೆಯ ಯುದ್ಧಗಳಲ್ಲಿ ಅತಿ ದುಖ್ಖಕರವಾದ ಯುದ್ಧವು. ಇಂಗ್ಲಿಷಿನವರು ಇಂಗ್ಲಿಷಿನವರ ಮೇಲೆಯೂ, ತಮ್ಮಂದಿರು ಅಣ್ಣಂದಿರ ಮೇಲೆಯೂ, ಮಕ್ಕಳು ತಂದೆಗಳ ಮೇಲೆಯೂ ಎದುರಿಸಿ ನಿಂತು ಯುದ್ಧ ಮಾಡ ಬೇಕಾಯಿತು. ದೇಶದಲ್ಲೆಲ್ಲಾ ಕಕ್ಷಿಗಳೂ, ನಾಡುಗಳಲ್ಲೆಲ್ಲಾ ಪ್ರಲಾಪನೆಯೂ, ಗೋಳಿಡುವ ಧ್ವನಿಯೂ, ಅಯ್ಯೋ ಎಂಬುವ ಶಬ್ದಗಳೂ ತುಂಬಿದವು.

ಅರಸಕಕ್ಷಿಗಳಿಗೆ ಪ್ರಾರಂಭದಲ್ಲಿ ಜಯವಾಯಿತು. ಅವರ ಸೈನ್ಯಗಳು ಪಾರ್ಲಿಮೆಂಟಿನವರ ಸೈನ್ಯಗಳಿಗಿಂತ ಒಳ್ಳೇ ವೀರರು. ಅವರು ಯುದ್ಧದ ಕೆಲಸದಲ್ಲಿ ಏನೂ ಅಭ್ಯಾಸವಿಲ್ಲದವರೂ ಕಟ್ಟಳೆಗೆ ವಿಧೇಯ

ರಾಗದಂಥ ಬೊಗ್ಗದವರಾಗಿದ್ದಾಗ್ಯೂ, ಅವರಲ್ಲಿ ಬಹು ವೈರಾಗ್ಯವೂ ಸಾಧನೆಯೂ ಇತ್ತು. ರಾಜ್ಯದ ಉತ್ತರ ಭಾಗವೂ, ಮೇಲ್ಭಾಗವೂ ಅರಸನ ಪಕ್ಷವಾಗಿದ್ದವು. ಲಂದನ್ ಪಟ್ಟಣವೂ, ಶ್ರೇಷ್ಠ ಪಟ್ಟಣಗಳಲ್ಲಿ ಕೆಲವೂ, ದಕ್ಷಿಣ ನಾಡುಗಳೂ ಪಾರ್ಲಿಮೆಂಟಿನವರ ಪಕ್ಷವಾಗಿದ್ದವು. ಚಾರ್ಲ್ಸ್ ಅರಸನ ದಳಕರ್ತರು ಧೈರ್ಯವುಳ್ಳ ಶುದ್ಧ ವೀರರಾಗಿದ್ದಾಗ್ಯೂ, ಸೈನ್ಯ ನಡಿಸುವದರಲ್ಲಿ ಪ್ರವೀಣರಲ್ಲ. (Prince Rupert) ರೂಪರ್ಟ್ ಶ್ರೀಮಂತನೂ (Prince Maurice) ಮಾರಿಸ್ ಶ್ರೀಮಂತನೂ ಎಂಬ ತನ್ನ ಸಹೋದರನ ಕುಮಾರರೇ ತನಗೆ ಬಹು ಸಹಾಯವಾಗಿದ್ದ ದಳಕರ್ತರು. ಪಾರ್ಲಿಮೆಂಟಿನವರ ರಾಣುವೆಯಲ್ಲಿಯೂ ಪ್ರವೀಣರಾದ ದಳಕರ್ತರಿಲ್ಲ. ಅದನ್ನು ನಡಿಸಿದ (Earl of Essex) ಎಸ್ಸೆಕ್ಸ್ ಏರ್ಲ್ ಪ್ರಭುವು ಸಹ, ಯೂರೋಪ್ ಖಂಡದಲ್ಲಿ ಮುಂಚೆ ನಡೆದ ಯುದ್ಧಗಳಲ್ಲಿ ಹೊಂದಿದ ಕೀರ್ತಿಗೆ ಸಮಾನವಾಗಿ ಈ ಕಾಲದಲ್ಲಿ ಏನೂ ಮಾಡಲಿಲ್ಲ.

ಮೊದಲು ಆ ಯುದ್ಧವು (Warwickshire) ವಾರ್ವಿಕ್‌ಷೈರಿನಲ್ಲಿ ದಕ್ಷಿಣಕಡೆ ಇರುವ (Edgehill) ಎಡ್ಜಿಲ್ ಎಂಬುವ ಸ್ಥಳದಲ್ಲಿ ಪ್ರಾರಂಭಿಸಿತು. ಅದರಲ್ಲಿ ಉಭಯ ಪಕ್ಷಿಗಳಿಗೂ ಜಯವಾಗಲಿಲ್ಲ. ಆದಾಗ್ಯೂ ತರುವಾಯ ಅನೇಕ ಸಮಯಗಳಲ್ಲಿ ಅರಸಪಕ್ಷಿಯವರು ಜಯ ಹೊಂದಿದರು. ಅರಸನು (Oxford) ಒಕ್ಸ್‌ಫೋರ್ಡ್ ಪಟ್ಟಣದಲ್ಲಿ ತನ್ನ ಆಸ್ಥಾನವನ್ನು ಸ್ಥಾಪಿಸಿದನು. ನೆರೆಯ ನಾಡುಗಳೆಲ್ಲಾ ಅವನಿಗೆ ಒಳಪಟ್ಟಿದ್ದವು. ಆ ಕಾಲದಲ್ಲಿ ರಾಜ್ಯದ ಎರಡನೇ ಶ್ರೇಷ್ಠ ಪಟ್ಟಣವಾದ (Bristol) ಬ್ರಿಸ್ತಲ್ ಸಹ ಅವನ ವಶದಲ್ಲಿ ಇತ್ತು. ಅವನ ರಾಣುವೆಗಳು ಸಹ ಲಂದನ್ ಪಟ್ಟಣವನ್ನು ಬಹುಶಾ ಸಮೀಪಿಸಿ ಬಂದಿದ್ದವು. ಹೀಗೆ ಅರಸಪಕ್ಷಿಯವರೇ ಜಯ ಹೊಂದಿದ ಹಾಗೆ ತೋರಿತು. ಇನ್ನೂ ಕೆಲವು ದಿವಸಗಳೊಳಗೆ ತಮಗೆ ಮಾತ್ರವೇ ಪೂರ್ಣ ಜಯವಾಗುವದೆಂದು ಎಣಿಸಿಕೊಂಡಿದ್ದರು. ಹೀಗಿರುವಲ್ಲಿ ಅವರು (Gloucester) ಗ್ಲೋಸ್ತರ್ ಪಟ್ಟಣವನ್ನು ಮುತ್ತಿಗೆ ಹಾಕಿದರು. ಆ ಮೇಲೆ ಅವರ ಕಾರ್ಯಗಳೆಲ್ಲಾ ನೆಲೆ ತಪ್ಪುವ ಹಾಗೆ ಸಂಭವಿಸಿತು. ಆ ಪಟ್ಟಣವು ಬಹು ಶೌರ್ಯವಾದ ಪಿಡುವಾದದಿಂದ ಕಾಪಾಡಲ್ಪಟ್ಟು, ಎಸ್ಸೆಕ್ಸ್ ಏರ್ಲ್ ಪ್ರಭುವಿನ ಸೈನ್ಯದ

ಸಂಗಡ ಕಳುಹಿಸಲ್ಪಟ್ಟ ಲಂಡನ್ ಪಟ್ಟದ ದಂಡಿನಿಂದ ಪೂರ್ಣವಾಗಿ ಕಾಯಲ್ಪಟ್ಟಿತು. ಪಾರ್ಲಿಮೆಂಟಿನವರ ಆ ದಂಡುಗಳು ಲಂಡನ್ ಪಟ್ಟಕ್ಕೆ ತಿರುಗುವಾಗ (Berkshire) ಬೆರ್ಕ್‌ಷೈರಿನಲ್ಲಿರುವ (Newbury) ನ್ಯೂಬರಿ ಊರಿನಲ್ಲಿ ಅರಸಕಕ್ಷಿಯ ಸೈನ್ಯವನ್ನು ಎದುರಿಸಿದರು. ಉಗ್ರವಾದ ಯುದ್ಧವು ಸಹ ನಡಿಯಿತು. ಆ ಯುದ್ಧದಲ್ಲಿ (Lord Fallkland) ಫಾಲ್ಕ್‌ಲಾಂಡ್ ಪ್ರಭುವಾದವನು ಸತ್ತು ಹೋದದ್ದೇ ಯಾವಾಗಲೂ ಜ್ಞಾಪಕ ಮಾಡ ತಕ್ಕ ವರ್ತಮಾನವು. ತನ್ನ ದೇಶಕ್ಕೆ ಬಂದ ಆಪತ್ತುಗಳನ್ನು ನೆನಸಿ ದುಃಖಸಾಗರದಲ್ಲಿ ಮುಳುಗಿದವನಾಗಿ ಮನಸ್ಸು ಒಡೆದು ಕ್ಷೀಣವಾಗಿ ಹೋದನು. ಮತ್ತು ಅನೇಕ ಸಮಯಗಳಲ್ಲಿ ತಾನೇ ಸಮಾಧಾನ ಸಮಾಧಾನ ಎಂದು ಬಹಳ ದುಃಖದಿಂದ ಹೇಳುತ್ತಾ ಇದ್ದದ್ದನ್ನು ಮತ್ತೊಬ್ಬರು ಕೇಳಿದ್ದುಂಟು. ಆ ಯುದ್ಧ ಸಂಭವಿಸಿದ ದಿನದ ಉದಯದಲ್ಲಿ ತಾನು ಸಾಯುವದನ್ನು ಕುರಿತು ಮುಂಚಿತಾಗಿ ತಿಳುಕೊಂಡಿದ್ದನೆಂದು ಹೇಳುತ್ತಾರೆ.

ಈ ಪ್ರಕಾರ ಸಂದೇಹಜಯವುಳ್ಳ ಯುದ್ಧಗಳು ಕೆಲವು ನಡೆದಿದ್ದಾಗ್ಯೂ ಅರಸಕಕ್ಷಿಯವರ ಕಾರ್ಯವು ಇದು ವರೆಗೂ ಚನ್ನಾಗಿಯೇ ಇತ್ತು. ಇದರ ತರುವಾಯ ಪಾರ್ಲಿಮೆಂಟಿನವರ ರಾಣುವೆಯಲ್ಲಿ ಒಂದು ವಿಕಲ್ಪ ಉಂಟಾದದರಿಂದ ಆ ರಾಣುವೆಗೆ ಮಾತ್ರಜಯ ಉಂಟಾಗುವದಕ್ಕೆ ಹೇತುವೆಯಾಯಿತು. ಹ್ಯಾಗಂದರೆ, ಇದಕ್ಕೆ ಮುಂಚೆ ಪ್ರಜೆಕಕ್ಷಿಯ ಸೈನ್ಯದ ಶ್ರೇಷ್ಠರು ಬಹುಶಾ ತಮ್ಮ ಶ್ರೇಷ್ಠತ್ವದಲ್ಲಿ ಹೆಸರ್ವಾಸಿಗೆ ಬರಲಿಲ್ಲ. ಆ ತರುವಾಯ ವೀರಶೂರತ್ವ ಹೊಂದಿದ ಒಬ್ಬ ಸೈನ್ಯಾಧಿಪತಿಯು ಪ್ರಬಲವಾಗ ಪ್ರಾರಂಭಿಸಿದನು. ಅವನ ಹೆಸರು (Oliver Cromwell) ಒಲಿವರ್ ಕ್ರೊಮ್‌ವೆಲ್. ಅವನು ಬೊಗ್ಗದಂಥ, ಸಡ್ಲವಾಗದಂಥ, ಅಂಜದಂಥ ಕಬ್ಬಿಣದ ಎದೆಯುಳ್ಳವನು. ಅವನು ಕೊರತೆ ಬಂದ ಕಾಲದಲ್ಲಿ ತಗ್ಗಿ ಹೋಗದೆ, ಹೆಚ್ಚಿದ ಕಾಲದಲ್ಲಿ ಗರ್ವ ಪಡದೆ ಇದ್ದ ಮನೋಸಾಧನೆಯುಳ್ಳವನು. ಇದು ನೀತಿಯಾದ ವಿಷಯವೆಂದೆಣಿಸಿ, ಆ ಕೆಲಸದಲ್ಲಿ ಆವನಿಗೆ ಬಹು ವೈರಾಗ್ಯವೂ ಬಹಳ ಪಿಡಿವಾದವೂ ಇತ್ತು. ಕೆಲವು ದಿವಸಗಳಿಗೆ ಮುಂಚೆ ಒಂದು ಸೈನ್ಯವು ಅವನ ಅಧಿಕಾರದ ಕೆಳಗೆ ಇತ್ತು.

ಆ ಸೈನ್ಯಕ್ಕೆ ಅವನು ಎಂಥಾ ಯುದ್ಧಸಾಧನೆ ಅಭ್ಯಾಸ ಮಾಡಿಸಿದ್ದನಂದರೆ, ಎಲ್ಲಾ ರಾಣುವೆಯಲ್ಲಿ ಅವನ ಯುದ್ಧವೀರರೇ ಬೊಗ್ಗದ ಶುದ್ಧವೀರರೆಂದೂ, (Ironsides) ಕಬ್ಬಿಣದ ಪಕ್ಕೆಲುವುಳ್ಳವರೆಂದೂ ಹೆಸರ್ವಾಸಿಯಾಗಿದ್ದರು. ಅವರು ಪೂರ್ಣವಾಗಿ ತಿರುಸಭೆಯನ್ನು ಬಿಟ್ಟು ಬಿಟ್ಟು, ಧೊರೆತನದ ವಿಷಯದಲ್ಲಿ ಪ್ರಜಾಸಮ್ಮತಿಯಾದ ಅರಸನನ್ನು ಅಪೇಕ್ಷಿಸಿದ್ದರು. ಮತವಿಷಯದಲ್ಲಿ ಪೂರ್ಣವಾಗಿ ಸ್ವೇಚ್ಛಾಮತಸ್ಥರು, ಎಂದು ಕರೆಯಲ್ಪಟ್ಟವರನ್ನು ಹೊಂದಿ ಕೊಂಡಿದ್ದರು. ಅವರು ಒಂದೊಂದು ಸಭೆಯೂ, ಅದರ ಗುರುವೂ ಪ್ರತ್ಯೇಕವಾಗಿರ ಬೇಕೇ ಹೊರ್ತು, ಧೊರೆತನಕ್ಕೂ, ತಿರುಸಭೆಗೂ, ಯಾವ ವಿಷಯದಲ್ಲಿಯೂ ಸಮ್ಮಂಧವಿರ ಬಾರದೆಂಬುವ ತಾತ್ಪರ್ಯವುಳ್ಳವರಾಗಿದ್ದರು. ಬಹಿರ್ವೇಷಕ್ಕೆ ಅವರು ಮಹಾ ಮತವೈರಾಗ್ಯವುಳ್ಳವರು. ಕವಾತು ಮಾಡ ಹೋಗುವದಕ್ಕಿಂತ ಮುಂಚೆ ಉದ್ಭವಾದ ಪ್ರಸಂಗಗಳನ್ನು ಕೇಳಿ ಕೊಂಡು ಹೋಗುವರು. ಅವರ ದಳಕರ್ತರೇ ಅವರಿಗೆ ಗುರುಗಳು. ಜ್ಞಾನಕೀರ್ತನೆಗಳನ್ನು ಹಾಡುತ್ತಾ ಯುದ್ಧಮುಖದಲ್ಲಿ ಪ್ರವೇಶಿಸುವರು. ಇಂಥಾ ಮತವೈರಾಗ್ಯದವರ ಮುಂದೆ ನಿಲ್ಲುಂವಥಾದ್ದು ಒಂದೂ ಇಲ್ಲ. ಈ ವಿಧವಾದ ಕ್ರೊಮ್ವೆಲಿನ ಸೈನ್ಯಕ್ಕೆ ಸರಿಯಾಗಿ ರಾಣುವೆ ಎಲ್ಲಾ ಅಭ್ಯಾಸ ಮಾಡಿಸಲ್ಪಟ್ಟು, ಕ್ರೊಮ್ವೆಲನು ತಾನೆ ಸಕಲ ಕಾರ್ಯಗಳನ್ನೂ ನಡಿಸುವದಕ್ಕೆ ಅಧಿಕಾರ ಹೊಂದಿದಾಗ ಪಾರ್ಲಿಮೆಂಟಿನವರ ವಿಷಯವು ಬೇಗ ಜಯಪ್ರದ ಹೊಂದಿತು. (Self-denying Ordinance) "ಸ್ವಂತ ಲಾಭವನ್ನು ಹುಡುಕದ ಏರ್ಪಾಟು" ಎಂದು ಒಂದು ನಿಬಂಧನೆ ಸ್ಥಾಪಿಸಲ್ಪಟ್ಟಿತು. ಅದರಿಂದ ತಮಗೆ ಏನಾದರು ರಾಣುವೆಯ ಮುಖ್ಯಾಧಿಪತ್ಯವಿದ್ದ ಪಾರ್ಲಿಮೆಂತ್ ಸಂಘದವರೆಲ್ಲರೂ ತಮ್ಮ ಅಧಿಕಾರವನ್ನು ಒಪ್ಪಿಸಿ ಬಿಟ್ಟರು. ಎಲ್ಲಾ ಸೈನ್ಯಕ್ಕೂ (Sir Thomas Fairfax) ಸರ್ ತೋಮಾಸ್ ಫೇರ್‌ಫಾಕ್ಸ್ ಎಂಬವನು ಶ್ರೇಷ್ಠ ಸೈನ್ಯಾಧಿಪತಿಯಾಗಿ ನೇಮಿಸಲ್ಪಟ್ಟನು. ಆದಾಗ್ಯೂ ಮೇಲೆ ಹೇಳಿದ ನಿಬಂಧನೆಗೆ ತನ್ನನ್ನು ಸಮ್ಮಂಧ ಪಡಿಸದೆ ಹ್ಯಾಗೋ ತಪ್ಪಿಸಿ ಕೊಂಡ ಕ್ರೊಮ್ವೆಲ್ ಎಂಬವನೇ ಯುದ್ಧದ ಸಮಸ್ತ ವಿಷಯಗಳಲ್ಲಿಯೂ, ಸಮಸ್ತ ತಂತ್ರ ಮಂತ್ರಗಳಲ್ಲಿಯೂ, ಸಮಸ್ತ ಕೆಲಸಗಳಲ್ಲಿಯೂ

ಮುಖ್ಯಸ್ಥನಾಗಿದ್ದನು. ಅವನ ವೀರರಾದ ರಾಉುವೆಯವರು (Marston Moor) ಮಾರ್ಸ್ಟೊನ್ ಮೈದಾನ ಎಂಬ ಸ್ಥಳದಲ್ಲಿ ಅರ್ಧ ಸೈನ್ಯವು ಮುರಿಯ ಬಡಿಯಲ್ಪಟ್ಟರೂ, ಉಳಿದ ಅರ್ಧ ಸೈನ್ಯದಿಂದ ಅರಸಕಕ್ಷಿಯಾದ ಸೈನ್ಯವನ್ನು ಸೋಲಿಸಿ ಬಿಟ್ಟಿದ್ದರು. ಇನ್ನು ರಾಉುವೆಯೆಲ್ಲಾ ನೂತನ ಮಾಡಲ್ಪಟ್ಟದರಿಂದ (Naseby) ನೇಸ್ಬಿ ಎಂಬ ಸ್ಥಳದಲ್ಲಿ ಅನುಕೂಲವಾದ ಯುದ್ಧ ನಡಿಯಲಾಗಿ, ಅದರಲ್ಲಿ ಅರಸನ ಸೈನ್ಯಗಳು ದಿಕ್ಕು ಕೆಟ್ಟು ಓಡಿದ್ದಲ್ಲದೆ, ಚಾರ್ಲ್ಸ್ ಎಂಬ ಅರಸನು ಸಹ ಗತಿ ಕೆಟ್ಟು ಓಡ ಬೇಕಾಯಿತು. ರೀಗೆ ತಾನು ಕಳಕೊಂಡ ಕಿರೀಟವನ್ನು ತಿರಿಗಿ ಹೊಂದುವದಕ್ಕೆ ಕೆಲವು ಅಲ್ಪ ಪ್ರಯತ್ನಗಳನ್ನು ಮಾಡಿದಾಗ್ಯೂ ಅನುಕೂಲವಾಗದೆ, ಈ ವರೆಗೂ ಪಾರ್ಲಿಮೆಂತಿನವರ ಪಕ್ಷದಲ್ಲಿ ಇದ್ದು ಕೊಂಡು, ಈಗಲೇ (Newark) ನ್ಯೂವರ್ಕ್ ಎಂಬ ಸ್ಥಳವನ್ನು ಮುತ್ತಿಗೆ ಹಾಕಿದ್ದವರಾದ ಸ್ಕೋತರ ರಾಉುವೆಯವರ ಬಳಿಗೆ ಹೋಗಿ ೧೬೪೬ ವರುಷದಲ್ಲಿ ಶರಉು ಹೊಕ್ಕನು. ಅವನು ಅವರ ದಂಡಿನಲ್ಲಿ ಕೆಲವು ದಿವಸಗಳಿದ್ದು, ಪಾರ್ಲಿಮೆಂತಿನವರಿಗೆ ಕಾಗದಗಳ ಮೂಲಕವಾಗಿ ಸಮಾಧಾನ ಮಾಡಿ ಕೊಳ್ಳ ಯತ್ನಯಿಸಿದನು. ಆದಾಗ್ಯೂ ಒಂದೂ ಕೈಗೂಡಿ ಬರಲಿಲ್ಲ. ಕಡೆಯಲ್ಲಿ ಸ್ಕೋತರು ಅವನನ್ನು ಪಾರ್ಲಿಮೆಂತಿನವರಿಗೆ ವಿಕ್ರಯ ಮಾಡಿ ಬಿಟ್ಟರು. ಅದೇ ಶೆರೆಯಲ್ಲಿ ಅವನು ತನ್ನ ಆಯುಸ್ಸಿನ ಪಟ್ಟಿಗೂ ಇದ್ದನು.

ಪಾರ್ಲಿಮೆಂತಿನವರಿಗೆ ಪೂರ್ಣ ಜಯ ಉಂಟಾದದರಿಂದ ದೇಶದದಲ್ಲೆಲ್ಲಾ ರಾಉುವೆಯ ಧೊರೆತನವಾಗಿತ್ತು. ಆದಾಗ್ಯೂ ಆ ಶೀಮೆಯು (Independents) "ಸ್ವೇಚ್ಛಾಮತಸ್ಥರು" ಎಂದು ಕರೆಯಲ್ಪಟ್ಟ ರಾಉುವೆಗೆ ಅಉಗಿದ್ದು ಸಹ ಕಠಿಉವಾಗಿತ್ತು. ದಕ್ಷಿಉದಲ್ಲಿಯೂ, ವೇಲ್ಸ್ ನಾಡಿನಲ್ಲಿಯೂ, ಉತ್ತರದಲ್ಲಿಯೂ ಇರುವ ಕೆಲವು ಸ್ಥಳಗಳಲ್ಲಿ ಕಲಹಕ್ಕೆ ಆರಂಭವೂ ಉಂಟಾಗಿತ್ತು. ಆದಾಗ್ಯೂ ದಕ್ಷಿಉಕಡೆ ಉಂಟಾದ ಕಲಹಗಳು ಫೇರ್‌ಫಾಕ್ಸ್ ಎಂಬವನಿಂದಲೂ, ಬೇರೆ ಸ್ಥಳಗಳಲ್ಲಿ ಉಂಟಾದ ಕಲಹಗಳು ಒಲಿವರ್ ಕ್ರೊಮ್‌ವೆಲನಿಂದಲೂ ಸಂಗಡಲೇ ಅಉಗಿಸಲ್ಪಟ್ಟವು. ಆ ರಾಉುವೆಯ ಉಗ್ರವಾದ ಅಧಿಕಾರವು ಮುಂಚೆ ಯಾವಾಗ

ಲಾದರೂ ಅಷ್ಟು ಬಲವುಳ್ಳದ್ದಾಗಿರಲಿಲ್ಲ. ಪಾರ್ಲಿಮೆಂಟಿನವರು ಸಹ ತಮ್ಮ ರಾಣುವೆಯವರಿಗೆ ಅಂಜ ಬೇಕಾಯಿತು. ಅವರಿಗೆ ಒಲಿವರ್ ಕೊಮ್ವೆಲನು ಸಕಲ ವಿಷಯಗಳಲ್ಲಿಯೂ ಮುಖ್ಯಸ್ಥನೂ ಅನುಸಾರಿಯಾಗಿಯೂ ಇದ್ದನು.

ಅರಸನು ತನ್ನ ಎದುರಿಗಳ ಕೈಯಲ್ಲಿ ಶಿಕ್ಕಿ ಕೊಂಡ ಸ್ವಲ್ಪ ದಿವಸಗಳಲ್ಲಿ ಒಂದು ದಂಡು ಹೋಗಿ ಅವನನ್ನು ಹಿಡಿದು ರಾಣುವೆಯ ಸಹಿತವಾಗಿ (Hampton Court) ಹಾಂಪ್ಟನ್ ಕೋರ್ತ್ ಎಂಬ ಅರಮನೆಯಲ್ಲಿ ಹಾಕಿ ಮುಚ್ಚಿ ಬಿಟ್ಟರು. ತನ್ನನ್ನು ಕೊಲ್ಲುವರೆಂದು ಭಯ ಪಟ್ಟು, ಆ ಸ್ಥಳದಿಂದ (Wight) ವೈತ್ ಎಂಬ ದ್ವೀಪದಲ್ಲಿರುವ (Carisbrooke) ಕಾರಿಸ್‌ಬ್ರೂಕ್ ಎಂಬ ಒಂದು ಸ್ಥಳಕ್ಕೆ ತಪ್ಪಿಸಿ ಕೊಂಡು ಓಡಿ ಹೋದನು. ಪಾರ್ಲಿಮೆಂಟಿನವರು ಅವನ ಸಂಗಡ ಒಡಂಬಡಿಕೆ ಮಾಡುವದಕ್ಕೆ ಅನೇಕ ಪತ್ರಿಕೆಗಳನ್ನು ಬರೆದಾಗ್ಯೂ ಅವರು ಕೇಳಿದ ಸಂಗತಿಗಳಿಗೆ ಅವನು ಒಡಂಬಡಲಿಲ್ಲ. ಇದರಿಂದ ರಾಣುವೆಯವರು ಇನ್ನೂ ನಿರೂಪಗಳನ್ನು ಬರೆಯಲೂ, ವ್ಯರ್ಥವಾಗಿ ಕಾಲ ಕಳೆಯಲೂ ಮನಸ್ಸಿಲ್ಲದೆ, ಯುದ್ಧಾಸಕ್ತರಾಗಿ ಅವನನ್ನು ಕೊಲ್ಲ ಬೇಕೆಂದು ಕೋರಿದರು. ಅದಕ್ಕೆ ಸಮ್ಮತಿ ಪಡದ ಜನಪ್ರತಿನಿಧಿಸಂಘದವರು ತಾವೇ ಒಂದನ್ನೂ ಮಾಡ ಕೂಡಲಿಲ್ಲ. ರಾಣುವೆಯವರಿಗೆ ಪೂರ್ಣವಾಗಿ ವಶವಾಗದ ಸಂಘದವರೆಲ್ಲರೂ ಬಲಾತ್ಕಾರವಾಗಿ ತಳ್ಳಲ್ಪಟ್ಟರು. ಚಾರ್ಲ್ಸ್ ಅರಸನು ಲಂದನ್ ಪಟ್ಣಕ್ಕೆ ತರಲ್ಪಟ್ಟು, ಜನಪ್ರತಿನಿಧಿಸಂಘದಲ್ಲಿ ಪ್ರಜಾಸಮ್ಮತಿಯ ಧೋರೆತನವನ್ನೇ ಅಪೇಕ್ಷಿಸಿದ ಸಂಘದವರು ಕೂಡಿದ ಪುಂಡುಗಾರರಾದ ಸಭೆಯವರ ಮುಂದೆ ವಿಚಾರಣೆ ಮಾಡಲ್ಪಡುವದಕ್ಕಾಗಿ ನಿಲ್ಲಿಸಲ್ಪಟ್ಟನು. ಈ ಪ್ರಕಾರ ಬಡತನವೂ ಕಷ್ಟವೂ ಬಂದ ಕಾಲದಲ್ಲಿ ಚಾರ್ಲ್ಸ್ ಅರಸನು ಬಹು ಗಂಭೀರವಾಗಿ ನಡಕೊಂಡನು. ತನ್ನನ್ನು ವಿಚಾರಣೆ ಮಾಡುವದಕ್ಕೆ ಆ ಸಭೆಯವರಿಗೆ ಅಧಿಕಾರವಿಲ್ಲವೆಂದೂ, ಅವರು ಕೇಳುವ ಪ್ರಶ್ನೆಗಳಿಗೆ ತಾನು ಉತ್ತರ ಕೊಡುವದಿಲ್ಲವೆಂದೂ ಹೇಳಿ, ನಿಮ್ಮ ಅರಸನನ್ನು ಹೀಗೆ ವಿಚಾರಣೆ ಮಾಡುವದಕ್ಕೆ ನಿಮಗೆ ಅಧಿಕಾರ ಕೊಟ್ಟವರು ಯಾರು? ಎಂದು ಗರ್ವವಾಗಿಯೂ ಧೈರ್ಯವಾಗಿಯೂ ಕೇಳಿದನು. ಅವನು ಆ ಸಮಯ

ದಲ್ಲಿ ಹೀಗೆ ಗಂಭೀರವಾಗಿ ನಡಕೊಂಡದ್ದನ್ನಾದರೂ ನೋಡಿ, ಅವನನ್ನು ವಿಚಾರಣೆ ಮಾಡ ನ್ಯಾಯಾಧಿಪತಿಗಳಾಗಿ ಕೂಡಿ ಬಂದಿದ್ದ ಆ ದುಷ್ಟರ ಹೃದಯವು ಕರಗಲಿಲ್ಲ. ಅವನನ್ನು ಮರಣಕ್ಕೆ ಪಾತ್ರನೆಂದು ತೀರ್ಮಾನ ಮಾಡಿದರು. ಆ ತೀರ್ಮಾನದ ಪ್ರಕಾರವೇ ಸ್ವಲ್ಪ ಹೊತ್ತಿನ ತರುವಾಯ ಅವನು ಶಿರಚ್ಛೇದ ಮಾಡಲ್ಪಟ್ಟನು.

1649ನೇ ವರುಷ ಜನವರಿ ತಿಂಗಳ ಮೂವತ್ತೊಂದನೇ ತಾರೀಖಿನ ಉದಯದಲ್ಲಿ ಸೂರ್ಯನು ಪ್ರಕಾಶಿಸದೆ ಎಲ್ಲಿಯೂ ಛಳಿಯೂ, ಮೇಘದ ಮಬ್ಬೂ ಮುಚ್ಚಿ ಕೊಂಡಿತ್ತು. ಅತಿ ಉದಯದಲ್ಲಿ ಲಂಡನ್ ಪಟ್ಟಣದ ಪ್ರಜೆಗಳು, ಚಿಕ್ಕವರೂ ದೊಡ್ಡವರೆಲ್ಲರೂ ದುಃಖಸಾಗರದಲ್ಲಿ ಮುಳುಗಿದವರಾಗಿ, ಮನೆಗಳನ್ನು ಬಿಟ್ಟು, ಹೊರಗೆ ಬಂದು, ಬೀದಿಗಳು ಸಹ ಹಿಡಿಯಲಾರದೆ, "ಎರಚಿದ ಎಳ್ಳು ಕೆಳಗೆ ಬೀಳದಂತೆ" ಮುಸುಕಿ ಕೊಂಡರು. ಆ ದಿವಸ ಒಂದು ಗಲ್ಲಿನ ಮರವು (Whitehall) ವೈಟ್‌ಹಾಲ್ ಎಂಬ ಅರಮನೆಯ ಬಾಗಲಲ್ಲಿ ನೆಡಲ್ಪಟ್ಟಿತ್ತು. ಅದರ ಸುತ್ತಲೂ ಮುಸುಕಿ ಕೊಂಡಿದ್ದ ಗುಂಪುಗಳನ್ನು ಹೊಡೆದು ಶಾಂತ ಪಡಿಸುವದಕ್ಕೆ ಕೊರ್ಮವೆಲನ ಮೂರ್ಖ ಲಹರಿಯುಳ್ಳ ದಂಡಿನವರು ಕಾವಲಾಗಿ ನಿಂತಿದ್ದರು. ಅಂದು ಆ ಸ್ಥಳದಲ್ಲಿ ಚಾರ್ಲ್‌ಸ್ ಅರಸನು ಮರಣ ಹೊಂದುವದಕ್ಕೆ ಇದ್ದವನು. ಅವನು ಮರಣದ ತೀರ್ಪನ್ನು ಹೊಂದಿದ ಹೊತ್ತಿನಿಂದ ಸಾಯುವ ಮಟ್ಟಿಗೂ ಸ್ವಲ್ಪವಾದರೂ ಭಯ ಪಡಲೂ ಇಲ್ಲ, ನಡುಗಲೂ ಇಲ್ಲ. ಅವನು ತನ್ನ ಇಬ್ಬರು ಕುಮಾರರ ಬಳಿಯಲ್ಲಿ ಅಪ್ಪಣೆ ತೆಗದು ಕೊಂಡು ಬಂದದ್ದನ್ನು ನೋಡಿದವರ ಮನಸ್ಸು ಕರಗಿ ಅತ್ತರು. ಆ ತರುವಾಯ (Juxon) ಜಕ್ಸನ್ ಎಂಬುವ ಅಧ್ಯಕ್ಷನು ಪರವನ್ನು ಕುರಿತ ನ್ಯಾಯಗಳಿಂದ ಅವನಿಗೆ ಆದರಣೆಯೂ ಧೈರ್ಯವೂ ಹೇಳಿ, ಇನ್ನು ಕೆಲವು ನಿಮಿಷಗಳಲ್ಲಿ ಅವನಿಗೆ ದೊರಕುವಂಥಾ ನಿತ್ಯಮೋಕ್ಷಸಂತೋಷಗಳನ್ನು ಕುರಿತು ಹೇಳುತ್ತಾ ಬಂದು ಇಬ್ಬರೂ ಗಲ್ಲಿನ ಮರದ ಮೇಲೆ ಹತ್ತಿದರು. ಅರಸನು ಸಹ "ಹೌದು ಭೂಲೋಕದ ಕಿರೀಟವನ್ನು ಬಿಟ್ಟು, ಪರಲೋಕದ ಕಿರೀಟವನ್ನು ಹೊಂದ ಹೋಗುತ್ತೇನೆ" ಅಂದನು. ತರುವಾಯ "ಜ್ಞಾಪಕ ಮಾಡು" ಎಂಬ ಒಂದು ಮಾತನ್ನು ಅವನ ನಾಲಿಗೆ

ಉಚ್ಚರಿಸಿ ಮುಗಿಯುವದಕ್ಕೆ ಮುಂಚೆ ಒಂದೇ ಪೆಟ್ಟಿನಿಂದ ಅವನ ಶಿರಸ್ಸು ಶರೀರವನ್ನು ಬಿಟ್ಟು ನಿವರ್ತಿಯಾಯಿತು. ಕೊಲೆಗಾರನು ಅವನ ಶಿರಸ್ಸ ನ್ನು ಕೈಯಲ್ಲಿ ಎತ್ತಿ ಕೊಂಡು, "ಇಗೋ ದ್ರೋಹಿಯ ತಲೆ" ಎಂದು ಕೂಗಿದನು. ಸಂಗಡಲೇ ಸುತ್ತಲೂ ಮುಸುಕಿ ಕೊಂಡಿದ್ದ ಗುಂಪುಗಳೆ ಲ್ಲಾ ಬಿಟ್ಟ ನಿಟ್ಟುಸುರುಗಳಿಂದ ಆ ಕೊಲೆಗಾರನು ಕೂಗಿದ ಶಬ್ದ ಅಪದ್ಧ ವೆಂದೂ, ಸತ್ತ ತಮ್ಮ ಅರಸನಿಗಾಗಿ ತಾವು ಪರಿತಪಿಸುವದು ನಿಜವೆಂ ದೂ ಹೇಳಿದ ಹಾಗೆ ತೋರಲಾಯಿತು. ಚಾರ್ಲ್ಸ್ ಅರಸನು ತನ್ನ ಹಗೆಯವರನ್ನು ಮನ್ನಿಸಿ, ಮುಯ್ಯಿ ತೀರಿಸಿದವರಿಗಾಗಿ ಪ್ರಾರ್ಥನೆ ಮಾ ಡಿ, ಕ್ರಿಸ್ತೀಯರಾದ ಚಕ್ರರು ಸಾಯುವಂತೆ ಒಳ್ಳೇ ಮರಣ ಹೊಂದಿದನು.



# CHAPTER XVIII.

## THE COMMONWEALTH AND THE RESTORATION.

FROM A. D. 1649 TO A. D. 1685.

## 18 ಸಂಧಿ.

## ಪ್ರಜಾನೇಮಧೊರೆತನವೂ, ರಾಜಾಂಗವಿಮೋಚನೆಯೂ.

ಕ್ರಿ. ಶ. 1649 ಮೊದಲು ಕ್ರಿ. ಶ. 1685 ವರೆಗೂ.

ಮುಖ್ಯ ತಾರೀಖುಗಳು: (Cromwell) ಕ್ರೊಮ್ವೆಲನು ರಾಜ್ಯಪಾಲಕನಾದದ್ದು 1653. ತೀರಿ ಹೋದದ್ದು 1658. (Charles II) 2ನೇ ಚಾರ್ಲ್ಸ್ ಅರಸಾದದ್ದು 1660. ಲಂಡನಿನ ಅಪಾಂತರ 1665. ಲಂಡನಿನಲ್ಲಿ ಅಗ್ನಿನಾಶ. 1666. 2ನೇ ಚಾರ್ಲ್ಸ್ ತೀರಿ ಹೋದದ್ದು 1685. ಅದೇ ಕಾಲದ ಇಂದ್ಯ ಚರಿತ್ರೆ: (Aurangzib) ಔರಂಗ್‌ಜೀಬ್ ಎಂಬ ಚಕ್ರವರ್ತಿ ಆಳಿದ್ದು 1658. ಶ್ರೇಷ್ಠ ನಾಮಗಳು: ಕವಿಯಾದ (Milton) ಮಿಲ್ಟೋನನು 1608—1674. ಜೋತಿಷ್ಯರಾದ (Kepler) ಕೆಪ್ಲೆರ್ (Galileo) ಗಾಲಿಲೀಯೊ ಇತ್ಯಾದಿ.

ಮೊದಲನೇ ಚಾರ್ಲ್ಸ್ ಅರಸನು ಶಿರಚ್ಛೇದ ಮಾಡಲ್ಪಟ್ಟ ತರುವಾಯ ರಾಜ್ಯಭಾರವು ಜನಪ್ರತಿನಿಧಿಸಂಘದಲ್ಲಿ ಆ ದಿವಸದ ವರೆಗೂ ಉಳಿದಿದ್ದ ಅಲ್ಪ ಭಾಗದವರಿಂದ ಆಳಲ್ಪಟ್ಟಿತು. ಅವರನ್ನು ಇಂಗ್ಲಿಷಿನವರೆಲ್ಲರೂ ಹಗೆ ಮಾಡಿದ್ದರಿಂದ ಆಸನಸ್ಥಳವೆಂದು ಅರ್ಥವುಳ್ಳ (Rump) ರಂಪ್ ಎಂಬ ನೀಚವಾದ ಹೆಸರನ್ನು ಅವರಿಗೆ ಇಟ್ಟರು. ಪ್ರಭುಗಳ ಸಂಘವು ನಾಶ ಮಾಡಲ್ಪಟ್ಟಿತು. ವೈರಾಗ್ಯವುಳ್ಳ ಪ್ರಜೆಯ ಕಕ್ಷಿಯವರೂ, (Independents) ಸ್ವೇಚ್ಛಾನುಸಾರಿಗಳು ಆಗಿದ್ದ ನಾಲ್ವತ್ತು ಪುರುಷರೂ ಶೇರಿದ ಒಂದು ಸಂಘದಿಂದ ಸಂಸ್ಥಾನದ ವಿಷಯಗಳೆಲ್ಲಾ ನಡಿಸಲ್ಪಟ್ಟವು. ಈ ಹೊಸ ರೀತಿಯ ಧೊರೆತನವು ಪ್ರಜೆಗಳಿಗೆ ಬಹುಶಾ

ಷ್ಟವಾಗಿರಲಿಲ್ಲ. ಆದಾಗ್ಯೂ ಆ ಕಾಲದಲ್ಲಿ (Cromwell) ಕ್ರೊಮ್‌ವೆಲ್ ಎಂಬವನೇ ಶ್ರೇಷ್ಠ ಸೈನ್ಯಾಧಿಪತಿಯಾಗಿದ್ದು ನಡಿಸಿದಂಥ ರಾಣುವೆಯು ಇಂಗ್ಲಾಂಡ್ ದೇಶವನ್ನೆಲ್ಲಾ ಅದರಲ್ಲಿ ಅದುಮಿದ್ದರಿಂದ ಯಾವ ಸ್ಥಳದಲ್ಲಾದರೂ ಬಹಿರಂಗವಾದ ಕಲಹವು ಸಂಚವಿಸದೆ ಇತ್ತು.

ಐರ್ಲಾಂಡ್ ಸ್ಕೊತ್ಲಾಂಡ್ ಶೀಮೆಗಳು ಎರಡರಲ್ಲಿಯೂ ಎರಡನೇ ಚಾರ್ಲ್ಸ್ ಅರಸನೇ ಧೊರೆ ಎಂದು ಬಹಿರಂಗವಾಗಿ ಸಾರಲ್ಪಟ್ಟಿತ್ತು. ಕ್ರೊಮ್‌ವೆಲನು ತನ್ನ ವೀರ ಸೈನ್ಯದೊಡನೆ ಹೋಗಿ, ಸ್ಕೊತ್ಲಾಂಡ್ ದೇಶದ ಪ್ರಜೆಗಳನ್ನು ಸಂಗಡಲೇ ಜಯಿಸಿದನು. ಇದಕ್ಕೆ ಕೆಲವು ವರುಷಗಳಿಗೆ ಮುಂಚೆ ಐರ್ಲಾಂದಿನವರು ಸತ್ತು ಹೋದ ಅರಸನಿಗೆ ವಿರೋಧವಾಗಿ ಎದ್ದು, ಆ ಸ್ಥಳದಲ್ಲಿ ನಿವಾಸವಾಗಿದ್ದ ಅನೇಕ ಇಂಗ್ಲಿಷಿನವರನ್ನೂ, ಅವರ ಮಕ್ಕಳು ಮರಿಗಳನ್ನೂ ಕ್ರೂರ ವಧೆ ಮಾಡಿ ಇದ್ದರು. ಅದರಿಂದ ಎಷ್ಟು ಕನಿಕರವೋ ಅಷ್ಟು ಬಲವನ್ನೂ ತೋರಿಸ ತಕ್ಕ ಇಂಗ್ಲಾಂದರು, ಸ್ತ್ರೀ ಜಾತಿಗಳನ್ನೂ ಹಸುಮಕ್ಕಳನ್ನೂ ವಧೆ ಮಾಡುವ ನೀಚರಾದ ಕೊಲೆಪಾತಕರ ಬಳಿಯಲ್ಲಿ ಯಾವಾಗ್ಯೂ ಸಲ್ಲಿಸುವ ಮುಯ್ಯಿಗೆ ಸರಿಯಾಗಿ, ಇಂಗ್ಲಿಷ್ ರಾಣುವೆಯ ಅಧಿಪತಿಯಾದವನು ಐರ್ಲಾಂಡ್ ಶೀಮೆಯವರ ಬಳಿಯಲ್ಲಿಯೂ ಮುಯ್ಯಿ ಸಲ್ಲಿಸುವ ಉದ್ದೆಶ್ಯವಾಗಿ, ತನ್ನ ರಾಣುವೆಯವರ ಮತವೈರಾಗ್ಯದ ಮತ್ತೇರಿದವರಾಗಿ ಏನೇನು ಕೊಲೆ ಮಾಡಿದರೋ ಅದಕ್ಕೆಲ್ಲಾ ಕಣ್ಣು ಜಾಡೆಯಾಗಿದ್ದನು.

ಹೀಗೆ ಐರ್ಲಾಂದನ್ನು ದಂಡದಿಂದ ಅಣಗಿಸಿದ ಮೇಲೆ ನೆಲೆನಿಂತ ಪ್ರಜೆಗಳ ಕಾರ್ಯಗಳನ್ನು ಕ್ರಮ ಪಡಿಸುವ ಉದ್ದಿಶ್ಯ ಆ ಸ್ಥಳದಲ್ಲಿ ತನ್ನ ಅಳಿಯನಾದ (Ireton) ಐರ್ತೋನ್ ಎಂಬುವ ಸೈನ್ಯಾಧಿಪತಿಯನ್ನು ಇರಿಸಿ, ಸ್ಕೋತರಿಗೆ ಇಷ್ಟವಾದ ಸಭೆಯ ಏರ್ಪಾಟನ್ನು ತಾನೂ ಕೈಕೊಂಡು ನೆಲೆಗೊಳಿಸುವೆನೆಂದು ಎರಡನೇ ಚಾರ್ಲ್ಸ್ ಎಂಬವನು ದೃಢವಾದ ಮಾತು ಕೊಟ್ಟ ಮೇಲೆ, ಅವನನ್ನು ಅರಸನಾಗಿ ಸ್ಥಾಪಿಸಿದ್ದ ಸ್ಕೊತ್ಲಾಂಡ್ ದೇಶಕ್ಕೆ ಕ್ರೊಮ್‌ವೆಲನು ಹೋಗಿ (Dunbar) ದನ್‌ಬಾರ್ ಪಟ್ಟದ ಸಮೀಪದಲ್ಲಿ ಸ್ಕೋತರ ರಾಣುವೆಯನ್ನು ಪೂರ್ಣವಾಗಿ ಸೋಲಿಸಿದನು. ಚಾರ್ಲ್ಸ್ ಅರಸನು ಸಹ ಕೆಲವು ಚಿಕ್ಕ ಯುದ್ಧಗಳನ್ನು ನಡಿಸಿದ

ಮೇಲೆ, ಇಂಗ್ಲಾಂದಿನ ಕಡೆಗೆ ಅಭಿಮುಖವಾಗಿ ಹೊರಟರೆ, ಅಲ್ಲಿ ಅರಸ ಪಕ್ಷಿಯವರೂ, (Presbyterian) ಪ್ರೆಸ್ಬಿಟೀರಿಯನ್* ಸಭೆಯವರೂ ತನ್ನ ಪಕ್ಷವನ್ನು ಅನುಸರಿಸಿ ಕೊಳ್ಳುವರೆಂಬ ಧೈರ್ಯವಾದ ಸೂಚನೆ ಅವನ ಮನಸ್ಸಿಗೆ ಬಂತು. ಹೀಗೆ ಮಾಡಿದ್ದು ತೃಣೀಕರವಾದ ಧೈರ್ಯವಾಗಿದ್ದಾಗ್ಯೂ ಬಹು ತ್ವರೆಯಾಗಿ ನಡೆದು ಹೋದದರಿಂದ ಅರಸಪಕ್ಷಿಯವರು ಅವನಿಗೆ ಸಹಾಯ ಮಾಡುವದಕ್ಕೆ ಆಗಲಿಲ್ಲ. ಆದದರಿಂದ ಕ್ರೊಮ್‌ವೆಲನು ಸಹ ತ್ವರೆಯಾಗಿ ಸ್ಕೋತರ ಸೈನ್ಯವನ್ನು ಹಿಂದಟ್ಟಿ ಬಂದು ಘೋರವಾದ ಯುದ್ಧ ಮಾಡಿ, (Worcester) ವೊರ್ಸ್ಟರ್ ಊರಿನ ಬಳಿಯಲ್ಲಿ ಪೂರ್ಣವಾಗಿ ಸೋಲಿಸಿದನು. ಚಾರ್ಲ್ಸ್ ಅರಸನು ಸಹ ಫರಾರಿಯಾಗಿ ಅನೇಕ ದಿವಸಗಳು ಬಚ್ಚಿಟ್ಟು ಕೊಂಡು ಹದುಗುತ್ತಾ ಕಾಲಕ್ಷೇಪ ಮಾಡಿ, ಅನೇಕ ಸಾರಿ ಅಪರೂಪವಾಗಿ ಪ್ರಾಣ ತಪ್ಪಿ, ಕಡೆಯಲ್ಲಿ ಒಂದು ಅನ್ಯ ದೇಶದ ಥಡವನ್ನು ಶೇರಿದನು. ಒಂದು ದಿವಸ ಅವನು ಒಂದು ಮುದಿ ಮರದ ಕೊಂಬೆಗಳಲ್ಲಿ ಹತ್ತಿ ಬಚ್ಚಿಟ್ಟು ಕೊಂಡಿರುವಲ್ಲಿ ಆ ಮರದ ಕೆಳಗೆ ತನ್ನನ್ನು ಹುಡುಕುತ್ತಾ ಬಂದ ಕೆಲವು ಶತ್ರುಗಳು ಹೋಗುವದನ್ನು ಕಂಡನು. ಆ ಮುದಿ ಮರದ ಎಲೆಗಳು ದಟ್ಟವಾಗಿ ಶೇರಿಕೊಂಡಿದ್ದದರಿಂದ ಅವರು ಅವನನ್ನು ನೋಡಲಿಲ್ಲ.

ಇಂಗ್ಲಿಷರ ಪ್ರಜಾಧಿಪತ್ಯವು ಬೇರೆ ಸಂಸ್ಥಾನಿಕರಿಂದ ಮಧಿಸಲ್ಪಡದೆ ಇತ್ತು. ಆದಾಗ್ಯೂ ಅರಸಪಕ್ಷಿಯಾದವರು (Portugal) ಪೊರ್ತುಗಲ್ ಶೀಮೆಯಲ್ಲಿಯೂ (Spain) ಸ್ಪೇನ್ ದೇಶದಲ್ಲಿಯೂ ಆಶ್ರಯ ಹೊಂದಿ ಇದ್ದದರಿಂದ (Blake) ಬ್ಲೇಕ್ ಎಂಬುವ ನಾವಿಕ ಸೈನ್ಯಾಧಿಪತಿಯು ಆ ಎರಡು ದೇಶಗಳ ರೇವುಗಳಲ್ಲಿ ಯುದ್ಧವನ್ನು ನಡಿಸಿ, ಇಂಗ್ಲಿಷಿನವರ ಹೆಸರಿನ ಘನವನ್ನು ಸ್ಥಾಪಿಸಿದನು. ತರುವಾಯ ಅವನು ಆ ಶೀಮೆಗಳವರಿಗಿಂತ ಬಲಿಷ್ಠರಾದ ಶತ್ರುಗಳ ಸಂಗಡ ಬಹು ಮೂರ್ಖವಾದ ಯುದ್ಧ ತೊಡಗಿದನು. ಅವರು ಯಾರೆಂದರೆ ಹೊಲ್ಲಾಂದಿನವರೇ. ಅವರು ಆ ಕಾಲದಲ್ಲಿ ನಾವಿಕಸೈನ್ಯದಲ್ಲಿಯೂ ವರ್ತಕರೂಢಿಯಲ್ಲಿಯೂ ಮುಖ್ಯಸ್ಥರಾಗಿದ್ದರು. ಅವರು ಇಂಗ್ಲಿಷರ ರಾಯಭಾರಿಗಳನ್ನು (Hague)

* ಮೇಲ್ವಿಚಾರಣೆ ಮಾಡುವ ಶ್ರೇಷ್ಠಾಧ್ಯಕ್ಷ್ಯನಿಲ್ಲದ ಸಭೆ.

## ಸಂಧಿ 18. ಕ್ರೊಮ್‌ವೆಲನು ಪಾರ್ಲಿಮೆಂತನ್ನು ಅಳಿಸಿದ್ದು.

ಹೇಗ್ ಎಂಬ ರೇವಿನಲ್ಲಿ ಅಮರ್ಯಾದೆ ಮಾಡಿದ್ದರಿಂದ ಪಾರ್ಲಿಮೆಂತಿನವರು ಅವರ ಮೇಲೆ ಯುದ್ಧ ನಿರ್ಣಯ ಮಾಡಿದರು. ಅವರಿಗೆ ಮಹಾ ಬಲವುಳ್ಳ ನಾವಿಕಸೈನ್ಯವಿತ್ತು. ಅವುಗಳಲ್ಲಿ ಶೂರರಾದ ನಾವಿಕರಿದ್ದು ಅವುಗಳನ್ನು ನಡಿಸಿದರು. ಆದಾಗ್ಯೂ ಬ್ಲೇಕ್ ಎಂಬವನು ಸಹ ತನ್ನ ಬಳಿಯಲ್ಲಿ ಇದ್ದ ಇಂಗ್ಲಿಷ್ ನಾವಿಕರಿಂದ ತಾನು ಅವರನ್ನು ಒಂದೊಂದು ಯುದ್ಧದಲ್ಲಿಯೂ ಮೇಲ್ಗೊಂಡನು. (Vantromp) ವಾಂತ್ರಂಪ್ (De Ruyter) ದೀ ರೈತರ್ (De Wit) ದೀ ವಿತ್ ಎಂಬ ಇವರು ಒಬ್ಬರ ಹಿಂದೆ ಒಬ್ಬರು ಜಯಿಸಲ್ಪಡದ ಬ್ಲೇಕಿನಿಂದ ಜಯಿಸಲ್ಪಟ್ಟರು.

ಪಾರ್ಲಿಮೆಂತಿನವರ ಹೆಸರು ಮೂರು ಪಾಲು ಜನರಲ್ಲಿ ಕೆಟ್ಟು ಹೋದದರಿಂದ ಅದು ವರೆಗೂ ಕ್ರೊಮ್‌ವೆಲನೇ ಇಂಗ್ಲಿಷಿನವರಿಗೆ ಯಥಾರ್ಥವಾಗಿ ತಲೆಯಾಗಿದ್ದವನು. ಇನ್ನು ಮೇಲೆ ಬಹಿರಂಗವಾಗಿ ದೇಶಾಧಿಪತ್ಯವನ್ನು ತನ್ನದಾಗ ಮಾಡಿ ಕೊಳ್ಳುವದು ಯುಕ್ತವೆಂದೆಣಿಸಿ, ಪಾರ್ಲಿಮೆಂತಿನವರನ್ನು ಅಳಿಸಿ ಬಿಡುವದಕ್ಕೆ ಅಪ್ಪಣೆ ಮಾಡಿದನು. ಆದಾಗ್ಯೂ ಆ ಸಂಘದವರು ಆ ಕಾರ್ಯವನ್ನು ಕುರಿತು ಆಲೋಚನೆ ಮಾಡಿ ಕೊಂಡಿರುವಾಗಲೇ ಅವನು ಬಂದು ತನ್ನ ವೀರರಲ್ಲಿ ಕೆಲವರನ್ನು ತಲೆಬಾಗಲಲ್ಲಿ ನಿಲ್ಲಿಸಿ, ತಾನು ಒಳಗೆ ಹೊಕ್ಕನು. ಬಂದು ತಾನು ವಾಡಿಕೆಯಾಗಿ ಕೂತು ಕೊಳ್ಳುವ ಆಸನದಲ್ಲಿಯೇ ಕುಳಿತನು. ಬೇರೊಬ್ಬರು ಹೇಳುವದಕ್ಕೆ ಸ್ವಲ್ಪ ಹೊತ್ತು ಕಿವಿಗೊಟ್ಟ ತರುವಾಯ ತಾನೇ ಮಾತಾಡುವದಕ್ಕೆ ಎದ್ದು ನಿಂತನು. ಸ್ವಲ್ಪ ಹೊತ್ತಿನೊಳಗೆ ಕೋಪವೂ ಉರಿಯೂ ಉಂಟಾದದರಿಂದ ಆಸ್ಥಾನದ ಮಧ್ಯದಲ್ಲಿ ನಡೆದಾಡಿ, ಕೋಪಹೊಡನೆ ತನ್ನ ಪಾದದಿಂದ ನೆಲದಲ್ಲಿ ಒದೆದು, ತನ್ನ ಎದುರಿಗಳನ್ನು ಉದಾಸೀನವಾದ ಮಾತುಗಳಿಂದ ಬೈಯುತ್ತಾ, ಪಾರ್ಲಿಮೆಂತಿನವರಲ್ಲಿ ಮುಖ್ಯಸ್ಥರಾಗಿದ್ದ ಸಂಘದವರನ್ನೆಲ್ಲಾ ನಿಂದಿಸಿದನು. ತಾನು ಹೇಳಿ ಇದ್ದ ಗುರುತಿನಿಂದ ತಲೆಬಾಗಲಲ್ಲಿ ಇದ್ದ ರಾಣುವೆಯವರು ಬಂದು ಸಂಘದವರನ್ನೆಲ್ಲಾ ಹೊರಗೆ ಹೊರಡಿಸಿದರು. ಇದರ ಮಧ್ಯೆ ತಾನು ಹೀಗೆ ಮಾಡುವಂತೆ ಪ್ರಾರ್ಥಿಸಿದ್ದು ತನ್ನ ಮನಸ್ಸಿಗೆ ಬಹು ವ್ಯಸನವಾಗಿ

ದೆ ಎಂದು ಬಹು ವಂಚನೆಯಾಗಿ ಹೇಳಿ ಕೊಂಡಿದ್ದನು. ಅವನು ಹೀಗೆ ಹೇಳಿದ್ದರಿಂದ ಒಬ್ಬನು ನೀನು ಹೀಗೆ ಮನಸ್ತಾಪ ಪಡುವದು ನಿಜವಾದರೆ, ನೀನು ಮಾಡುತ್ತಾ ಬಂದವುಗಳನ್ನು ಬದಲಾಯಿಸುವದಕ್ಕೆ ಇನ್ನೂ ಸಮಯ ಉಂಟು ಅಂದನು. ಅವನು ಹೇಳಿದ ಆಲೋಚನೆಗಾಗಿ ಕ್ರೋಮ್‌ವೆಲನು ಅವನನ್ನು ಸಂಗಡಲೇ ಶೆರೆಯಲ್ಲಿ ಹಾಕಿದನು. ತರುವಾಯ ಆ ಸಂಘದ ಮನೆಯೊಳಗಿಂದ ಸಂಘದವರನ್ನೆಲ್ಲಾ ಹೊರಡಿಸಿಬಿಟ್ಟು ಬಾಗಲುಗಳನ್ನು ಮುಚ್ಚಿ ಬೀಗ ಹಾಕಿ, ಬೀಗದ ಕೈಯನ್ನು ತನ್ನ ಅಂಗಿಯ ಕಿಶೆಯಲ್ಲಿ ಇಟ್ಟು ಕೊಂಡು ಮನೆಗೆ ಹೋದನು.

ಈ ಪ್ರಕಾರ ಧೈರ್ಯವೂ ತ್ವರೀತಕರವೂ ಆದ ಒಂದೇ ಕೃತ್ಯದ ಮೂಲಕವಾಗಿ ರಾಜ್ಯಭಾರದ ಮೂಲಾಧಿಕ್ಯವನ್ನು ಕ್ರೋಮ್‌ವೆಲನು ತಾನೇ ಹೊಂದಿದನು. ಆದಾಗ್ಯೂ ಪಾರ್ಲಿಮೆಂಟ್ ಸಂಘದ ಸಹಾಯದಿಂದಲೇ ಅರಸುತನ ಮಾಡುವದು ಯುಕ್ತವೆಂದೆಣಿಸಿದನು. ಅದ್ದರಿಂದ ನಾನಾ ಪಟ್ಟಣಗಳಿಂದಲೂ ಸಂಘದವರನ್ನು ಆರಿಸಿ ಕರೆಯ ಕಳುಹಿಸಿ ಒಂದು ಸಂಘವನ್ನು ಸ್ಥಾಪಿಸಿದನು. ಆ ಸಂಘದವರು ನಡಿಸಿದ ಅನೇಕ ಬುದ್ಧಿಹೀನವಾದ ಕಾರ್ಯಗಳಿಂದ ಅವರಲ್ಲಿ ಜನರಿಗೆ ಅಸಹ್ಯ ಉಂಟಾಯಿತು. ಇದರಿಂದ ಕ್ರೋಮ್‌ವೆಲನು ತಾನೇ ಆಳುವದು ತಕ್ಕದ್ದೆಂದು ಅನೇಕರು ಎಣಿಸುವದಕ್ಕೆ ಹೇತುವೆಯಾಯಿತು. ಆ ಸಂಘದಲ್ಲಿ ಒಬ್ಬನ ಹೆಸರು (Barebones) ಬೇರ್ಬೋನ್ಸ್.* ಅವನ ಹೆಸರಿನಿಂದಲೆ ಆ ಸಂಘಕ್ಕೆ ಬೇರ್ಬೋನ್ಸ್ ಪಾರ್ಲಿಮೆಂಟ್ ಎಂಬ ಹೆಸರುಂಟಾಯಿತು. ಆ ಸಂಘವನ್ನು ಸಹ ಸ್ವಲ್ಪ ದಿವಸಗಳಲ್ಲಿ ಅಳಿಸಿ ಬಿಟ್ಟು ಕ್ರೋಮ್‌ವೆಲನೆಂಬವನು ಅರಸನೆಂಬುವ ಹೆಸರು ಮಾತ್ರವಿಲ್ಲದೆ ರಾಜ್ಯವನ್ನು ತಾನು ಒಬ್ಬನೇ ನಡಿಸಿದನು. ಅದರಿಂದ ಅವನಿಗೆ ರಾಜ್ಯದ (Lord Protector) ಮಹಾಪರಿಪಾಲಕಪ್ರಭು ಎಂಬುವ ಘನ ಉಂಟಾಯಿತು. ಈ ಘನವು ಬಹು ಅಟ್ಟಹಾಸದಿಂದ ಅವನಿಗೆ ಕೊಡಲ್ಪಟ್ಟಿತು. ಅದರ ತರುವಾಯ ಅವನು ಚಾರ್ಲ್ಸ್ ಅರಸನಾದರೂ ಯಾವ ಇಂಗ್ಲಿಷ್ ಅರಸನಾದರೂ ತೋರಿಸಿದ ಸ್ವಯಾಧಿಪತ್ಯಕ್ಕಿಂತಲೂ ಹೆಚ್ಚಾಗಿಯೇ ಆಳಿದ

* ಬೇರ್ಬೋನ್ಸ್ ಅಂದರೆ ಬರೀ ಎಲುವು ಎಂಬರ್ಥ.

ನು. ರಾಣುವೆಯವರಿಗೆ ಅವನ ಮೇಲೆ ವಿಶ್ವಾಸವಿತ್ತು. ಬೇರೆ ಯಾರಿಗೂ ಅವನ ಮೇಲೆ ಪ್ರೀತಿಯೇ ಇರಲಿಲ್ಲ. ಆದಾಗ್ಯೂ ಅವನು ಕಠಿಣವಾಗಿಯೂ, ಭಯಂಕರವಾಗಿಯೂ ಅಧಿಕಾರ ನಡಿಸಿದ್ದರಿಂದ ಕಲಹಕ್ಕೆ ಏಳುವವರು ಇರಲಿಲ್ಲ. ಅವನು ಜನಪ್ರತಿನಿಧಿಸಂಘವನ್ನು ಕೂಡಿ ಬರ ಆಜ್ಞಾಪಿಸಿದನು. ಪ್ರಭುಗಳ ಸಂಘವನ್ನು ಸಹ ಸ್ಥಾಪಿಸಿದನು. ಈ ಒಂದು ವಿಷಯದಲ್ಲಿ ಮಾತ್ರ ಅವನ ಅಭಿಪ್ರಾಯ ಸಿದ್ಧಿಸಲಿಲ್ಲ. ಆ ಪಾರ್ಲಿಮೆಂಟಿನವರು ಅವನಿಗೆ ಸಹಾಯ ಮಾಡಿದ್ದು ಹೆಸರಿಗೆ ಮಾತ್ರವೇ ಹೊರ್ತು ರಾಜ್ಯಭಾರದ ಮುಖ್ಯಾಧಿಕಾರವು ಕ್ರೊಮ್‌ವೆಲನೊಬ್ಬನ ಕೈಯಲ್ಲಿಯೇ ಇತ್ತು.

ತನ್ನ ಸ್ವಂತ ನಾಡಿನಲ್ಲಿ ಹ್ಯಾಗೋ ಹಾಗೆಯೇ ಅನ್ಯ ನಾಡುಗಳಲ್ಲಿಯೂ ಕ್ರೊಮ್‌ವೆಲನ ಹೆಸರು ದಿಗುಲನ್ನು ಉಂಟು ಮಾಡಿತು. ತನ್ನ ಸ್ವದೇಶದಲ್ಲಿರುವ ಸಕಲ ಹಗೆಯವರನ್ನೂ ಮೊದಲಲ್ಲಿ ಜಯಿಸಿದ ಆ ಯೋಗ್ಯದ ಮಾರ್ಪಡದ ಮನಸ್ಸೂ ಚಿತ್ತವೂ ಹೊಂದಿದ ಪುರುಷನು ಭೂಲೋಕದಲ್ಲೆಲ್ಲಾ ಇಂಗ್ಲಾಂದಿಗೆ ಜಯವನ್ನು ಉಂಟು ಮಾಡಿ ಇಂಗ್ಲಿಷಿನವರ ಮಹಿಮೆಯ ಬಿರುದನ್ನು ನಾಟಿದನು. ಕಡೆಯಲ್ಲಿ ಅವನು ಹೊಲ್ಲಾಂದರನ್ನು ಜಯಿಸಿದನು. ಸ್ಪಾನಿಯರನ್ನು ಅವನು ಸೋಲಿಸಿದನು. ಮೆದಿತರೇನಿಯನ್ ಸಮುದ್ರದಲ್ಲಿದ್ದ (Moors) ಮೂರ್ ಜಾತಿಯವರಾದ ಕಡಲಿನ ಕೊಳ್ಳೆಗಾರರನ್ನು ಶಿಕ್ಷಿಸಿದನು. ಪಶ್ಚಿಮ ಇಂದಿಯ ದ್ವೀಪಗಳಲ್ಲಿ ಮಹಾ ಸಂಪತ್ತುಳ್ಳ ಒಂದು ದ್ವೀಪವನ್ನು ಕಟ್ಟಿ ಕೊಂಡನು. ಪ್ರೊತೆಸ್ತಾಂತ್ ಸಭೆಯನ್ನು ಯೂರೋಪಿನಲ್ಲೆಲ್ಲಾ ಆದರಿಸಿದನು. ಫ್ರಾನ್ಸಿನಲ್ಲಿಯೂ (Piedmont) ಪೀದ್‌ಮೊಂತಿನಲ್ಲಿಯೂ ಉಪದ್ರ ಪಡುತ್ತಾ ಇದ್ದ ಪ್ರೊತೆಸ್ತಾಂತ್ ಸಭೆಯವರನ್ನು ಆದರಿಸಿದನು. ಇತಲಿ ಸೀಮೆಯಲ್ಲಿಯೂ ಮತಸಮ್ಬಂಧವಾದ ಉಪದ್ರವೂ ಶ್ರಮೆಯೂ ನಿಂತು ಹೋಗದೆ ಇದ್ದರೆ, ಇಂಗ್ಲಿಷಿನವರ ಫಿರಂಗಿಯ ನಾದವು ರೋಮಾಪುರಿಯಲ್ಲಿ ಕೇಳಿಸಲಾಗುವದು ಎಂದು ಪಾಪುವಿನನ್ನು ಭಯ ಪಡಿಸಿದನು. ಎಲಿಸಬೇತ್ ರಾಣಿಯ ಕಾಲದಲ್ಲಿ ಇಂಗ್ಲಿಷಿನವರ ಅರಸುತನವೂ ದಂಡವೂ ಸಮಸ್ತ ಜಾತಿಯವರಿಂದಲೂ ವಂದಿಸಲ್ಪಟ್ಟು ಗಣಿಸಲ್ಪಟ್ಟ ಪ್ರಕಾರ ಕ್ರೊಮ್‌ವೆಲನ ಕಾಲದಲ್ಲಿಯೂ ಗಣಿಸಲ್ಪಟ್ಟಿತು.

## ಸಂಧಿ 18. ಕ್ರೊಮ್‌ವೆಲನ ಅಂತ್ಯ ದಿವಸಗಳೂ ಮರಣವೂ.

ಇಂಗ್ಲಾಂದಿನಲ್ಲಿಯೂ ಯೂರೋಪಿನಲ್ಲಿಯೂ ಹೀಗೆ ಜಯದ ಬಿರುದುಗಳನ್ನು ಹೊಂದಿದ ಪುರುಷನು ತನ್ನ ಒಳಗೆ ಭಾಗ್ಯವಾದ ಸ್ಥಿತಿ ಹೊಂದಿದವನಲ್ಲ. ಅವನ ಮನಸ್ಸೇ ಅವನನ್ನು ಸುಟ್ಟಿತು. ಅತ್ಯಾಶೆ ಎಂಬುವದು ಕರೀ ಮದ್ದಾಗಿಯೂ, ರಾಜಕೊಲೆಪಾತಕವು ಗುಂಡಾಗಿಯೂ ಅದರ ಜ್ವಾಲೆಯು ಬೆಂಕಿಯಾಗಿಯೂ ಇದ್ದು, ಸಮಾಧಾನವೆಂಬ ಕೋಟೆಯನ್ನು ಒಡೆದು ಹಾಕಿದ್ದರಿಂದ ಅವನ ಮುಖವೂ ಮನಸ್ಸೂ ಕುಗ್ಗಿ ಬಾಡಿ ಹೋದವು. ಬೇರೊಬ್ಬರನ್ನು ಯಾವ ಅಪರಾಧಕ್ಕಾಗಿ ಕೊಲ್ಲಿಸಿದನೋ ಅಂಥಾ ಅಪರಾಧಗಳಿಗೆ ತಾನು ಸಹ ಗುರಿಯಾಗಿದ್ದದರಿಂದ ಒಂಟಿಯಾಗಿ ಹೋದರೆ, ತನಗೆ ತಿಳಿಯದಂತೆ ಬಚ್ಚಿಟ್ಟು ಕೊಂಡಿದ್ದು ಯಾರಾದರೂ ತನ್ನನ್ನು ಕೊಲ್ಲುವರೆಂದು ಅಂಜಿ ದಂಡುಗಳಿಲ್ಲದೆ ಮನೆಯನ್ನು ಬಿಟ್ಟು ಹೊರಡನು. 1658ನೇ ವರುಷದಲ್ಲಿ ಐವತ್ತೊಂಬತ್ತು ವರುಷ ವಯಸ್ಸುಳ್ಳವನಾಗಿ ಚಿಂತೆಗಳಿಂದಲೂ ವಿಚಾರಗಳಿಂದಲೂ ನರೆತು ಬಾಡಿ ಕಾಲಕ್ಕೆ ಮುಂಚೆಯೇ ಮುದಿತನ ಹೊಂದಿ ಸತ್ತನು. (Worcester) ವೊರ್ಸ್ಟರ್ (Dunbar) ದನ್‌ಬಾರ್ ಯುದ್ಧಗಳಲ್ಲಿ ಜಯ ಹೊಂದಿದಾಗ ಅದು ಅದೃಷ್ಟವಾದ ಕಾರ್ಯವೆಂದೆಣಿಸಿ ಕೊಂಡಿದ್ದವನು ಆ ಯುದ್ಧ ದಿವಸಗಳನ್ನು ಕೊಂಡಾಡುವ ದಿನದಲ್ಲಿಯೇ ಸತ್ತನು. ಅವನ ಮರಣದ ತರುವಾಯ ದೇಶಕ್ಕೆ ಯಾವ ಆಪತ್ತುಗಳು ಬರುವವೋ ಎಂದು ಸಕಲ ಜನರೂ ಕಳವಳ ಪಡುತ್ತಾ, ತಮ್ಮನ್ನು ಬಿಟ್ಟು ತೆಗೆದು ಕೊಳ್ಳಲ್ಪಟ್ಟವನು ಒಳ್ಳೆಯವನಲ್ಲದೆ ಇದ್ದಾಗ್ಯೂ ಮಹಾನುಭಾವನಾಗಿದ್ದನೆಂದು ಹೇಳಿ ಕೊಂಡು ಯಥಾರ್ಥವಾಗಿ ವ್ಯಸನ ಪಟ್ಟರು.

ಅವನ ತರುವಾಯ ಯಾವದೊಂದು ಅಡ್ಡಿಯೂ ಇಲ್ಲದೆ ಅವನ ಜ್ಯೇಷ್ಠ ಪುತ್ರನಾದ ರಿಚಾರ್ಡ್ ಕ್ರೊಮ್‌ವೆಲ್ ಎಂಬವನು ಪರಿಪಾಲಕ ಪ್ರಭು ಎಂಬ ಪಟ್ಟವನ್ನು ಹೊಂದಿದನು. ಆದಾಗ್ಯೂ ಅವನಿಗೆ ತನ್ನ ತಂದೆಗೆ ಇದ್ದ ಅತ್ಯಾಶೆಯಾದರೂ ಸಾಮರ್ಥ್ಯವಾದರೂ ಇರಲಿಲ್ಲ. ರಾಣುವೆಯವರು ಅವನನ್ನು ಸ್ನೇಹಿಸಲಿಲ್ಲ. ಪ್ರಜೆಗಳು ಅವನನ್ನು ಪ್ರೀತಿಯಿಂದ ಉಪಚರಿಸಲಿಲ್ಲ. ಕೆಲವು ತಿಂಗಳು ಬಹಳ ಕಷ್ಟದಿಂದ ಅರಸುತನ ಮಾಡಿ, ಕಡೆಯಲ್ಲಿ ತನ್ನ ದೊಡ್ಡ ಅಧಿಕವನ್ನು ಬಲವಂತವಾಗಿ ಬಿ

ಪ್ಪಿಸಿ ಬಿಟ್ಟು ಸ್ವತಹಾ ಇದ್ದನು. ಐರ್ಲಾಂಡಿನಲ್ಲಿ ಸೈನ್ಯಾಧಿಪತಿಯಾಗಿದ್ದ ಅವನ ಸಹೋದರನು ಹೆನ್ರಿ ಕ್ರೊಮ್ವೆಲ್ ಎಂಬವನು ಸಹ ತನ್ನ ಉದ್ಯೋಗವನ್ನು ಒಪ್ಪಿಸಿ ಬಿಟ್ಟನು. ಹೀಗಿರುವಲ್ಲಿ ಸ್ಕೊತ್ಲಾಂದಿನಲ್ಲಿ ಸೈನ್ಯಾಧಿಪತಿಯಾಗಿದ್ದ (Monk) ಮಂಕ್ ಎಂಬ ಸೈನ್ಯಾಧಿಪತಿಯೇ ಘಟ್ಟಿಗನಾಗಿದ್ದನು. ದೊಡ್ಡ ಪಾರ್ಲಿಮೆಂತಿನಲ್ಲಿ ಉಳಿದಿದ್ದ ಸಂಘದವರು ಒಂದು ಸಂಘವಾಗಿ ಕರೇ ಕಳುಹಿಸಲ್ಪಟ್ಟು ಬಹಳ ದಿವಸ ಕೂಡಿ ಇರಲಿಲ್ಲ. ಯಾಕಂದರೆ, ರಾಣುವೆಯವರು ಆ ಸಂಘದವರಿಗೆ ಕೂಡಿ ಬರ ಕಟ್ಟೆ ಕೊಡಲಾಗಿ, ಆ ರಾಣುವೆಯ ಅಧಿಕಾರವನ್ನೂ ಬಲವನ್ನೂ ಆ ಸಂಘದವರು ತಿರಸ್ಕರಿಸಿದ್ದರಿಂದ ಅವರೇ ಅದನ್ನು ಚದರಿಸಿ ಬಿಟ್ಟರು.

ಹೀಗೆ ಇಂಗ್ಲಾಂಡು ಶೀಮೆಯಲ್ಲಿ ರಾಣುವೆಯವರಿಗಿದ್ದ ಬಲವು ಮಟ್ಟಿಲ್ಲದೆ ಇದ್ದದರಿಂದ ಅವರಿಗೆ ಕಕ್ಷಿಗಳು ಮಾತ್ರ ಏಳದಿದ್ದರೆ ಎಷ್ಟು ಕಾಲ ಆ ರಾಣುವೆಯ ಧೊರೆತನ ಇರುವದೋ ತಿಳಿಯದು. ಹೀಗೆ ದೇಶದಲ್ಲಿ ದಿಗಿಲೂ ಭಯವೂ ಉಂಟಾಗಿರುವ ಕಾಲದಲ್ಲಿ ಮಂಕ್ ಸೈನ್ಯಾಧಿಪತಿಯ ದಂಡು ಸ್ಕೊತ್ಲಾಂದಿನಿಂದ ಬರಲಾಗಿ ಇಂಗ್ಲಾಂದಿನಲ್ಲಿ ಸಮಾಧಾನವೂ ಕ್ರಮವೂ ಉಂಟಾಯಿತು. ಹ್ಯಾಗಂದರೆ, ಕ್ರೊಮ್ವೆಲನ ಹಾಗೆ ಅತ್ಯಾಶೆಯುಳ್ಳವನಾದ (Lambert) ಲಾಂಬರ್ತ್ ಸೈನ್ಯಾಧಿಪತಿಯನ್ನು ಶೆರೆ ಹಿಡಿದರು. ಮಂಕ್ ಸೈನ್ಯಾಧಿಪತಿಯು ಲಂದನ್ ಪಟ್ಟಣಕ್ಕೆ ಸಮೀಪಿಸಲಾಗಿ ಸಂಸ್ಥಾನದ ಮುಖ್ಯಾಧಿಕಾರವು ಅವನದೇ ಆಯಿತು. ಅವನು ರಾಜಧಾನಿಯನ್ನು ಶೇರಿದ ಕೂಡಲೇ ಸ್ವತಹಾ ಕೂಡಿ ಬರ ತಕ್ಕ ಒಂದು ಪಾರ್ಲಿಮೆಂತ್ ಸಂಘವು ಕೂಡಿ ಬರ ಬೇಕೆಂದು ತಿಳಿಸಿದನು. ಅದರಿಂದ ಚಾರ್ಲ್ಸ್ ಅರಸನನ್ನು ಕೊಲೆ ಮಾಡುವದಕ್ಕಿಂತ ಮುಂಚೆ ಕ್ರೊಮ್ವೆಲನ ರಾಣುವೆಯವರಿಂದ ಹೊರಡಿಸಲ್ಪಟ್ಟಿದ್ದ ದೊಡ್ಡ ಪಾರ್ಲಿಮೆಂತ್ ಸಂಘದವರು ಕೂಡಿ ಬಂದರು. ಆ ಸಂಘದವರು ಧೊರೆತನ ನಡಿಯ ಬೇಕಾದ ಕ್ರಮವನ್ನು ನಿರ್ಣಯ ಮಾಡಿ, ಹೊಸದಾಗಿ ಬೇರೊಂದು ಪಾರ್ಲಿಮೆಂತ್ ಸಂಘವು ಕೂಡುವಂತೆ ಬೇಕಾದ ಯತ್ನಗಳನ್ನು ಸಹ ಮಾಡಿ ಬಿಟ್ಟು ಚದರಿ ಹೋದರು. ಅದೇ ಪ್ರಕಾರ ಹೊಸದಾಗಿ ಕೂಡಿದ ಸಂಘದವರು ಎಲ್ಲರೂ ಮುಂಚೆ ಧೊರೆತನಕ್ಕೆ

ಸಮ್ಮಂಧ ಪಡದವರಾಗಿದ್ದದರಿಂದ ಮುಂಚಿನ ಸಂಘದವರಿಗಿಂತ ಜನರ ತಾತ್ಪರ್ಯವನ್ನು ದಿಟ್ಟವಾಗಿ ಹೇಳ ತಕ್ಕವರಾಗಿದ್ದರು. ಮಂಕ್ ಸೈನ್ಯಾಧಿಪತಿಯೂ, ಮುಕ್ಕಾಲುವಾಶಿ ಪ್ರಜೆಗಳೂ ರಾಜಾಂಗದ ಮೇಲೆ ಅಪೇಕ್ಷೆಯುಳ್ಳವರಾಗಿದ್ದಾರೆಂದೂ, ಇನ್ನು ಮೇಲೆ ದೇಶದಲ್ಲಿ ಬರ ಹೋಗುವ ಸಕಲ ವಿಪತ್ತುಗಳೂ ಚಾರ್ಲ್ಸ್ ಎಂಬ ರಾಜಕುಮಾರನು ತಿರಿಗಿ ಬರುವದರಿಂದ ನಿವರ್ತಿಯಾಗುವವೆಂದೂ ನೆನಸಿ ಕೊಂಡು ಘರಾರಿಯಾಗಿದ್ದ ಆ ಅರಸನಿಗೆ ನಿರೂಪಗಳನ್ನು ಬರೆದು ಅವನನ್ನು ತಿರಿಗಿ ಬರ ಮಾಡ ಬೇಕೆಂಬದಾಗಿಯೇ ಶೀರ್ಮಾನಿಸಿದ್ದನು. ಅದರಲ್ಲಿ ಜನರ ಅಭಿಪ್ರಾಯವು ಇದೇ ಎಂದು ಅವನು ಎಣಿಸಿದ್ದರಲ್ಲಿ ತಪ್ಪಿಲ್ಲ. ಏನಂದರೆ ತನ್ನ ಅಭಿಪ್ರಾಯವನ್ನು ಜನಪ್ರತಿನಿಧಿಸಂಘದವರಿಗೆ ವಿವರಿಸಿದಾಗ ಅದನ್ನು ಅವರು ಬಹು ಸಂತೋಷದಿಂದಲೂ ಉಲ್ಲಾಸದಿಂದಲೂ ಒಪ್ಪಿ ಕೊಂಡರು. ಸಂಗಡಲೇ ಚಾರ್ಲ್ಸ್ ಅರಸನಿಗೆ ನಿರೂಪಗಳನ್ನು ಕಳುಹಿಸಿ ತನ್ನ ಸ್ವದೇಶಕ್ಕೆ ಶೀಘ್ರವಾಗಿ ಬರುವಂತೆ ಕೇಳಿ ಕೊಂಡರು.

1660ನೇ ವರುಷ ಮೇ ತಿಂಗಳ 29ನೇ ತಾರೀಖಿನಲ್ಲಿ ಎರಡನೇ ಚಾರ್ಲ್ಸ್ ಎಂಬವನು ತನ್ನ ಪ್ರಜೆಗಳು ಸಂದಣಿಯಾಗಿ ನಿಂತು ಆರ್ಭಟಿಸುವಂತೆ ದೋವರ್ ಊರಿನ ಬಳಿಯ ಧಡವಿಳಿದನು. (Puritans) ಪ್ಯೂರಿಟಾನರು ಆಳಿದ ಕ್ರೂರ ಧೊರೆತನ ಜನರಿಗೆ ಅಪೇಕ್ಷೆ ಇಲ್ಲದೆ ಇದ್ದದರಿಂದ ತಮ್ಮ ಅರಸನು ತಿರಿಗಿ ಬಂದ ಬರುವಿಕೆಯ ನಿಮಿತ್ತ ಲಾಹರಿಗೊಂಡವರಂತೆ ಸಂತೋಷಸಾಗರದಲ್ಲಿ ಮುಳುಗಿದರು.

ಆದಾಗ್ಯೂ ಚಾರ್ಲ್ಸ್ ಅರಸನು ಭೂಲೋಕದಲ್ಲಿ ಪರದೇಶಿಯಾಗಿ ಅಲೆದೂ, ತನಗೆ ಬಂದ ಕಷ್ಟಗಳ ಮೂಲಕವಾಗಿ ಒಳ್ಳೆಯವನಾಗಲಿಲ್ಲ. ಸರಿಯಾಗಿ ಮುದ್ರೆಯ ಕೋಲನ್ನು ನಡಿಸ ಕಲಿತು ಕೊಳ್ಳಲೂ ಇಲ್ಲ. ಅವನು ವಾಡಿಕೆಯಾಗಿ ಯೋಚನೆ ಇಲ್ಲದವನೂ ಸೋಮಾರಿಯೂ ಪಾಂಚಿಕನೂ ಆಗಿ ತಿರಿಗಿ, ಬಹು ಕಾಮಾತುರನಾಗಿಯೂ, ಇಂಗ್ಲಾಂದು ಶೀಮೆಯ ಸಿಂಹಾಸನದ ಮೇಲೆ ಕುಳಿತ ಎಲ್ಲಾ ಅರಸರಲ್ಲಿ ಮಹಾ ದುರ್ಮಾರ್ಗನಾಗಿಯೂ ಇದ್ದನು. ತನ್ನ ಜನರ ಭೂಮಿಗೆ ತಿರುಗಿದ ಸಂಗಡಲೇ ತನ್ನ ಕಿರೀಟವನ್ನು ಉಳಿಸುವದಕ್ಕೆ ಸಹಾಯವಾಗಿ ನಿಂತ ಮಂಕ್ ಸೈನ್ಯಾ

ಧಿಪತಿಯನ್ನು (Duke of Albemarle) ಆಲ್ಬಿಮಾರ್‌ಲ್ ದ್ಯೂಕ್ ಪ್ರಭುವಾಗಿಯೂ, ತಾನು ಫರಾರಿಯಾಗಿದ್ದ ಕಾಲದಲ್ಲಿ ತನಗೆ ಜತೆಗಾರನಾಗಿದ್ದ (Hyde) ಹೈದ್ ಎಂಬವನನ್ನು (Earl of Clarendon) ಕ್ಲಾರೆಂಡನ್ ಏರ್ಲ್ ಪ್ರಭುವಾಗಿಯೂ ಸಂಸ್ಥಾನಕ್ಕೆ ದೊಡ್ಡ ನ್ಯಾಯಾಧಿಪತಿಯಾಗಿಯೂ, ಸ್ಥಾಪಿಸಿದನು. ಅವನಿಗೆ ಸಂಸ್ಥಾನದ ಶ್ರೇಷ್ಠ ಅಧಿಕಾರವು ಕೊಡಲ್ಪಟ್ಟಿತು. ಅವನು ನಡೆದ ನಡತೆಗಳನ್ನು ನೋಡುವಾಗ ಅವನನ್ನು ಕೃತಜ್ಞತೆ ಇಲ್ಲದ ಅರಸನಿಗೆ ಸರಿಯಾದ ನಂಬಿಕೆಯುಳ್ಳ ಮಂತ್ರಿಯಾಗಿ ನಡೆದವನೆಂದು ಹೇಳ ಬಹುದು.

ತನ್ನ ತಂದೆಯನ್ನು ಕೊಲೆ ಮಾಡಿದವರನ್ನೆಲ್ಲಾ ತಕ್ಕ ಪ್ರಕಾರ ಶಿಕ್ಷಿಸಬೇಕೆಂದು ಆ ಹೊಸ ಅರಸನು ಮೊದಲು ತೀರ್ಮಾನಿಸಿದನು. ಅವನು ಸಹ ಕ್ರೊಮ್‌ವೆಲನ ಮೇಲೆ ತನಗಿದ್ದ ಕ್ರೋಧವನ್ನೂ ಅಸಹ್ಯವನ್ನೂ ತಕ್ಕದ್ದಲ್ಲದ ರೀತಿಯಾಗಿ ತೋರಿಸಿದನು. ಹ್ಯಾಗಂದರೆ, ಸಮಾಧಿ ಇಲ್ಲದಂತೆ ಮಾಡಿ ಅವನ ಹೆಣವನ್ನು ಘನಹೀನ ಪಡಿಸಿದನು. ರಾಣುವೆಗಳನ್ನು ಸಹ ಅಳಿಸಿ ಬಿಡುವಾಗ ಬಹು ಕಲಹಗಳುಂಟಾಗುವವೆಂದು ಅನೇಕರು ಅಂಜಿದರು; ಆದಾಗ್ಯೂ ಏನೂ ತೊಂದರೆ ಇಲ್ಲದೆ ಅಳಿಸಿ ಬಿಟ್ಟನು. ಕ್ರೊಮ್‌ವೆಲನ ಶುದ್ಧವೀರರು ಸಹ ತಮ್ಮ ಪಟ್ಟಣದವರ ಸಂಗಡ ಸಮಾಧಾನವಾಗಿ ಕೂಡಿ ಕೊಂಡರು. ಆದದರಿಂದ ಯಾವ ಕಲಹವೂ ಇಲ್ಲದೆ ಮುಗಿಯಿತು.

ಈ ಪ್ರಕಾರ ಸಂಸ್ಥಾನದ ಸಕಲ ಕಾರ್ಯಗಳೂ ಮುಗಿದ ಕೂಡ್ಲೆ ಸಭೆಯ ಆಳಿಕೆಯನ್ನು ತಿದ್ದುಪಾಟು ಮಾಡ ತಕ್ಕ ಸಾಧನೆಗಳು ಮಾಡಲ್ಪಟ್ಟವು. ಕ್ರೊಮ್‌ವೆಲನ ಧೊರೆತನದಲ್ಲಿ ಇಂಗ್ಲಿಷ್ ಸಭೆಗೆ ಶೇರಿದವರಿಗೆಲ್ಲಾ ಉಂಟಾಗಿದ್ದ ಶ್ಲಾಘ್ಯಗಳೆಲ್ಲಾ ನಿಂತು ಹೋಗಿದ್ದವು. ಈಗ ಅವರಿಗುಂಟಾಗಿದ್ದ ಸ್ವತಂತ್ರಗಳೆಲ್ಲಾ ಸ್ಥಾಪಿಸಲ್ಪಟ್ಟವು. ಮತ್ತು ಸಭೆಯ ಅಧಿಕೃಗಳನ್ನು ಹೊಂದಿದ ಸಕಲರೂ, ಎಲ್ಲಾ ಜನರಿಗೂ ಉಪಯೋಗವಾಗಿ ಗತಿಸಿದ ಶತಸಂವತ್ಸರದಲ್ಲಿ ಮಾಡಲ್ಪಟ್ಟಿದ್ದ ಜಪಪುಸ್ತಕವನ್ನೇ ಬಳಿಸ ಬೇಕೆಂಬುವ ಒಂದು ಪ್ರಮಾಣವು ಪಾರ್ಲಿಮೆಂಟಿನವರಿಂದ ವಿಧಿಸಲ್ಪಟ್ಟಿತು. ಈ ಯತ್ನಗಳಿಂದ ಸಭೆಯಲ್ಲಿಯೂ ದೇಶದಲ್ಲಿಯೂ ಪೂ

ರ್ರೀಕದ ಆಳಿಕೆಯೇ ತಿರಿಗಿ ಸ್ಥಾಪಿಸಲ್ಪಟ್ಟಿತು. ಮುಕ್ಕಾಲುವಾಶಿ ಪ್ರಜೆಗಳಿಗೆ ಬಹಳ ಸಂತೋಷವುಂಟಾಯಿತು. ಮತ್ತು ಪ್ಯೂರಿತಾನರ ಕಠಿಣವಾದ ಆಳಿಕೆಯನ್ನು ಸಹಿಲಾರದವರಾಗಿದ್ದ ಅವರು ತಮ್ಮ ಅರಸನು ಬಂದ ಮೇಲೆ ಬೇರೆ ಕಡೆ ತಿರಿಗಿ ಕೊಂಡು ಮುಂಚೆ ಇದ್ದ ಕಠಿಣವಾದ ವಾಡಿಕೆಗಳಿಗೆ ಬದಲಾಗಿ ಅನಾಚಾರಗಳು ಬಹಳ ಉಂಟಾದವು. ಇಂಗ್ಲೋಕದಲ್ಲಿ ಯಾವ ಕಾಲದಲ್ಲಾದರೂ ಇದ್ದ ಉತ್ತಮರಲ್ಲಿ ಶ್ರೇಷ್ಠರಾದ ಕೆಲವರು ಈ ಕಾಲದಲ್ಲಿ ಇದ್ದದ್ದು ಉಂಟು. ಆದಾಗ್ಯೂ ಅವರು ಕಾಡಿನಲ್ಲಿ ಚಿಗುರಿದ ಮರಗಳ ಹಾಗೆ ಅಪರೂಪವಾಗಿ ಅಲಂಕಾರ ಹೊಂದಿದವರು. ಅವರು ಯಾರಂದರೆ, (Bishop Taylor) ಅಧ್ಯಕ್ಷನಾದ ತೇಲಿರ್ (Evelyn) ಎವಿಲಿನ್ (Baxter) ಬಾಕ್ಸ್ತರ್ (Boyle) ಬೋಯಲ್ ಎಂಬವರು. ಅವರ ನಡತೆಗಳಲ್ಲಿಯೂ ಕ್ರಿಯೆಗಳಲ್ಲಿಯೂ ತೋರಲ್ಪಟ್ಟ ಉತ್ತಮತ್ವವನ್ನೂ ಘನವನ್ನೂ ಕಂಡು ಅವರ ಹೆಜ್ಜೆಜಾಡುಗಳಲ್ಲಿ ನಡೆದವರು ಕೆಲವರೇ.

ಎರಡನೇ ಚಾರ್ಲ್ಸ್ ಎಂಬವನು ಪೋರ್ತುಗಲ್ ಶೀಮೆಯ ರಾಜಕನ್ನಿಕೆಗಳಲ್ಲಿ ಒಬ್ಬಳಾದ (Catherine) ಕತ್ತರೀನ್ ಎಂಬವಳನ್ನು ಮದುವೆ ಮಾಡಿ ಕೊಂಡು, ಅವಳನ್ನು ರಾಣಿಯಾಗಿ ನಡಿಸ ಬೇಕಾದ ಮರ್ಯಾದೆಯನ್ನು ಮೀರಿ ಯಾವಾಗಲೂ ಬೇಕೊ ಭೇಡವಾಗಿ ನಡೆಸಿದನು. ಅವಳ ಮೂಲಕವಾಗಿ ಅವನಿಗೆ ಬಂದ ಉಚಿತದಲ್ಲಿ ಹಿಂದುಸ್ಥಾನದಲ್ಲಿರುವ ಬೊಂಬಾಯಿ ಪಟ್ಣವೂ ಅಫ್ರಿಕ ಖಂಡದ ಉತ್ತರ ಥಡದಲ್ಲಿರುವ (Tangier) ತಾಂಜೀರ್ ಎಂಬ ಕೋಟೆಯೂ ಒಂದು ಜಾಗವಾಗಿತ್ತು. ಆ ಮದುವೆಯು ಇಂಗ್ಲಾಂದಿನವರಿಗೆ ಇಷ್ಟವಾದದ್ದಾಗಿರಲಿಲ್ಲ. ಇದಲ್ಲದೆ ಆ ಅರಸನು ತನ್ನ ಸ್ವಂತ ಕಾರ್ಯಗಳಲ್ಲಿ ಯಾವ ಕ್ರಮವೂ ಇಲ್ಲದೆ ಹ್ಯಾಗೆ ತಾರುಮಾರಾಗಿ ನಡೆದನೋ, ಅದೇ ಪ್ರಕಾರ ಅನ್ಯ ದೇಶಗಳಿಗೆ ತಕ್ಕ ರಾಜತಂತ್ರವಿಲ್ಲದೆ ತಾರುಮಾರಾಗಿ ನಡೆದದರಿಂದ ಜನರಿಗೆ ಅವನ ಮೇಲೆ ಸಂಗಡಲೇ ಬೇಸರಿಕೆಯುಂಟಾಯಿತು. ಫ್ರಾನ್ಸ್ ಶೀಮೆಯಲ್ಲಿ ಮಹಾ ಬಲಿಷ್ಠ ಅರಸನಾದ (Louis XIV) ಹದಿನಾಲ್ಕನೇ ಲೂವಿಸ್ ಎಂಬವನ ಸಂಗಡ ಬಹು ಪ್ರೀತಿಯ ಏರ್ಪಾಟು ಮಾಡಿ ಕೊಂ

ಡು, ಅವನಿಗೆ ಪೂರ್ಣವಾಗಿ ಅಣಗಿ ವಿಧೇಯನಂತೆ ನಡೆದು ಕೊಂಡದರಿಂದ ಇಂಗ್ಲಿಷಿನವರಿಗೆ ಅವನ ಮೇಲೆ ಕೋಪ ಉಂಟಾಯಿತು. ಸ್ಪೇನ್ ಸೀಮೆಗೆ ಸೇರಿ ಇದ್ದ (Netherland) ನೆದರ್ಲಾಂಡ್ ಸೀಮೆಯ ಪಟ್ಟಣಗಳಲ್ಲಿ ಒಂದಾದ (Dunkirk) ದನ್‌ಕಿರ್ಕ್ ಎಂಬ ಪಟ್ಟಣವನ್ನು ಓಲಿವರ್ ಕ್ರೋಮ್‌ವೆಲನು ಕಟ್ಟಿ ಕೊಂಡಿದ್ದನು. ಅದನ್ನು ಈಗಲು ಫ್ರಾನ್ಸ್ ಅರಸನಿಗೆ ವಿಕ್ರಯ ಮಾಡಿ ಬಿಟ್ಟಿದ್ದು ಸಹ ಇಂಗ್ಲಾಂದಿನಲ್ಲಿ ಬಹು ಮನೋಸಂಕಟಕ್ಕೆ ಸ್ಥಳವಾಯಿತು.

ಆ ಕಾಲದಲ್ಲಿ ಹೊಲ್ಲಾಂದಿನವರ ಸಂಗಡ ಯುದ್ಧವು ಸಹ ಉಂಟಾಯಿತು. ಒಂದು ಯುದ್ಧದಲ್ಲಿ ಇಂಗ್ಲಿಷಿನವರಿಗೆ ಜಯ ಉಂಟಾದಾಗ್ಯೂ, ಅವರ ಪಕ್ಷದಲ್ಲಿ ಯುದ್ಧವು ನೆಟ್ಟಗೆ ನಡಿಸಲ್ಪಡದೆ ಇದ್ದದರಿಂದ ಅವರ ಸೈನ್ಯಗಳಿಗೆ ಬಹು ನಷ್ಟ ಉಂಟಾಯಿತು. ಇದಲ್ಲದೆ ಹೊಲ್ಲಾಂದಿನವರ ಹಡಗಗಳು ಥೇಮ್ಸ್ ನದಿಯಲ್ಲಿ ಏರಿ ಬಂದು, (Chatham) ಚಾಥಾಮ್ ಘಡದಲ್ಲಿ ಇಳಿದು ನಿಂತಿದ್ದ ಅನೇಕ ಹಡಗಗಳನ್ನು ನಾಶ ಮಾಡಿದವು. ಈ ವ್ಯಸನಕ್ಕೆ ಹೇತುವೆಯಾದ ವರ್ತಮಾನಕ್ಕಾಗಿ ಜನರೆಲ್ಲರೂ (Clarendon) ಕ್ಲಾರೆಂದನ್ ಎಂಬವನನ್ನು ಅಸಂಹಿಸಲಾಗಿ, ಅಂದಿನಿಂದ ಅವನು ತಗ್ಗಿಸಲ್ಪಡಲಾರಂಭಿಸಿದನು. ಈ ಅಪಜಯವಾದ ಯುದ್ಧ ನಡೆಯುವ ಕಾಲದಲ್ಲಿ ಲಂದನ್ ಪಟ್ಟಣದಲ್ಲಿ ಎರಡು ದೊಡ್ಡ ಆಪತ್ತುಗಳು ಸಂಭವಿಸಿ ದೇಶದಲ್ಲೆಲ್ಲಾ ಬಹು ದೌರ್ಭಾಗ್ಯವನ್ನೂ ಕಷ್ಟವನ್ನೂ ಉಂಟು ಮಾಡಿದವು.

ಮಹಾ ಘೋರವಾದ ಒಂದು ಉಪಾಧಿಯು 1665ನೇ ವರುಷದ ವಸಂತಕಾಲದಲ್ಲಿ ಪ್ರಾರಂಭಿಸಿ ಆ ಪಟ್ಟಣದಲ್ಲಿಯೂ ಆ ಸೀಮೆಯ ಅನೇಕ ಸ್ಥಳಗಳಲ್ಲಿಯೂ ಅನೇಕ ತಿಂಗಳುಗಳ ಮಟ್ಟಿಗೂ ಸಂಹಾರ ಮಾಡಿತು. ಅದರಲ್ಲಿ ಲಕ್ಷ ಮನುಷ್ಯರಿಗೆ ಅಧಿಕವಾಗಿಯೇ ಲಂದನ್ ಪಟ್ಟಣದಲ್ಲಿ ಮಾತ್ರ ಸತ್ತರು. ಅದಕ್ಕೆ ತಪ್ಪಿ ಬದುಕಿದ ಅನೇಕರು ಹೊಂದಿದ ಬಡತನಕ್ಕೂ ಇಕ್ಕಟ್ಟಿಗೂ ಸಮಾನವಾದದ್ದು ಚರಿತ್ರೆಗಳಲ್ಲಿ ಬೇರೆ ಯಾವದೂ ಇಲ್ಲ. ಮಾರಣೇ ವರುಷದಲ್ಲಿ ಭಯಂಕರವಾದ ಅಗ್ನಿನಷ್ಟ ಉಂಟಾಗಿ ಲಂದನ್ ಪಟ್ಟಣವನ್ನು ಪೂರ್ಣವಾಗಿ ಹಾಳು ಮಾಡಿ ಬಿಟ್ಟಿತು. ಅ

ದು ಐದು ದಿವಸಗಳ ಮಟ್ಟಿಗೂ ಉರಿದದರಲ್ಲಿ ಬೀದಿಗಳು ಇಕ್ಕಟ್ಟೂ, ಮನೆಗಳು ಮರದ ಕಟ್ಟುವಿಕೆಗಳೂ ಆಗಿದ್ದದರಿಂದ ಅದರಿಂದ ಉಂಟಾದ ನಷ್ಟಕ್ಕೆ ಮಿತಿಯೂ ಮೇರೆಯೂ ಇಲ್ಲಿ. ಲಂದನ್ ಪಟ್ಟಣದ ಬಾಧೆಯನ್ನೂ ಅಗ್ನಿನಾಶನವನ್ನೂ ಬಿಟ್ಟರೆ ಯಾವ ಚರಿತ್ರೆಯಲ್ಲಿಯೂ ಹೇಳ ತಕ್ಕ ಭಯಂಕರವಾದದ್ದು ಬೇರೆ ಒಂದೂ ಇಲ್ಲಿ.

ಎರಡನೇ ಚಾರ್ಲ್ಸ್ ಅರಸನು ನೆರೆಯ ದೇಶಗಳನ್ನು ಕುರಿತ ವಿಷಯಗಳಲ್ಲಿ ನಡೆದ ನಡತೆಯು ಮುಂಚಿಗಿಂತ ಅಧಿಕ ಬುದ್ಧಿಹೀನವಾಗಿ ಮುಗಿಯಿತು. ಆ ಕಾಲದಲ್ಲಿ ಯೂರೋಪಿನ ಕೆಲವು ಶೀಮೆಗಳೊಳಗೆ ಫ್ರಾನ್ಸ್ ಅರಸನಾದ 14ನೇ ಲೂವಿಸ್ ಎಂಬವನೇ ಮಹಾ ಬಲಶಾಲಿಯಾಗಿದ್ದನು. ಮತ್ತು ಗತಿಸಿದ ಶತಮಾನಸಂವತ್ಸರದಲ್ಲಿ ಸ್ಪಾನಿಯರು ಹ್ಯಾಗೆ ಕೀರ್ತಿ ಹೊಂದುತ್ತಾ ಬಂದರೋ ಅದೇ ಪ್ರಕಾರ ಫ್ರಾನ್ಸರು ಈ ಕಾಲದಲ್ಲಿ ಬೇರೆ ಶೀಮೆಗಳವರಿಗಿಂತ ಶ್ರೇಷ್ಠತ್ವವನ್ನು ಹೊಂದುವದಕ್ಕೆ ಆರಂಭಿಸಿದರು. ಈ ಕಾಲದಲ್ಲಿ ಭೂಲೋಕದೊಳಗೆ ಫ್ರಾನ್ಸ್ ದೇಶವೇ ಮೊದಲನೇದೆಂದು ಹೇಳಲ್ಪಟ್ಟಿತ್ತು. ಆ ದೇಶದ ಅಧಿಕಾರವನ್ನೂ ಸಂಪತ್ತನ್ನೂ ಇನ್ನೂ ಹೆಚ್ಚಿಸುವದಕ್ಕೆ ಆ ಫ್ರಾನ್ಸ್ ಅರಸನು ಆಶೆಯುಳ್ಳವನಾಗಿದ್ದನು. ಹೀಗಿರುವಲ್ಲಿ ಹೊಲ್ಲಾಂದಿನವರ ಸಂಗಡ ಸಮಾಧಾನ ಮಾಡಲ್ಪಟ್ಟಿತು. ತರುವಾಯ ಫ್ರಾನ್ಸ್ ಅರಸನಿಗೆ ವಿರೋಧವಾಗಿ ಹೊಲ್ಲಾಂದಿನವರ ಸಂಗಡಲೂ ಸ್ವೀದೆನ್ ದೇಶದವರ ಸಂಗಡಲೂ ಇಂಗ್ಲಿಷಿನವರು ಸಮಾಧಾನಕಟ್ಟುಪಾಟು ಮಾಡಿ ಕೊಂಡರು. ಈ ಪ್ರಕಾರ ಕೂಡಿದ ಮೂರು ಶೀಮೆಗಳವರ ಸಂಗಡ ಯುದ್ಧ ಮಾಡಿ ಜಯಿಸುವದು ತನ್ನಿಂದ ಆಗಲಾರದೆಂದು ಫ್ರಾನ್ಸ್ ಅರಸನಾದ ಲೂವಿಸ್ ಆಲೋಚಿಸಿ, ತಾನು ಜಯಿಸಿದ ನಾಡುಗಳಲ್ಲಿ ಕೆಲವನ್ನು ಬಿಟ್ಟು ಬಿಡುವದಕ್ಕಾಗಿ (Aixla-Chapelle) ಆಯಿಲಾ ಚಾಪೆಲ್ ಎಂಬ ಸ್ಥಳದಲ್ಲಿ ಒಂದು ಒಡಂಬಡಿಕೆ ಮಾಡಿ ಕೊಟ್ಟನು. ಅದು ಇಂಗ್ಲಿಷಿನವರಿಗೆ ಬಹು ಸಂತೋಷವಾದ ವಿಷಯವಾಗಿತ್ತು. ಆದಾಗ್ಯೂ ಚಾರ್ಲ್ಸ್ ಅರಸನು ತನ್ನ ಪಾರ್ಲಿಮೆಂಟಿನವರ ಯೋಚನೆಯ ಪ್ರಕಾರ ನಡಿಯ ಮನಸ್ಸಿಲ್ಲದವನಾಗಿ ಲೂವಿಸ್ ಅರಸನ ಪಕ್ಷದಲ್ಲಿ ಶೇರಿ ಕೊಂಡು ಅವನ ಕೈಯಿಂದ ಲಂಚವನ್ನು ತೆ

ಗೆದು ಕೊಂಡ ನಿಂದೆಯ ಮಾತನ್ನು ಹೊತ್ತು ಕೊಂಡನು. ಈ ಕಾರ್ಯ ದಲ್ಲಿ ಅವನಂತೆ ಅಯೋಗ್ಯರಾಗಿದ್ದ ಐದು ಮಂತ್ರಿಗಳಿಂದ ಬೋಧಿಸಲ್ಪಟ್ಟಿದ್ದನು. ಅವರ ಹೆಸರುಗಳು (Clifford) ಕ್ಲಿಫ್ಫೋರ್ಡ್, (Arlington) ಆರ್ಲಿಂಗ್ಟನ್, (Buckingham) ಬಕ್ಕಿಂಗ್ಹಾಮ್, (Ashley) ಆಶ್ಲಿ, (Lauderdale) ಲಾಡರ್‌ದೇಲ್ ಎಂಬವುಗಳ ಮೊದಲಕ್ಷರಗಳು ಕೂಡಿ ಕಾಬಾಲ್* ಎಂದು ಇಂಗ್ಲಿಷಿನಲ್ಲಾಗುವದು. ಅದರಿಂದ ಅವರು ಕೂಡಿದ ಸಂಘಕ್ಕೆ ಅದೇ ಹೆಸರು ವಾಡಿಕೆಯಾಯಿತು. ಅದು ಹ್ಯಾಗಂದರೆ, (Dover) ದೋವರ್ ಎಂಬ ಊರಿನಲ್ಲಿ ಫ್ರಾನ್ಸ್ ಅರಸನ ಸಂಗಡ ರಹಸ್ಯವಾಗಿ ಒಂದು ಒಡಂಬಡಿಕೆ ಮಾಡಿ, ಅವನು ಹೊಲ್ಲಾಂದಿನವರ ಸಂಗಡ ಮಾಡುವ ಯುದ್ಧದಲ್ಲಿ ಅವನಿಗೆ ಸಹಾಯ ಮಾಡುವಂತೆಯೂ ಸ್ಪೇನ್ ದೇಶಕ್ಕೆ ಅವನೇ ರಾಜಸ್ವತಂತ್ರವುಳ್ಳವನೆಂದು ಸಾಧಿಸುವಂತೆಯೂ, ತಾವು ರೋಮನ್ ಸಭೆಯ ಮತವನ್ನು ಅನುಸರಿಸುವಂತೆಯೂ ಒಪ್ಪಿ ಕೊಂಡರು. ಕಡೆಯಲ್ಲಿ ಒಪ್ಪಿ ಕೊಂಡ ಆ ಮತವಿಷಯವಾದ ಸಂಗತಿಯನ್ನು ತನ್ನ ಪ್ರಜೆಗಳಿಗೆ ತಿಳಿಸ ಅವನಿಗೆ ಧೈರ್ಯವಾದರೂ ನಿಶ್ಚಯವಾದರೂ ಇರಲಿಲ್ಲ. ಆದಾಗ್ಯೂ ಒಡಂಬಡಿಕೆಯಲ್ಲಿ ಒಪ್ಪಿ ಕೊಂಡ ಮಿಕ್ಕ ವಿಷಯಗಳನ್ನು ನಡಿಸುವದಕ್ಕೆ ಮನಸ್ಸು ಮಾಡಿದನು. ಆದಾಗ್ಯೂ ಹೊಲ್ಲಾಂದಿನವರ ಸಡ್ಲವಾಗದ ಶೀಮಾನದಲ್ಲಿ ಹೀಗೆ ಕೂಡಿ ಕೊಂಡಿದ್ದ ಎರಡು ಅರಸರ ನೆನಪುಗಳೂ ವೃರ್ಥವಾದವು. ಹ್ಯಾಗಂದರೆ, ಆ ಹೊಲ್ಲಾಂದಿನವರು ತಮ್ಮ ದೇಶವನ್ನು ಅನ್ಯ ಶೀಮೆಯ ಶತ್ರುಗಳು ಬಂದು ನಾಶ ಮಾಡುವದಕ್ಕಿಂತ ತಾವೇ ಅದನ್ನು ಕೆಡಿಸುವದು ಯುಕ್ತವೆಂದು ಶೀಮಾನಿಸಿ, ತಮ್ಮ ಶೀಮೆಯೊಳಗೆ ಸಮುದ್ರದ ನೀರು ಬಾರದಂತೆ ಅಡ್ಡಿ ಮಾಡುವದಕ್ಕೆ ಕಟ್ಟಿ ಇದ್ದ ಅಣೆಗಳನ್ನೆಲ್ಲಾ ಒಡದು ತೆರೆದು ಬಿಟ್ಟು ಮುಕ್ಕಾಲುವಾಶಿ ಶೀಮೆಯನ್ನು ನೀರಿನಿಂದ ಮುಣುಗ ಮಾಡಿದರು. ಅದನ್ನು ಕಂಡು ಥಡದ ಅಂಚಿನಲ್ಲಿ ಹೋಗಿದ್ದ ಫ್ರಾನ್ಸರ ಸೈನ್ಯವು ಸುಮ್ಮನೆ ಹಿಂತಿರುಗಿ ಹೋಗ ಬೇಕಾಯಿತು.

ಕಡೆಯಲ್ಲಿ ಚಾರ್ಲ್ಸ್ ಅರಸನು ತನ್ನ ತಂದೆಯ ಹಾಗೆಯೇ ತಾ

---

* ಕಾಬಾಲ್ ಅಂದರೆ ರಹಸ್ಯವಾದ ಕಟ್ಟುಪಾಟು.

ನು ಸಹ ಪಾರ್ಲಿಮೆಂಟಿನವರ ಸಹಾಯವಿಲ್ಲದೆ ಅರಸುತನ ಮಾಡುವ ದು ಕಷ್ಟವೆಂದು ತಿಳುಕೊಂಡನು. ಆ ಸಂಘದವರು ಕೂಡುವದಕ್ಕಿಂತ ಮುಂಚೆಯೇ ಸಕಲ ಮನುಷ್ಯರೂ ವಿಘ್ನವಿಲ್ಲದೆ ಇರ ಬಹುದೆಂದು ಅರಸನು ಒಂದು ಪ್ರಮಾಣವನ್ನು ಉಂಟು ಮಾಡಿದ್ದನು. ಇಂಥಾ ಪ್ರಮಾಣವು ಪ್ರಜೆಗಳಿಗೆ ಅಸಮ್ಮತವಾಗಿದ್ದದರಿಂದ, ಕೂಡಿ ಬಂದ ಪಾರ್ಲಿಮೆಂಟಿನವ ರು ಆ ಪ್ರಮಾಣವನ್ನು ತೆಗದು ಹಾಕಿ, ದೊಡ್ಡ ಅಂತಸ್ತಿನಲ್ಲಿರುವ ಸ ಕಲರೂ ಇಂಗ್ಲಿಷ್ ಸಭೆಯ ಏರ್ಪಾಟುಗಳನ್ನು ಅನುಸರಿಸ ಬೇಕೆಂದು ಬೇರೆ ಪ್ರಮಾಣವನ್ನು ವಿಧಿಸಿದರು. ಆ ಪ್ರಮಾಣಕ್ಕೆ (Test Act) ಪ ರೀಕ್ಷೆಯ ಪ್ರಮಾಣವೆಂದು ಹೆಸರು. ಉಭಯ ಸಭೆಗಳ ಮತವಿಷಯ ಗಳಲ್ಲಿ ಬಿಡುವಾದ ಉಳ್ಳವರಿಗೆ ಇದು ಮಹಾ ಕಠಿಣವಾದ ಕಟ್ಟಳೆಯಾ ಗಿತ್ತು. ಆದಾಗ್ಯೂ ಅರಸನ ಸಹೋದರನೂ, ಅರಸನ ತರುವಾಯ ಕಿ ರೀಟಕ್ಕೆ ಸ್ವತಂತ್ರನೂ ಆಗಿದ್ದ (Duke of York) ಯೋರ್ಕ್ ದ್ಯೂಕ್ ಪ್ರಭುವಿನ ಉದ್ದಿಶ್ಯವೂ, ಧೊರೆತನದಲ್ಲಿ ದೊಡ್ಡ ಉದ್ಯೋಗಗಳನ್ನು ಹೊಂದಿ ಇದ್ದ ಬೇರೆ ರೋಮನ್ ಮಾರ್ಗದವರ ಉದ್ದಿಶ್ಯವೂ ಇದ ನಿರ್ಮಿಸಲ್ಪಟ್ಟಿತು.

ಈ ಧೊರೆತನವು ಅಂತ್ಯವಾದ ಕಾಲದಲ್ಲಿ ಅರಸನಿಗೆ ವಿರೋಧವಾ ಗಿಯೂ ಮಂತ್ರಿಸಭೆಗಳಿಗೆ ವಿರೋಧವಾಗಿಯೂ ಅನೇಕ ಕೇಡಾಲೋಚನೆ ಗಳು ಮಾಡಲ್ಪಟ್ಟಿದ್ದು ಉಂಟು. ಅವುಗಳಲ್ಲಿ ಮುಖ್ಯವಾದದ್ದು ಯಾ ವದಂದರೆ, ಬಹು ಚಾಂಡಾಲನಾಗಿದ್ದ (Titus Oates) ತೈತಸ್ ಓತ್ಸ್ ಎಂಬವನು ಇಂಗ್ಲಿಷಿನವರಾದ ರೋಮನ್ ಸಭೆಯವರ ಮೇಲೆ ಹೇಳಿ ದ ಕಲ್ಪನೆಯಾದ ಸುಳ್ಳೇ. ದೇಶಪ್ರಮಾಣಗಳನ್ನೂ ಮತಾನುಸರಣೆಗಳ ನ್ನೂ ಅಳಿಸಿ ಬಿಡುವದಕ್ಕಾಗಿ ಒಂದು ಕೇಡಾಲೋಚನೆ ನಡಿಯುತ್ತದೆ ಎಂ ದು ಅವನು ಪೂರ್ಣ ವಿಶ್ವಯವಾಗಿ ಹೇಳಿ ಅದನ್ನು ರುಜು ಪಡಿಸುವದ ಕ್ಕೆ ಸಹ ನಿಂತನು. ಅವನ ಮಾತುಗಳು ಅಬದ್ಧವೆಂದು ಈ ಕಾಲದಲ್ಲಿ ಎಲ್ಲರಿಗೂ ತಿಳಿಯುವದು. ಆದಾಗ್ಯೂ ಆ ಕಾಲದಲ್ಲಿ ಅಪರಾಧ ಹೊ ರಿಸಲ್ಪಟ್ಟವರ ಮೇಲೆ ಸಕಲರು ಕೋಪಗೊಂಡಿದ್ದದರಿಂದ ಅವರನ್ನು ಕುರಿ ತು ಎಂಥೆಂಥಾ ವಿಪರೀತವಾದ ಕಥೆಗಳು ಹೇಳಲ್ಪಟ್ಟಾಗ್ಯೂ ಅದನ್ನೆಲ್ಲಾ

ನಂಬಿ ಕೊಂಡರು. ಯೋರ್ಕ್‌ದ್ಯೂಕ್ ಪ್ರಭುವು ರೋಮನ್ ಸಭೆಯವನಾಗಿದ್ದದರಿಂದ ಅವನನ್ನು ಪಟ್ಟಕ್ಕೆ ಬಾಧ್ಯವಿಲ್ಲದೆ ತಳ್ಳಿ ಬಿಡುವದಕ್ಕೆ ಶೀಮೆಯಲ್ಲಿದ್ದ ಅನೇಕ ಮನುಷ್ಯರು ಅಪೇಕ್ಷಿಸಿ ಅದರ ಉದ್ದಿಶ್ಯ (Bill of Exclusion) "ತಳ್ಳುವಿಕೆಯ ಚೀಟು" ಎಂಬ ಪ್ರಮಾಣವನ್ನು ನಿರ್ಮಿಸ ನೋಡಿದರು; ಆದಾಗ್ಯೂ ವ್ಯರ್ಥರಾದರು. ಸದರಿ ಪ್ರಭುವಿನ ಮೇಲೆ ಉಂಟಾದ ನ್ಯಾಯವಾದ ಸಂಶಯಗಳೂ, ಬೇರೊಬ್ಬರ ಮೇಲೆ ಉಂಟಾದ ಅನ್ಯಾಯವಾದ ಸಂಶಯಗಳೂ ಜನರ ಮನಸ್ಸನ್ನು ಕೆಡಿಸಿ ಬಿಟ್ಟಿದ್ದರಿಂದ ಪಾಪು ಮಾರ್ಗದವರ ವಂಚನೆ ಎಂಬ ವ್ಯರ್ಥಪರಾಧದ ಉದ್ದಿಶ್ಯವಾಗಿ ಅನೇಕ ನಿರಪರಾಧಿಗಳು ಕೊಲ್ಲಲ್ಪಟ್ಟರು.

ಅದರ ತರುವಾಯ ಯಥಾರ್ಥವಾದ ಒಂದು ಮೋಸ ಸಂಭವಿಸಿತು. (Newmarket) ನ್ಯೂಮಾರ್ಕೆತ್ ಊರಿನಲ್ಲಿ ಕುದುರೆಪಂದ್ಯವನ್ನು ನೋಡ ಹೋಗಿದ್ದ ಅರಸನು ಹಿಂತಿರುಗುವ ಕಾಲದಲ್ಲಿ (Hertford) ಹೆರ್ತ್‌ಫೋರ್ಡ್ ಪಟ್ಣದ ಸಮೀಪದಲ್ಲಿ (Lea) ಲೀ ಎಂಬ ನದಿಯ ಥಥದಲ್ಲಿರುವ (Rye house) "ರೈ ಮನೆ" ಎಂಬ ಒಂದು ಸಣ್ಣ ಮನೆಯ ಅಂಚಿನಲ್ಲಿ ಬರುವಾಗ ಮೋಸಗಾರರು ಅವನನ್ನು ಕೊಂದು ಹಾಕಬೇಕೆಂಬುವದೇ ಅವರು ಸುತ್ತಿ ಕೊಂಡ ಮೋಸದ ಗುರಿಯಾಗಿತ್ತು. ಆದದರಿಂದ ಆ ಮೋಸಕ್ಕೆ (Rye houseplot) ರೈ ಮನೆ ಮೋಸವೆಂದು ಹೆಸರು. ಅದರಲ್ಲಿ (Earl of Shaftesbury) ಷಾಪ್ಟ್ಸ್‌ಬರಿ ಅರ್ಲ್ ಪ್ರಭುವೂ, (Duke of Monmouth) ಮೊನ್‌ಮೌತ್ ದ್ಯೂಕ್ ಪ್ರಭುವೂ, (William Russell) ಉಲ್ಲಿಯಮ್ ರಸ್ಸೆಲ್ ಎಂಬ ಪ್ರಭುವೂ, (Algernon Sidney) ಆಲ್ಜೆರ್ನೊನ್ ಸಿಡ್ನಿ ಎಂಬವನೂ ಶೇರಿ ಇದ್ದರು. ಅವರು ಅರಸನ ಕ್ರೂರತ್ವಕ್ಕೆ ಶೀಮೆಯನ್ನು ಯಾವ ಉಪಾಯದಿಂದ ತಪ್ಪಿಸ ಬಹುದೆಂದು ಅನೇಕ ಸಾರಿ ಕೂಡಿ ಆಲೋಚನೆ ಮಾಡಿದವರೇ ಹೊರ್ತು ಅರಸನ ಕೊಲೆಗೆ ಒಡಂಬಟ್ಟವರಲ್ಲ. ಮೊದಲನೇ ಇಬ್ಬರು ಶೀಮೆಯನ್ನು ಬಿಟ್ಟು, ಯೂರೋಪ್ ಖಂಡಕ್ಕೆ ಓಡಿ ಹೋದರು. ಮಿಕ್ಕ ಇಬ್ಬರು ಕೊಲ್ಲಲ್ಪಟ್ಟರು. ತನ್ನ ಜೀವಕಾಲದಲ್ಲಿ ನೆಟ್ಟನೆತನವೂ ನೀತಿಯೂ ಉಳ್ಳವನಾಗಿ ನಡೆದು ಕೊಂಡ ಉತ್ತಮನಾದ ಉಲ್ಲಿಯಮ್ ರಸ್ಸೆಲ್ ಎಂಬವ

ನು, ಸಮಸ್ತ ಜನರೂ ಬಹು ದುಃಖ ಪಡಲಾಗಿ, ಬಹು ಧೈರ್ಯದಿಂದ
ಲೂ ಶಾಂತದಿಂದಲೂ ನಿಂತು ತನ್ನ ಅಂತ್ಯವನ್ನು ಹೊಂದಿದನು. ಅವ
ನ ಹೆಂಡತಿಯು ಕಷ್ಟದಲ್ಲಿ ಸಹ ತನ್ನ ಗಂಡನನ್ನು ಬಹು ಪ್ರೀತಿ ಮಾಡಿ
ಅವನಿಗೆ ನಂಬಿಗಸ್ತಳಾಗಿದ್ದು, ಅವನನ್ನು ವಿಚಾರಣೆ ಮಾಡುವ ಮಟ್ಟಿ
ಗೂ ಅವನಿಗೆ ಮಂತ್ರಿಯ ಹಾಗಿದ್ದಳು.

ಧೊರೆತನದ ಕಡೇ ಕಾಲದಲ್ಲಿ ಕೂಡಿ ಬಂದ ಪಾರ್ಲಿಮೆಂತ್ ಸಂಘ
ದಲ್ಲಿ ಆವರೆಗೂ ಇಂಗ್ಲಿಷಿನವರಲ್ಲಿ ವಿಭಾಗವಾಗಿದ್ದ ಎರಡು ಕಕ್ಷಿಗಳೂ
ಪೂರ್ಣ ವಿಕಲ್ಪವಾಗಿ, (Whig) ವಿಗ್ (Tory) ತೋರಿ ಎಂಬ ಹೆಸರು
ಗಳನ್ನು ಹೊಂದಿದರು. ಯಾವಾಗಲೂ ಮಾರ್ಪಡುವಿಕೆಯೂ ತಿದ್ದು
ಪಾಟೂ ಉಂಟಾಗ ಬೇಕೆಂದು ಅಗಾಗ್ಯೆ ಅಪೇಕ್ಷಿಸಿ ಹುಡುಕುವದು ವಿಗ್
ಕಕ್ಷಿಯವರ ಕೆಲಸ. ಉಪಯೋಗವಾದ ಮಾರ್ಪಡುವಿಕೆಗಳು ಬೇಕಾದ
ಸ್ಥಳದಲ್ಲಿಯೂ ಮಾಡಲ್ಪಡುವದು ತಕ್ಕದ್ದೆಂದು ಅನುಸರಿಸಿ, ಅಂಥಾ
ಮಾರ್ಪಡುವಿಕೆಗಳು ಉಂಟಾಗ ಬೇಕೆಂದು ಅಪೇಕ್ಷಿಸಿದ್ದಾಗ್ಯೂ, ದೇಶ
ದಲ್ಲಿ ಪೂರ್ವಸ್ಥಾಪಿತವಾಗಿರುವ ಪದ್ಧತಿಗಳನ್ನೂ ಏರ್ಪಾಟುಗಳನ್ನೂ
ಬಹು ಭಕ್ತಿಯಾಗಿ ಅನುಸರಿಸುವದು ತೋರಿ ಕಕ್ಷಿಯವರ ಕೆಲಸ. 1679ನೇ
ವರುಷದಲ್ಲಿ (Habeas Corpus) ಹೇಬಿಯಸ್ ಕೋರ್ಪಸ್ ಪ್ರಮಾಣ
ವೆಂಬ ಮಹಾ ಮುಖ್ಯವಾದ ಪ್ರಮಾಣ ಉಂಟು ಮಾಡಲ್ಪಟ್ಟಿತು. ಆ
ಪ್ರಮಾಣದಲ್ಲಿ (Magna Charta) "ಮಗ್ನಾಚಾರ್ತಾ" ಎಂಬ ದೊ
ಡ್ಡ ಪತ್ರಿಕೆಯಲ್ಲಿದ್ದ ಪ್ರಜೆಯ ಕ್ಷೇಮಾರ್ಥವಾದ ಏರ್ಪಾಟುಗಳೆಲ್ಲಾ ಅ
ಧಿಕ ಸ್ಪಷ್ಟವಾಗಿ ನೆಲೆಗೊಂಡವು. ಮತ್ತು ವಿಚಾರಣೆ ಇಲ್ಲದೆ ನ್ಯಾಯಾ
ಧಿಪತಿಗಳು ಯಾರನ್ನೂ ಅಪರಾಧಸ್ಥರಾಗಿ ತೀರಿಸುವದಕ್ಕೆ ಹೇತುವೆ ಇ
ಲ್ಲದೆಯೂ, ಇಂಗ್ಲಿಷಿನವರನ್ನು ಸುಮ್ಮನೆ ಶೆರೆಯಲ್ಲಿ ಹಾಕುವದಕ್ಕೆ ಕೂಡ
ದೆಯೂ ಇರುವಂತೆ ಮುಗಿಯಿತು.

ಎರಡನೇ ಚಾರ್ಲ್ಸ್ ಅರಸನು ಹ್ಯಾಗಾದರೂ ನಡೆದು ಕೊಳ್ಳಲಿ
ಎಂದು ಪ್ರಜೆಗಳಿಂದ ನಿಂದಿಸಲ್ಪಟ್ಟನೇ ಹೊರ್ತು ಹೊಗಳಲ್ಪಡದೆಯೂ
ಸ್ನೇಹಿಸಲ್ಪಡದೆಯೂ ಇದ್ದು 1685ನೇ ವರುಷದಲ್ಲಿ ಮರಣ ಹೊಂ
ದಿದನು. ಸಾಯುವ ಸಮಯದಲ್ಲಿ ತಾನು ಅಂಗೀಕರಿಸಿದ್ದ ಮತವಿಷ

ಯವಾದ ತಾತ್ಪರ್ಯಗಳನ್ನು ಆ ವರೆಗೂ ರಹಸ್ಯವಾಗಿ ಬಚ್ಚಿಟ್ಟು ಇದ್ದ ವನು ಆಗಲೇ ಪ್ರಕಟ ಮಾಡಿದನು. ಆದಾಗ್ಯೂ ಅವನ ಜೀವಕಾಲದ ನಡತೆಯನ್ನು ಯೋಚಿಸುವಲ್ಲಿ ಯಾವ ಭಕ್ತಿಯನ್ನು ಕುರಿತೂ ಅವನು ಸ್ವಲ್ಪವಾದರೂ ಚಿಂತಿಸಿದವನಲ್ಲವೆಂಬುವದು ದೃಷ್ಟಾಂತವಾಗಿದೆ. ಅವ ನು ರೋಗದಲ್ಲಿ ಬಿದ್ದ ಅದೇ ದಿವಸದಲ್ಲಿ ಸಹ ಕಾಮಿಗಳ ಸಂಗಡಲೂ, ವೇಶ್ಯರ ಸಂಗಡಲೂ ಬಹು ಅಸಹ್ಯವಾದ ಕೇಳಿಕೆ ಉಲ್ಲಾಸಗಳೊಡನೆ ಇ ದ್ದನು. ಎರಡನೇ ಚಾರ್ಲ್ಸ್ ಅರಸನ ಮರಣದ ಹಾಗೆ ಓದುವವರ ಮನಸ್ಸಿನಲ್ಲಿ ದಿಗುಲನ್ನು ಹುಟ್ಟಿಸುವ ಸಂಗತಿಗಳು ಬೇರೆ ಯಾವ ಚರಿ ತ್ರೆಗಳಲ್ಲಿಯೂ ಇಲ್ಲ.



# CHAPTER XIX.

## THE REVOLUTION COMPLETED.

FROM A. D. 1685 TO A. D. 1702.

## 19 ಸಂಧಿ.

## ಧೊರೆತನದಲ್ಲಿದ್ದ ಭೇದಗಳು ಮುಗಿದದ್ದು.

ಕ್ರಿ. ಶ. 1685 ಮೊದಲು ಕ್ರಿ. ಶ. 1702 ವರೆಗೂ.

ಮುಖ್ಯ ತಾರೀಖುಗಳು: (James II) 2ನೇ ಜೇಮ್ಸ್ ಅರಸು ಸಿಂಹಾಸನಕ್ಕೆ ಬಂದದ್ದು ಕ್ರಿ. ಶ. 1685. ತಳ್ಳಲ್ಪಟ್ಟದ್ದು 1688. (William III) 3ನೇ ಉಲ್ಲಿಯಮ್ ರಾಜ್ಯ ಕಟ್ಟಿ ಕೊಂಡದ್ದು 1688. ತೀರಿ ಹೋದದ್ದು 1702. ಅದೇ ಕಾಲದ ಇಂದ್ಯ ಚರಿತ್ರೆ: (Bahadur Shah) ಬಹಾದುರ್ ಷಾ ಆಳಿದ್ದು. ಶ್ರೇಷ್ಠ ನಾಮಗಳು: (John Bunyan) ಯೋಹಾನ್ ಬುನ್ಯನ್ 1678—1688. (John Loche) ಯೋಹಾನ್ ಲಾಕ್ 1632—1704. (Sir Isaac Newton) ಸರ್ ಈಸಾಕ್ ನ್ಯೂತನ್ 1642—1727.

ತನ್ನ ಸಹೋದರನಾದ ಎರಡನೇ ಚಾರ್ಲ್ಸನು ಮರಣ ಹೊಂದಿದ ತರುವಾಯ (Duke of York) ಯೊರ್ಕ್ ದ್ಯೂಕ್ ಪ್ರಭುವಾದ (James) ಜೇಮ್ಸ್ ಪಟ್ಟಾಭಿಷೇಕ ಹೊಂದಿದನು. ತಾನೇ ರೋಮನ್ ಸಭೆಯವನಾಗಿದ್ದು ತನ್ನ ಪ್ರಜೆಗಳ ಮತಸಂಕಲ್ಪಗಳಲ್ಲಿಯೂ, ದೇಶಪ್ರಮಾಣಗಳಲ್ಲಿಯೂ ಶುದ್ಧವಾಗಿ ಕೈ ಹಾಕುವದೇ ಇಲ್ಲವೆಂದು ದೃಢವಾಗಿ ಮಾತು ಕೊಟ್ಟನು. ಆದಾಗ್ಯೂ ಕಿರೀಟಾಧಿಪತಿಯಾದ ಕೂಡಲೇ ತನ್ನ ಮಾತನ್ನು ಮೀರಿ ಇಂಗ್ಲಾಂಡ್ ಶೀಮೆಯನ್ನು ಇನ್ನೊಂದು ಸಾರಿ ಪಾಪುವಿನ ಅಧಿಕಾರಕ್ಕೆ ಒಳ ಪಡಿಸುವ ಉದ್ದಿಶ್ಯ ಅವನಿಗೆ ನಿರೂಪಗಳನ್ನು ಬರಿಯ ಪ್ರಾರಂಭಿಸಿದನು. ಆದಾಗ್ಯೂ ಆ ಕಾಲದಲ್ಲಿದ್ದ ಪಾಪು ಚುರುಕಾದ ಬುದ್ಧಿಶಾಲಿಯಾದದರಿಂದ ಆ ಅರಸನ ಅಪೇಕ್ಷೆಗೆ

ಸಮ್ಮತಿಸಿ ಯಾವ ಕಾರ್ಯವನ್ನಾದರೂ ಮಾಡುವದಕ್ಕೆ ಅದು ತಕ್ಕ ಸಮಯವಲ್ಲವೆಂದೂ, ಮಾಡಿದ್ದು ವ್ಯರ್ಥವಾಗುವದೆಂದೂ ಕಂಡು, ಆ ಅರಸನನ್ನು ಇನ್ನು ಸ್ವಲ್ಪ ಕಾಲ ತಾಳ ಬೇಕೆಂದು ಹೇಳಿ ಬಿಟ್ಟನು.

ಎರಡನೇ ಚಾರ್ಲ್ಸ್ ಅರಸನ ಹಾಗೆಯೇ ಎರಡನೇ ಜೇಮ್ಸ್ ಅರಸನು ಸಹ ತನ್ನ ಪಾರ್ಲಿಮೆಂಟಿನವರಿಗೆ ಬಾಧ್ಯ ಪಡದೆ ಸ್ವಂತವಾಗಿ ಧೊರೆತನ ಮಾಡ ಬೇಕೆಂದು ಆಶೆಗೊಂಡನು. ಗತಿಸಿದ ಅರಸನು ಕ್ರೂರನೇ. ಆದಾಗ್ಯೂ ಈ ಅರಸನು ಅವನಿಗಿಂತ ಕ್ರೂರನು. ವ್ಯೈಗಳ್ಳತನದಿಂದಲೂ ದೃಢ ಚಿತ್ತವಿಲ್ಲದ್ದರಿಂದಲೂ ಚಾರ್ಲ್ಸ್ ಅರಸನು ಮನಸ್ಸು ಹೋದ ಪ್ರಕಾರ ಒಂಟಿಯಾಗಿ ಧೊರೆತನ ಮಾಡ ಅಪೇಕ್ಷಿಸಿದನು. ಜೇಮ್ಸ್ ಅರಸನಾದರೆ, ಇಂಥಿಂಥವರಿಗೆ ಉಪದ್ರ ಕೊಡ ಬೇಕೆಂದು ಆಗಲೇ ಶೀರ್ಮಾನಿಸಿದ್ದ ಕ್ರೋಧದಿಂದಲೂ, ವೈರದಿಂದಲೂ ಆ ಪ್ರಕಾರ ಧೊರೆತನ ಮಾಡ ಅಪೇಕ್ಷಿಸಿದನು. ಅವನು ತನ್ನ ಪ್ರಜೆಗಳನ್ನು ವಿರೋಧಿಸಿದನು. ಪ್ರಜೆಗಳು ಅವನನ್ನು ವಿರೋಧಿಸಿದರು. ಅವನ ಸಹೋದರನ ಕಾಲದಲ್ಲಿ ಇವನ ಅಭಿಪ್ರಾಯಗಳ ಉದ್ದಿಶ್ಯ ಇವನನ್ನು ಸಿಂಹಾಸನಕ್ಕೆ ತಕ್ಕ ಬಾಧ್ಯತೆಯಿಂದ ತಳ್ಳ ಬೇಕೆಂದು ಪ್ರಜೆಗಳಿಂದ ಪ್ರಯತ್ನ ಮಾಡಲ್ಪಟ್ಟಿತ್ತು. ಈಗ ಅವರು ಅಂಜಿ ಕೊಂಡಿದ್ದ ಪ್ರಕಾರವೇ ಈಡೇರಿದ್ದರಿಂದ ಅವನನ್ನು ಅಧಿಕವಾಗಿ ವಿರೋಧಿಸಿದರು.

ಅರಸನು ಪಟ್ಟ ಹೊಂದಿದ ಕೆಲವು ದಿವಸಗಳಲ್ಲಿಯೇ ಅವನ ಅಧಿಕಾರವನ್ನು ಎದುರಿಸಿ, ಒಂದು ದೊಡ್ಡ ಕಲಾಪನೆ ಸಂಭವಿಸಿತು. ಅದರಲ್ಲಿ ಎರಡನೇ ಚಾರ್ಲ್ಸನ ಇಟ್ಟು ಕೊಂಡವಳ ಮಗನಾದ (Duke of Monmouth) ಮೊನ್‌ಮೌತ್ ಡ್ಯೂಕ್ ಪ್ರಭುವೂ, (Duke of Argyle) ಆರ್ಗೈಲ್ ಡ್ಯೂಕ್ ಪ್ರಭುವೂ ಇವರೇ ತಲೆಯಾಗಿದ್ದವರು. ಇವರು ರೋಮನ್ ಸಭೆಯ ಅನುಸಾರಿಯಾದ ಅರಸನ ಕೆಳಗೆ ಇಂಗ್ಲಾಂದಿನ ಪ್ರಜೆಗಳು ಸಂತೋಷವಾಗಿ ಇರಲಾರರೆಂದು ಎಣಿಸಿ, ತಾವು ನಡಿಸಿದ ಕಾರ್ಯವು ಪ್ರಜೆಗಳ ಸರ್ವ ಸಮ್ಮತಿ ಹೊಂದಿ ತ್ವರೆಯಾಗಿ ಸಿದ್ಧಿಸ ಬಹುದೆಂದು ಎಣಿಸಿದರು. ಅವರಿಬ್ಬರೂ ಹೊಲ್ಲಾಂದಿನಲ್ಲಿದ್ದರು. ಅವರಲ್ಲಿ ಮೊನ್‌ಮೌತ್ ಡ್ಯೂಕ್ ಪ್ರಭುವು (Rye houseplot) ರೈ ಮನೆಯ

ಮೋಸ ಕಂಡು ಕೊಳ್ಳಲ್ಪಟ್ಟ ತರುವಾಯ ಅಲ್ಲಿಗೆ ಓಡಿ ಹೋಗಿ ಹಿಂತಿರುಗಿ ಬಾರದೆ ಇದ್ದನು. ಆ ಇಬ್ಬರೂ ಶೇರಿ ಕೊಂಡು ಒಂದೇ ಸಾರಿ ಸ್ಕೊತ್ಲಾಂದನ್ನೂ ಇಂಗ್ಲಾಂದನ್ನೂ ಮುತ್ತಿಗೆ ಹಾಕುವಂತೆ ಎಣಿಸಿ ಕೊಂಡಿದ್ದರು. ಆರ್ಗೈಲ್ ದ್ಯೂಕ್ ಪ್ರಭುವು ಸ್ಕೊತ್ಲಾಂದಿನ ಪಶ್ಚಿಮ ಥಡದಲ್ಲಿ ಇಳಿದು, ಸುಲಭವಾಗಿ ಸೋತು ಹೋದನು. ಮೊನ್‌ಮೌತ್ ದ್ಯೂಕ್ ಪ್ರಭುವು (Dorsetshire) ದೊರ್ಸೆತ್‌ಷೀರ್ ಥಡದಲ್ಲಿ ಇಳಿಯಲು, ಆ ನಾಡಿನವರೂ (Somersetshire) ಸಮರ್‌ಸೆತ್‌ಷೀರ್ ನಾಡಿನವರೂ ಬಹು ಸಂತೋಷದಿಂದ ಅವನನ್ನು ಅಂಗೀಕರಿಸಿದರು. ಅಲ್ಲಿ ತನ್ನನ್ನೇ ಅರಸನೆಂದು ಹೇಳಿ ಕೊಂಡು, ಉಳುವ ಆಯುಧಗಳನ್ನೇ ಯುದ್ಧಾಯುಧಗಳಾಗಿ ಹಿಡಿದು ಕೊಂಡು ಅವನಿಗೆ ಅನುಸರಣೆಯಾಗಿ ಬಂದ ಅನೇಕ ಒಕ್ಕಲಿಗರ ಸಂಗಡ ಕೂಡಿ ಕೊಂಡು, ಅರಸನ ದಂಡನ್ನು ಎದುರಿಸಿದನು. (Sedgemoor) ಸೆಡ್ಜ್‌ಮೂರ್ ಎಂಬುವ ಸ್ಥಳದಲ್ಲಿ ಯುದ್ಧ ನಡೆಯಿತು. ಅದರಲ್ಲಿ ಮೊನ್‌ಮೌತ್ ದ್ಯೂಕ್ ಪ್ರಭುವು ಹೇಡಿತನವಾಗಿ ತನ್ನ ಸೈನ್ಯವನ್ನು ಬಿಟ್ಟು ಓಡಿ ಹೋದನು. ಯುದ್ಧದ ಕೆಲಸ ತಿಳಿಯದೆ ಇದ್ದಾಗ್ಯೂ ಮಹಾ ಧೈರ್ಯಶಾಲಿಗಳಾಗಿದ್ದ ಅವನ ಸೈನ್ಯದವರು ಪೂರ್ಣವಾಗಿ ಸೋಲಿಸಲ್ಪಟ್ಟರು. ಅವರು ಓಡಲಾಗಿರುವಾಗ ಅರಸನ ರಾಣುವೆಯ ಅಧಿಕಾರಿಗಳು ಅವರಿಗೆ ಸ್ವಲ್ಪವಾದರೂ ಕನಿಕರವಿಲ್ಲದೆ ಕ್ರೂರತ್ವವನ್ನು ತೋರಿಸಿದರು. ಯುದ್ಧದ ಕಾಂಕ್ಷೆ ಆರಿ, ತಣಿದಾಗ ಸಹ ತಮ್ಮ ಕೈಯಲ್ಲಿ ಶಿಕ್ಕಿದ ಶೆರೆಯವರಿಗೆ ದಯ ತೋರಿಸದೆ, ಬಹು ವಿಸ್ತಾರವಾದ ಶೀಮೆಯನ್ನೆಲ್ಲಾ ಹಾಳು ಮಾಡಿದರು. ಆದಾಗ್ಯೂ ಅವರ ಕ್ರೂರವು ಅರಸನನ್ನು ಅನುಸರಿಸದೆ ಇದ್ದ ಪ್ರಜೆಗಳನ್ನು ವಿಚಾರಣೆ ಮಾಡುವ ಉದ್ದಿಶ್ಯ ಅರಸನಿಂದ ನೇಮಿಸಲ್ಪಟ್ಟಿದ್ದ, ಪೂರ್ಣವಾಗಿ ಅಸಂಹಿಸಲ್ಪಡ ತಕ್ಕ ದುರ್ಗುಣವುಳ್ಳ (Jeffreys) ಜೆಪ್ಫರಿಸ್ ಎಂಬ ಒಬ್ಬ ನ್ಯಾಯಾಧಿಪತಿಯು ಮಾಡುತ್ತಾ ಬಂದ ಕ್ರೂರದ ಮುಂದೆ ಬೇರೊಂದು ಇಲ್ಲವೆಂದು ಹೇಳ ಬಹುದು. ಅವನು ಮಹಾ ಕೆಟ್ಟವನು. ಹೆಚ್ಚು ಕಡಿಮೆ ಮುನ್ನೂರು ಶೆರೆಯವರನ್ನು ಕೊಂದನು. ಮರಣಕ್ಕಿಂತ ಕಠಿಣವಾದ ಉಪಾಧಿಗಳನ್ನು ಪಟ್ಟು ಕಷ್ಟ ಪಡುವಂತೆ ಮುಂಚಿನ ಸಂಖ್ಯೆಗಿಂತ ಎರಡ

ಷ್ಟಾದ ಮನುಷ್ಯರನ್ನು (West India Islands) ಪಶ್ಚಿಮ ಇಂದಿಯ ದ್ವೀಪಗಳಿಗೆ ನೀರಿನ ಮೇಲೆ ಕಳುಹಿಸಿದನು. ದೇಶವನ್ನು ಬಿಟ್ಟು ಓಡಿ ಹೋಗ ಅಪೇಕ್ಷಿಸಿದವರ ಬಳಿಯಲ್ಲಿ, ಜೆಪ್ಫರಿಸೂ ರಾಣಿಯೂ ಇನ್ನೂ ಧೊರೆತನದ ಅಧಿಕಾರಿಗಳಾದ ಅನೇಕರೂ ಸಹ ಹಣವನ್ನು ವಸೂಲು ಮಾಡಿ ಕೊಂಡು ಬಿಟ್ಟು ಬಿಟ್ಟರು. ಮೊನ್‌ಮೌತ್ ದ್ಯೂಕ್ ಪ್ರಭುವು ಸಹ ತನ್ನನ್ನು ಅಟ್ಟಿ ಕೊಂಡು ಬಂದವರನ್ನು ಕಂಡು ಓಡಿ ಒಂದು ಕುಣಿ ಯಲ್ಲಿ ಬಚ್ಚಿಟ್ಟು ಕೊಳ್ಳ ಹೋದಾಗ, ಅವರು ಅವನನ್ನು ಕಂಡು ಹಿಡಿದು ಕೊಂಡು, ಕೋಟೆಯ ಮಂಟಪದಲ್ಲಿ ಕಲಹಗಾರನೆಂದು ಕೊಲ್ಲಿಸಿದರು. (Bloody Assizes) "ರಕ್ತವಾದ ಅಪರಾಧವಿಚಾರಣೆ" ಎಂಬ ಸರಿ ಯಾದ ಹೆಸರನ್ನು ಹೊಂದಿದ ಜೆಫ್ಫರಿಸಿನ ಕ್ರೂರವಾದ ನಡತೆಗಳೆಲ್ಲಾ ಅರಸನಿಂದ ಅಂಗೀಕರಿಸಲ್ಪಟ್ಟದ್ದಲ್ಲದೆ, ಆ ದುರ್ಮಾರ್ಗನನ್ನು ಇಂಗ್ಲಾಂ ದಿಗೆ ಶ್ರೇಷ್ಠ ನ್ಯಾಯಾಧಿಪತಿಯಾಗ ಮಾಡಿದನು.

ಇದರ ಮಧ್ಯೆ ಜೇಮ್ಸ್ ಅರಸನು ರೋಮನ್ ಸಭೆಯನ್ನು ಸ್ಥಾ ಪಿಸುವದಕ್ಕೆ ಮುಕ್ಕಾಲುವಾಸಿ ಪ್ರಯತ್ನ ಮಾಡಿದ್ದಾಯಿತೆಂದು ತನ್ನ ಮ ನಸ್ಸಿನಲ್ಲಿ ಎಣಿಸಿ ಕೊಂಡಿದ್ದನು. ಹ್ಯಾಗಂದರೆ ಪಾರ್ಲಿಮೆಂಟ್ ಸಂಘ ವು ಅವನ ಚಿತ್ತದ ಮೇರೆಗೆ ಆಡಲಾಯಿತು. ಲಂದನ್ ಪಟ್ಟಣದ ಬೀದಿ ಗಳಲ್ಲೆಲ್ಲಾ ರೋಮನ್ ಸಭೆಯ ಗುರುಗಳ ಸಂಚಾರವಾಯಿತು. ಪ ರೀಕ್ಷೆಪ್ರಮಾಣಕ್ಕೆ ಪೂರ್ಣ ವ್ಯತಿರಿಕ್ತವಾಗಿ ಹೆಚ್ಚಾದ ಅಂತಸ್ತುಗಳಲ್ಲಿ ಅನೇಕ ರೋಮನ್ ಸಭೆಯವರು ಇರಿಸಲ್ಪಟ್ಟರು. ಅರಸನು ತಾನೇ ರೋಮನ್ ಸಭೆಯ ಆರಾಧನೆಗಳಿಗೆ ರಾಜಅಟ್ಟಹಾಸದೊಡನೆ ಹೋ ದನು. ಇವುಗಳಿಂದ ತನ್ನ ಮನಸ್ಸಿನಲ್ಲಿದ್ದ ತಾತ್ಪರ್ಯವು ಮುಗಿಯುವ ದಕ್ಕೆ ತಡೆ ಏನೂ ಇಲ್ಲವೆಂದು ಎಣಿಸಿ ಕೊಂಡನು. ಆದಾಗ್ಯೂ ಇಂಗ್ಲಿಷಿನ ವರ ಪಕ್ಷವೂ ಮನಸ್ಸೂ ತನ್ನ ಕಡೆಗೆ ಇಲ್ಲದೆ ಇರುವದನ್ನೂ, ಕೆಲವು ಕಾರ್ಯ ಗಳು ತನ್ನ ದೃಷ್ಟಿಗೆ ಅನುಕೂಲವಾಗಿ ಮುಗಿದಾಗ್ಯೂ, ಸಮಸ್ತ ಜನರ ಕೋ ರಿಕೆಗಳನ್ನು ಅಡ್ಡಿ ಮಾಡಿ ಎದುರಿಸುವದು ಕಷ್ಟವೆಂಬುವದನ್ನೂ ಮರೆತು ಹೋದನು. ಹೀಗೆ ನಡೆದದರಿಂದ ಜನರೆಲ್ಲರೂ ಮುಂಚಿಗಿಂತ ಎಂಟು ಪಾಲಧಿಕವಾಗಿ ರೋಮನ್ ಮಾರ್ಗವನ್ನು ವಿಷದಂತೆ ಹಗೆ ಮಾಡಿದರು.

ಆದಾಗ್ಯೂ ಜನರ ಅಪೇಕ್ಷೆಗಳನ್ನೂ ತಾತ್ಪರ್ಯಗಳನ್ನೂ ಎಣಿಸದೆ, ಅರಸನು ತನ್ನ ಕ್ರೂರ ಕೃತ್ಯಗಳನ್ನು ಇನ್ನೂ ಹೆಚ್ಚಿಸುವದಕ್ಕೆ ಉದ್ಯುಕ್ತನಾದನು. ತನ್ನ ತಂದೆಯ ಧೊರೆತನದ ಕಾಲದಲ್ಲಿ ಪ್ರಜೆಗಳಿಗೆ ಅಭ್ಯಂತರವಾಗಿ ಹುಟ್ಟಿಸಲ್ಪಟ್ಟಿದ್ದ (Test Act) ತನ್ನಿಷ್ಟ ಪ್ರಮಾಣಕ್ಕೆ ಸಮಾನವಾದ ಒಂದನ್ನು ತಾನೂ ಮಾಡಿ, ಸಕಲ ಆಲಯಗಳಲ್ಲಿಯೂ ಗೊತ್ತಾದ ಎರಡು ದಿನಗಳಲ್ಲಿ ಅದು ಓದಲ್ಪಡ ಬೇಕೆಂದು ಆಗ್ನಾಪಿಸಿದನು. ಆ ಪ್ರಮಾಣಕ್ಕೆ ಒಪ್ಪುವದಿಲ್ಲವೆಂದು ಅನೇಕ ಗುರುಗಳು ಅಡ್ಡಿ ಹೇಳಿದರು. ಕಾನ್‌ತರ್‌ಬರೀ ಶ್ರೇಷ್ಠ ಅಧ್ಯಕ್ಷನೂ ಇನ್ನು ಆರು ಮಂದಿ ಅಧ್ಯಕ್ಷರೂ ಕೂಡಿ ಒಂದು ಬಿನ್ನಹವನ್ನು ಬರೆದು, ಪಾರ್ಲಿಮೆಂಟಿನವರ ಸಮ್ಮತಿ ಇಲ್ಲದೆ, ಅರಸನು ಮತ ಆರಾಧನೆಗಳ ವಿಷಯದಲ್ಲಿ ಏನೂ ಮಾರ್ಪಡುವಿಕೆ ಮಾಡದೆ ಇರ ಬೇಕೆಂದು ಬೇಡಿ ಕೊಂಡರು. ಸಂಗಡಲೇ ಅವರು ಲಂಡನ್ ಪಟ್ಣದ ಕೋಟೆಯಲ್ಲಿ ಬಂಧಿಸಲ್ಪಟ್ಟರು. ಆದಾಗ್ಯೂ ಅನೇಕ ತಾಸುಗಳ ಹೊತ್ತು ಅಪರಾಧವಿಚಾರಣೆಯಾದ ತರುವಾಯ ಆ ಕಾಲದ ನ್ಯಾಯಾಧಿಪತಿಗಳು ಅನೇಕರು ಅರಸನಿಗೆ ಬಹುಶಾ ವಿಧೇಯವಾದ ಮನಸುಳ್ಳವರಾಗಿದ್ದರೂ, ಅವರು ಆ ಅಧ್ಯಕ್ಷರನ್ನು ಕಲಹಗಾರರಲ್ಲವೆಂಬದಾಗಿಯೇ ತೀರ್ಪು ಮಾಡಿದರು. ಅಧ್ಯಕ್ಷರು ಹೀಗೆ ಬಿಡುಗಡೆ ಹೊಂದಿದಾಗ ಲಂಡನ್ ಪಟ್ಣದಲ್ಲೆಲ್ಲಿಯೂ ಬಹು ಸಂತೋಷವಾದ ಆರ್ಭಟಕ್ಕೆ ಹೇತುವೆಯಾಯಿತು. ಜೇಮ್ಸ್ ಅರಸನು ಲಂಡನ್ ಪಟ್ಣಕ್ಕೆ ಕೆಲವು ಮೈಲುಗಳ ದೂರದಲ್ಲಿರುವ (Hounslow) ಹೌನ್‌ಸ್ಲೋ ಎಂಬ ಸ್ಥಳದಲ್ಲಿ ತನ್ನ ದಂಡುಗಳು ಕವಾತು ಮಾಡುವದನ್ನು ನೋಡಿ ಕೊಂಡಿರುವಾಗ ಮೇಲೆ ಹೇಳಿದ ಶುಭವಾರ್ತೆಯು ಆ ದಂಡಿನವರ ಕಿವಿಗಳಲ್ಲಿ ಬೀಳಲಾಗಿ, ಅವರು ಅಪರಿಮಿತ ಸಂತೋಷದಿಂದ ಆರ್ಭಟಿಸುವಾಗ, ಅರಸನು ಭಯ ಪಟ್ಟು, ಆಶ್ಚರ್ಯದಿಂದ ದಳಕರ್ತನಾಗಿದ್ದ (Feversham) ಫೇವರ್ಷಮ್ ಎಂಬ ಪ್ರಭುವನ್ನು ನೋಡಿ, ಈ ಆರ್ಭಟವೇನೆಂದು ಕೇಳಿದನು. ಅದಕ್ಕವನು—ಅರಸನೇ, ಏನೂ ಇಲ್ಲ, ಅಧ್ಯಕ್ಷರು ಬಿಡುಗಡೆ ಹೊಂದಿದರಂತೆ ಅಂದನು. ಅರಸನು ಅದಕ್ಕೆ ಅದು ಏನೂ ಇಲ್ಲವೆಂದು ನೀನು ಹೇಳ ಬರುತ್ತೀಯಾ? ಆದರೆ ಇರಲಿ. ಅವರಿಗೆ ಕಷ್ಟವಾಗಿ ಮುಗಿಯುವದಲ್ಲವೇ ಎಂದು ಹೇಳಿದನು.

ಸಂಧಿ 19. ಓರಾಂಜ್ ಪ್ರಭುವಾದ ಉಲ್ಲಿಯಮನಿಗೆ ನಿರೂಪ ಕಳುಹಿಸಿದ್ದು.

ಹೀಗೆ ಜನರು ಅರಸನ ನಡತೆಗಳ ವಿಷಯ ಮನೋರಮ್ಯವಿಲ್ಲದೆ ವ್ಯಸನ ಪಟ್ಟು ಕೊಂಡಿರುವ ಕಾಲದಲ್ಲಿ, ಜನರ ಕ್ಷೇಮಾರ್ಥವಾದ ಯತ್ನಗಳನ್ನು ಕುರಿತು ಅನೇಕ ಮಾತುಬರಿಯುಳ್ಳ ಧೊರೆಮಕ್ಕಳು ಕೂಡಿ ಕಲೆತು ಮಾತಾಡಿದರು. ಅರಸನು ರೋಮನ್ ಸಭೆಯ ಅನುಸಾರವಾಗಿ ತನ್ನಿಷ್ಟವಾಗಿ ಆಳುವದಕ್ಕೆ ಶೀರ್ಮಾನಿಸಿದನು. ಪ್ರಜೆಗಳು ಸಹ ಆ ಎರಡು ವಿಷಯಗಳಲ್ಲಿಯೂ ಅರಸನನ್ನು ಎದುರಿಸುವದಕ್ಕೆ ಶೀರ್ಮಾನಿಸಿದರು. ಆದದರಿಂದ ಜನರೊಳಗೆ ಸಮಾಧಾನ ಉಂಟಾಗುವ ಉದ್ದಿಶ್ಯ ಸಂಗಡಲೇ ಯಾವದಾದರೂ ಒಂದು ಯತ್ನವನ್ನು ಅವಶ್ಯ ಮಾಡ ಬೇಕಾಗಿತ್ತು. ಹೀಗಿರುವಲ್ಲಿ ಜೇಮ್ಸ್ ಅರಸನಿಗೆ ಒಬ್ಬ ಮಗನು ಹುಟ್ಟಿದನು. ಆದಾಗ್ಯೂ ಪ್ರಜೆಗಳನ್ನು ವಿಮಾರಿಸಿ, ಇನ್ನು ಮುದ್ರೆಯ ಕೋಲನ್ನು ರೋಮನ್ ಸಭೆಯ ಅನುಸಾರವಾದ ಕುಟುಂಬದಲ್ಲಿ ಇರಿಸುವದಕ್ಕೆ ಇದು ಅರಸನು ಮಾಡಿದ ತಂತ್ರವೇ ಹೊರ್ತು ಮಗನು ಹುಟ್ಟಲಿಲ್ಲವೆಂದು ಹೇಳಿಕೊಂಡರು. ಇದರಿಂದ (Prince of Orange) ಓರಾಂಜ್ ಪ್ರಭುವೂ, ಹೊಲ್ಲಾಂದ್ ಪ್ರಜಾಧಿಪತ್ಯದಲ್ಲಿ ಶ್ರೇಷ್ಠನೂ, ಅರಸನ ಶ್ರೇಷ್ಠಪುತ್ರಿಯಾದ ಮೇರಿ ಎಂಬವಳನ್ನು ಮದುವೆ ಮಾಡಿ ಕೊಂಡಿದ್ದವನೂ ಆದ ಉಲ್ಲಿಯಮ್ ಎಂಬವನಿಗೆ ಜನರು ಪತ್ರಿಕೆಯನ್ನು ಬರೆದು, ಶೀಮೆಯಲ್ಲಿ ತಮಗೆ ಸಂಭವಿಸಲಿಕ್ಕಿರುವ ಮೋಸಗಳನ್ನು ನಿವರ್ತಿ ಮಾಡಿ ಸಮಾಧಾನ ಉಂಟು ಮಾಡ ಬರುವಂತೆ ಕೇಳಿ ಕೊಂಡರು.

ಉಲ್ಲಿಯಮ್ ಸಹ ಅದಕ್ಕೆ ಸಮ್ಮತಿಸಿ ಬಂದು, ಹೊಲ್ಲಾಂದಿನವರೂ ಇಂಗ್ಲಿಷ್ ಜನರ ಪದಾತಿಗಳೂ ಕೂಡಿದ ಒಂದು ಸೈನ್ಯದೊಡನೆ 1688ನೇ ವರುಷ ನವಂಬರು ತಿಂಗಳು 5ನೇ ತಾರೀಖಿನಲ್ಲಿ (Torbay) ತೊರ್ಬೇಯಲ್ಲಿ ಧಡವಿಳಿದನು. ಪಶ್ಚಿಮ ನಾಡುಗಳ ಶೀಮೆಯವರು ಕೆಲವು ತಿಂಗಳಿಗೆ ಮುಂಚೆ ತಾವು ಹೊಂದಿದ್ದ ಅಪಜಯವನ್ನೂ ಅನುಭವಿಸಿದ್ದ ಕ್ರೂರವಾದ ಉಪದ್ರಗಳನ್ನೂ ಮರೆಯದೆ ನೆನಸಿ ಕೊಂಡು, ತಿರಿಗಿ ಕೇಡು ಬರುವದು ಎಂದು ಅಂಜಿ ಉಲ್ಲಿಯಮನನ್ನು ಸಂತೋಷವಾಗಿ ಅಂಗೀಕರಿಸಲಿಲ್ಲ. ಆದಾಗ್ಯೂ ಅವನು ತಲೆಯಾದ ಪಟ್ಣಕ್ಕೆ ಸಮೀಪವಾಗಿ ಬರುತ್ತಾ ಬರುತ್ತಾ ಪ್ರತಿದಿನವು ಅವನ ರಾಣುವೆಯು ಹೆಚ್ಚುತ್ತಾ ಬಂತು.

## ಸಂಧಿ 19. ಉಲ್ಲಿಯಮನಿಗೆ ಧೊರೆತನ ಕೊಟ್ಟದ್ದು.

ಅರಸನಿಗೆ ಅತಿ ಪ್ರಿಯನಾಗಿದ್ದ ದಳಕರ್ತನೂ, ಅಧಿಕ ಪಕ್ಷವಾಗಿದ್ದ ಸೇವಕರೂ, ಅವನ ಮಕ್ಕಳೂ ಸಹಿತವಾಗಿ ಅವನಿಗೆ ಎದುರಿಗಳಾದರು. ಇಂಥಾ ಆಪತ್ತಿನಲ್ಲಿ ಜೇಮ್ಸ್ ಅರಸನಿಗೋಸ್ಕರ ಪರಿತಪಿಸುವವರಿಲ್ಲದೆ, ಮನಸ್ಸು ಕರಗಿ ಸಹಾಯ ಮಾಡುವವರಿಲ್ಲದೆ ಒಂಟಿಯಾಗಿ ನಿಂತನು. ಆದಾಗ್ಯೂ ಇಂಥಾ ಕಾಲದಲ್ಲಿ ಧೃಢವೂ ವಿವೇಕವೂ ಅವನಿಗೆ ಇರಲಿಲ್ಲ. ಸೌಖ್ಯಕಾಲದಲ್ಲಿ ಎಷ್ಟು ಕ್ರೋಧ ಸಾಧಿಸಿದನೋ ಅಷ್ಟಾಗಿ ಕಷ್ಟ ಕಾಲದಲ್ಲಿ ಅಧೈರ್ಯನಾದನು. ಉಲ್ಲಿಯಮನು ರಾಜಧಾನಿಯನ್ನು ಶೇರಲಾಗಿ, ಜೇಮ್ಸ್ ಅರಸನು ರೋಮನ್ ಸಭೆಯ ಗುರುವಿನ ವೇಷವನ್ನು ಹಾಕಿ ಕೊಂಡು ಓಡಿ ಹೋದನು. ಆದಾಗ್ಯೂ, ಅವನು ಕಂಡು ಹಿಡಿಯಲ್ಪಟ್ಟು, ಲಂಡನ್ ಪಟ್ಣಕ್ಕೆ ತಿರಿಗಿ ತೆಗದು ಕೊಂಡು ಬರಲ್ಪಟ್ಟನು. ಅದು ಅರಸನು ತನ್ನ ರಾಜ್ಯವನ್ನು ಬಿಟ್ಟು ಓಡಿ ಹೋಗುವದು ನಮಗೆ ಒಳ್ಳೇದೆಂದು ಎಣಿಸಿದ್ದ ಉಲ್ಲಿಯಮನಿಗೂ ಅವನ ಪಕ್ಷದವರಿಗೂ ಮನಸ್ಸಿಗೆ ನೋವಾಗಿತ್ತು. ಆದಾಗ್ಯೂ ಎದುರಿಗಳ ಸಹಾಯದಿಂದ ಅರಸನು ತಿರಿಗಿ ಓಡಿ ಹೋಗಿ ಫ್ರಾನ್ಸ್ ಶೀಮೆಯಲ್ಲಿ ಆಶ್ರಯ ಹೊಂದಿದನು. ಅಲ್ಲಿ ಇದ್ದು ಕೊಂಡು ಐರ್ಲಾಂದಿನಲ್ಲಿ ರಾಣುವೆಯನ್ನು ಶೇರಿಸಿ ಕೊಂಡು ತನ್ನ ಧೊರೆತನವನ್ನು ತಿರಿಗಿ ಹೊಂದುವದಕ್ಕೆ ಬೇಕಾದ ಯತ್ನಗಳನ್ನೆಲ್ಲಾ ಮಾಡಿದಾಗ್ಯೂ ಜಯ ಹೊಂದದೆ ಫ್ರಾನ್ಸ್ ಶೀಮೆಯಲ್ಲಿಯೇ ಇದ್ದು ಕಾಲಗತಿಯಾದನು.

ಹೀಗೆ ಜೇಮ್ಸ್ ಅರಸನು ಸಿಂಹಾಸನವನ್ನು ಬಿಟ್ಟಾಗ, ಇನ್ನು ಮೇಲೆ ಧೊರೆತನ ಹ್ಯಾಗೆ ನಡಿಯ ಬೇಕೆಂದು ಕೂಡಿ ಯೋಚನೆ ಮಾಡುವ ಉದ್ದಿಶ್ಯ ಅನೇಕ ಪುರುಷರು ಬಂದು ಒಂದು ವಿಧವಾದ ಪಾರ್ಲಿಮೆಂತನ್ನು ಕೂಡಿಸಿದರು. ಸ್ವಲ್ಪ ಹೊತ್ತು ಆಲೋಚನೆಯಾದ ತರುವಾಯ ಇಂಗ್ಲಾಂದ್ ಶೀಮೆಯು ಪ್ರೊತೆಸ್ತಾಂತ್ ಸಭೆಯನುಸಾರವಾಗಿರುವಾಗ ರೋಮನ್ ಸಭೆಯ ಅರಸನು ಇದ್ದು ಆಳುವದು ತಕ್ಕದ್ದಲ್ಲವೆಂದೂ, ದೇಶಪ್ರಮಾಣಗಳನ್ನು ಮೀರಿದ್ದರಿಂದ ಜೇಮ್ಸ್ ಅರಸನಿಗೆ ಇನ್ನು ರಾಜತ್ವದ ಸ್ವತಂತ್ರವಿಲ್ಲವೆಂದೂ, ಉಲ್ಲಿಯಮನೂ ಅವನ ಹೆಂಡತಿಯಾದ ಮೇರಿಯೂ ಶೀಮೆಯನ್ನಾಳುವ ಮುದ್ರೆಕೋಲನ್ನು ಅಂಗೀಕರಿಸ ಬೇಕೆಂದೂ

ಶೀರ್ಮಾನಿಸಿದರು. (Bill of Rights) "ಸ್ವತಂತ್ರಪ್ರಕಟಣೆ" ಎಂಬ ಹೆಸರನ್ನು ಹೊಂದಿದ ಕೆಲವು ನಿಬಂಧನೆಗಳಿಗೆ ಹೊಸ ಅರಸನೂ ರಾಣಿಯೂ ಪಟ್ಟಾಭಿಷೇಕ ಹೊಂದುವದಕ್ಕಿಂತ ಮುಂಚೆಯೇ ಒಡಂಬಟ್ಟು ಹಾಗೆ ಒಪ್ಪಿತ ಹಾಕಿದರು. ಆ ಪ್ರಕಟಣೆಯು ಕೆಲವು ತಿಂಗಳ ತರುವಾಯ "ಸ್ವತಂತ್ರನಿಬಂಧನೆ" ಎಂಬ ಪ್ರಮಾಣದಿಂದ ದೃಢವಾಗಿ ದೇಶಪ್ರಮಾಣವಲ್ಲಿ ಶೇರಲಾಯಿತು. ಈ ನಿಬಂಧನೆಗಳಿಂದ ಪ್ರಜೆಗಳ ಮತವೂ ಸ್ವಾಧೀನವೂ ನೆಲೆ ಹೊಂದುವ ಹಾಗೆಯೂ, ಮುಂಚಿನ ಅರಸರ ಕಾಲದಲ್ಲಿ ಸಂಭವಿಸಿದ ಆಪತ್ತುಗಳೂ ಕ್ರೂರಗಳೂ ಇನ್ನು ಮೇಲೆ ಪ್ರಜೆಗಳಿಗೆ ಸಂಭವಿಸದೆ ಇರುವ ಹಾಗೆಯೂ ಆಯಿತು. ಮೊದಲನೇ ಚಾರ್ಲ್ಸ್ ಅರಸನ ಕಾಲದಲ್ಲಿ ಉಂಟಾದ ಧೊರೆತನದ ವ್ಯತ್ಯಾಸಗಳು ಯಾವ ಕಾರಣದಿಂದ ಆರಂಭಿಸಿದವೋ ಅವು ಈ ಕಾಲದಲ್ಲಿ ಈಡೇರಲಾದವು. ಇನ್ನು ಮೇಲೆ ಪ್ರಜೆಗಳಲ್ಲಿ ಎಂಥಾ ಬಡವನಾದರೂ ಸರಿ, ಅವನನ್ನು ಸಹ ಅರಸನು ಕ್ರೂರವಾಗಿ ನಡಿಸುವದಕ್ಕೆ ಸ್ಥಳವಿಲ್ಲ. ಪಾರ್ಲಿಮೆಂಟಿನವರ ಅಧಿಕಾರವು ಧೊರೆತನಕ್ಕೆ ಅವಶ್ಯಕವಾದ ಅಂಗವಾಯಿತು. ಅರಸನ ಅಧಿಕಾರವು ಸಹ ಇಷ್ಟೆಂದು ಮದಿಸಲ್ಪಟ್ಟು ಬಲ ಪಟ್ಟಿತು.

ಹೊಸ ಅರಸನಾದ ಉಲ್ಲಿಯಮನೇ ಆ ಕಾಲದ ಮನುಷ್ಯರಲ್ಲಿ ದೊಡ್ಡವನು. ನೋಟಕ್ಕೆ ಅವನು ಮನುಷ್ಯರಲ್ಲಿ ಪ್ರಿಯವಿಲ್ಲದವನೂ ಯಾರ ಬಳಿಯಲ್ಲಿಯೂ ಮಾತಿನ ಧಾರಾಳವಿಲ್ಲದವನೂ ಮೂರ್ಖಗುಣವುಳ್ಳವನೂ ಆಗಿದ್ದಾಗ್ಯೂ, ಅಂತರ್ಯದಲ್ಲಿ ಭುಜಬಲಪರಾಕ್ರಮಶಾಲಿಯೂ, ಮಿಕ್ಕಾದವರು ಮೇಲ್ಗೊಳ್ಳಲಾರದ ಬುದ್ಧಿಸೂಕ್ಷ್ಮವೂ, ಅಪಾಯಗಳನ್ನೆಲ್ಲಾ ಮೇಲ್ಗೊಳ್ಳುವ ವೀರ್ಯವೂ ಉಳ್ಳವನಾಗಿದ್ದನು. ಅಡಕವೂ ಎಚ್ಚರಿಕೆಯೂ ಉಳ್ಳ ಅವನು ಅಪಜಯ ಹೊಂದುವ ಕಾಲದಲ್ಲಿ ಅದನ್ನು ತನಗೆ ಜಯವಾಗಿ ಉಪಯೋಗ ಪಡುವಂತೆ ಮಾಡಿ ಕೊಳ್ಳಲೂ, ಯುದ್ಧದಲ್ಲಿ ಉಂಟಾಗುವ ಅಪಜಯಗಳಿಂದ ತನಗುಂಟಾದ ನಷ್ಟಕ್ಕಿಂತ ಎದುರಿಗಳಿಗೆ ಎಂಟು ಪಾಲಧಿಕವಾದ ನಷ್ಟವನ್ನು ಹ್ಯಾಗಾದರೂ ಬೆಳಿಸುವಂಥಾ ಸಾಮರ್ಥ್ಯವೂ ಉಳ್ಳವನಾಗಿದ್ದನು. ಅಂಥವನು ಸಹ ಇಂಗ್ಲಾಂಡ್ ದೇಶಕ್ಕೆ ಅರಸನಾಗಿದ್ದು ರಾಜ್ಯ ಪರಿಪಾಲನೆ ಮಾಡು

ವದು ಬಹು ಕಠಿಣವಾದ ಕಾರ್ಯವೇ. ಹ್ಯಾಗಂದರೆ, ಅವನು ಆ ಶೀ ಮೆಯವರ ಶ್ಲಾಘ್ಯಗಳನ್ನೂ ಪ್ರಮಾಣಗಳನ್ನೂ ನೆಲೆಗೊಳಿಸಿದ್ದರಿಂದ ಪ್ರ ಜೆಗಳೆಲ್ಲರೂ ಅವನನ್ನು ಸ್ತುತಿಸುವ ಹಾಗಿದ್ದರೂ, ಅವನ ಗುಣಾಗುಣ ಗಳು ಜನರಿಗೆ ಹೊಂದಿಕೆ ಇಲ್ಲದೆ, ಅವನ ಬಳಿಕೆ ಎಲ್ಲಾ ರಮ್ಯವಾಗಿರ ದೆ ಇದ್ದದರಿಂದ ಪ್ರಜೆಗಳು ಒಂದು ಕಾಲಕ್ಕೂ ಅವನನ್ನು ಸ್ನೇಹಿಸಲಿಲ್ಲ. ಅವನ ತಾಯಿ ಒಬ್ಬ ಇಂಗ್ಲಿಷ್ ಅರಸನ ಮಗಳಾದದರಿಂದ ಅವನನ್ನು ಇಂಗ್ಲಿಷಿನವನೆಂದು ಹೇಳಿದಾಗ್ಯೂ, ಅವನ ನಡತೆಯನ್ನು ನೋಡುವಾಗ ಪೂರ್ಣ ಹೊಲ್ಲಾಂದನಾಗಿಯೇ ಇದ್ದನು. ಅವನು ಹೊಲ್ಲಾಂದನ ಹಾಗೆ ಮಾತಾಡುವನು. ಅವನ ಸುತ್ತಲೂ ಇದ್ದ ಸಂಪ್ರತಿಗಳೂ ಪ್ರ ಧಾನಿಗಳೂ ಹೊಲ್ಲಾಂದಿನವರು. ಅವನ ಕ್ರಿಯೆಗಳಲ್ಲಿ, ಯೋಚನೆಗ ಳಲ್ಲಿ, ನಡತೆಗಳಲ್ಲಿ, ಉಡುಚಾವನೆಗಳಲ್ಲಿ ಪೂರ್ಣವಾಗಿ ಹೊಲ್ಲಾಂ ದನಾಗಿಯೇ ಇದ್ದನು. ಇದಲ್ಲದೆ ಇಂಗ್ಲಾಂದಿನಲ್ಲಿ ಆ ಕಾಲದಲ್ಲಿ ಅನೇಕ ಕಕ್ಷಿಗಳು ಇದ್ದದರಿಂದ ಎಲ್ಲರಿಗೂ ನೀತಿಯಾಗಿಯೂ ವಿಧಾನವಾಗಿಯೂ ಸಮ ತೂಕವಾಗಿ ಎತ್ತುವ ತ್ರಾಸುದಂಡಿಯ ಹಾಗೆ ಇರ ಬೇಕಾದ ಮ ಹಾ ಎಚ್ಚರಿಕೆಯೂ ಅವನಿಗೆ ಇರ ಬೇಕಾದ ಅವಶ್ಯವಾಯಿತು. ಆದಾ ಗ್ಯೂ, ತನಗೆ ಪ್ರಾಪ್ತಿಸಿದ ತೊಂದರೆಯಾದ ಉದ್ಯೋಗವನ್ನು ವಿವೇಕದಿಂ ದಲೂ ಬುದ್ಧಿಸೂಕ್ಷ್ಮತದಿಂದಲೂ ಈಡೇರಿಸಿದನು. ಅವನಿಗೆ ಇದ್ದ ನಾನಾ ಬಗೆಯಾಧ ಅಭ್ಯಂತರಗಳನ್ನು ನಿವರ್ತಿ ಮಾಡಿ ಎಲ್ಲರೂ ಹೊಗಳ ತಕ್ಕ ಧೊರೆತನ ಮಾಡಿದನು. ತನ್ನ ಸ್ಥಿತಿಯನ್ನು ಚನ್ನಾಗಿ ಗ್ರಹಿಸಿ ಕೊಂಡು, ಲೌಕಿಕ ವಿಷಯಗಳಲ್ಲಿಯೂ ವೈಧಿಕ ವಿಷಯಗಳಲ್ಲಿಯೂ ಎರಿಲ್ಲಗೂ ಇರ ತಕ್ಕ ಸ್ವಾಧೀನಗಳನ್ನೂ ಶ್ಲಾಘ್ಯಗಳನ್ನೂ ಪ್ರಜೆಗಳಿಗಿಂತ ಅಧಿಕವಾಗಿ ವುದಿಸಿದನು. ಇದರಲ್ಲಿಯೂ ಯೂರೋಪಿನಲ್ಲಿದ್ದ ಪ್ರೊತೆಸ್ತಾಂತು ಮ ತಸ್ಥರಿಗೆ ತಲೆಯಾಗಿದ್ದವನಾಗಿಯೂ, ಫ್ರಾನ್ಸಿನವರ ಅತ್ಯಾಶೆಯನ್ನು ದಣಿಯದೆ ನಿಂತು ಎದುರಿಸಿದವನಾಗಿಯೂ ಬಹಳ ಕೀರ್ತಿ ಹೊಂದಿದ ನು. ಚಿಕ್ಕ ವಯಸ್ಸಿನಲ್ಲಿರುವಾಗಲೇ ಫ್ರಾನ್ಸ್ ಅರಸನನ್ನು ಬಹು ಪಿ ಡುವಾದದಿಂದಲೂ ದೃಢದಿಂದಲೂ ನಿಂತು ಎದುರಿಸುವ ಹಾಗೆ ಹೊ ಲ್ಲಾಂದಿನವರನ್ನು ಪ್ರೇರೇಪಿಸಿ ಇದ್ದನು. ಸಾಯುವ ಮಟ್ಟಿಗೂ (Louis)

ಲೂವಿಸನನ್ನು ಜನ್ಮಹಗೆಯಾಗಿ ನಿಂತು ಎದುರಿಸಿದನು. ಪ್ರತಾಪಶಾಲಿಯಾದ ಆ ಎದುರಿಯ ಕೈಯಿಂದ ಉಲ್ಲಿಯಮ್ ಅರಸನು ತನ್ನ ಕೈಯಿಂದಲೂ ಬುದ್ಧಿಯಿಂದಲೂ ಯೂರೋಪನ್ನೆಲ್ಲಾ ರಕ್ಷಿಸಿದನು.

ಇಂಥಾ ಮೂರನೇ ಉಲ್ಲಿಯಮನೂ ಮೇರಿಯೂ, ಏನೂ ಕಲಹವೂ ಕೊಲೆಯೂ ಇಲ್ಲದೆ ಕಿರೀಟಾಧಿಪತಿಗಳಾದರು. ಆ ತರುವಾಯ ಮೋಸವಾದ ಕಲಾಪನೆಗಳು ಐರ್ಲಾಂಡಿನಲ್ಲಿ ಉಂಟಾದಾಗ್ಯೂ, ಇಂಗ್ಲಾಂಡ್ ಶೀಮೆಯಲ್ಲಿ ಬೆಳೆದ ಸಕಲ ದ್ರೋಹಗಳೂ ಮೋಸಗಳೂ ಆಗಾಗ್ಯೆ ಕಂಡು ಹಿಡಿಯಲ್ಪಟ್ಟದರಿಂದ ಧೊರೆತನದಲ್ಲಿ ಬಂದ ಮಹಾ ಚೇದವು ಸಮಾಧಾನವಾಗಿ ಮುಗಿಯಿತು. ಆ ಕಾಲದಲ್ಲಿ *ಯಾಕೋಬಿಯರು ಎಂಬ ಒಂದು ಕಕ್ಷಿಗಾರರು ಉಂಟಾದರು. ಸಬೆಯಲ್ಲಿಯೂ, ಧೊರೆತನದಲ್ಲಿಯೂ, ಇರುವ ಸಕಲ ಅಂತಸ್ತಿನವರೂ ಹೊಸ ಅರಸನಿಗೆ ವಿಧೇಯರಾಗಿ ನಡಿಯುವೆವೆಂದು ಪ್ರಮಾಣ ಮಾಡ ಬೇಕಾದ ಅವಶ್ಯ ಉಂಟಪ್ಪೇ. ಅನೇಕರು ಒಬ್ಬ ಅರಸನನ್ನು ನಿವರ್ತಿ ಮಾಡಿ ಬಿಡುವದಕ್ಕೆ ಈ ಲೋಕದ ಯಾವ ಅಧಿಕಾರದಿಂದಲೂ ಆಗ ತಕ್ಕದಲ್ಲವೆಂದೂ, ಜೇಮ್ಸ್ ಅರಸನು ದುರ್ಮಾರ್ಗವಾಗಿ ಧೊರೆತನ ಮಾಡಿದಾಗ್ಯೂ ಅವನೇ ಸರಿಯಾದ ಅರಸನೆಂದೂ, ಅದರಿಂದ ಉಲ್ಲಿಯಮನು ಕಿರೀಟಕಳ್ಳನೆಂದೂ, ಯಥಾರ್ಥವಾಗಿ ನಂಬಿದ್ದರಿಂದ ಮನಸ್ಸಾಕ್ಷಿಯಿಂದ ಅಂಥಾ ಪ್ರಮಾಣಕ್ಕೆ ಸಮ್ಮತಿಸಲಾರೆವು ಅಂದರು. ಆ ಕಕ್ಷಿಯಲ್ಲಿ ಅನೇಕ ಒಳ್ಳೇ ಮನುಷ್ಯರು ಸಹ ಇದ್ದರು. ಅವರು, ಒಬ್ಬ ಅರಸನ ಅಕ್ರಮಕ್ಕಾಗಿ ಗದರಿಸಲೂ, ಮತ್ತೊಬ್ಬ ಅರಸನ ಕ್ರೂರವನ್ನು ಎದುರಿಸಿ ನಿಲ್ಲಲೂ, ಧೈರ್ಯವುಳ್ಳವನಾಗಿದ್ದು, ಕಿರೀಟವನ್ನು ಕಳಕೊಂಡ ಅರಸನನ್ನೇ ಹೊಂದಿ ಕೊಂಡಿದ್ದ ಒಳ್ಳೆಯವನಾದ (Ken) ಕೆನ್ ಎಂಬುವ ಅಧ್ಯಕ್ಷನ ಹಾಗೆ ಯಥಾರ್ಥವಂತರಾಗಿದ್ದರು. ಆದಾಗ್ಯೂ ಸಾಧಾರಣವಾಗಿ ಹೇಳ ಬೇಕಾದರೆ, ಇಂಗ್ಲಿಷಿನವರಾದ ಯಾಕೋಬಿಯರು ಒಳ್ಳೇ ನಡತೆಯುಳ್ಳಾದರೂ, ಯುದ್ಧಸಾಮರ್ಥ್ಯದಲ್ಲಾದರೂ, ಬಲದಲ್ಲಾದರೂ, ಕೀರ್ತಿ ಹೊಂದಿದವರಲ್ಲ.

* ಜೇಮ್ಸ್ ಅಂದರೆ ಲಾತಿನ್ ಭಾಷೆಯಲ್ಲಿ ಯಾಕೋಬನು. ಆದ್ದರಿಂದ ಜೇಮ್ಸ್ ಅರಸನ ಪಕ್ಷದವರಿಗೆ ಯಾಕೋಬಿಯರೆಂಬ ಹೆಸರು ಬಂತು.

## ಸಂಧಿ 19. ಗ್ಲೆನ್‌ಕೋ ಊರಿನವರನ್ನು ಕೊಂದದ್ದು.

ಇಂಗ್ಲಾಂಡಿನಲ್ಲಿ ಉಲ್ಲಿಯಮನೂ ಮೇರಿಯೂ ಕಿರೀಟಾಧಿಪತಿಗಳಾದರೆಂದು ಪ್ರಕಟವಾದ ಅದೇ ದಿವಸ ಸ್ಕೊತ್ಲಾಂದಿನಲ್ಲಿಯೂ (Edinburgh) ಎದಿನ್‌ಬರೋ ಸಂಘದವರಿಂದ ಅರಿಕೆ ಮಾಡಲ್ಪಟ್ಟಿತು. ಅವರ ಅಧಿಕಾರವನ್ನು ಎದುರಿಸಿ ಅಲ್ಲಿರುವ ಬೆಟ್ಟದ ಶೀಮೆಗಳಲ್ಲಿ ಕಲಾಪನೆ ಉಂಟಾಯಿತು. ಆದಾಗ್ಯೂ ಉಲ್ಲಿಯಮ್ ಅರಸನ ದಳಕರ್ತನಾದ (Mackay) ಮಕ್ಕೇ ಎಂಬವನನ್ನು ಜಯಿಸಿದಂಥ (Dundee) ದಂದೀ ಎಂಬುವ ಪ್ರಭುವು ಪೂರ್ಣ ಜಯ ಹೊಂದುವ ಸಮಯದಲ್ಲಿ ಸತ್ತು ಹೋದದರಿಂದ ಸ್ಕೊತ್ಲಾಂದಿನಲ್ಲಿ ಜೇಮ್ಸ್ ಅರಸನ ಕಕ್ಷಿಯವರ ಕೋರಿಕೆಗಳೆಲ್ಲಾ ಅನರ್ಥವಾದವು. ಬೆಟ್ಟದ ಶೀಮೆಗಳಲ್ಲಿ ಅಧಿಕಾರ ಹೊಂದಿದ ಶ್ರೇಷ್ಠರೆಲ್ಲರೂ ತನಗೆ ವಿಧೇಯರಾದ ನಿಶ್ಚಯ ತಿಳಿಯುವ ಬಗ್ಗೆ ಉಲ್ಲಿಯಮ್ ಅರಸನು ಒಂದು ದಿನವನ್ನು ಗೊತ್ತು ಮಾಡಿ, ಅದರಲ್ಲಿ ಬಂದು ತನ್ನನ್ನು ಹೊಂದಿ ಕೊಳ್ಳುವ ಐಕ್ಯಪ್ರಮಾಣಕ್ಕೆ ಒಡಂಬಡುವವರಿಗೆಲ್ಲಾ ಮನ್ನಣೆಯೂ, ಅದಕ್ಕೆ ಬೊಗ್ಗದವರಿಗೆ ಕ್ರೂರವಾದ ಶಿಕ್ಷೆಯೂ ಆಗುವದೆಂದು ಪ್ರಕಟ ಮಾಡಿಸಿದನು.

ಫರಾರಿಯಾದ ಅರಸನ ವಿಷಯದಲ್ಲಿ ಬಹು ವಿಶ್ವಾಸದಿಂದ ಅಂಟಿಕೊಂಡಿದ್ದ (Glencoe) ಗ್ಲೆನ್‌ಕೋ ಎಂಬ ಸ್ಥಳದ ಅಧಿಕಾರಿಯಾದ (Macdonald) ಮಾಕ್ಡೊನಾಲ್ಡ್ ಎಂಬವನು ಸದರಿ ಪ್ರಮಾಣ ಮಾಡುವದಕ್ಕೆ ಸಮ್ಮತಿಸಿದವನಾಗಿದ್ದಾಗ್ಯೂ, ಏನೋ ಒಂದು ಕಾರಣದಿಂದ ಗೊತ್ತಾದ ದಿನದಲ್ಲಿ ಬಂದು ವಂದನೆ ಮಾಡುವದಕ್ಕೆ ಅಡ್ಡಿ ಪಟ್ಟನು. ಅವನ ಮೇಲೆ ಕ್ರೋಧ ಸಾಧಿಸಿ ಕೊಂಡಿದ್ದ ಶತ್ರುಗಳಾದ (Earl of Breadalbane) ಬ್ರೇದಲ್ಬೇನ್ ಏರ್ಲ್ ಪ್ರಭು, (Master of Stair) ಸ್ಟೇಯರ್ ಧೊರೆ ಎಂಬ ಹೆಸರುಗಳುಳ್ಳ ಸ್ಕೊತ್ಲಾಂದಿನ ರಾಜಮಂತ್ರಿಗಳಾದ ಇಬ್ಬರೂ ಅವನನ್ನು ನಾಶ ಮಾಡ ಬೇಕೆಂದೆಣಿಸಿ, ಅವನ ಅಪೇಕ್ಷೆಯನ್ನೂ, ಬಾರದೆ ಇರುವ ಕಾರಣವನ್ನೂ ಹೇಳದೆ, ಅವನು ಬಂದು ಪ್ರಮಾಣ ಮಾಡದೆ ಇರುವದನ್ನು ಮಾತ್ರ ಉಲ್ಲಿಯಮ್ ಅರಸನಿಗೆ ತಿಳಿಸಿದರು. ಅದರಿಂದ ಮಾಕ್ಡೊನಾಲ್ಡ್ ಎಂಬವನನ್ನೂ ಅವನಿಗೆ ಶೇರಿದವರನ್ನೂ ಸಂಹರಿಸುವ ಉದ್ದಿಶ್ಯ ಒಂದು ಅಪ್ಪಣೆಯು ಸಹ ಅರಸನಿಂದ ಹುಟ್ಟಿತು.

ಕೆಲವು ಸೈನಿಕರು ಸಹ ಗ್ಲೆನ್‌ಕೋ ಎಂಬುವ ತಗ್ಗಿಗೆ ಹೋಗಿ, ಆ ಊರಿನ ಪ್ರಜೆಗಳ ಬಳಿಯಲ್ಲಿ ಬಹಳ ಸ್ನೇಹಭಾವವಾಗಿ ಹದಿನಾಲ್ಕು ದಿವಸಗಳಿದ್ದು, ಕಡೆಯಲ್ಲಿ ತಮ್ಮ ಕ್ರೂರವಾದ ಕಟ್ಟಳೆಯನ್ನು ಈಡೇರಿಸುವದಕ್ಕೆ ಒಂದು ದಿವಸ ಮಧ್ಯರಾತ್ರಿಯಲ್ಲಿ ಎದ್ದು ಹೇಳ ಕೂಡದ ಕಠಿಣ ಭಾವದಿಂದ, ಪುರುಷರು ಸ್ತ್ರೀಯರು ಕೂಸುಗಳು ಆದ ಆ ತಗ್ಗಿನಲ್ಲಿ ವಾಸಿಸಿ ಇದ್ದ ಸಕಲರನ್ನೂ ಕೊಂದು ಹಾಕಿದರು. ಆ ಕೆಲಸವು ಉಲ್ಲಿಯಮ್ ಅರಸನ ಅಭಿಪ್ರಾಯದಿಂದ ಆಗದೆ ಇದ್ದರೂ ಆಗಿ ಇದ್ದರೂ ಅವನ ಹೆಸರಿಗೆ ಬಹಳ ಅಪಕೀರ್ತಿಯಾದ ಕಾರ್ಯವೇ.

ಎರಡನೇ ಜೇಮ್ಸ್ ಅರಸನು ಫರಾರಿಯಾದ ಮಾರಣೆ ವರುಷದಲ್ಲಿ ತನ್ನ ಕಿರೀಟವನ್ನು ವಿಮೋಚಿಸುವ ಉದ್ದಿಶ್ಯ ಬಹು ಶೌರ್ಯವಾದ ಸಾಧನೆ ಮಾಡಿದನು. ಹ್ಯಾಗಂದರೆ ಮುಕ್ಕಾಲುವಾಸಿ ರೋಮನ್ ಸಭೆಯವರಾಗಿದ್ದ ಐರ್ಲಾಂದರು ಅವನೇ ತಮಗೆ ಅರಸನೆಂದು ಎಣಿಸಿಕೊಂಡರು. ಆದಾಗ್ಯೂ ಅವನು ಮಾಡಿದ ಪ್ರಯತ್ನಗಳಿಗೆ ಅದು ಒಳ್ಳೇ ಶೀಮೆಯಲ್ಲ. ಹ್ಯಾಗಂದರೆ ಇಂಗ್ಲಿಷಿನವರು ಐರ್ಲಾಂದರನ್ನು ತೃಣಪ್ರಾಯವಾಗಿ ಎಣಿಸಿ, ಅಲ್ಲಿ ನಿವಾಸಿಗಳಾಗಿದ್ದ ಇಂಗ್ಲಿಷಿನವರ ಮೇಲೆ ಮಾತ್ರ ಪ್ರೀತಿ ಇಟ್ಟಿದ್ದದರಿಂದ, ಅವನು ಜಯ ಹೊಂದುವ ಹಾಗಿದ್ದಾಗ್ಯೂ, ಐರ್ಲಾಂದಿನಲ್ಲಿ ಅವನಿಗೆ ಎಷ್ಟು ಮಾತ್ರ ಅನುಕೂಲವಾಗುವದೋ ಅದಕ್ಕಿಂತ ಅಧಿಕವಾದ ನಷ್ಟವು ಇಂಗ್ಲಾಂದಿನಲ್ಲಿ ಸಂಭವಿಸುವದಾಗಿತ್ತು. ಈ ಕಾರ್ಯದಲ್ಲಿ ಲೂವಿಸ್ ಎಂಬ ಅರಸನು ಅವನಿಗೆ ಸಹಾಯ ಮಾಡಿ, ಬೇಕಾದ ಆಯುಧಗಳನ್ನೂ ಗುಂಡೂ ಮದ್ದುಗಳನ್ನೂ ಕೊರತೆ ಇಲ್ಲದೆ ಕೊಟ್ಟನು. ಕೆಲವು ದಿವಸಗಳೊಳಗೆ (Ulster) ಅಲ್‌ಸ್ತರ್ ಎಂಬ ನಾಡು ಹೊರ್ತು ಮಿಕ್ಕಾದ ಐರ್ಲಾಂದ್ ಶೀಮೆಯೆಲ್ಲಾ ಅವನಿಗೆ ವಿಧೇಯವಾಯಿತು. ಅವನು (Dublin) ದಬ್ಲಿನ್ ಪಟ್ಟಣದಲ್ಲಿ ಒಂದು ಪಾರ್ಲಿಮೆಂತ್ ಸಂಘವನ್ನು ಕೂಡಿಸಿ ತನ್ನ ಹೆಸರಿನಿಂದ ತೆರಿಗೆಯನ್ನು ವಸೂಲು ಮಾಡಿ ಹೀಗೆ ತನ್ನ ಅಭಿಪ್ರಾಯವನ್ನು ಪೂರ್ಣವಾಗಿ ಮುಗಿಸಿದವನಂತೆ ತೋರಿದನು.

ಆದಾಗ್ಯೂ ಅದೆಲ್ಲಾ ಅನರ್ಥವಾಗಿ ಅಲ್‌ಸ್ತರಿನಲ್ಲಿ ಎದುರಿಸಲ್ಪ

ಟ್ಟನು. (Londonderry) ಲಂದನ್‌ದೆರ್ರಿ ಪಟ್ಟದವರು ಅವನ ದಂಡುಗಳಿಗೆ ಎದುರಾಗಿ ನಿಂತು ಸಂಚಾಳಿಸಿದ ವಿಧವನ್ನು ನೋಡಿದರೆ, ಅದು ಇಂಗ್ಲಿಷಿನವರು ಯಾವ ಕಾಲದಲ್ಲಿಯೂ ತೋರಿಸಿದ ಧೈರ್ಯಕ್ಕೂ ತಾಳ್ಕೆಗೂ ಹೆಚ್ಚಾದ ದೃಷ್ಟಾಂತವಾಗಿರುತ್ತದೆ. ಮಹಾ ಆಪತ್ತು ಸಂಭವಿಸಿದಲ್ಲಿ ಅತಿ ಮಹಿಮೆಯಾಗಿ ಪ್ರಕಾಶಿಸುವಂಥ ಆ ಬೊಗ್ಗದ ವೀರತ್ವವೇ ಈಗಿನ ಕಾಲದಲ್ಲಿ ಲಕ್ಷ್ಮಣಪುರಿ ಠಾಣ್ಯದವರನ್ನು ಸ್ಥಿರ ಪಡಿಸಿದ ಪ್ರಕಾರವೇ ಲಂದನ್‌ದೆರ್ರಿ ಠಾಣ್ಯದವರನ್ನು ಆಗ ಸ್ಥಿರ ಪಡಿಸಲಾಯಿತು. ಎದುರಿಗಳಿಗೆ ಬೊಗ್ಗುವದಕ್ಕಿಂತ ಸಾಯುವದೇ ಅವರಿಗೆ ಆ ಕಾಲದಲ್ಲಿ ತಕ್ಕದ್ದೂ ಫನವೂ ಆಗಿತ್ತು. ಶತ್ರುಗಳ ಸಂಖ್ಯೆಯು ಬಹು ಹೇರಾಳವಾಗಿದ್ದಾಗ್ಯೂ, ಬರವೂ ಉಪದ್ರವೂ ಮರಣವೂ ಮುಂದೆ ನಿಂತು ಜಯ ಪಡಿಸುವದಾಗಿ ಇದ್ದಾಗ್ಯೂ, ಅಂತ್ಯದ ಮಟ್ಟಿಗೂ ಸಾಧನೆಯಾಗಿ ನಿಂತು ಕಡೆಯಲ್ಲಿ ಜಯ ಹೊಂದಿದರು. ಮುತ್ತಿಗೆಯಲ್ಲಿದ್ದವರೂ ಮುತ್ತಿಗೆ ಹಾಕಿದವರೂ ಅಘೋರವಾಗಿ ಯುದ್ಧ ಮಾಡಿದರು. ಆದಾಗ್ಯೂ ಠಾಣ್ಯದವರು ಹೊರಟು ಎದುರಿಗಳ ಮೇಲೆ ತಾಕಿದಾಗಲೆಲ್ಲಾ ಮುತ್ತಿಗೆಯಲ್ಲಿದ್ದವರಿಗೆ ಅನುಕೂಲವಿದ್ದದರಿಂದಲೂ, ಶತ್ರುಗಳು ಬಹು ಮೂರ್ಖವಾಗಿ ಬಂದು ಮಾಡಿದ ಯುದ್ಧದಲ್ಲಿ ಅವರನ್ನು ಮಹಾ ಧೈರ್ಯವಾಗಿ ಕಾದಿ ಮೇಲ್ಗೊಂಡದ್ದರಿಂದಲೂ, ಶತ್ರುಗಳು ಇನ್ನು ಯುದ್ಧವೇನೂ ಮಾಡದೆ, ಆ ಕೋಟೆಯನ್ನು ಸುತ್ತಿ ಕೊಂಡು ಕಾದಿದ್ದರು. ಅದರಿಂದ ತರುವಾಯ ಆ ಠಾಣ್ಯದವರಿಗೆ ಆಹಾರಪದಾರ್ಥಗಳು ಒಂದೂ ಒಳಗೆ ಶೇರದಂತೆ ಶತ್ರುಗಳು ಬಹು ಜಾಗ್ರತೆಯಾಗಿದ್ದರು. ಪಟ್ಟಕ್ಕೆ ಹೋಗುವ ದಾರಿಗಳಲ್ಲೆಲ್ಲಾ ಕಾವಲಿ ನಿಂತರು. ದೊಡ್ಡ ಮರಗಳ ಅಡಿತುಂಡುಗಳನ್ನು ಚನ್ನಾಗಿ ಜೋಡಿಸಿ ನದಿಯಲ್ಲಿ ಅಡ್ಡವಾಗಿ ಹಾಕಿದ್ದರಿಂದ ಸಮುದ್ರದ ಮಾರ್ಗವಾಗಿ ಅವರಿಗೆ ಸಹಾಯ ಬರುವದಕ್ಕೆ ಕೂಡದೆ ಇತ್ತು. ಇದರಿಂದ ಪಟ್ಟದೊಳಗೆ ಉಂಟಾದ ಆಪತ್ತುಗಳು ದೊಡ್ಡವಾದವು. ಕುದುರೆಮಾಂಸವು ಸಾಧಾರಣವಾದ ಭೋಜನವಾಯಿತು. ಅದಕ್ಕಿಂತ ಹೀನವಾದ ಮಾಂಸವನ್ನು ಸಹ ಆ ಠಾಣ್ಯದವರು ಉಣ್ಣ ಬೇಕಾಗಿ ಪ್ರಾಪ್ತಿಸಿತು. ಅವರ ದಂಡಿನವರಲ್ಲಿ ವ್ಯಾಧಿಯು ಸಹ ಬಂದು ಅವರನ್ನು ಬೀಳ ಮಾಡಿತು. ಅ

ವರಿಗೆ ಇದ್ದ ಗುಂಡು ಮದ್ದುಗಳೂ ಕಡಿಮೆಯಾಗಿ ಹೋದವು. ಹೀ
ರುವಲ್ಲಿ ತನ್ನ ಕೈಯಲ್ಲಿ ಸಿಕ್ಕಿದ ಅನೇಕ ಸೆರೆಯವರನ್ನು ಫ್ರಾನ್ಸ್ ದಳ
ಕರ್ತನು ತನ್ನ ದಂಡಿಗೂ ಪಟ್ಣಕ್ಕೂ ಮಧ್ಯದಲ್ಲಿ ಇರಿಸಿ, ಹಸಿವೆಯಿಂದ
ಸಾಯುವಂತೆ ಬಿಡುವ ಕ್ರೂರತ್ವವನ್ನು ಕಣ್ಣಿನಿಂದ ಕಂಡು ಪರಿತಪಿಸಿದರು.
ಆದರೂ ಧೈರ್ಯಶಾಲಿಗಳಾದ ಆ ಠಾಣ್ಯದವರು ದೃಢವಾಗಿಯೇ ಇದ್ದ
ರು. ಅವರು ಸಾವು ಬಂದರೂ ಬರಲಿ; ಸತ್ತರೂ ಬೊಗ್ಗುವದಿಲ್ಲವೆಂದು
ಇದ್ದರು. ಹಗಲಿನಲ್ಲಿ ನಾಶ ಮಾಡಲ್ಪಟ್ಟ ಬುರುಜುಗಳನ್ನು ರಾತ್ರಿಕಾ
ಲದಲ್ಲಿ ದುರುಸ್ತು ಮಾಡಲ್ಪಟ್ಟವು. ಠಾಣವನ್ನು ಕಾಯುವವರು ಹಸಿ
ವೆಯಿಂದಲೂ ಬಳಲಿಕೆಯಿಂದಲೂ ಸುತ್ತಿ ಬರುವದಕ್ಕೆ ಶಕ್ತಿ ಇಲ್ಲದೆ ಇ
ದ್ದಾಗ್ಯೂ ಎದುರಿಸಿ ಬರುವ ಶತ್ರುಗಳ ಸಂಗಡ ಸಾಯುವ ಮಟ್ಟಿಗೂ
ನಿಂತು ಹೋರಾಡಿದರು. ಹೀಗಿರುವ ಕಾಲದಲ್ಲಿ ಸಹಾಯವು ಬಂದು
ಒದಗಿತು. ಹ್ಯಾಗಂದರೆ, ಮುತ್ತಿಗೆ ಹಾಕಲ್ಪಟ್ಟು ಮೂರುವರೆ ತಿಂಗಳಾ
ದ ಮೇಲೆ ಜೂಲೈ ತಿಂಗಳ 30ನೇ ತಾರೀಖಿನಲ್ಲಿ ಮೂರು ಹಡಗಗಳು
ನದಿಯಲ್ಲಿ ಹಾಕಲ್ಪಟ್ಟಿದ್ದ ಮರದ ಅಣೆಯ ಅಂಚಿನಲ್ಲಿ ತೋರಿದವು.
ಅವುಗಳೇ ಆ ಪಟ್ಣದ ಠಾಣ್ಯದವರಿಗೆ ಸಹಾಯ ಮಾಡುವದಕ್ಕೆ ಬಂದ
ಇಂಗ್ಲಿಷಿನವರ ಹಡಗಗಳು. ಆ ಹಡಗಗಳಲ್ಲಿ ಮೊದಲಾಗಿ ನಿಲ್ಲುವದು
ಯಾವ ಕಡೆಗೆ ತಿರುಗುವದೋ ಎಂದು ಬಹು ಆಶೆಯೊಡನೆ ಆ ಕೋ
ಟೆಯ ಮೇಲೆ ಬೆಳ್ಳಗಾದ ಮುಖಗಳೂ ಎಲುವೂ ಚರ್ಮ ಮಾತ್ರ ಉ
ಳಿದಿರುವ ರೂಪಗಳೂ ಬಂದು ಕೂಡಿ ಕೊಂಡವು. ಆ ಹಡಗವು ಸಮೀ
ಪವಾಗಿ ಬಂತು. ಬಂದು ಸದರಿ ಮರದಣೆಯನ್ನು ಹಾಯಿತು. ಆಗ
ಆ ಮರದಣೆಯು ಎರಡಾಗಿ ಮುರಿಯಲಾಗಿ, ಪಟ್ಣವೂ ಪಟ್ಣದ ಠಾ
ಣ್ಯದವರೂ ರಕ್ಷಿಸಲ್ಪಟ್ಟರು. ಆದಾಗ್ಯೂ ಮುತ್ತಿಗೆಯ ಆರಂಭದಲ್ಲಿ ಆ
ಕೋಟೆಯೊಳಗೆ ಇದ್ದ 7000 ಮನುಷ್ಯರಲ್ಲಿ ಮೂರು ಸಾವಿರ ಮಂದಿ
ಮಾತ್ರ ಜೀವದಿಂದ ಇದ್ದರು.

ಮಾರಣೆ ವರುಷದಲ್ಲಿ ಉಲ್ಲಿಯಮ್ ಅರಸನೇ ಸ್ವಂತವಾಗಿ ಹೋಗಿ
ಐರ್ಲಾಂಡಿನಲ್ಲಿರುವ ಸೈನ್ಯವನ್ನು ನಡಿಸುವದಕ್ಕೆ ಸ್ಥಳಪಿತ್ತು. ಅವನು ಹೋ
ಗಲಾಗಿ ಕಾರ್ಯಗಳೆಲ್ಲಾ ಅನುಕೂಲವಾದವು. ಆ ದೇಶದಲ್ಲಿ ಅವನು

ಧಡವಿಳಿದ ಸ್ವಲ್ಪ ದಿವಸಗಳಲ್ಲಿ (Boyne) ಬೋಯಿನ್ ನದಿಯ ತೀರದಲ್ಲಿ ಐರ್ಲಾಂಡರ ರಾಣುವೆಯು ಅವನನ್ನು ಎದುರಿಸಿತು. ಯುದ್ಧವು ಮಹಾ ಘೋರವಾಗಿತ್ತು. ಅದರಲ್ಲಿ ಇಂಗ್ಲಿಷಿನವರ ಪಕ್ಷದಲ್ಲಿಯೇ ಜಯವಾಯಿತು. ಶಾಂತವೂ ಧೈರ್ಯವೂ ಉಳ್ಳವನಾಗಿ ಉಲ್ಲಿಯಮ್ ಅರಸನು ಯುದ್ಧದ ಮಧ್ಯದಲ್ಲಿ ಇದ್ದನು. ಸಮೀಪದಲ್ಲಿದ್ದ ಒಂದು ಮೇಟಿನ ಕೊನೆಯಲ್ಲಿದ್ದು ಯುದ್ಧವನ್ನು ದೃಷ್ಟಿಸುತ್ತಾ ಇದ್ದ ಜೇಮ್ಸ್ ಅರಸನು ಸಹ ತನ್ನ ಶತ್ರುಗಳ ಪಕ್ಷದಲ್ಲಿ ಜಯವಾಗುವದನ್ನು ಕಂಡು, ಕುದುರೆಯನ್ನು ತಿರಿಗಿಸಿ ಕೊಂಡು ಓಡಿ ಹೋಗಿ ದಬ್ಲಿನ್ ಪಟ್ಣದಲ್ಲಿ ಬಂದು ಶೇರಿದನು. ಶೇರಿದ ತರುವಾಯ ಅಲ್ಲಿಂದ ಫ್ರಾನ್ಸಿಗೆ ಹೊರಟು ಹೋದನು. ಮಾರಣೆ ವರುಷ ಸೆಪ್ಟೆಂಬರ್ ತಿಂಗಳಲ್ಲಿ ಉಲ್ಲಿಯಮ್ ಅರಸನು ಯುದ್ಧವನ್ನು ಅಲ್ಲಿದ್ದು ನಡಿಸುವ ಉದ್ದಿಶ್ಯ (Ginkell) ಗಿನ್‌ಕೆಲ್ ಎಂಬ ಒಬ್ಬ ಹೊಲ್ಲಾಂದಿನ ಸೈನ್ಯಾಧಿಪತಿಯನ್ನು ಇರಿಸಿ ಬಿಟ್ಟು ಲಂದನ್ ಪಟ್ಣಕ್ಕೆ ತಿರುಗಿದನು. ಅಲ್ಲಿ ನಡೆದ ಯುದ್ಧವು ಸಹ ಜೇಮ್ಸ್ ಅರಸನ ಕಕ್ಷಿಯವರಿಗೆ ಅನುಕೂಲವಿಲ್ಲದೆ ಇದ್ದು, ಬರ ಬರ (Limerick) ಲಿಮರಿಕ್ ಎಂಬ ಪಟ್ಣವು ಮಾತ್ರ ಫರಾರಿಯಾದ ಅರಸನಿಗೆ ಉಳಿಯಲಾಗಿ ಮಿಕ್ಕಾದದ್ದೆಲ್ಲಾ ಇಂಗ್ಲಿಷಿನವರ ವಶವಾಯಿತು. ಆ ಪಟ್ಣವು ಸಹ ಹಿಡಿಯಲ್ಪಟ್ಟಾಗ ಉಲ್ಲಿಯಮ್ ಅರಸನ ಸೇವೆಯಲ್ಲಾಗಲಿ, ಜೇಮ್ಸ್ ಅರಸನ ಸೇವೆಯಲ್ಲಾಗಲಿ ಇಷ್ಟದ ಪ್ರಕಾರ ಇರ ಬಹುದೆಂದು ಆ ಪಟ್ಣದ ಶಾಲ್ಜದವರಿಗೆ ಅಪ್ಪಣೆ ಕೊಟ್ಟಾಗ ಅವರಲ್ಲಿ ಹೆಚ್ಚಾದ ಜನರು ಫರಾರಿ ಅರಸನನ್ನೇ ಸೇವಿಸುವೆವೆಂದು ಹೇಳಿ ಫ್ರಾನ್ಸ್ ಶೀಮೆಗೆ ಹೊರಟು ಹೋಗಿ, ಫ್ರಾನ್ಸ್ ಅರಸನ ದಂಡಿನಲ್ಲಿ ಮಹಾ ಧೈರ್ಯಶಾಲಿಗಳಾದ ಶಿಫಾಯಿಗಳಾದರು.

ಉಲ್ಲಿಯಮ್ ಅರಸನು ಅದೇ ಸಂವತ್ಸರದಲ್ಲಿಯೇ ತನ್ನ ಜನ್ಮಭೂಮಿಗೆ ಹೋಗಿ ಫ್ರಾನ್ಸ್ ಅರಸನಿಗೆ ವಿರೋಧವಾದ ಒಡಂಬಡಿಕೆ ಮಾಡಿದ ತನ್ನ ಜತೆಯವರನ್ನು ದರ್ಶಿಸಿದನು. ಆ ಫ್ರಾನ್ಸ್ ಅರಸನ ಅತ್ಯಾಶೆಯು ಬರ ಬರ ಅಭಿವೃದ್ಧಿಯಾಗುತ್ತಾ ಬಂದು, ತನ್ನ ರಾಜ್ಯಕ್ಕೆ ಸಮೀಪದಲ್ಲಿರುವ (Palatinate) ಪಲಾಶಿನೇತ್ ಎಂಬ ಜರ್ಮನಿ ದೇಶದ ಒಂದು ಭಾಗ

ದಲ್ಲಿ ಕೆಲವು ದಿವಸಗಳಿಗೆ ಮುಂಚೆ ಸ್ವಲ್ಪವಾದರೂ ಕನಿಕರವಿಲ್ಲದೆ ಯುದ್ಧ ಮಾಡಿ ಅದರ ಪ್ರಜೆಗಳನ್ನು ಹಿಂಸೆ ಪಡಿಸಿ ಇದ್ದನು. ಅವನು ಆ ಶೀಮೆಯನ್ನು ಹಾಳು ಮಾಡಿ, ಅನೇಕ ಸೊಗಸಾದ ಪಟ್ಟಣಗಳನ್ನು* ಮಣ್ಣು ದಿಬ್ಬೆಗಳಾಗ ಮಾಡಿ ಇದ್ದನು. ಈ ಅಕ್ರಮವಾದ ಕೆಲಸಕ್ಕಾಗಿಯೂ, ಲೂವಿಸ್ ಎಂಬವನ ಅಯುಕ್ತವಾದ ಅತ್ಯಾಶೆಯಿಂದ ಯೂರೋಪಿಗೆಲ್ಲಾ ಉಂಟಾಗುವದಕ್ಕಿದ್ದ ಆಪತ್ತಿನ ಸಲವಾಗಿಯೂ, ಅನೇಕ ಯೂರೋಪಿನ ಅರಸರು ಒಂದಾಗಿ ಕೂಡಿ, ಫ್ರಾನ್ಸ್ ಅರಸನಿಗೆ ವಿರೋಧವಾಗಿ ಒಡಂಬಡಿಕೆ ಮಾಡಿದರು. ಈ ಒಡಂಬಡಿಕೆ ಉಂಟು ಮಾಡಿದ್ದರಲ್ಲಿ ಉಲ್ಲಿಯಮ್ ಅರಸನೇ ಯಥಾರ್ಥವಾಗಿ ತಲೆಯಾಗಿದ್ದನು. ಈ ವಿಷಯದಲ್ಲಿ ಸಮಾನವಿಲ್ಲದ ರಾಜತಂತ್ರದೊಡನೆ ತನಗಿದ್ದ ಬಲವನ್ನು ತೋರಿಸಿದನು. ಈ ಕಾರ್ಯದಲ್ಲಿ ಅವನಿಗೆ ಜತೆಯಾದ ನಾನಾ ವಿಧವಾದವರನ್ನೂ ಸಮಾಧಾನ ಪಡಿಸಿ, ಅವರ ಕೋಪಗಳನ್ನು ಶಾಂತ ಮಾಡಿದ ಅತಿಶಯವಾದ ಬಗೆಯಿಂದಲೂ, ಹೊಂದಿದ ಅಪಜಯಗಳನ್ನು ತೋರ ಮಾಡದೆ ಕಾದು ಕೊಂಡ ಅತಿಶಯವಾದ ಸಾಮರ್ಥ್ಯದಿಂದಲೂ, ಲೂವಿಸ್ ಅರಸನ ಅಭಿಪ್ರಾಯವನ್ನು ಅಳಿದು, ಒಂದು ಅನುಕೂಲವಾದ ಸಮಾಧಾನದ ಒಡಂಬಡಿಕೆ ಉಂಟಾಗುವಹಕ್ಕೆ ಆಯಿತು. 1697ನೇ ವರುಷದಲ್ಲಿ (Hague) ಹೇಗಿಗೆ ಸಮೀಪವಾದ (Ryswick) ರಿಸ್ವಿಕ್ ಊರಿನಲ್ಲಿ ಸಮಾಧಾನವು ಉಂಟಾಯಿತು. ಆ ಒಡಂಬಡಿಕೆಯಲ್ಲಿ ಇಂಗ್ಲಾಂಡಿನಲ್ಲಿರುವ ಧೊರೆತನವನ್ನು ಒಪ್ಪಿ ಕೊಳ್ಳಲೂ, ಉಲ್ಲಿಯಮನೇ ಅದರ ಅರಸುತನಕ್ಕೂ ಕಿರೀಟಕ್ಕೂ ಬಾಧ್ಯಸ್ಥನೆಂದು ಅಂಗೀಕರಿಸಲೂ ಫ್ರಾನ್ಸ್ ಅರಸನು ಸಮ್ಮತಿಸಿದನು.

ಉಲ್ಲಿಯಮ್ ಅರಸನು ಹೊಲ್ಲಾಂದಿನಲ್ಲಿರುವ ಕಾಲದಲ್ಲಿ ಇಂಗ್ಲಾಂದಿನಲ್ಲಿ ಅವನಿಗೆ ವ್ಯತಿರಿಕ್ತವಾಗಿ ಒಂದು ಭಯಂಕರವಾದ ಮೋಸ ಉಂಟಾಗಿ ಕಂಡು ಹಿಡಿಯಲ್ಪಟ್ಟಿತು. ಅದರಲ್ಲಿ ಮುಖ್ಯವಾದ ಯಾಕೋಬಿಯರು ಜೇಮ್ಸ್ ಅರಸನು ತನ್ನ ಶೀಮೆಗೆ ಬರುವಂತೆ ಬರೆದು ಕಳುಹಿಸಿ ಇದ್ದರು. (Earl of Marlborough) ಮಾರ್ಲ್‌ಬರೋ ಎರ್ಲ್ ಪ್ರಭುವು ಸಹ ಸ್ವತಹಾ ಅನುಸರಿಸಿದ ಕಾರ್ಯದಲ್ಲಿ ಪೂರ್ಣ ದ್ರೋಹಿಯಾಗಿ

ಮಾರ್ಪಟ್ಟನು. (Anne) ಆನ್ ಎಂಬ ರಾಜಕುಮಾರ್ತೆಗೂ ಅವಳ ತಂದೆಗೂ ಕಾಗದಪತ್ರಗಳು ನಡಿಯೋಣವಿತ್ತು. ನಾವಿಕಸೈನ್ಯಕ್ಕೆ ಶೇರಿದ ಅನೇಕ ಮುಖ್ಯಸ್ಥರಲ್ಲಿ ಗುಣುಗುಟ್ಟುವಿಕೆ ಉಂಟಾಗಿದ್ದಂತೆ ವದಂತಿ ಹುಟ್ಟಿತು. ಇಂಗ್ಲಾಂಡನ್ನು ಮುತ್ತಿಗೆ ಹಾಕುವದಕ್ಕೆ ಒಂದು ಫ್ರಾನ್ಸರ ಸೈನ್ಯವು (La Hogue) ಲಾ ಹೋಗ್ ಊರಿನ ಬಳಿಯಲ್ಲಿ ದಂಡಿಳಿದಿತ್ತು. ಆ ಕೇಡಿನಲ್ಲಿ ಆ ಸೈನ್ಯಕ್ಕೆ ಸಹಾಯ ಮಾಡುವದಕ್ಕೆ ಒಂದು ಫ್ರಾನ್ಸರ ನಾವಿಕ ಸೈನ್ಯವೂ ಬ್ರಿತ್ತಿಷ್ ಕಾಲುವೆಯಲ್ಲಿ ಬಂದು ನಿಂತಿತು. ಹೀಗೆಲ್ಲಾ ಇರುವಾಗ ಇಂಗ್ಲಿಷಿನವರ ವೀರ್ಯವು ಎಚ್ಚತ್ತಿತು. ಜೇಮ್ಸ್ ಅರಸನ ಬರುವಿಕೆಯು ಯಾಕೋಬಿಯರಿಗೆ ಇಷ್ಟವಾಗಿ ಇದ್ದಿರ ಬಹುದು. ಮತ್ತು ಇಲ್ಲೊಬ್ಬ ದ್ರೋಹಿ ಅಲ್ಲೊಬ್ಬ ವಂಚಕನು ಮಾತ್ರ ಜೇಮ್ಸ್ ಅರಸನು ಫ್ರಾನ್ಸ್ ಸೈನ್ಯ ಸಹಿತವಾಗಿ ಬರುವದಕ್ಕೆ ಮನಸ್ಸುಳ್ಳವನಾಗಿರ ಬಹುದು. ಆದಾಗ್ಯೂ ಇಂಗ್ಲಿಷಿನವರಿಗೂ ಫ್ರಾನ್ಸಿನವರಿಗೂ ಇರುವ ಜಾತೀ ವೈರವು ನಿವರ್ತಿಯಾಗದು. ತನ್ನ ಪುರುಷನು ಹೋಗಿದ್ದ ದಿವಸಗಳಲ್ಲೆಲ್ಲಾ ಧೊರೆತನ ಮಾಡಿ ಕೊಂಡಿದ್ದ ಮೇರಿ ರಾಣಿಯು ಬಹು ಯಥಾರ್ಥವಾಗಿಯೂ ಧಾರಾಳವಾಗಿಯೂ ಈ ಕಾರ್ಯದಲ್ಲಿ ನಡೆದು ಕೊಂಡಳು. ಹ್ಯಾಗಂದರೆ, ಮಾರ್ಲ್‌ಬರೋ ಎರ್ಲ್ ಪ್ರಭುವನ್ನು ಕಾವಲಿಯಲ್ಲಿಟ್ಟು, ನಾವಿಕ ಸೈನ್ಯದ ಶ್ರೇಷ್ಠರಿಗೆ ಘನವೂ ಗೌರವವೂ ಮನಸ್ಸಿನಲ್ಲಿ ಉಂಟಾಗುವಂತೆ ಒಂದು ಕಾಗಹ ಬರೆದು, ಅವರಲ್ಲಿ ರಾಜಭಕ್ತಿಯೂ ಧೈರ್ಯವೂ ಉಂಟೆಂದು ತಾನು ಪೂರ್ಣ ನಂಬಿಕೆಯುಳ್ಳವಳಾಗಿದ್ದೇನೆಂದು ತಿಳಿಸಿದಳು. ಅದನ್ನು ಓದುವಾಗ ಕೇಳಿದವರ ಮನಸ್ಸುಗಳೆಲ್ಲಾ ಸಂಗಡಲೇ ಸ್ಥಿರಪಟ್ಟವು. ನಾವಿಕದಳಕರ್ತರು, ಸೈನ್ಯಾಧಿಪತಿಗಳು, ನಾವಿಕರು, ಮುಂಚೆ ಮನಸ್ಸು ತುಂಬಿ ತುಳುಕುತ್ತಿದ್ದವರೆಲ್ಲರೂ, ತಮ್ಮ ದೇಶದ ನಿಮಿತ್ತವೂ ರಾಣಿಯ ನಿಮಿತ್ತವೂ ಧೈರ್ಯವಾಗಿ ನಿಂತು, ತಮ್ಮ ತಮ್ಮ ಕೆಲಸಗಳನ್ನು ಈಡೇರಿಸುವದಕ್ಕೂ, ಯುದ್ಧ ಮಾಡುವದಕ್ಕೂ, ಮನಸ್ಸು ಮಾಡಿದರು. ಫ್ರಾನ್ಸ್ ಸೈನ್ಯದ ನಾವಿಕ ಅಣಿಯನ್ನು ಮೊದಲಾಗಿ ಹೊಗಬಿದ್ದು, ತಾಕಿದ ದಳಕರ್ತನು ಅಸಾಧ್ಯವಾದ ಘಾಯ ಹೊಂದಿದನು. ಹಡಗದಲ್ಲಿಯೇ ಇದ್ದು ತನ್ನ ದಂಡಿನವರಿಗೆ ಧೈರ್ಯ ಕೊಡುತ್ತಾ ಇದ್ದ

ನು. ಹಡಗವನ್ನು ಯುದ್ಧಕ್ಕೆ ನಡಿಸಿರಿ: ಅದು ಶೇಲುತ್ತಾ ಇರುವ ಮ ಟ್ಟಿಗೂ ನಡಿಸಿ ಯುದ್ಧ ಮಾಡಿರಿ ಎಂದು ಆ ವೀರನು ಹೇಳಿ ಪ್ರಾಣವ ನ್ನು ಬಿಟ್ಟನು. ಫ್ರಾನ್ಸಿನವರ ಹಡಗಗಳು ಸೋತು ಹೋಗಿ, ಕೆಟ್ಟು ಕಡಿಮೆ ಪೂರ್ಣವಾಗಿ ನಾಶವಾದವು. ಇಂಗ್ಲಿಷ್ ನಾವಿಕರು ಹೋಗಿ ಉಳಿ ದಿದ್ದ ಫ್ರಾನ್ಸಿನವರ ಹಡಗಗಳನ್ನೆಲ್ಲಾ, ಇಂಗ್ಲಾಂಡ್ ಶೀಮೆಯನ್ನು ಮುತ್ತಿಗೆ ಹಾಕುವದಕ್ಕೆ ಬಂದ ಫ್ರಾನ್ಸ್ ಸೈನ್ಯವು ದಂಡಿಳಿದಿದ್ದ ಸ್ಥಳಕ್ಕೆ ಸಮೀಪದಲ್ಲಿಯೇ ಬೆಂಕಿ ಹಾಕಿ ಸುಟ್ಟು ಬಿಟ್ಟರು. ಈ ಯುದ್ಧದಿಂದಲೇ ಜೇಮ್ಸ್ ಅರಸನು ಇಂಗ್ಲಾಂಡನ್ನು ಮುತ್ತಿಗೆ ಹಾಕ ನೆನಸಿದ್ದ ಯತ್ನವೆ ಲ್ಲಾ ಅನರ್ಥವಾಯಿತು.

ಮೂರನೇ ಉಲ್ಲಿಯಮ್ ಅರಸನು ಆಳಿದ ಕಾಲದಲ್ಲಿ ಇಂಗ್ಲಾಂಡ್ ಶೀಮೆಯ ಪಾರ್ಲಿಮೆಂತ್ ಸಂಘದವರ ಆಲೋಚನೆಯಲ್ಲಿ ಬಹಳ ತಿದ್ದು ಪಾಟುಗಳು ನಡೆದವು. ಸ್ವತಂತ್ರ ಏರ್ಪಾಟು ಎಂಬ ಪ್ರಮಾಣವನ್ನು ಕುರಿತು ಮುಂಚೆ ಹೇಳಿ ಇದ್ದೇವೆ. ಅದು ಅಲ್ಲದೆ ಬೇರೆ ಎರಡು ಮುಖ್ಯ ವಾದ ಏರ್ಪಾಟುಗಳು ಉಂಟಾದವು. ಅವು ಯಾವವೆಂದರೆ, (Triennial Bill) ಮೂರು ವರುಷದ ಏರ್ಪಾಟು, (Right of Settlement) ಅ ರಸುನೆಲೆಯ ಏರ್ಪಾಟೂ ಎಂಬವುಗಳೇ. ಮೂರು ವರುಷದ ಏರ್ಪಾ ಟಿನಲ್ಲಿ ಎರಡನೇ ಚಾರ್ಲ್ಸ್ ಅರಸನ ಕಾಲದಲ್ಲಿ ಹದಿನೇಳು ವರುಷ ಗಳ ಮಟ್ಟಿಗೂ ಪಾರ್ಲಿಮೆಂಟಿನವರ ಸಂಘವು ಕೂಡದೆ ಇದ್ದಂತೆ ಇನ್ನು ಮೇಲೆ ಇರದೆ, ಮೂರು ವರುಷಕ್ಕೊಂದು ಸಾರಿ ಒಂದು ಹೊಸ ಪಾರ್ಲಿ ಮೆಂತ್ ಸಂಘವು ಅವಶ್ಯವಾಗಿ ಕೂಡಿ ಬರ ಬೇಕೆಂದು ದೃಢ ಮಾಡಲ್ಪ ಟ್ಟಿತು. ಇದಲ್ಲದೆ ಆ ಸಂಘದವರು ಅನೇಕ ವರುಷಗಳ ಮಟ್ಟಿಗೂ ಮಾ ರ್ಪಡದೆ ಆ ಸಂಘದಲ್ಲಿ ಇರುವದಕ್ಕಿಂತ ಅವರು ಆಗಾಗ್ಯೆ ಬದಲಾಗು ತ್ತಾ ಇರುವಾಗ ಸಂಸ್ಥಾನದ ಕಾರ್ಯಗಳನ್ನು ಕುರಿತು, ಸಾಮಾನ್ಯ ಜನ ರ ಯೋಚನೆಗಳೂ ತಾತ್ಪರ್ಯಗಳೂ ಚನ್ನಾಗಿ ಬಹಿರಂಗವಾಗುವವು. ಆದದರಿಂದ ಇದು ಸಹ ಆ ಏರ್ಪಾಟಿನಲ್ಲಿ ಶೇರಿಸಲ್ಪಟ್ಟಿತು.

ಅರಸುನೆಲೆಯ ಏರ್ಪಾಟಿನಿಂದ ತತ್ಕಾಲದ ಅರಸನೂ ಆನ್ ಎಂ ಬ ರಾಜಕನ್ನಿಕೆಯೂ ಮಕ್ಕಳಿಲ್ಲದೆ ಸತ್ತರೆ, ಅವರ ಕಾಲದ ತರುವಾಯ,

ರೋಮನ್ ಸಭೆಗೆ ಸೇರದೆ ಇದ್ದರೆ, (Hanover) ಹಾನೋವರ್ ನಾಡಿನ ಅಧಿಕಾರಿಯೂ, ಮೊದಲನೇ ಜೇಮ್ಸ್ ಅರಸನಿಗೆ ಪೌತ್ರಿಯೂ ಆದ (Sophia) ಸೋಫೈಯಳಿಗೂ ಅವಳ ಸಂತತಿಗೂ ಕಿರೀಟವೂ ಮುದ್ರೆಕೋಲೂ ಕೊಡಲ್ಪಡ ಬೇಕೆಂದೂ ನಿರ್ಮಿಸಲ್ಪಟ್ಟಿತು. ಇನ್ನು ಮೇಲೆ ಹುಟ್ಟುವ ಹೊಸ ರಾಜವಂಶದವರ ಅಧಿಕಾರವನ್ನು ಇಷ್ಟೆಂದು ತೋರಿಸುವ ಅನೇಕ ಮೇಲಾದ ಪ್ರಮಾಣಗಳೂ ಆ ಏರ್ಪಾಟಿನಲ್ಲಿ ಸೇರಿಸಲ್ಪಟ್ಟವು. ಅವುಗಳನ್ನು ಇಂಗ್ಲಿಷ್ ಪಾರ್ಲಿಮೆಂಟ್ ಪ್ರಮಾಣಗಳನ್ನು ಮುದ್ರಿಸಿದ ಮುದ್ರೆ ಎಂದು ಹೇಳ ತಕ್ಕದ್ದು. ಸ್ವೇಚ್ಛೆಯಾಗಿ ದೊರೆತನ ಮಾಡಿದ ಅರಸರು ವಾಡಿಕೆಯಾಗಿ ಮಾಡುತ್ತಿದ್ದ ಕ್ರೂರತ್ವದಿಂದ ಪ್ರಜೆಗಳನ್ನು ರಕ್ಷಿಸುವ ಹಾಗೆ ಏರ್ಪಟ್ಟ ಏರ್ಪಾಟುಗಳಲ್ಲಿ ಇದೇ ಕಡೇದು. ಈ ಪ್ರಕಾರ ಯೋಹಾನ್ ಅರಸನ ಕಾಲ ಮೊದಲ್ಗೊಂಡು ಪಾರ್ಲಿಮೆಂಟಿನವರಿಗೂ ದೊರೆತನದವರಿಗೂ ನಾನಾ ಬಗೆಯಾಗಿ ನಾನಾ ಮೆಟ್ಟುಮೆಟ್ಟಾಗಿ ಉಂಟಾಗುತ್ತಾ ಇದ್ದದ್ದೂ, ಜೇಮ್ಸ್ ಅರಸನ ಕಾಲದಲ್ಲಿ ಅಧಿಕ ಬಲವಾಗಿ ಘರ್ಜಿಸಿ ಕೊಂಡಿದ್ದದ್ದೂ ಆದ ವ್ಯಾಜ್ಯವೂ ಝಗಳವೂ, ಮೇಲೆ ಹೇಳಿದ ಏರ್ಪಾಟೂ ಸ್ವತಂತ್ರ ಏರ್ಪಾಟೂ ಸ್ಥಾಪಿಸಲ್ಪಟ್ಟಾಗ ಮುಗಿದವು. ಉಚಿತಯತ್ರರ ಅಧಿಕಾರವೂ ಸ್ಪಷ್ಟವಾಗಿ ನಿಧಾನಿಸಲ್ಪಟ್ಟಿತು. ಪಾರ್ಲಿಮೆಂಟಿನವರ ಅಧಿಕಾರವೂ ಕೂಡಿ ಬಲ ಪಟ್ಟಿತು.

ಹೀಗೆ ಇಂಗ್ಲಾಂಡ್ ಶೀಮೆಯಲ್ಲಿ ಬಹು ಎಚ್ಚರಿಕೆಯಾಗಿ ದೊರೆತನ ಮಾಡಿದ ಅವನೀಪತಿಯ ದಿವಸಗಳು ಮುಗಿಯುತ್ತಾ ಬಂದವು. ಒಂದು ದಿವಸ ಅವನು ಲಂಡನ್ ಪಟ್ಟಣಕ್ಕೆ ಸಮೀಪದಲ್ಲಿರುವ (Bushy Park) ಬುಷಿ ಪಾರ್ಕ್ ಎಂಬ ವನದಲ್ಲಿ ಸವಾರಿ ಮಾಡಿದಾಗ ಅವನು ಹತ್ತಿದ್ದ ಕುದುರೆಯು ಎಡವಿ ಬೀಳಲಾಗಿ, ಅವನಿಗೆ ತೋಳಿನ ಎಲುವು ಮುರಿದು ಹೋಯಿತು. ಪಕ್ವೋಪಚಾರಗಳಿಂದ ಸ್ವಲ್ಪ ಸ್ವಸ್ಥವಾಗುತ್ತಾ ಬಂದಾಗ, ಜ್ವರ ಬಂದು ಕೆಲವು ದಿನಗಳಲ್ಲಿ ದೇಹವಿಯೋಗವಾದನು. ಮೇರಿ ರಾಣಿಯಾದ ಅವನ ಪ್ರಿಯ ಹೆಂಡತಿಯು ಸಹ ಅದಕ್ಕೆ ಏಳು ವರುಷಗಳಿಗೆ ಮುಂಚೆ ಕಾಲವಾಗಿ ಹೋಗಿದ್ದಳು.

ಕಡೆಯಲ್ಲಿ ನಡೆದ ಯುದ್ಧದಿಂದ ಫ್ರಾನ್ಸ್ ಅರಸನ ಅತ್ಯಾಶೆಯು

ಮುಗಿಯಲಿಲ್ಲ. ಆದದರಿಂದ ಉಲ್ಲಿಯಮ್ ಅರಸನು ಸಾಯುವದಕ್ಕೆ ಕೆಲವು ದಿವಸಗಳಿಗೆ ಮುಂಚೆ ಅವನಿಗೆ ವಿರೋಧವಾಗಿ ಒಂದು ಒಡಂಬಡಿಕೆ ಮಾಡಲ್ಪಟ್ಟಿತು. ಇಂಗ್ಲಿಷ್ ಅರಸನು ಕಾಲವಾದ ಮೇಲೆ ಆ ಯುದ್ಧವು ನಡೆದಾಗ್ಯೂ, ಆ ಒಡಂಬಡಿಕೆಗೆ ಅವನೇ ಕರ್ತನೂ ಆಧಾರವೂ ಆಗಿ ಇದ್ದನು. ಆ ಯುದ್ಧದ ಗುರಿ ಏನಂದರೆ, ಯೂರೋಪಿನಲ್ಲಿರುವ ಪ್ರತಿ ದೇಶಸ್ತರೂ ಇಷ್ಟಿಷ್ಟು ಸೈನ್ಯದ ಬಲವಿರ ಬೇಕು, ಅದಕ್ಕೆ ಮಿಂಚ ಕೂಡದು ಎಂದೂ, ಆ ಕಾಲದಲ್ಲಿ ಯಾವ ಶೀಮೆಯ ರಾಜುವೆಗಿಂತ ಸಂಖ್ಯೆಯಲ್ಲಿ ಅಧಿಕವಾಗಿದ್ದ ಫ್ರಾನ್ಸ್ ರಾಜುವೆಯು ಮಿಂಚಿರ ಕೂಡದೆಂದೂ, ದೃಢಪಡಿಸುವದೇ. ಇದಲ್ಲದೆ ಸ್ಪೇನ್ ಅರಸನು 1700ನೇ ವರುಷದಲ್ಲಿ ಮರಣ ಹೊಂದಿದನು. ಅವನು 14ನೇ ಲೂವಿಸನ ಪೌತ್ರನಾದ (Duke of Anjou) ಅಂಜೌ ಡ್ಯೂಕ್ ಪ್ರಭುವಿಗೆ ತನ್ನ ಧೊರೆತನವನ್ನು ಬರೆದು ಇಟ್ಟಿದ್ದರಿಂದ ವಿಸ್ತಾರವಾದ ಸ್ಪೇನ್ ಶೀಮೆಯೆಲ್ಲಾ ಫ್ರಾನ್ಸ್ ಅರಸನ ವಂಶದವರ ಬಾಧ್ಯತೆಗೆ ಶೇರಿ ಇತ್ತು. ಈ ಕಾರ್ಯದಿಂದ ಯೂರೋಪಿನ ಮಿಕ್ಕ ಶೀಮೆಗಳಿಗೆ ಉಂಟಾದ ಮೋಸವು ದೊಡ್ಡದಾಯಿತು. ಫ್ರಾನ್ಸ್ ಅರಸನ ಯೋಚನೆಗಳು ಸಹ ತಡೆಯಲ್ಪಡದೆ ಈಡೇರುವ ಕಾಲದಲ್ಲಿ ಇಂಗ್ಲಾಂದ್ ಶೀಮೆಯು ಹಾಗೆ ಬೇರೆ ಶೀಮೆಗಳು ನಷ್ಟ ಪಡಲಾರವು. ಅವನು ಸಹ ಜೇಮ್ಸ್ ಅರಸನು ಸತ್ತ ಕಾಲದಲ್ಲಿ ತಾನು ಮಾಡಿ ಕೊಟ್ಟಿದ್ದ (Ryswick) ರಿಸ್ವಿಕ್ ಒಡಂಬಡಿಕೆಯ ನಿಬಂಧನೆಗಳಿಗೆ ವಿರೋಧವಾಗಿ ಜೇಮ್ಸ್ ಅರಸನ ಬಾಲ್ಯ ಮಗನೇ ಇಂಗ್ಲಾಂದಿಗೆ ಅರಸನೆಂದು ಪ್ರಕಟಿಸಿ, ಇಂಗ್ಲಿಷಿನವರಿಗೆ ಮಟ್ಟಿಲ್ಲದ ಕೋಪವನ್ನು ಎಬ್ಬಿಸಿದನು. ಅದರಿಂದ ಲೂವಿಸನ ನಿರ್ಣಯಗಳನ್ನು ಅಳಿಸ ಒಂದು ಒಪ್ಪಂದ ಮಾಡಿ, ತನ್ನ ತರುವಾಯ ಕಿರೀಟಾಧಿಪತಿಯಾಗಿ ಬರುವದಕ್ಕೆ ಕಿರೀಟವನ್ನೂ ಮುದ್ರೆಯ ಕೋಲನ್ನೂ ಕೊಡುವದರ ಸಂಗಡ ಖಡ್ಗವನ್ನೂ ಕೈಯಲ್ಲಿ ಕೊಟ್ಟದ್ದು ನ್ಯಾಯವೇ ಎಂದು ತೋರುತ್ತದೆ.

# CHAPTER XX.

## WAR OF THE SPANISH SUCCESSION.

FROM A. D. 1702 TO A. D. 1727.

## 20 ಸಂಧಿ.

## ಸ್ಪೇನ್ ಸೀಮೆಯ ನಿಮಿತ್ತವಾದ ಯುದ್ಧವು.

ಕ್ರಿ. ಶ. 1702 ಮೊದಲು ಕ್ರಿ. ಶ. 1727 ವರೆಗೂ.

ಮುಖ್ಯ ತಾರೀಖುಗಳು: (Ann) ಆನ್ ರಾಣಿಯು ಸಿಂಹಾಸನಕ್ಕೆ ಬಂದದ್ದು ಕ್ರಿ. ಶ. 1702. ಇಂಗ್ಲಾಂಡೂ ಸ್ಕೊಟ್ಲಾಂಡೂ ಒಂಧಾದದ್ದು 1703. (George I) 1ನೇ ಜೋರ್ಜ್ ಅರಸನಾದದ್ದು 1714. ಅದೇ ಕಾಲದ ಇಂದ್ಯ ಚರಿತ್ರೆ: ಮೊಗಲು ಚಕ್ರವರ್ತಿಗಳು ಆಳಿದ್ದು. ಶ್ರೇಷ್ಠ ನಾಮಗಳು: (Addison) ಅದ್ದಿಸೊನ್ 1672—1719. (Steele) ಸ್ತೀಲ್ 1671—1729. (Bolingbroke) ಬೊಲಿಂಗ್ ಬ್ರೋಕ್ 1672—1751. (Pope) ಪಾಪು 1688—1744. (Defoe) ದಿಫೋ 1660—1731.

ಮೇರಿ ರಾಣಿಗೆ ಎಳೆಯವಳಾದ ಆನಳೆಂಬ ರಾಜಕನ್ನಿಕೆಯು ತನ್ನ ಚಾವನಿಗೆ ತರುವಾಯ ಇಂಗ್ಲಿಷ್ ಧೊರೆತನದ ಕಿರೀಟಾಧಿಪತಿಯಾದಳು. ಅವಳು ಇಂಪಾದ ನಡತೆ ಮರ್ಯಾದೆಗಳೂ, ಪ್ರೀತಿಯಾದ ಗುಣವೂ, ಪ್ರಜೆಗಳ ಮೇಲನ್ನು ಬಹಳವಾಗಿ ಅಪೇಕ್ಷಿಸುವ ಅಪೇಕ್ಷೆಯೂ ಉಳ್ಳ ಅರಸಿಯಾಗಿದ್ದಾಗ್ಯೂ, ಮನೋದೃಢವಿಲ್ಲದವಳಾದದರಿಂದ, ಅವಳಿಗೆ ಇಷ್ಟರು ಉಂಟಾಗಲು, ಅವಳು ಅವರ ಮಾತಿಗೆ ಸಮ್ಮತಿಸಿ ಆಡುವದಕ್ಕೆ ಸ್ಥಳವಾಯಿತು. ಅನೇಕ ವರುಷಗಳಾಗಿ ಅವಳ ದಯವನ್ನು ಅನುಭವಿಸುತ್ತಾ ಬಂದವಳಾದ (Marlborough) ಮಾರ್ಲ್‌ಬರೋ ಎಂಬುವ ಪ್ರಭುವಿನ ಹೆಂಡತಿಯೇ ಅವಳು ಪಟ್ಟಕ್ಕೆ ಬಂದಾಗ ಬಹು ಪ್ರಿಯವಾದ ಜತೆಯವಳಾಗಿದ್ದಳು.

(Whig) ವಿಗ್ (Tory) ತೋರಿ ಎಂಬ ಎರಡು ಕಕ್ಷಿಗಳವರೂ ಧೊರೆತನದ ಕಾಲವೆಲ್ಲಾ, ಅದೇ ಕೆಲಸವಾಗಿ ಹೋರಾಡಿದರು. ಅವಳ ಮಂತ್ರಾಲೋಚನೆಯನ್ನು ಮೊದಲಲ್ಲಿ (Godolphin) ಗೊದೊಲ್ಫಿನ್ ಎಂಬ ಪ್ರಭುವೂ, ಮಾರ್ಲ್ಬರೋ ಎಂಬ ಪ್ರಭುವೂ ತಲೆಯಾಗಿದ್ದು ನಡಿಸಿದರು. ಅವರು ಮೊದಲು ತೋರಿ ಕಕ್ಷಿಗೆ ಶೇರಿದವರಾಗಿದ್ದಾಗ್ಯೂ, ಯಥಾರ್ಥವಾಗಿ ವಿಗ್ ಕಕ್ಷಿಯವರಾಗಿದ್ದರು. ಅವರು ಆ ಅಧಿಕೃದಲ್ಲಿ ಅನೇಕ ವರುಷಗಳ ಮಟ್ಟಿಗೂ ಇದ್ದರು. ಕಡೆಯಲ್ಲಿ ದೇಶದ ಮೇಲನ್ನು ಹುಡುಕದೆ, ತಮ್ಮ ಕಕ್ಷಿಗಾರರ ಹೆಚ್ಚಳವನ್ನೇ ಹುಡುಕಿದ ಎದುರಿಗಳ ನಾಚಿಕೆಯಾದ ಹಗೆಯಿಂದ ಅವರು ಆ ಅಧೀನದಿಂದ ತಳ್ಳಲ್ಪಟ್ಟರು.

3ನೇ ಉಲ್ಲಿಯಮ್ ಅರಸನ ಕೋರಿಕೆಯ ಹಾಗೆಯೇ ಫ್ರಾನ್ಸ್ ಸ್ಪೇನ್ ಶೀಮೆಗಳ ಸಂಗಡ ಯುದ್ಧ ನಡಿಸುವ ಹಾಗೆ ರಾಣಿಯೂ ಅವಳ ಮಂತ್ರಿಗಳೂ ಶೀರ್ಮಾನಿಸಿದರು. ಇಂಗ್ಲಾಂಡಿಗೂ ಆಸ್ಟ್ರಿಯಾ ಹೊಲ್ಲಾಂಡ್ ಶೀಮೆಗಳಿಗೂ ಉಂಟಾದ ಮಹಾ ಒಪ್ಪಂದವು ಮುಗಿದು, ಲಂಡನ್, (Vienna) ವೀಯನ್ನ, (Hague) ಹೇಗ್ ಎಂಬ ಮೂರು ಶ್ರೇಷ್ಠ ಪಟ್ಟಣಗಳಲ್ಲಿಯೂ ಒಂದೇ ದಿನದಲ್ಲಿ ಯುದ್ಧದ ಪ್ರಕಟಣೆಯಾಯಿತು. ಹೊಲ್ಲಾಂಡಿನವರ ಸೈನ್ಯವನ್ನೂ ಇಂಗ್ಲಿಷಿನವರ ಸೈನ್ಯವನ್ನೂ ನಡಿಸ ಮಾರ್ಲ್ಬರೋ ಎಂಬುವ ಎರ್ಲ್ ಪ್ರಭುವು ದಳಕರ್ತನಾಗಿ ನೇಮಿಸಲ್ಪಟ್ಟನು. ಆ ಸೈನ್ಯಗಳಿಗೆ ಸಹಾಯವಾಗಿ ಬಂದ ಆಸ್ಟ್ರಿಯಾ ರಾಣುವೆಯನ್ನು ನಡಿಸಿದವನು (Prince Eugene) ಯೂಜೀನ್ ಎಂಬುವ ದೇಶಾಧಿಪತಿಯು. ಹೀಗಿರುವಲ್ಲಿ (Sir George Rooke) ಸರ್ ಜೋರ್ಜ್ ರೂಕ್ ಎಂಬವನು ನಡಿಸಿದ ಒಂದು ನಾವಿಕಸೈನ್ಯವು, (Cadiz) ಕಾಡೀಸ್ ಪಟ್ಟಣವನ್ನು ಹೊಡಿಯಲೂ, ಸ್ಪೇನ್ ಶೀಮೆಯ ಧೊರೆಗಳನ್ನು ಕಾವಲಿ ಮಾಡಲೂ ಹೋಯಿತು.

ಮಾರ್ಲ್ಬರೋ ಎಂಬುವ ಎರ್ಲ್ ಪ್ರಭುವು ಬಹಳವಾಗಿ ಹೊಗಳಲ್ಪಡ ತಕ್ಕವನು. ಎಲ್ಲಾ ಕಾವಲಿಗಿಂತ ತನ್ನನ್ನು ಕಾಯುವಿಕೆ ಮಹಾ ಅಪರೂಪವಾದದ್ದು; ಅವನಿಗೆ ಅಂಥಾ ಸ್ವಂತ ಕಾಯುವಿಕೆಯ ಸಹಿತವಾಗಿ ಸೂಕ್ಷ್ಮವಾದಂಥ ಚುರುಕಾದಂಥ ಬುದ್ಧಿಸಾಹಸವೂ ಉಂಟಾಗಿ

ದ್ದದರಿಂದ ಅವುಗಳಿಂದ ಅವನನ್ನು ಒಬ್ಬನು ಹೊರ್ತು ಇಂಗ್ಲಾಂದ್ ಶೀಮೆಯಲ್ಲಿ ಕಾಣಿಸ್ಪಿಟ್ಟ ದೊಡ್ಡ ದಳಕರ್ತನೆಂದು ಹೇಳ ಬಹುದು. ಅಪಾಯ ಬಂದಾಗ ಪದರದೆ ಶಾಂತವಾಗಿಯೂ ದೃಢವಾಗಿಯೂ ಇರುವದರಲ್ಲಿ ಅವನಿಗೆ ಸಮಾನವಾದವರಿಲ್ಲ. ಅವನು ಮಾತಿನಲ್ಲಿ ಇಂಪೂ, ದೃಢವೂ, ಯಾರನ್ನಾದರೂ ತನ್ನ ವಶ ಮಾಡಿ ಕೊಳ್ಳುವ ಬಲವೂ ಘನವೂ ಉಳ್ಳವನು. ಯೋಚನೆಯಲ್ಲಿ ಎಷ್ಟು ಧೈರ್ಯವೂ ಶೀಘ್ರವೂ ಉಳ್ಳವನಾಗಿದ್ದನೋ ಅಷ್ಟು ತ್ವರೆಯಾಗಿಯೇ ಅವುಗಳನ್ನು ಈಡೇರಿಸುವವನಾಗಿದ್ದನು. ಹಿಂದೆ ನಡೆದ ಯುದ್ಧದಲ್ಲಿ ಅವನೇ ತಲೆಯೂ ಮುಖ್ಯನೂ ಆಗಿದ್ದನು. ಅದರಲ್ಲಿ ತನ್ನ ಜತೆಗಾರರ ಮನಸ್ಸನ್ನು ತನ್ನ ಮನಸ್ಸಿನ ಹಾಗೆ ಆಗ ಮಾಡಿ ಕೊಂಡ ಸಾಮರ್ಥ್ಯದಲ್ಲಿಯೂ, ಶೌರ್ಯ ಪ್ರತಾಪವಾದ ಜಯಗಳನ್ನು ಹೊಂದಿ ಇಂಗ್ಲಿಷಿನವರ ಹೆಸರನ್ನೂ ಘನವನ್ನೂ ಕಾಪಾಡಿದ ಧೈರ್ಯದಲ್ಲಿಯೂ ವಿವೇಕದಲ್ಲಿಯೂ ಬಹು ಶ್ರೇಷ್ಠತ್ವ ಹೊಂದಿದವನು. ಆದಾಗ್ಯೂ ಮಾರ್ಲ್‌ಬರೋ ಏರ್ಲ್ ಪ್ರಭುವಿನ ಸದ್ಗುಣಗಳು ಎಷ್ಟು ಶ್ರೇಷ್ಠವಾದವುಗಳೋ ಅಷ್ಟಾಗಿ ಅವನ ಕೆಟ್ಟ ಗುಣಗಳು ಬಹಿರಂಗವಾಗಿದ್ದವು. ಏನಂದರೆ, ಅವನೊಳಗೆ ಅತ್ಯಾಶೆಯೂ ದ್ರೋಹಗುಣವೂ ನೆಲೆಗೊಂಡಿದ್ದವು. ಜೇಮ್ಸ್ ಅರಸನು ತನಗೆ ಬಾಲ್ಯದಲ್ಲಿ ದಯ ತೋರಿಸಿ ಇದ್ದಾಗ್ಯೂ ಅವನಿಗೆ ಆಪತ್ತು ಬಂದ ಸಮಯದಲ್ಲಿ ಅವನನ್ನು ಕೈ ಬಿಟ್ಟನು. ತರುವಾಯ ಉಲ್ಲಿಯಮ್ ಅರಸನು ಅವನಿಗೆ ಉದ್ಯೋಗ ಕೊಟ್ಟು ಇಟ್ಟು ಕೊಂಡಿದ್ದಾಗ, ಹಿರಿಗಿ ಜೇಮ್ಸ್ ಅರಸನಿಗೆ ರಹಸ್ಯವಾಗಿ ಕಾಗದಗಳನ್ನು ಬರೆಯುತ್ತಾ ಇದ್ದನು.

ಮಾರ್ಲ್‌ಬರೋ ಏರ್ಲ್ ಪ್ರಭು ಆರಂಭದಲ್ಲಿ ಸ್ಪೇನ್ ದೇಶದ (Netherlands) ನೆದರ್ಲಾಂದಿನಲ್ಲಿ ಯುದ್ಧ ಆರಂಭ ಮಾಡಿದನು. ಆ ಮೊದಲನೇ ಸಾಧನೆಗಳೆಲ್ಲಾ ಜಯವಾದವು. ಹೊಲ್ಲಾಂದಿನ ಮೇರೆಗಳಿಂದ ಫ್ರಾನ್ಸಿನವರನ್ನು ಒಡೆದು ಓಡಿಸಿ (Meuse) ಮ್ಯೂಸ್ ನದಿಯನ್ನು ಹಿರಿಗಿ ನಾವೆಗಳ ಸಂಚಾರಕ್ಕೆ ಬಿಡಿಸಿ ಬಿಟ್ಟು, (Liege) ಲೀಜ್ ಮುಂತಾದ ಮುಖ್ಯ ಪಟ್ಟಣಗಳನ್ನು ಕಟ್ಟಿ ಕೊಂಡು, ಫ್ರಾನ್ಸರು ಐಕ್ಯನಾಡುಗಳನ್ನು ಮುತ್ತಿಗೆ ಹಾಕುವದಕ್ಕಾಗದಂತೆ ಮಾಡಿದನು. ಅವುಗಳ ಉಭಿಕ್ಷ್ಯ

ಪಾರ್ಲಿಮೆಂತ್ ಸಂಘಗಳು ಅವನಿಗೆ ಸ್ತುತಿ ಸಲ್ಲಿಸಿ, ಡ್ಯೂಕ್ ಎಂಬುವ ಘನವನ್ನು ಕೊಟ್ಟರು. ಇದರ ಮಧ್ಯೆ ಸ್ಪೇನ್ ದೇಶಕ್ಕೆ ಹೋಗಿದ್ದ ದಂಡುಗಳು ಜಯ ಹೊಂದಲಿಲ್ಲ. (Cadiz) ಕಾದೀಸ್ ಪಟ್ಟದ ಮೇಲೆ ಯುದ್ಧ ಮಾಡಿದ್ದು ವ್ಯರ್ಥವಾಯಿತು. ನೆರೆಯ ಸಮುದ್ರವೆಲ್ಲಾ ಇಂಗ್ಲಿಷಿನವರ ವಶವಾಗಿದ್ದಾಗ್ಯೂ ಸ್ಪೇನ್ ದೇಶದ ರೇವುಗಳಲ್ಲಿ ಒಂದನ್ನಾದರೂ ಹಿಡಿಯ ಅವರು ಯತ್ನಯಿಸಲಿಲ್ಲ.

1704ನೇ ವರುಷದಲ್ಲಿ ನಡೆದ ಯುದ್ಧದಲ್ಲಿ ಮಾರ್ಲ್‌ಬರೋ ವಿರ್ಲ್ ಪ್ರಭುವು ತಿರಿಗಿ ನೆದರ್ಲಾಂದಿನಲ್ಲಿ ಯುದ್ಧ ಮಾಡಿದನು. ಫ್ರಾನ್ಸಿನವರು (Bavaria) ಬವೇರಿಯ ನಾಡಿನ ಅಧಿಪತಿಯ ಸಂಗಡ ಕಟ್ಟುಪಾಟು ಮಾಡಿ ಕೊಂಡು, ಜರ್ಮನಿ ಚಕ್ರವರ್ತಿ ಆ ದಿಕ್ಕಿನಲ್ಲಿರುವ ದೇಶದ ಮೇಲೆ ಹೋಗುತ್ತಾನೆಂದು ಕೇಳಿ, ನೆದರ್ಲಾಂದಿನಿಂದ ಬಹು ತ್ವರೆಯಾಗಿ ಪ್ರಯಾಣ ಮಾಡಿ, (Danube) ದಾನ್ಯೂಬ್ ನದಿಯ ದಡಕ್ಕೆ ಬಂದು ಆ ಸ್ಥಳದಲ್ಲಿ (Baden) ಬಾದನ್ ದೇಶದ ಪ್ರಭುವಾದ ಲೂವಿಸನೂ (Eugene) ಯೂಜಿನ್ ಎಂಬ ದೇಶಾಧಿಪತಿಯೂ ನಡಿಸಿದ ಆಸ್ತ್ರಿಯ ರಾಣುವೆಯನ್ನು ಶೇರಿ ಕೊಂಡು, (Blenheim) ಬ್ಲೆನ್‌ನೀಮ್ ಎಂಬುವ ಸ್ಥಳದಲ್ಲಿ ಫ್ರಾನ್ಸಿನವರ ಸೈನ್ಯವನ್ನೂ ಬವೇರಿಯವರ ಸೈನ್ಯವನ್ನೂ ಪೂರ್ಣವಾಗಿ ಸೋಲಿಸಿದನು. ಆ ಗ್ರಾಮವು ಫ್ರಾನ್ಸಿನವರ ರಾಣುವೆಗೆಲ್ಲಾ ಒಳ್ಳೇ ಆವರಣವಾದ ಸ್ಥಳವಾಗಿದ್ದದರಿಂದ ಅನೇಕ ಫ್ರಾನ್ಸರ ದಂಡುಗಳು ನಿಲ್ಲಿಸಲ್ಪಟ್ಟಿದ್ದವು. ಮೂರ್ಖವಾದ ಯುದ್ಧ ಉಂಟಾದ ತರುವಾಯ ಬವೇರಿಯರು ಹಿಂಜರಿದು ಹೋದರು. ಮೂರು ಸಾರಿ ಇಂಗ್ಲಿಷಿನವರು ಎದುರಿಸಿದಾಗ್ಯೂ ಕಾರ್ಯ ಕೈಗೂಡಲಿಲ್ಲ. ಆದಾಗ್ಯೂ ತರುವಾಯ ಫ್ರಾನ್ಸಿನವರಲ್ಲಿ ಮೂರು ಪಾಲು ಜನರು ಆ ಗ್ರಾಮದಲ್ಲಿ ಆಧಾರವಿಲ್ಲದೆ ಬಿಡಲ್ಪಟ್ಟದ್ದರಿಂದ, ಜಯಶೀಲರಾದ ಇಂಗ್ಲಿಷ್ ರಾಣುವೆಯವರು ಅವರನ್ನು ಸುತ್ತಿ ಕೊಂಡು ಅವರನ್ನು ಶೆರೆ ಹಿಡಿದರು. ಆ ಯುದ್ಧದಲ್ಲಿ ಉಂಟಾದ ಪ್ರಾಣನಷ್ಟ ಭಯಂಕರವಾದದ್ದು. ಆದಾಗ್ಯೂ ಅಪಜಯವು ಲೂವಿಸ್ ಪಕ್ಷವಾದದರಿಂದ, ಅವನ ತಾತ್ಪರ್ಯಗಳೆಲ್ಲಾ ನಾಶವಾಗುವದಕ್ಕೆ ಎದಿರುಕಕ್ಷಿಯಲ್ಲಿ ಅನುಕೂಲ ಉಂಟಾಯಿ

ತು. 13000ಕ್ಕೆ ಮೇಲ್ಪಟ್ಟ ಫ್ರಾನ್ಸರು ಶೆರೆಯವರಾದರು. 10000 ಮಂದಿ ಯುದ್ಧದಲ್ಲಿ ಬಿದ್ದರು. ದಾನ್ಯೂಬ್ ನದಿಯಲ್ಲಿ ಬಿದ್ದು ಈಜಿ ಕೊಂಡು ಥಡ ಶೇರುವದಕ್ಕಿಂತ ಮುಂಚೆಯೇ ಮರಣದ ಥಡ ಶೇರಿದವರು ಅನೇಕರು. ಸ್ಪೇನ್ ದೇಶವು ತನ್ನದೆಂದು ಹೇಳಿ ಕೊಂಡವನೂ ಅದರಲ್ಲಿ ಸಹಾಯಸೈನ್ಯಗಳಿಂದ ಕಾಯಲ್ಪಟ್ಟವನೂ ಆದ ಆಸ್ತ್ರಿಯ ಶೀಮೆಯ ಮುಖ್ಯ ದ್ಯೂಕ್ ಪ್ರಭುವಾದ ಚಾರ್ಲ್ಸ್ ಎಂಬವನು ಪೊರ್ತುಗಲ್ ಶೀಮೆಯಲ್ಲಿಂದ ಸ್ಪೇನ್ ದೇಶವನ್ನು ಮುತ್ತಿಗೆ ಹಾಕ ನೋಡಿದನು. ಆ ಕೆಲಸದಲ್ಲಿ ಇಂಗ್ಲಿಷಿನವರ ಒಂದು ನಾವಿಕದಂಡು ಸಹ ಅವನಿಗೆ ಸಹಾಯ ಮಾಡುವದಕ್ಕಿತ್ತು. ಆದಾಗ್ಯೂ ಅವನು ಜಯ ಹೊಂದಲಿಲ್ಲ. ಅವನು ಜಯ ಹೊಂದದೆ ಹೋದಾಗ್ಯೂ ಇಂಗ್ಲಿಷಿನವರಿಗೆ ಆ ಯುದ್ಧದ ಮೂಲಕವಾಗಿ ಬಂದ ಮಿರಾಶಿಗಳಲ್ಲಿ ಮಹಾ ಮುಖ್ಯವಾದ ಒಂದು ಮಿರಾಶಿಯನ್ನು ಹೊಂದಿದರು. (Sir George Rooke) ಸರ್ ಜೋರ್ಜ್ ರೂಕ್ ಎಂಬವನು ಮೆದಿತರೇನಿಯನ್ ಸಮುದ್ರದಲ್ಲಿ ಪ್ರವೇಶಿಸುವ ದಾರಿಯ ಅಂಚಿನಲ್ಲಿರುವ (Gibraltar) ಜಿಬ್ರಾಲ್ತರ್ ಎಂಬ ದುರ್ಗವನ್ನು ಹಿಡಿದನು. ಆ ದಿವಸಗಳಿಂದ ಇದು ವರೆಗೂ ಅದು ಇಂಗ್ಲಿಷಿನವರ ವಶದಲ್ಲಿಯೇ ಇರುತ್ತದೆ. ಮತ್ತು ಇಂಗ್ಲಾಂದ್ ಶೀಮೆಗೆ ಶೇರಿದ ಸಕಲ ನಾವೆಗಳ ರೇವುಗಳಲ್ಲಿಯೂ, ರಾಣುವೆಯ ಸ್ಥಳಗಳಲ್ಲಿಯೂ ಮಹಾ ಉಪಯೋಗವಾದದ್ದಾಗಿದೆ.

ಇಂಗ್ಲಾಂದಿನಲ್ಲಿಯೂ ಸ್ಕೊತ್ಲಾಂದಿನಲ್ಲಿಯೂ ಆ ಕಾಲದಲ್ಲಿ ಮಹಾ ಉಪಯೋಗವಾದ ಒಂದು ಕಾರ್ಯ ನಡಿಯಿತು. ಏನಂದರೆ, ಒಂದೇ ಧೊರೆತನದಲ್ಲಿದ್ದ ಆ ಎರಡು ಶೀಮೆಗಳೂ ಆ ಕಾಲದಲ್ಲಿ ಒಂದಾಗಿ ಜೋಡಿಸಲ್ಪಟ್ಟವು. ಆ ಪರ್ಯಂತರಕ್ಕೂ ಆ ಶೀಮೆಗಳಿಗೆ ಪ್ರತ್ಯೇಕ ಪ್ರತ್ಯೇಕವಾದ ಪಾರ್ಲಿಮೆಂತ್ ಸಂಘಗಳು ಇದ್ದದರಿಂದ ಉಭಯ ಶೀಮೆಗಳವರೂ ಬೇರೆ ಬೇರೆ ರಾಜ್ಯದವರ ಹಾಗೆಯೇ ಇದ್ದರು. ಆದಾಗ್ಯೂ ಆಗ ಉಂಟಾದ ಐಕ್ಯ ಏರ್ಪಾಟಿನಿಂದ ಆ ಎರಡು ದೇಶಗಳಿಗೂ ಒಂದೇ ಪಾರ್ಲಿಮೆಂತ್ ಎಂಬದಾಗಿಯೂ, ಅದರಿಂದ ಹದಿನಾರು ಮಂದಿ ಸ್ಕೋತ್ತರ ಪ್ರಭುಗಳೂ ಐವತ್ತೈದು ಮಂದಿ ಸ್ಕೋತ್ತರ ಜನಪಕ್ಷಿನಿ

ಧಿಸಂಘದವರೂ, ಇನ್ನು ಮೇಲೆ ಶೇರ ಬೇಕೆಂಬದಾಗಿಯೂ, ಹೀಗೆ ಐಕ್ಯವಾದ ರಾಜ್ಯಚಾರಕ್ಕೆ (Great Britain) ಮಹಾಬ್ರಿತನ್ ಎಂದು ಹೆಸರಿಡ ಬೇಕೆಂಬದಾಗಿಯೂ, ಅರಸುನೆಲೆಯ ಪಿರ್ಪಾಟಿನ ಪ್ರಕಾರ ಪ್ರೊತೆಸ್ತಾಂತ್ ಸಜೆಗೆ ಶೇರಿದ ಸ್ವತಂತ್ರನು ಯಾರೋ ಅವನೇ ಆಳ ಬೇಕೆಂಬದಾಗಿಯೂ, ನಿಬಂಧನೆ ಹುಟ್ಟಿತು.

ಯೂರೋಪು ಖಂಡದಲ್ಲಿ ನಡೆದ ಯುದ್ಧವು ಇನ್ನೂ ಮುಗಿಯಲಿಲ್ಲ. ಮಾರ್ಲ್‌ಬರೋ ಯಿರ್ಲ್ ಪ್ರಭುವು (Flanders) ಫ್ಲಾಂದರ್ಸ್ ಶೀಮೆಯಲ್ಲಿ (Ramillies) ರಾಮಿಲೀಸ್ ಊರಿನ ಬಳಿಯ ಮತ್ತೂ ಫ್ರಾನ್ಸರನ್ನು ಜಯಿಸಿದನು. ಅಲ್ಲಿ ಫ್ರಾನ್ಸ್ ದಳಕರ್ತನು ತನ್ನ ಎಡಗಡೆಯ ರಾಉವೆಯನ್ನು ಒಂದು ಹುದುವಿನ ನೆಲದ ಹಿಂದೆ ಇಟ್ಟರೆ, ಎದುರಿಗಳು ಬಂದು ತಮ್ಮನ್ನು ಹೊಡಿಯಲಾರರೆಂದು ಎಣಿಸಿ ಅಲ್ಲಿ ಇಟ್ಟಿದ್ದನು. ಹಾಗೆ ಕೂಡದೆ ಇದ್ದಾಗ್ಯೂ ಆಗ ಫ್ರಾನ್ಸರ ವಶವಾಗಿದ್ದ ರಾಮಿಲೀಸ್ ಗ್ರಾಮವನ್ನು ಮಾರ್ಲ್‌ಬರೋ ಎಂಬವನು ತನ್ನ ರಾಉವೆಯನ್ನೆಲ್ಲಾ ಕೂಡಿಸಿ ಕೊಂಡು ಹೊಡೆದು ಹಿಡಿದು ಕೊಂಡನು. ಮತ್ತು ಸಹಾಯಸೈನಿಕರಾದ ರಾಹುತರು ತಮ್ಮ ಶತ್ರುಗಳನ್ನು ಅನೇಕ ಮೈಲುಗಳ ದೂರ ಅಟ್ಟಿ ಕೊಂಡು ಹೋಗಿ, ದೊರಕಿದ ಸಕಲ ಫಿರಂಗಿ ಬಾತಿ ಮುಟ್ಟುಗಳನ್ನೆಲ್ಲಾ ಎತ್ತಿ ಕೊಂಡು ಬಂದರು.

ಅದೇ ಸಂವತ್ಸರದಲ್ಲಿ ಸ್ಪೇನ್ ಶೀಮೆಯನ್ನು ಪೂರ್ವ ಥಡದಲ್ಲಿಂದ ಮುತ್ತಿಗೆ ಹಾಕುವ ಉದ್ದಿಶ್ಯ ಹೋದ ಚಾರ್ಲ್ಸ್ ಎಂಬುವ ದೊಡ್ಡ ದ್ಯೂಕ್ ಪ್ರಭುವಿನ ಸಂಗಡ ಮೈತ್ರಿ ಹಿಡಿದವನೂ ಶುದ್ಧವೀರನೂ ಆಗಿದ್ದ (Earl of Peterborough) ಪೀತರ್‌ಬರೋ ಯಿರ್ಲ್ ಪ್ರಭುವೂ ಹೋದನು. ಹೋದಾಗ ಆ ಶೀಮೆಯಲ್ಲಿರುವ (Catalonia) ಕಾತಲೋನಿಯಾ ನಾಡಿನ ಮನುಷ್ಯರೂ ಅವನ ಪಕ್ಷವಾದರು. ಅದರ ಮೇಲೆ ಆ ಪ್ರಭುವಿಗೆ ಉಂಟಾದ ಶೀಘ್ರವಾದ ಜಯಗಳಿಂದ ಸ್ಪೇನ್ ದೇಶದವರು ಕಳವಳ ಪಟ್ಟು ತತ್ತಳಿಸಿದರು. ಆದಾಗ್ಯೂ ಅವನ ಜಯಪ್ರದವಾದ ಯುದ್ಧವು ಬಹಳ ದಿವಸ ಇರಲಿಲ್ಲ. ಯಾಕಂದರೆ, ತರುವಾಯ ಅವನ

ಉದ್ಯೋಗವು ಬೇರೊಬ್ಬನಿಗೆ ಕೊಡಲ್ಪಟ್ಟಿದ್ದರಲ್ಲಿ ಅವನಿಗೆ ಎಷ್ಟು ಜಯವಾಯಿತೋ ಅಷ್ಟು ಅಪಜಯವೂ ಅವನಿಗೆ ಉಂಟಾಯಿತು.

ಆ ಎರಡು ಸಂವತ್ಸರಗಳಲ್ಲಿಯೂ ಮಾರ್ಲ್‌ಬರೋ ಏರ್ಲ್ ಪ್ರಭುವು ತಿರಿಗಿ ಫ್ರಾನ್ಸರನ್ನು ಜಯಿಸಿದನು. (Oudenarde) ಊದನಾರ್ಡ್ ಊರಿನ ಯುದ್ಧದಿಂದಲೂ, (Malplaquet) ಮಾಲ್‌ಪ್ಲೆಕ್ವೆತ್ ಯುದ್ಧದಿಂದಲೂ, (Lisle) ಲೈಲ್ ಊರು ಹಿಡಿಯಲ್ಪಟ್ಟಿದ್ದರಿಂದಲೂ, ಫ್ಲಾಂಡರ್ಸ್ ನಾಡು ಪೂರ್ಣವಾಗಿ ಫ್ರಾನ್ಸರ ಅಧಿಕಾರದೊಳಗಿಂದ ಬಿಡಿಸಲ್ಪಟ್ಟಿತು. ಫ್ರಾನ್ಸಿನ ಉತ್ತರ ಮೇರೆಯಲ್ಲಿ ಅಷ್ಟು ಒಳ್ಳೇ ಕಾವಲು ಇಲ್ಲದಂತೆ ಹೊಡಿಯಲ್ಪಟ್ಟಿತು. ಮಾರ್ಲ್‌ಬರೋ ಎಂಬವನು ನೆನಸಿದ್ದು ಇಂಗ್ಲಾಂದಿನಲ್ಲಿದ್ದ ಶತ್ರುಗಳಿಂದ ಕೆಡಿಸಲ್ಪಡದೆ ಇದ್ದರೆ, ಈ ಯುದ್ಧವನ್ನು ಅವನು ಲೂವಿಸನ ಸ್ವಂತ ಶೀಮೆಯ ಮಟ್ಟಿಗೂ ನಡಿಸಿ ಮುಗಿಸುವನೆಂಬುವದಕ್ಕೆ ಸಂಶಯವಿಲ್ಲ.

ಆ ಪರ್ಯಂತರ ಇಂಗ್ಲಾಂದಿನಲ್ಲಿ (Whig) ವಿಗ್ ಕಕ್ಷಿಗೆ ಶೇರಿದ ಧೊರೆತನವೇ ಇತ್ತು. ಆ ಕಾಲದಲ್ಲಿ ಅದು (Tory) ತೋರಿ ಕಕ್ಷಿಯವರು ನಡಿಸಿದ ದ್ರೋಹಗಳಿಂದ ಕೆಡುವದಕ್ಕೆ ಹೇತುವೆಯಾಯಿತು. ತರುವಾಯ (Earl of Oxford) ಒಕ್ಸ್‌ಫೋರ್ಡ್ ಏರ್ಲ್ ಪ್ರಭುವಾದ (Harley) ಹಾರ್ಲಿ ಧೊರೆಯೂ (Bolingbroke) ಬೊಲಿನ್‌ಬ್ರೂಕ್ ಪ್ರಭುವಾದ (St. John) ಸೇಯಿಂತ್ ಜಾನ್ ಧೊರೆಯೂ ಆದ ಈ ಇಬ್ಬರೂ ಮುಂಚಿತಾಗಿ ಮಾರ್ಲ್‌ಬರೋ ಏರ್ಲ್ ಪ್ರಭುವೂ (Godolphin) ಗೊದೊಲ್ಫಿನ್ ಪ್ರಭುವೂ ಮುಖ್ಯವಾಗಿದ್ದ ಮಂತ್ರಿಸಭೆಗೆ ಶೇರಿ ಇದ್ದಾಗ್ಯೂ, ಮಹಾ ಪ್ರಬಲವೂ ಪ್ರಬಲದೊಡನೆ ಅಯೋಗ್ಯತೆಯೂ ಉಳ್ಳ ಮಂತ್ರಿಗಳಾಗಿದ್ದ ಅವರು ಈಗ ತಮ್ಮ ಮುಂಚಿನ ಸ್ನೇಹಿತರನ್ನು ಕೆಡಿಸುವದಕ್ಕೆ ದ್ರೋಹ ಮಾಡಿದರು. ಅಹಂಕಾರಗುಣವುಳ್ಳವನಾದ ಮಾರ್ಲ್‌ಬರೋವಿನ ಹೆಂಡತಿಯನ್ನು ಸಹಿಸ ಕೂಡದೆ, ರಾಣಿಯೂ, ಅವಳ ಮೂಲಕವಾಗಿ ತನಗೆ ಪರಿಚಿತಿ ಮಾಡಲ್ಪಟ್ಟಿದ್ದ (Masham) ಮಾಷಾಮ್ ಧೊರೆಸಾನಿಯನ್ನು ತನ್ನ ದಯೆಗೂ ನಂಬಿಕೆಗೂ ಪಾತ್ರಳಾದ ಜತೆಯವಳಾಗ ಮಾಡಿ ಕೊಂಡಳು. ಮಾಷಾಮ್ ಧೊರೆಸಾನಿಯು ಸಹ ತನ್ನಿಂದ-

ಲಾಗುವಷ್ಟು ಹಾರ್ಲಿ ಎಂಬವನಿಗೆ ಸಹಾಯ ಮಾಡಿ, ತೋರಿಗಳ ಕ್ಷವನ್ನು ಸ್ಥಾಪಿಸುವ ಉದ್ದಿಶ್ಯ, ರಾಣಿಗಿದ್ದ ಅಪೇಕ್ಷೆಯನ್ನು ತೋರಿ ಬೋಧನೆ ಮಾಡಿದಳು. ಸಮಸ್ತ ಜನರ ಇಷ್ಟವೂ ಆ ಕಕ್ಷಿಯ ಮೇ ಯೇ ಇತ್ತು. ಇದಕ್ಕೆ ಒಂದು ವಿನೋದವಾದ ದೃಷ್ಟಾಂತ ಉಂಟು, ಏನ ದರೆ, ಸತ್ಯವೇದಶಾಸ್ತ್ರಿಯಾದ (Dr. Sacheverell) ಸಾಚಿವೆರೆಲ್ ಎ ಬ ಬಹು ಮಾತುಬರಿಯಲ್ಲಿದ ಒಬ್ಬ ಗುರುವು ಒಂದು ದಿನ ಪ್ರಸಂ ದಲ್ಲಿ ಧೊರೆತನದಲ್ಲಿರುವ ಚೇದಗಳಿಗೆ ವಿರೋಧವಾಗಿಯೂ, ಉಲ್ಲಿಯ ಮ್ ಅರಸನಿಗೆ ವಿರೋಧವಾಗಿಯೂ ಮಾತಾಡಿ, ಆ ಕಾಲದ ಮಂತ್ರಿ ಚೆಗಳ ಕೃತ್ಯಗಳನ್ನು ದೂಷಿಸಿದನು. ಆ ಸಾಚಿವೆರೆಲ್ ಎಂಬವನ ಪಕ್ಷ ಲ್ಲಿ ನಾಡಿನವರೂ ಗುರುಗಳಲ್ಲಿ ಅನೇಕರೂ ಇರಲಾಗಿ, ಯೋಚನೆ ಇ ದೆ ಅವನನ್ನು ಗೊದೊಲ್ಫಿನ್ ಪ್ರಭುವು ವಿಚಾರಣೆಗೆ ತಂದನು. ಪ್ರಭುಗ ಸಂಘದವರ ಮುಂದೆ ಅವನು ವಿಚಾರಣೆ ಮಾಡಲ್ಪಟ್ಟದ್ದರಲ್ಲಿ ಕಲಹಗಾ ರನೆಂದು ತೀರ್ಪು ಹೊಂದಿದರೂ, ಅವನಿಗೆ ನೇಮಿಸಿದ ಅಪರಾಧವು ವ ಹಾ ಅಲ್ಪವಾಗಿದ್ದದರಿಂದ ಅದು ತಮ್ಮ ಪಕ್ಷದಲ್ಲಿ ಜಯವೇ ಎಂದು ತೊ ರಿ ಕಕ್ಷಿಯವರು ಸಂತೋಷ ಪಟ್ಟರು.

ಇದಕ್ಕೆ ಕೆಲವು ದಿವಸಗಳ ತರುವಾಯ ಗೊದೊಲ್ಫಿನ್ ಪ್ರಭುವಿ ಮಂತ್ರಿತನವು ಸಡ್ಲವಾಯಿತು. ಮಾರ್ಲ್‌ಬರೋ ಎರ್ಲ್ ಪ್ರಭುವು ಮ ತ್ತೂ ಫ್ರಾನ್ಸರನ್ನು ಜಯಿಸಿ ಪ್ರಬಲವಾಗಿದ್ದವನು ಫಕ್ಕನೆ ಉದ್ಯೋ ದಿಂದ ತಳ್ಳಲ್ಪಟ್ಟನು. ಅವನು ಹಿಂತಿರುಗಿ ಬರುವಾಗ್ಯೆ ಇಂಗ್ಲಾಂದಿನ ಜ ನರು ಕೊಂಚವಾದರೂ ಕೃತಜ್ಞತೆಯೂ ವಿಶ್ವಾಸವೂ ಇಲ್ಲದೆ ಅವನನ್ನು ಅಲಕ್ಷ್ಯವಾಗಿ ನಡಿಸಿದ್ದರಿಂದ (Antwerp) ಆಂತ್ವೆರ್ಪ್ ಊರಿಗೆ ಹೋ ಗಿ ಅನೇಕ ತಿಂಗಳು ಅಲ್ಲಿ ಪ್ರತ್ಯೇಕವಾಗಿದ್ದನು.

ನೂತನವಾಗಿ ಉಂಟಾದ ಮಂತ್ರಾಲೋಚನೆಯಲ್ಲಿ ಫ್ರಾನ್ಸ್ ಶೀ ಮೆಯ ಸಂಗಡ ಸಮಾಧಾನ ಮಾಡಿ ಕೊಳ್ಳ ಮೊದಲು ಮೊದಲು ಯೋ ಚನೆ ಮಾಡಿದರು. ಬಹು ತರ್ಕಗಳೂ ಕುತರ್ಕಗಳೂ ಉಂಟಾದ ತರು ವಾಯ ಕಡೆಯಲ್ಲಿ ಹೊಲ್ಲಾಂದಿನಲ್ಲಿರುವ (Utrecht) ಯೂತ್ರೆಕ್ತಿನಲ್ಲಿ ಸಮಾಧಾನ ಉಂಟಾಯಿತು. ಈ ಸಮಾಧಾನನಿಬಂಧನೆಗಳು ಮುಂತೆ

ಫ್ರಾನ್ಸ್ ಅರಸನು ತಾನಾಗಿ ಅಪೇಕ್ಷಿಸಿದ್ದವುಗಳಿಗಿಂತ ಅವನಿಗೆ ಅಧಿಕ ಅನುಕೂಲವಾಗಿದ್ದದರಿಂದ, ಮಧ್ಯೆ ನಿಂತು ಈ ಒಡಂಬಡಿಕೆಯನ್ನು ಮುಗಿಸಿದವರನ್ನು ಚರಿತ್ರೆಗಾರರು ಯಾವಾಗಲೂ ತಪ್ಪು ಹೊರಿಸಿ ಮಾತಾಡುವದುಂಟು. ಮತ್ತು ಅವು ಸಹಾಯನಾಡಿನವರಿಗೆ ಅನುಕೂಲವಿಲ್ಲದೆ ಇದ್ದವು. ಆದದರಿಂದ ಆ ನಿಬಂಧನೆಗಳು ಕಕ್ಷಿವೈರಾಗ್ಯದಿಂದ ಆದವುಗಳೆಂದು ಸ್ಪಷ್ಟವಾಗಿ ತೋರುತ್ತದೆ. ಯಾವ ತಾತ್ಪರ್ಯದಿಂದ ಯುದ್ಧವು ನಡಿಸಲ್ಪಟ್ಟಿತೋ ಆ ತಾತ್ಪರ್ಯವು ಕೆಟ್ಟು ಹೋಯಿತು. ಸ್ಪೇನ್ ದೇಶದ ಅರಸುತನವು ಇನ್ನೂ ಫ್ರಾನ್ಸ್ ಶೀಮೆಯ ರಾಜವಂಶಕ್ಕೆ ಸ್ವಂತವಾಗಿತ್ತು. ಆದಾಗ್ಯೂ ಎರಡು ಶೀಮೆಗಳನ್ನೂ ಒಬ್ಬನೇ ಅರಸನು ಆಳುವದು ಕೂಡದೆಂದು ಆ ನಿಬಂಧನೆಗಳಿಂದ ತಡೆಯಲ್ಪಟ್ಟಿತ್ತು.

(Bolingbroke) ಬೊಲಿನ್‌ಬ್ರೂಕ್ ಪ್ರಭುವು ಮುಖ್ಯಸ್ಥನಾಗಿದ್ದು ಈಡೇರಿಸಿದ (Utrecht) ಯೂತ್ರೆಕ್ತ್ ಸಮಾಧಾನವೊಡಂಬಡಿಕೆಯ ತರುವಾಯ ರಾಜಪಟ್ಟದ ವರಿಶೆಯನ್ನು ಕುರಿತು ನಾಡಿನವರಲ್ಲಿ ಯೋಚನೆ ಉಂಟಾಯಿತು; ಏನಂದರೆ, ಆನ್ ಎಂಬುವ ರಾಣಿಯ ಶರೀರ ಸೌಖ್ಯವು ಕಡಿಮೆಯಾಯಿತು. ಅವಳಿಗೆ ಪುತ್ರಸಂತಾನವು ಆಗಲಿಲ್ಲ. ಅವಳ ಆಧಿಕ್ಯವನ್ನೂ ಕಿರೀಟವನ್ನೂ ಹೊಂದುವದಕ್ಕೆ ಯಾರನ್ನಾದರೂ ಆರಿಸಿಕೊಳ್ಳ ಬೇಕಾದ ಅವಶ್ಯ ಉಂಟಾಯಿತು. ಅವಳ ತರುವಾಯ ಧೊರೆತನಕ್ಕೆ (Hanover) ಹಾನೋವರ್ ನಾಡಿನ ಅಧಿಪತಿಯೇ ಬಾಧ್ಯಸ್ಥನೆಂದು ಪಾರ್ಲಿಮೆಂಟಿನವರಿಂದ ನಿರ್ಣಯಿಸಲ್ಪಟ್ಟಿತು. ಆದಾಗ್ಯೂ ಆ ರಂಚದಲ್ಲಿ ಇದ್ದದಕ್ಕಿಂತ ಯಾಕೋಬಿಯರು ಸಂಖ್ಯೆಯಲ್ಲಿಯೂ ಮಾತುಬರಿಯಲ್ಲಿಯೂ ಅಧಿಕವಾಗಿದ್ದರು. ರಾಣಿಯ ಮಂತ್ರಿಗಳಲ್ಲಿ ಕೆಲವರೂ ಬೊಲಿನ್‌ಬ್ರೂಕ್ ಪ್ರಭುವೂ ಅಂತರ್ಯಕ್ಕೆ ಯಾಕೋಬಿಯರಾಗಿದ್ದರು. ಅವರು ತಮ್ಮ ತಾತ್ಪರ್ಯವನ್ನು ಈಡೇರಿಸ ಒಳ್ಳೇ ಸಮಯ ಯಾವಾಗ ಸಿದ್ಧಿಸುವದೋ ಎಂದು ಒಂದು ದೊಡ್ಡ ಕಕ್ಷಿಯು ಶೇರಿ ಸಿದ್ಧವಾಗಿದ್ದರು. ರಾಣಿ ಸಹ ತನ್ನ ತರುವಾಯ ತನ್ನ ಸಹೋದರನು ಧೊರೆತನ ಹೊಂದುವ ವಿಷಯದಲ್ಲಿ ಅಷ್ಟು ಅಸಮ್ಮತವನ್ನು ತೋರಿಸಿದವಳಲ್ಲವೆಂದು ಹೇಳುತ್ತಾರೆ. ಆದಾಗ್ಯೂ ಯಾಕೋಬಿಯ ಕಕ್ಷಿಯವರು ಯಾಧ್ಯ

ಯೋಚನೆಯುಳ್ಳವರಾಗಿದ್ದರೂ, ಮುಕ್ಕಾಲುವಾಶಿ ಪ್ರಜೆಗಳು ಪ್ರೊ ಸ್ತಾಂತು ಸಭೆಗೆ ಶೇರಿದ ಅರಸನೇ ಬೇಕು ಎಂದು ಅಪೇಕ್ಷಿಸಿ ಇದ್ದರು ಈ ವಿಷಯದ ಮೂಲಕವಾಗಿ ಮಂತ್ರಿಸಭೆಯಲ್ಲಿ ಸಹ ಭೇದ ಉಂಟಾ ಯಿತು. ಒಕ್ಸ್‌ಫೋರ್ಡ್ ಏರ್ಲ್ ಪ್ರಭುವೂ ಬೋಲಿನ್‌ಬ್ರೋಕನೂ ಈ ಷಯವನ್ನು ಕುರಿತು ಮುಖಾಮುಖವಾಗಿ ವಾದಿಸಿದರು. ರಾಣಿಯು ಹ ಒಕ್‌ಫೋರ್ಡ್ ಏರ್ಲ್ ಪ್ರಭುವನ್ನು ಅವನ ಅಂತಸ್ತಿನಿಂದ ತಳ್ಳಿ ಬಿ ಳು. ಮತ್ತು ಬೋಲಿನ್‌ಬ್ರೋಕನಾದರೂ ಅವನ ಕಕ್ಷಿಯವರಾದರೂ ಎ ಥಾ ಅಭಿಪ್ರಾಯಗಳುಳ್ಳವರಾಗಿದ್ದಾಗ್ಯೂ, ಅವುಗಳೆಲ್ಲಾ (Whig) ವಿಗ್ ಕಕ್ಷಿಯವರ ಶೀಘ್ರ ಸಾಮರ್ಥ್ಯದಿಂದ ನಿರ್ಮೂಲವಾದವು. ಅವರು ಮ ಡಿದ ಉಪಾಯಗಳೆಲ್ಲಾ ಬಹು ವಿವೇಕವಾದವುಗಳು. ರಾಣಿಗೆ ಮ ಣ ಸಮೀಪಿಸಿದ್ದ ಕಾಲದಲ್ಲಿ ಆ ಕಕ್ಷಿಯಲ್ಲಿ ಮಹಾ ಪ್ರಬಲವಾಗಿದ್ದ ಬ್ಬರು ಈ ಆಪತ್ತಿನ ಕಾಲದಲ್ಲಿ ಅತಿ ವಿವೇಕದಿಂದ ಕಾರ್ಯಗಳನ್ನು ನ ಸ ತಕ್ಕ ಸಾಮರ್ಥ್ಯನು ಇವನೇ ಎಂದು (Duke of Shrewsbury ಷ್ರೂಸ್ಬರಿ ಡ್ಯೂಕ್ ಪ್ರಭುವನ್ನು ಕರತಂದು ಬಿಟ್ಟರು. ಮುಂಚಿನ ಮ ತ್ರಾಲೋಚನೆಯು ಸಹ ಸಂಗಡಲೇ ತಳ್ಳಲ್ಪಟ್ಟಿತು. ಇನ್ನು ಮೇಲೆ ಧೊ ರೆತನದ ಅಧಿಕಾರವು ವಿಗ್ ಕಕ್ಷಿಯವರದಾಗಿದ್ದದರಿಂದ ಹಾನೋವರ್ ನ ಡಿನ ಅಧಿಪತಿಯನ್ನು ಇಂಗ್ಲಾಂದ್ ಶೀಮೆಗೆ ಕರೇ ಕಳುಹಿಂಸ ಬೇಕೆಂಬ ವರ ಅಭಿಪ್ರಾಯವು ಸಿದ್ಧಿಸಿತು. ತರುವಾಯ ಆಗುವ ಧೊರೆತನವು ಪ್ರೊತೆಸ್ತಾಂತ್ ಸಭೆಗೆ ಶೇರಿತು.

ಆನ್ ಎಂಬ ರಾಣಿಯು ಮೃತವಾದ ಎರಡು ಮೂರು ವಾರ ಳಲ್ಲಿ ಹೊಸ ಅರಸನು ಇಂಗ್ಲಾಂಡಿಗೆ ಬಂದು ಶೇರಿದನು. ಅವನ ವ ಡಿಕೆಯಾದ ಆಚಾರಗಳೆಲ್ಲಾ ಅವನ ಪ್ರಜೆಗಳಿಗೆ ಇಂಪಾದವುಗಳಲ್ಲ. ಇ ಗ್ಲಿಷ್ ಭಾಷೆಯನ್ನು ಮಾತನಾಡುವದಕ್ಕೆ ಶುದ್ಧವಾಗಿ ತಿಳಿಯದು. ಅ ನು ಸಹ ತನ್ನ ಜರ್ಮನಿ ಶೀಮೆಯ ಧೊರೆತನವನ್ನು ಪ್ರೀತಿ ಮಾಡಿದನೆ ಹೊರ್ತು, ಹೊಸದಾಗಿ ಬಂದ ಧೊರೆತನವನ್ನು ಪ್ರೀತಿ ಮಾಡಿದವನಲ್ಲ ಅವನಿಗೆ ಒಳ್ಳೇ ಸಾಮರ್ಥ್ಯವಿತ್ತು; ಆದಾಗ್ಯೂ ವಿದ್ಯಾಸಂಪತ್ತೂ ಇಲ್ಲ ಬುದ್ಧಿ ಚುರುಕೂ ಇಲ್ಲ. ಅವನು ಒಂದು ಕಾಲಕ್ಕೂ ಪ್ರಜೆಗಳಿಂದ ಹೊ

ಗಳಿಕೆ ಮೆಚ್ಚಿಕೆ ಹೊಂದಿದವನಲ್ಲ. ಅವನು ಜರ್ಮನಿ ಭಾಷೆಯನ್ನು ಮಾತಾಡಿದನು. ಅವನ ನಡತೆಯೂ ಬಳಿಕೆಗಳೂ ಎಲ್ಲಾ ಜರ್ಮನಿ ದೇಶಕ್ಕೆ ತಕ್ಕವುಗಳು.

ಈ ಧೊರೆತನದಲ್ಲಿ ಮೊದಲು ನಡೆದ ಮುಖ್ಯವಾದ ವರ್ತಮಾನವು ಎರಡನೇ ಜೇಮ್ಸನ ಮಗನಿಗೆಂದು ಉಂಟಾದ ಒಂದು ಕಲಹವೇ. ದಕ್ಷಿಣಕ್ಕಿಂತ ಉತ್ತರ ಕಡೆ ಯಾಕೋಬಿಯರಿಗೆ ಅಧಿಕ ಬಲವಿದ್ದದರಿಂದ ಆ ದಿಕ್ಕಿನಲ್ಲಿಯೇ ಅದು ಉಂಟಾಯಿತು. (Earl of Mar) ಮಾರ್ ಎಂಬುವ ಏರ್ಲ್ ಪ್ರಭುವು ಬೇಟೆಗೆ ಹೋಗುತ್ತೇನೆಂದು ನೆವನು ಹೇಳಿ, ಸ್ಕೊತ್ಲಾಂಡ್ ಶೀಮೆಯಲ್ಲಿರುವ ಗುಡ್ಡದ ದೇಶದ ಅನೇಕ ಮುಖ್ಯಸ್ಥರನ್ನು ಯುದ್ಧಸಂಘವಾಗಿ ಕರೇ ಕಳುಹಿಸಿ (Braemar) ಬ್ರೀಮಾರ್ ಊರಿನಲ್ಲಿ ಪ್ರಶಿಧ್ವಜವನ್ನು ನಾಟಿದನು. ಅದೇ ಕಾಲದಲ್ಲಿ ನೊರ್ತಂಬರ್ಲಾಂದಿನಲ್ಲಿಯೂ ಸ್ಕೊತ್ಲಾಂದಿನ ದಕ್ಷಿಣ ಕಡೆಯಲ್ಲಿಯೂ ಒಂದು ಕಲಹ ನಡೆಯಿತು. ಆ ಸ್ಥಳದಲ್ಲಿದ್ದ ಯಾಕೋಬಿಯರಿಗೆ (Forster) ಫೋರ್ಸ್ಟರ್ ಎಂಬ ಒಬ್ಬ ಪ್ರೊತೆಸ್ತಾಂತ್ ಸಭೆಯ ಧೊರೆಯು ಶ್ರೇಷ್ಠನಾಗಿ ನೇಮಿಸಲ್ಪಟ್ಟನು. ಅವನನ್ನು (Praeston) ಪ್ರೆಸ್ತೊನ್ ಊರಿನಲ್ಲಿ ಅರಸನ ದಂಡುಗಳು ಬಂದು ತಗಿಲಿದರು. ಅವನು ತಂಗಿದ್ದ ಪಟ್ಣವನ್ನು ಬಂದು ಸುತ್ತಿ ಕೊಂಡರು. ಅವನನ್ನೂ ಅವನ ಮನುಷ್ಯರಲ್ಲಿ ಅನೇಕರನ್ನೂ ಶೆರೆ ಹಿಡಿದರು. ಇದಲ್ಲದೆ ಮಾರ್ಲ್‌ಬರೋ ಏರ್ಲ್ ಪ್ರಭುವು ಸಹ ಆತುರವಾಗಿ ಕೂಡಿಸಿದ್ದ ಸೈನ್ಯವನ್ನು (Sheriffmuir) ಶೆರಿಫ್‌ಮ್ಯೂರಿನಲ್ಲಿ (Duke of Argyle) ಆರ್ಗೈಲ್ ಡ್ಯೂಕ್ ಪ್ರಭುವು ಎದುರಿಸಿ ಯುದ್ಧ ಮಾಡಿದನು. ಒಬ್ಬೊಬ್ಬರ ರಾಣುವೆಯಲ್ಲಿಯೂ ನಿಂತ ಎಡಸಾಲುಗಳು ತಮ್ಮ ತಮ್ಮ ಎದುರಿಗಳಿಂದ ಜಯಿಸಲ್ಪಟ್ಟವು. ಇನ್ನು ಅರಸನ ರಾಣುವೆಯಲ್ಲಿ ಉಳಿದಿದ್ದ ದಂಡುಗಳು ಸ್ವಲ್ಪವಾದದರಿಂದ ಅವುಗಳನ್ನು ಜಯಿಸುವದು ಲೇಸಾದ ಕಾರ್ಯವಾಗಿದ್ದಾಗ್ಯೂ, ಯಾಕೋಬಿಯ ರಾಣುವೆಯ ಶ್ರೇಷ್ಠನ ಅಜಾಗ್ರತೆಯಿಂದ ಹಾಗೆ ಆಗುವದಕ್ಕಿಲ್ಲದೆ ಹೋಯಿತು. ಬೆಟ್ಟದ ಶೀಮೆಯವರು ಶೌರ್ಯವಾಗಿ ಯುದ್ಧ ಮಾಡಿದರು. ಆದಾಗ್ಯೂ ಅವರಿಗೆ ತಲೆಯಾದವನು ಹೇಡಿಯೂ ಸಾಮರ್ಥ್ಯವಿಲ್ಲದ

ವನೂ ಆಗಿದ್ದನು. ಉಭಯ ಸೈನ್ಯಗಳಲ್ಲಿಯೂ ಕೆಲ ಕೆಲವು ರಾಉವ
ವರು ಓಡಿ ಹೋದರು. ಅದರಿಂದ ಜಯವು ತಮ್ಮದೇ ಎಂದು ಉ
ಯತ್ರರೂ ಹೇಳಿ ಕೊಂಡರು. ಈ ಕಲಹಗಳನ್ನು ಅನುಸರಿಸಿ ಇನ್ನು
ರೆ ಯುದ್ಧಗಳು ನಡಿಯಲಿಲ್ಲ. ಈ ಪ್ರಕಾರ ಇಂಗ್ಲಿಷ್ ರಾಜ್ಯಚಾ
ಕಿರೀಟವು ತನ್ನದೆಂದು ಹೇಳಿದ ಉದ್ದಿಶ್ಯ ಎರಡನೇ ಜೇಮ್ಸ್ ಅರಸನ
ಗನನ್ನು (Pretender) ವಂಚಕನೆಂದು ವಾಡಿಕೆಯಾಗಿ ಹೇಳುವದುಂ
ಈ ವಂಚಕನು ಸಹ ಸ್ಕೊತ್ಲಾಂದಿಗೆ ಹೋಗಿ ಸ್ವಲ್ಪ ಕಾಲ ಅಲ್ಲಿ
ದ್ದನು. ಆದಾಗ್ಯೂ ಅವನ ನಡತೆಗಳು ಮೊದಲನೇ ಜೋರ್ಜ್ ಅರ
ನಡತೆಗಳಿಗಿಂತ ಅಧಿಕವಾಗಿ ಪ್ರಜೆಗಳಿಂದ ಪ್ರೀತಿ ಮಾಡಲ್ಪಡದವುಗಳ
ದ್ದವು. ಹ್ಯಾಗಂದರೆ, ಅವನು ಮೌನವೂ ಗಂಭೀರವೂ ಉಳ್ಳವ
ಅವನು ಬಾಯಿ ತೆರದರೆ ತನಗಾದ ಅನ್ಯಾಯವನ್ನು ಕುರಿತು ಮಾ
ಡುವನೇ ಹೊರ್ತು ಬೇರೊಂದನ್ನು ಮಾತಾಡಲಿಲ್ಲ. ತನ್ನನ್ನು ಸೇ
ವರಿಗಾದರೂ ಬಹಳ ಸಂತೋಷ ಪಡಿಸಿದ್ದಿಲ್ಲ. ತನ್ನ ನಿಮಿತ್ತವಾಗಿಂ
ಉಂಟಾದ ಆ ಯುದ್ಧವಿಷಯದಲ್ಲಿಯೂ ಹಿಂಚಿತವಿಲ್ಲದೆ ಇದ್ದನು.
ವನ ಪಕ್ಷವಾಗಿ ಮಾಡಿದ ಯುದ್ಧವು ಸಾಮರ್ಥ್ಯರಿಂದ ಮಾಡಲ್ಪಡಲ
ಆದದರಿಂದ ಅದೆಲ್ಲಾ ಅನರ್ಥವಾಯಿತು. ಈ ಕಲಾಪನೆಯ ನಿಮಿ
ಕೆಲವರು ಮಾತ್ರ ಕೊಲೆ ಮಾಡಲ್ಪಟ್ಟರು. ಉತ್ತರ ಇಂಗ್ಲಾಂದಿನ
ಬಾಳಿದ ಬಾಲ್ಯ ಧೊರೆಮಗನಾದ (Derwentwater) ದೆರ್ವೆನ್‍ವಾ
ಎಂಬ ಏರ್ಲ್ ಪ್ರಭುವೇ ಹಾಗೆ ಕೊಲೆ ಮಾಡಲ್ಪಟ್ಟವರಲ್ಲಿ ಅಧಿಕ
ಬಲವಾದವನು. (Nithisdale) ನಿಥ್ಥಿಸ್‍ದೇಲ್ ಪ್ರಭುವಾದವನು
ಕಲಹಗಾರನೆಂದು ಶೀರ್ಪು ಹೊಂದಿ ಶೆರೆಮನೆಯಲ್ಲಿ ಮುಚ್ಚಲ್ಪಟ್ಟಿ
ವಾಗ, ಅವನ ಪ್ರಾಣನಾಯಕಿಯಾದವಳು ಹೋಗಿ ಅವನಿಗೆ ಸ್ತ್ರೀವೆ
ಹಾಕಿ ಕರಕೊಂಡು ಹೋಗಿ ಬಿಟ್ಟಳು.

ಆ ಕಾಲದಲ್ಲಿ ಪಾರ್ಲಿಮೆಂಟಿನವರು ಇಷ್ಟು ಕಾಲ ನೆಲೆಯಾ
ಬೇಕೆಂದು ಮಾಡಲ್ಪಟ್ಟಿದ್ದ ಪ್ರಮಾಣದಲ್ಲಿ ಮಂತ್ರಿಸಭೆಯವರು ಒಂ
ವ್ಯತ್ಯಾಸ ಮಾಡಿದರು. ಇಪ್ಪತ್ತು ವರುಷಗಳಿಗೆ ಮುಂಚೆ, ಮೂರು
ರುಷಕ್ಕೆ ಒಂದು ಸಾರಿ ಹೊಸದಾಗಿ ಪಾರ್ಲಿಮೆಂಟಿನವರು ಸಂಘವು ಕೂ

ಬರ ಬೇಕೆಂಬ ಮೂರು ವರುಷದ ಏರ್ಪಾಟು ಮಾಡಲ್ಪಟ್ಟಿತು. ಆದಾಗ್ಯೂ ನಾನಾ ಪಟ್ಣಗಳೂ ತಮ್ಮ ತಮ್ಮ ಅಪೇಕ್ಷೆಯ ಪ್ರಕಾರ ತಮ್ಮ ತಮ್ಮ ಪ್ರತಿನಿಧಿಗಳನ್ನು ಬದಲಾಯಿಸಿ ಕೊಳ್ಳುವದಕ್ಕೆ ತಕ್ಕ ಸಮಯ ಉಂಟಾಗಿರುವಂತೆ ಪಾರ್ಲಿಮೆಂಟಿನವರು ಏಳು ವರುಷಕ್ಕೊಂದು ಸಾರಿ ಕೂಡುವದು ಬಹಳ ಮೇಲೆಂದು ನಿಧಾನಿಸಲ್ಪಟ್ಟಿತು. ತತ್ಕಾಲದಲ್ಲಿದ್ದ ಪಾರ್ಲಿಮೆಂಟಿನವರಿಗೂ ಮೂರು ವರುಷವಾಗಿತ್ತು. ಕಲಹವು ಇನ್ನೂ ಅಣಗದೆ ಇರುವಾಗ ಆ ಪಾರ್ಲಿಮೆಂಟನ್ನು ಅಳಿಸುವದರಲ್ಲಿ ಪ್ರಜೆಗಳಿಗೆ ಮೋಸ ಉಂಟಾಗಿರುವದು. ಆದದರಿಂದ (Septennial Act) ಸಪ್ತವರುಷದ ಏರ್ಪಾಟು ನೇಮಿಸಲ್ಪಟ್ಟಿತು. ಇದು ಆ ದಿವಸದಿಂದ ಈ ದಿವಸದ ವರೆಗೂ ಅನುಸರಿಸುವ ದೇಶಪ್ರಮಾಣವಾಗಿದೆ.

ಆ ಕಾಲದಲ್ಲಿ ಐಶ್ವರ್ಯಾಭಿವೃದ್ಧಿಯ ಮೇಲೆ ಮಹಾ ಅಪೇಕ್ಷೆಯು ಇಂಗ್ಲಾಂಡ್ ಶೀಮೆಯವರಲ್ಲಿ ಉಂಟಾಯಿತು. ಏನಂದರೆ, ದಕ್ಷಿಣ ಸಮುದ್ರಗಳಲ್ಲಿ ಸಂಚರಿಸಿ ವ್ಯಾಪಾರ ವೃದ್ಧಿ ಮಾಡುವ (South Sea Company) "ದಕ್ಷಿಣ ಸಮುದ್ರಸಂಘ" ಎಂದು ಹೇಳಲ್ಪಟ್ಟ ವಿನೋದವಾದ ಕೂಟದವರು, ಕೆಲವು ದಿವಸಗಳಿಗೆ ಮುಂಚೆ ಫ್ರಾನ್‍ಸರ ಸಂಗಡ ನಡೆದ ಯುದ್ಧದಿಂದ ಇಂಗ್ಲಿಷ್ ಧೊರೆತನದವರಿಗೆ ಸಂಭವಿಸಿದ ಸಾಲವನ್ನು ತೀರಿಸಲೂ, ಆ ಕೂಟಕ್ಕೆ ಒಡಂಬಡುವವರನ್ನೆಲ್ಲಾ ಮಿತಿ ಇಲ್ಲದ ಐಶ್ವರ್ಯವಂತರಾಗ ಮಾಡಲೂ ಕೂಡುವದೆಂದು ಹೇಳಿ, ಅನೇಕ ಸಾವಿರ ಜನಗಳಿಗೆ ನಂಬಿಕೆ ಹುಟ್ಟಿಸಿ ಮೋಸ ಮಾಡಿದರು. ಇನ್ನೂ ಕೆಲವು ನಿಷ್ಪ್ರಯೋಜನವಾದ ಉಪಾಯಗಳೂ ಏರ್ಪಡಿಸಲ್ಪಟ್ಟವು. ಆದಿಯಲ್ಲಿ ಉಂಟಾದ ದಕ್ಷಿಣಸಮುದ್ರದ ಉಪಾಯದಂತೆಯೇ ಎಲ್ಲಾ ವ್ಯರ್ಥವಾದವು.

ಈ ಧೊರೆತನದ ಕೆಲವು ವರುಷಗಳಲ್ಲಿ ಸ್ಪೇನ್ ದೇಶದಲ್ಲಿ ಗುರಿಯೂ ನಿಮಿತ್ತವೂ ಇಲ್ಲದೆ ಒಂದು ಜಗಳ ಹತ್ತಿ ಕೊಂಡಿತ್ತು. ವಂಚಕನ ಪಕ್ಷವಾಗಿ ಸ್ಪೇನ್ ಧೊರೆತನದವರು ಒಂದು ಯುದ್ಧ ಪ್ರಾರಂಭಿಸಿದರು. ಆದಾಗ್ಯೂ ಅದನ್ನು ಶೀಘ್ರವಾಗಿ ಬಿಟ್ಟರು. ಮೊದಲನೇ ಜೋರ್ಜ್ ಅರಸನು ಸಹ ತನಗೆ ಯೂರೋಪ್ ಖಂಡದಲ್ಲಿರುವ ರಾಜ್ಯಭಾರ

ಗಳನ್ನೆಲ್ಲಾ ಕಣ್ಣಿನಿಂದ ನೋಡುವದಕ್ಕೆ ಹೋಗುವಾಗ 1727ನೇ ವ
ಷದಲ್ಲಿ ಸತ್ತನು. ಅವನು ಸವಾರಿಯ ಬಂಡಿಯಲ್ಲಿ ಕುಳಿತು ಕೊಂಡ
(Osnaburgh) ಒಸ್ನಾಬುರ್ಗ್ ಎಂಬ ಊರಿನಲ್ಲಿರುವ ತನ್ನ ಸಹೋದ
ನ ಮನೆಗೆ ಸಮೀಪವಾಗಿ ಬರುವಲ್ಲಿ ಪಕ್ಷವಾಯುವಿನ ದುರ್ಗುಣಿಗಳ
ಕಂಡು ಆ ಮನೆ ಶೇರುವದಕ್ಕಿಂತ ಮುಂಚೆಯೇ ಸತ್ತನು.

ನಾವು ಬರೆದ ಈ ಸಂಗತಿಗಳು ನಡೆದ ಕಾಲದಲ್ಲಿ ಅನೇಕ ಪ್ರಬ
ವಾದ ಬುದ್ಧಿವಂತರು ಬದುಕಿದರು. (Addison) ಅದ್ದಿಸೋನ್, (Swif
ಸ್ವಿಫ್ಟ್, (Steele) ಸ್ತೀಲ್, (Bolingbroke) ಬೊಲಿನ್‌ಬ್ರೂಕ್, (Pop
ಪಾಪ್ಪು ಎಂಬ ಇವರು ಇಂಗ್ಲಿಷ್ ಭಾಷೆಯಲ್ಲಿರುವಂಥ ಅಲಂಕಾ
ವೂ ಇಂಪೂ ಸಾಮರ್ಥ್ಯವೂ ಮುಂತಾದವುಗಳನ್ನೆಲ್ಲಾ ನಾನಾ ವಿ
ವಾದ ವಚನಗಳಲ್ಲಿಯೂ ಪದ್ಯಗಳಲ್ಲಿಯೂ ರಚಿಸಿ ಇಟ್ಟರು.



## CHAPTER XXI.

### THE EXPEDITION OF PRINCE CHARLES EDWARD.

FROM A. D. 1727 TO A. D. 1760

## 21 ಸಂಧಿ.

### ಚಾರ್ಲ್‌ಸ್ ಎಡ್ವರ್ಡ್ ಎಂಬ ಪ್ರಭುವು ದಂಡೆತ್ತಿದ್ದು.

ಕ್ರಿ. ಶ. 1727 ಮೊದಲು ಕ್ರಿ. ಶ. 1760 ವರೆಗೂ.

ಮುಖ್ಯ ತಾರೀಖುಗಳು: (George II) 2ನೇ ಜೋರ್ಜ್ ಎಂಬ ಅರಸು ಹುಟ್ಟಿದ್ದು ಕ್ರಿ. ಶ. 1683. ಸಿಂಹಾಸನಕ್ಕೆ ಬಂದದ್ದು 1727. ತೀರಿ ಹೋದದ್ದು 1760. ಅದೇ ಕಾಲದ ಇಂಡ್ಯ ಚರಿತ್ರೆ: ಮೊಗಲು ಚಕ್ರವರ್ತಿಗಳು ಆಳಿದ್ದು. ಶ್ರೇಷ್ಠ ನಾಮಗಳು: (Pitt) ಪಿಟ್ 1708—1778. (Clive) ಕ್ಲೈವ್ 1725—1774. (Paley) ಪೇಲಿ 1763—1805. (Halley) ಹಾಲ್ಲಿ 1656—1742.

ಎರಡನೇ ಜೋರ್ಜ್ ಆಳಿದ ಮೊದಲನೇ ಹತ್ತು ವರುಷಗಳಲ್ಲಿ ದೇಶವು ಸಮಾಧಾನವಾಗಿತ್ತು. ಮುಂದಿನ ಧೊರೆತನದಲ್ಲಿ ಕೀರ್ತಿ ಪ್ರತಾಪವುಳ್ಳ (Sir Robert Walpole) ಸರ್ ರೋಬರ್ಟ್ ವಾಲ್‌ಪೋಲನೇ ಪ್ರಧಾನಮಂತ್ರಿಯಾಗಿದ್ದನು. ಅವನ ಧೊರೆತನವು ಕೀರ್ತಿಯುಳ್ಳದ್ದಾಗಿರದೆ ಇದ್ದರೂ, ಅವನು ಕೈ ಇಟ್ಟ ಕಾರ್ಯಗಳೆಲ್ಲಾ ಸಿದ್ಧಿ ಹೊಂದಿದವು. ಎರಡನೇ ಜೋರ್ಜ್ ಅರಸನ ಉತ್ತಮ ಸ್ತ್ರೀಯಾದ (Caroline) ಕಾರೋಲೈನ್ ರಾಣಿಯು ಸಂಸ್ಥಾನವಿಷಯಗಳಲ್ಲಿ ಅಧಿಕವಾಗಿ ಕಣ್ಣಿಟ್ಟು ನೋಡುತ್ತಾ ಬಂದಳು. ಮತ್ತು ಯೂರೋಪ್ ಖಂಡದಲ್ಲಿ ತಮಗಿರುವ ರಾಜ್ಯಗಳನ್ನು ಹೋಗಿ ಸ್ವತಹ ಇದ್ದು ಆಳುವ ಹಾಗೆ (Hanover) ಹಾನೋವರಿಗೆ ಅರಸನು ಹೋಗಿ ಬಿಡುವ ನಾನಾ ಕಾಲಗಳಲ್ಲಿಯೂ ತಾನೇ ರಾಜ್ಯವನ್ನು ಆಳುತ್ತಾ ಬರುವಳು.

ಪ್ರಜೆಗಳು ಅವನನ್ನು ವಿರೋಧಿಸಿ ಕಲಹ ಮಾಡಿದ ಕಾರಣದಿಂದ ಸರ್ ರೋಬರ್ಟ್ ವಾಲ್‌ಪೋಲನು ತನ್ನ ಅಧಿಕೃವನ್ನು ಮನೋರಾಜಿಯಿಂದ ಬಿಡ ಬೇಕಾಯಿತು. ಸ್ಪಾನಿಯರಿಗೂ ಇಂಗ್ಲಿಷಿನವರಿಗೂ ಉಂಟಾಗಿದ್ದ ಒಂದು ವರ್ತಕವೊಡಂಬಡಿಕೆಯನ್ನು ಸ್ಪಾನಿಯರು ಮೀರಿ ನಡೆದದರಿಂದ ಯುದ್ಧವು ಪ್ರಕಟ ಮಾಡಲ್ಪಟ್ಟಿತ್ತು. ಆ ಯುದ್ಧವು ನ್ಯಾಯವಲ್ಲವೆಂದು ವಾಲ್‌ಪೋಲನು ಹೇಳಿ ಇದ್ದದರಿಂದ ಆ ಯುದ್ಧವು ಇಂಗ್ಲಿಷಿನವರಿಗೆ ಸಿದ್ಧಿಯಾಗದೆ ಇರುವಾಗ ಇದಕ್ಕೆ ತಕ್ಕ ಸಾಧನೆಗಳನ್ನು ವಾಲ್‌ಪೋಲನು ಮಾಡದೆ ಸುಮ್ಮನೆ ಇದ್ದಾನೆಂಬ ಅಪರಾಧವು ಅವನ ಮೇಲೆ ಹೊರಿಸಲ್ಪಟ್ಟಿತು. ಅದರಿಂದ ಅವನು (Earl of Oxford) ಒಕ್ಸಫೋರ್ಡ್ ಏರ್ಲ್ ಪ್ರಭು ಎಂಬ ಪ್ರಭುತ್ವವನ್ನು ಹೊಂದಿ ಇದ್ದಾಗ್ಯೂ, ಮೊದಲನೇ ಮಂತ್ರಿ ಎಂಬುವ ಘನವನ್ನು ಕೆಡಿಸಿ ಬಿಟ್ಟನು. ಆ ಕಾಲದಲ್ಲಿ ಇಂಗ್ಲಿಷ್ ನಾವಿಕರಾಣುವೆಯ ಸೈನ್ಯಾಧಿಪತಿಗಳಲ್ಲಿ ಒಬ್ಬನಾದ (Captain Anson) ಕೆಪ್ತನ್ ಅನ್‌ಸನ್ ಎಂಬವನು ಭೂಮಿಯನ್ನು ಸುತ್ತಿ ಸಮುದ್ರಯಾತ್ರೆ ಮಾಡಿ, ಯಾತ್ರೆಯಲ್ಲಿಯೂ ಯುದ್ಧದಲ್ಲಿಯೂ ತಾನು ತೋರಿಸಿದ ಧೈರ್ಯದಿಂದಲೂ ತೃಣೀಕರದಿಂದಲೂ ಇಂಗ್ಲಿಷ್ ನಾವಿಕರಿಗೆ ಮುಂಚೆ ಉಂಟಾಗಿದ್ದ ಯುದ್ಧದ ಪೌರುಷವನ್ನೂ ಶೌರ್ಯಪ್ರತಾಪವನ್ನೂ ದೃಢ ಪಡಿಸಿದನು.

ವಾಲ್‌ಪೋಲ್ ಮಂತ್ರಿಯುದ್ಯೋಗವನ್ನು ಬಿಟ್ಟು ಬಿಟ್ಟ ವರುಷದಲ್ಲಿ ಯೂರೋಪಿನಲ್ಲಿರುವ ಶ್ರೇಷ್ಠ ಅಧಿಕಾರಶೀಮೆಗಳೊಳಗೆ ಯುದ್ಧ ಉಂಟಾಯಿತು. ಕೆಲವು ವರುಷಗಳಿಗೆ ಮುಂಚೆ ಪ್ರಧಾನ ದ್ಯೂಕ್ ಪ್ರಭುವಾಗಿದ್ದು ಸ್ಪೇನ್ ಧೊರೆತನಕ್ಕಾಗಿ ಹೋರಾಡಿದವನಾಗಿದ್ದ (Charles IV) 4ನೇ ಚಾರ್ಲ್ಸ್ ಎಂಬ ನಾಮವುಳ್ಳ ಜರ್ಮನಿ ದೇಶದ ಚಕ್ರವರ್ತಿಯು ಗತಸಂವತ್ಸರದಲ್ಲಿ ಸಾಯಲಾಗಿ, ಅವನ ಏಕಪುತ್ರಿಯಾದ (Maria Theresa) ಮರಿಯಾ ತೆರೀಸಾ ಎಂಬವಳು ಆ ಚಕ್ರಾಧಿಪತ್ಯವನ್ನು ಹೊಂದಿದಳು. ಆ ಚಕ್ರಾಧಿಪಳಾದ ಕುಮಾರ್ತೆಯನ್ನು (Bavaria) ಬವೇರಿಯ ನಾಡಿನ ಅಧಿಪತಿಯು ಎದುರಿಸಿದನು. ಅವನಿಗೆ ಆ ವಿಷಯ ಫ್ರಾನ್ಸ್ ಅರಸನು ಕೂಡ ಸಹಾಯ ಮಾಡಿದನು. ಇಂಗ್ಲಿಷಿನವರು ಮರಿಯಾ

ತೆರೀಸಾ ಎಂಬವಳ ಕಡೆ ಶೇರಿ ಕೊಂಡು, ಅವಳಿಗೆ ಸಹಾಯವಾಗಿ ಒಂದು ರಾಣುವೆಯನ್ನು ಕಳುಹಿಸಿದರು.

ಇಂಗ್ಲಾಂದ್ ಅರಸನೂ ಅವನ ಎರಡನೇ ಕುಮಾರನಾದ (Duke of Cumberland) ಕಂಬರ್ಲಾಂದ್ ಎಂಬುವ ದ್ಯೂಕ್ ಪ್ರಭುವೂ (Maine) ಮೇನ್ ನದಿಯ ಬಳಿಯಲ್ಲಿ ಇಂಗ್ಲಿಷ್ ರಾಣುವೆಯನ್ನು ಕಲಿತು ಕೊಂಡರು. ಅವರು ಆ ಸ್ಥಳಕ್ಕೆ ಬಂದು ಶೇರಿದಾಗ ಆ ರಾಣುವೆಯು ಬಹು ಮೋಸವಾದ ಸ್ಥಿತಿಯಲ್ಲಿತ್ತು. ಮತ್ತು ರಾಣುವೆಯ ಶ್ರೇಷ್ಠನು ಸಾಮರ್ಥ್ಯವಿಲ್ಲಧವನಾಗಿದ್ದದರಿಂದ ಮಹಾ ಆಪತ್ತು ಸಂಚವಿಸುವಂತೆ ಇರುವದನ್ನು ಕಂಡರು. ಆ ಸ್ಥಳವನ್ನು ಬಿಟ್ಟು ವಸತಿಯಾದ ಸ್ಥಳಕ್ಕೆ ಹೋಗುವಾಗ, ಫ್ರಾನ್ಸರು ಬಂದು ಬಹು ಮೂರ್ಖವಾಗಿ ಯುದ್ಧ ಮಾಡಿದರು. ಆದಾಗ್ಯೂ ಪೂರ್ಣವಾಗಿ ಸೋತು ಹೋದರು. ಅರಸನು ತಾನೇ ಇಂಗ್ಲಿಷ್ ಯುದ್ಧವೀರರನ್ನು ಮುಂದೆ ನಿಂತು ನಡೆಸಿದನು. ಅವನೂ ಅವನ ಕುಮಾರನೂ ಅಧಿಕ ಧೈರ್ಯವಾಗಿ ನಿಂತು ಯುದ್ಧ ಮಾಡಿದರು. ಇದರಲ್ಲಿ ಇಂಗ್ಲಿಷಿನವರು ಹೊಂದಿದ ಜಯದಿಂದ ಫ್ರಾನ್ಸರು ಜರ್ಮನಿ ದೇಶದೊಳಗಿಂದ ಹೋಗಿ ಬಿಡ ಬೇಕಾಯಿತು.

1745ನೇ ವರುಷದಲ್ಲಿ ಯುದ್ಧವು (Flanders) ಪ್ಲಾಂದರ್ಸ್ ಶೀಮೆಯಲ್ಲಿ ಆರಂಭಿಸಿತು. ಅಲ್ಲಿ (Tournay) ತೌರ್ನೆ ಎಂಬ ಪಟ್ಟವನ್ನು, (Marshal de Saxe) ದೀ ಸಾಕ್ಸ್ ಎಂಬುವ ಮುಖ್ಯ ಸೈನ್ಯಾಧಿಪತಿಯು ನಡೆಸಿದ 76000 ಫ್ರಾನ್ಸರು ಮುತ್ತಿಗೆ ಹಾಕಿದರು. ಸಹಾಯಸೈನ್ಯಗಳ ಮುಖ್ಯಾಭಿಪ್ರಾಯವು ಆ ಮುಖ್ಯ ಪಟ್ಟವನ್ನು ಬಿಡಿಸ ಬೇಕೆಂಬುವದೇ. ಅದರಿಂದ ಐಕ್ಯವಾದ ರಾಣುವೆಯನ್ನೆಲ್ಲಾ ನಡಿಸುವ ಶ್ರೇಷ್ಠಾಧಿಕಾರವನ್ನು ಹೊಂದಿದ ಕಂಬರ್ಲಾಂದ್ ಎಂಬುವ ದ್ಯೂಕ್ ಪ್ರಭುವು ಶತ್ರುಸೈನ್ಯವನ್ನು ಎದುರಿಸಿ ನಡೆದನು. ಅವರ ದಂಡು ಸಹ ಬಹು ಬಂದೋಬಸ್ತಾಗಿತ್ತು. ಅವರ ಎದುರಿಗೆ (Fontenoy) ಪೊಂತಿನೊಯಿ ಎಂಬ ಸಣ್ಣ ಗ್ರಾಮವಿತ್ತು. ಅವರಿಗೆ ಬಲಗಡೆ (Scheldt) ಶ್ಕೆಲ್ತ್ ಎಂಬ ನದಿಯೂ ಬೇರೊಂದು ಸಣ್ಣ ಗ್ರಾಮವೂ ಇತ್ತು. ಎಡಗಡೆಯಲ್ಲಿ ಒಂದು ದಟ್ಟವಾದ ಕಾಡು ಇತ್ತು. ಹೀಗಿರುವಲ್ಲಿ ಹೊ

ಲ್ಲಾಂಡಿನವರು ಮುಂದಗಡೆಯಲ್ಲಿಯೂ ಬಲಗಡೆಯಲ್ಲಿಯೂ ಬಂದ
ಎದುರಿಸಲೂ, ಕಂಬರ್ಲಾಂಡ್ ಡ್ಯೂಕ್ ಪ್ರಭುವನ್ನು ಎದುರಿಸಲೂ ಕಿ
ರ್ಮಾನಿಸಿ ಕೊಂಡರು. ಹೊಲ್ಲಾಂಡಿನವರು ತಾವು ಹೋದ ಕೆಲಸ
ನ್ನು ಬಹು ಇಳತರವಾಗಿ ಕೈ ಬಿಟ್ಟು ಬಿಟ್ಟು, ಯುದ್ಧ ಮುಗಿಯುವ ವ
ಗೂ ತಮ್ಮ ಯುದ್ಧದ ಜತೆಗಾರರಿಗೆ ಸ್ವಲ್ಪವಾದರೂ ಸಹಾಯ ಮಾ
ದೆ ವಾರೆಗೆ ಹೋಗಿ ನಿಂತು ಕೊಂಡರು. ಫ್ರಾನ್ಸರಿಗೆ ಎಡಗಡೆಯಲ್ಲಿ
ದ್ದ ಚಿಕ್ಕ ತೋಪನ್ನು ಹಿಡಿದು ಕೊಳ್ಳಲಿಕ್ಕೆ ಒಂದು ಇಂಗ್ಲಿಷ್ ದಂಡು ಕಳ
ಹಿಸಲ್ಪಟ್ಟಾಗ, ಅದರ ಮುಖ್ಯಸ್ಥನು ತನಗೆ ಕೊಡಲ್ಪಟ್ಟ ಕಟ್ಟಳೆಯನ್ನು ಕ
ಡೇರಿಸದೆ ಇದ್ದ ಅಜಾಗ್ರತೆಯಿಂದ ಅದು ಸಹ ವ್ಯರ್ಥವಾಯಿತು. ಆ
ದಾಗ್ಯೂ ಇಂಗ್ಲಿಷ್ ದಂಡುಗಳು ತಮ್ಮ ಮುಂದಗಡೆ ಇದ್ದ ಕಷ್ಟವಾದ
ಕಾಡುಮಾರ್ಗವಾಗಿ ಹೋದ ದೃಢವಾದ ರಾಹುವೆಯನ್ನು ಎಷ್ಟು ಮಾ
ತ್ರವೂ ಅಡ್ಡಿ ಮಾಡುವದಕ್ಕಾಗಲಿಲ್ಲ. ಅವರ ಎದುರಿನಲ್ಲಿ (Ramillies)
ರಾಮಿಲೀಸ್ ಯುದ್ಧದಲ್ಲಿಯೂ (Blenheim) ಬ್ಲೆನ್‌ಹೀಮ್ ಯುದ್ಧದ
ಲ್ಲಿಯೂ ಇದ್ದು ಯುದ್ಧ ಮಾಡಿದ ಮನುಷ್ಯರ ಸಂಗಡ ಆ ದಿನದಲ್ಲಿ
ಫ್ರಾನ್ಸರು ಹೋರಾಡ ಬೇಕಾಗಿತ್ತು. ಆ ಕಾಡು ಬೆಟ್ಟದ ಮಾರ್ಗವು
ಇಕ್ಕಟ್ಟಾಗಿತ್ತು. ಇದಲ್ಲದೆ ಹೋದ ರಾಹುವೆಯವರೂ ಒಂದಾಗಿ ಶೇರಿ
ಒತ್ತಿ ಕೊಂಡು ನಡಿಯ ಬೇಕಾಗಿತ್ತು. ಶತ್ರುಗಳು ಸಹ ಶೌರ್ಯವಾಗಿ
ನಿಂತು ಎದುರಿಸಿದಾಗ್ಯೂ ಮೆಟ್ಟುಮೆಟ್ಟಾಗಿ ಮೇಲ್ಕೊಳ್ಳಲ್ಪಟ್ಟರು. ಅ
ವರ ಫೌಜುಗಳು ಶತ್ರುಗಳು ಅಡ್ಡವಾಗಿ ನಿಂತು ಹತ್ತಿಸಿದ ಫಿರಂಗಿ ಗುಂ
ಡುಗಳು ತಗಲಿ, ಒಂದೊಂದು ನಿಮಿಷದಲ್ಲಿಯೂ ಸಂಖ್ಯೆ ಕಡಿಮೆಯಾಗು
ತ್ತಾ ಬಂತು. ಫ್ರಾನ್ಸರ ರಾಹುತರು ಬಂದು ತಗಲಿದ ಒಂದೊಂದು
ಸಾರಿಯೂ ಅವರನ್ನು ಶೌರ್ಯವಾಗಿ ಓಡಿಸಿ ಬಿಟ್ಟರು. ಒಂದೊಂದು
ಫ್ರಾನ್ಸ್ ಪದಾತಿಯ ದಂಡು ಇಂಗ್ಲಿಷಿನವರನ್ನು ಎದುರಿಸಿ ಹಿಂದಾಗಿ
ಹೋಯಿತು. ಸ್ವಲ್ಪ ಹೆಚ್ಚು ಕಡಿಮೆ ಇಂಗ್ಲಿಷಿನವರಿಗೆ ಜಯವಾಗುವ
ಹಾಗಿತ್ತು. ಆದದರಿಂದ ಆ ಸೋಮಾರಿಗಳಾದ ಹೊಲ್ಲಾಂಡಿನವರು ಸ್ವ
ಲ್ಪವಾದರೂ ಸಹಾಯ ಮಾಡಿದರೆ ಜಯವು ಪೂರ್ಣವಾಗುವದು. ಆ
ದರೂ ಅವರು ಮುಂಚೆ ಹೊಂದಿದ ಅಪಜಯದಿಂದ ನಡುನಡುಗುತ್ತಾ

ಸಹಾಯಸೈನ್ಯಗಳಿಗೆ ಸಹಾಯವಾಗಿ ಒಂದು ಹೆಜ್ಜೆಯಾದರೂ ಮುಂದಕ್ಕೆ ಇಡ ಧೈರ್ಯವಿಲ್ಲದೆ ಹೋದರು. ಇಂಗ್ಲಿಷಿನವರು ಸಹ ಬಹು ಆಪತ್ತಿಗೊಳಗಾಗಿ ದಣಿದು ಶತ್ರುಗಳ ಹೇರಾಳವಾದ ಸಂಖ್ಯೆಯಿಂದ ಜಯಿಸಲ್ಪಟ್ಟರು.

ಇಂಗ್ಲಿಷಿನವರಿಗೆ ಜಯವಾಗುವದೆಂದು ಎಣಿಸಿದ ಫ್ರಾನ್ಸ್ ದಳಕರ್ತನು ಯುದ್ಧವನ್ನು ನೋಡಿ ಕೊಂಡಿದ್ದ ಅರಸನನ್ನೂ ಅವನ ಮಗನನ್ನೂ ಯುದ್ಧರಂಗದಿಂದ ಓಡಿ ಹೋಗುವಂತೆ ಸಾರ್ತಿ ಸಾರ್ತಿಗೂ ಹೇಳಿದನು; ಹೇಳಿದಾಗ್ಯೂ ಅವರು ಕೇಳದೆ ಇದ್ದದರಿಂದ ಹೊಲ್ಲಾಂದಿನವರಿಗೆ ಕಾವಲಾಗಿ ನಿಲ್ಲಿಸಲ್ಪಟ್ಟಿದ್ದ ದಂಡುಗಳನ್ನೂ ಶ್ರೇಷ್ಠ ದಂಡುಗಳಾಗಿದ್ದ ಎಲ್ಲರನ್ನೂ ತೆಗದು ಕೊಂಡು ಒಂದು ಇಂಗ್ಲಿಷಿನವರನ್ನು ಓಡಿಸುವ ಉದ್ದಿಶ್ಯ ಹೆಚ್ಚಾದ ಸಾಹಸ ಮಾಡಿದನು. ಹೀಗೆ ಶತ್ರುಗಳ ಸಂಖ್ಯೆ ಹೆಚ್ಚಿದರಿಂದ ಇಂಗ್ಲಿಷಿನವರು ಸಹ ಹ್ಯಾಗೆ ಮುಂದೆ ಹೋದರೋ ಹಾಗೆಯೇ ಮೆಲ್ಲ ಮೆಲ್ಲಗೆಯೂ ದೃಢವಾಗಿಯೂ ಶತ್ರುಗಳಿಗೆ ಬೆನ್ನು ಕೊಡದೆ ಹಿಂತೆಗದರು. ಇಂಥಾ ಸೋಲು ಜಯಕ್ಕೆ ಸಮಾನವು. ಈ ಅಪಜಯದಿಂದ ಇಂಗ್ಲಿಷಿನವರಿಗೆ ಕೆಲವು ನಷ್ಟಗಳು ಸಂಭವಿಸಿದಾಗ್ಯೂ, ಅವರ ಕೀರ್ತಿಯೂ ಧೈರ್ಯವೂ ಕುಂದಲಿಲ್ಲ.

ಈ ಯುದ್ಧದಿಂದ ಫ್ರಾನ್ಸರು ಫ್ಲಾಂಡರ್ಸ್ ನಾಡಿನಲ್ಲಿ ಜಯ ಹೊಂದಿದರು. (Tournay) ತೌರ್ನೆ, (Ghent) ಗೆಂತ್, (Ostend) ಓಸ್ತೆಂದ್ ಎಂಬ ಪಟ್ಟಣಗಳೂ ಒಂದರ ಹಿಂದೆ ಒಂದಾಗಿ ಫ್ರಾನ್ಸರ ವಶವಾದವು. ಸಹಾಯಸೈನ್ಯಗಳೂ ಜಯವೀರರಾದ ಶತ್ರುಗಳನ್ನು ಎದುರಿಸ ಕೂಡದೆ, ಯಾವಾಗಲೂ ಅತು ಕೊಂಡೇ ಹೋಗ ಬೇಕಾಗಿ ಪ್ರಾಪ್ತಿಸಿತು. ಇದಲ್ಲದೆ ಫ್ಲಾಂಡರ್ಸ್ ಸೀಮೆಯಲ್ಲಿದ್ದ ಕಾರಣಕ್ಕಿಂತ ಇಂಗ್ಲಾಂದಿನಲ್ಲಿಯೇ ದೊಡ್ಡದಾಗಿ ಸಂಭವಿಸಿದ ಕಾರಣದಿಂದ ಮುಕ್ಕಾಲು ಪಾಲು ರಾಣುವೆಯನ್ನು ಕರೆಯ ಕಳುಹಿಸಿ ಕೊಳ್ಳ ಬೇಕಾಗಿಯೂ ಪ್ರಾಪ್ತಿಸಿತು. ಇದರೊಡನೆ ಬಂದ ಶೀತಕಾಲವೂ ಯುದ್ಧವನ್ನು ನಿಲ್ಲಿಸಿ ಬಿಟ್ಟಿತು.

ಫ್ರಾನ್ಸ್ ಸೀಮೆಯ ಸಂಗಡ ನಡೆದ ಯುದ್ಧದಿಂದಲೂ ಅದರಿಂದ ಇಂಗ್ಲಿಷ್ ರಾಣುವೆಯು ಯೂರೋಪ್ ಖಂಡಕ್ಕೆ ಹೋಗಿದ್ದದರಿಂದಲೂ,

ಇಂಗ್ಲಿಷ್ ಧೊರೆತನಕ್ಕೆ ವಿರೋಧವಾಗಿ ಯಾಕೋಬಿಯರು ತಿರಿಗಿ ವೋಸಾಲೋಚನೆ ಮಾಡುವದಕ್ಕೆ ಸಮಯ ಪ್ರಾಪ್ತಿಸಿತು. ಮುಂಚೆ ಹೇಳಿದ ವಂಚಕನ ಕುಮಾರನಾದ ಚಾರ್ಲ್ಸ್ ಎದ್ವರ್ದನೆಂಬ ರಾಜಪುತ್ರನು ಫ್ರಾನ್ಸಿನಲ್ಲಿ ಇದ್ದು ಕೊಂಡು, ತನಗೆ ಸಹಾಯ ಮಾಡುವ ಉದ್ದಿಶ್ಯ ಫ್ರಾನ್ಸ್ ಅರಸನನ್ನು ಬಹುಶಾ ಬೇಡಿ ಕೊಂಡರೂ ಏನೂ ಆಗದೆ ತನ್ನ ಪ್ರಜೆಗಳ ಸಹಾಯದಿಂದಲೇ ತನ್ನ ತಂದೆಯನ್ನು ಧೊರೆತನಕ್ಕೆ ವಿರ್ಪಡಿಸ ಮುಂಚೆ ಮಾಡಿ ಕೊಂಡಿದ್ದ ಯತ್ನವನ್ನೇ ಪ್ರಯೋಗಿಸುವದಕ್ಕೆ ತೀರ್ಮಾನಿಸಿ ಕೊಂಡನು. ಮಹಾ ಬ್ರಿತನ್ ದ್ವೀಪದಲ್ಲಿರುವ ಎಲ್ಲಾ ಕಡೆಗಳಿಗಿಂತ ಸ್ಕೊತ್ಲಾಂದಿನಲ್ಲಿಯೇ ಯಾಕೋಬಿಯರ ಪಕ್ಷವು ಬಲವಾಗಿದ್ದದರಿಂದ ಆ ದೇಶಕ್ಕೆ ಹೋಗಿ, ಬೆಟ್ಟದ ಶೀಮೆಯವರ ದಯವನ್ನೂ ರಾಜಭಕ್ತಿಯನ್ನೂ ಹುಡುಕ ಬೇಕೆಂದು ಎಣಿಸಿದನು. ಒಬ್ಬ ಸ್ನೇಹಿತನು ತನಗೆ ಕೊಟ್ಟ ಒಂದು ವ್ಯಾಪಾರದ ಹಡಗದಲ್ಲಿ ತಾನೂ ತನಗೆ ಶೇರಿದ ಕೆಲವು ನಂಬಿಕೆಯುಳ್ಳ ಊಳಿಗದವರೂ ಹತ್ತಿ ಕೊಂಡು ಬ್ರಿತಿಷ್ ಕಾಲುವೆಯಲ್ಲಿರುವ ಇಂಗ್ಲಿಷ್ ಹಡಗಗಳನ್ನು ತಪ್ಪಿಸಿ ಕೊಂಡು ಸ್ಕೊತ್ಲಾಂದಿನ ಮೇಲ್ಗಡಕ್ಕೆ ಹೋಗಿ ಶೇರಿದನು.

ತನ್ನ ಸ್ವದೇಶಸ್ಥರ ಪ್ರೀತಿಯಲ್ಲಿ ಅವನು ನಂಬಿಕೆ ಇಟ್ಟದ್ದು ಸರಿಯೇ. ಅವನು ಪೂರ್ವ ಸ್ಕೋತರ ರಾಜಕುಟುಂಬದಲ್ಲಿ ಹುಟ್ಟಿ ಜನರ ಮನಸ್ಸಿಗೆ ಪ್ರಿಯವಾದ ಹೆಸರನ್ನು ಧರಿಸಿದವನಾದದರಿಂದ ಅವನು ಆ ಬೆಟ್ಟದ ನಾಡಿಗೆ ಬಂದಾಗ ಬಹು ಸಂತೋಷದ ಆರ್ಭಟದಿಂದ ಅಂಗೀಕರಿಸಲ್ಪಟ್ಟನು. (Lochiel) ಲೊಕಿಯೇಲ್ ಊರಿನ (Cameron) ಕಮರೊನ್ ಎಂಬವನೂ ಮಾತುಬರಿಯುಳ್ಳ ಬೇರೆ ಶ್ರೇಷ್ಠರೂ ಅವನ ಪಕ್ಷದಲ್ಲಿದ್ದು ಅವನ ಕಾರ್ಯವನ್ನು ಆಧರಿಸ ಬಂದರು. ಅವರಿಗೂ ತಮ್ಮ ಜಾತಿಕೂಟದವರೂ ದಾಸರೂ ಅನುಸರಣೆಯಾಗಿದ್ದರು. ಬೆಟ್ಟದ ನಾಡಿನಲ್ಲಿರುವ ಒಂದು ಅಡಕವಾದ ಹಳ್ಳದ ತಗ್ಗಿನಲ್ಲಿ ಚಾರ್ಲ್ಸ್ ಎದ್ವರ್ದನು ಸನ್ 1745ನೇ ಅಗಸ್ಟು ತಿಂಗಳ ತಾರೀಖು 19ರಲ್ಲಿ ಅನೇಕ ಬೆಟ್ಟದ ಶೀಮೆದಧಿನ ಮುಖ್ಯಸ್ಥರ ಮುಂದೆ ತನ್ನ ಧ್ವಜವನ್ನು ನಿಲ್ಲಿಸಿದನು.

ಸ್ಕೊತ್ಲಾಂದಿನಲ್ಲಿ ಉತ್ತರ ಪಶ್ಚಿಮ ಕಡೆ ಇರುವ ಶರಕಲಾದ ಕಾಡಿ

ನಲ್ಲಿ ವಾಸಿಸುವವರು ಹೈಲಾರ್ಂಡರ್ಸ್ ಎಂದು ಕರೆಯಲ್ಪಟ್ಟರು. ಆ ಏಕಾಂತ ಪ್ರಾಂತ್ಯದಲ್ಲಿ ವಾಸಿಸುವ ಕಾರಣದಿಂದ ಅವರಿಗೆ ಪೂರ್ವಿಕವಾಗಿದ್ದ ಕಪಟವಿಲ್ಲದ ಬಳಿಕೆಗಳೂ ಕಾಡುತನವಾದ ನಡತೆಗಳೂ ಮಾರ್ಪಡಲಿಲ್ಲ. ನೀರಾಗ್ರವುಳ್ಳ ಬೆಟ್ಟದ ಶೀಮೆಯ ನಿವಾಸಿಗಳಾದದರಿಂದ ಅವರು ದೇಶಕಟ್ಟುಪಾಟೂ ಮನೋಧೈರ್ಯವೂ ಉಳ್ಳವರಾಗಿದ್ದರು. ನಾಗರೀಕತೆಯೂ ನಂಬಿಕೆಯೂ ಇಂಥಾದ್ದೆಂದು ಅವರಿಗೆ ವಿಶೇಷವಾಗಿ ತಿಳಿಯದೆ ಒಳಗಿನ ಕಲಹಗಳನ್ನು ಮಾಡುವದರಲ್ಲಿಯೂ ನೆರೆಶೀಮೆಯಾದ ತಗ್ಗಿನ ಶೀಮೆಗಳಲ್ಲಿ ಹೋಗಿ ಕೊಳ್ಳೆ ಮಾಡುವದರಲ್ಲಿಯೂ ತಮ್ಮ ಧೈರ್ಯವನ್ನು ತೋರಿಸುವರು. ಕುಟುಂಬಸಮ್ಮಂಧವಾದ ನಾನಾ ಗೋತ್ರಗಳು ಅಥವಾ ಕುಲಗಳು ಅವರಲ್ಲಿ ಉಂಟು. ಕೀಳು ಕುಲಗಳೆಲ್ಲಾ ತಮ್ಮ ಜಾತಿಯ ಶ್ರೇಷ್ಠನನ್ನು ಬಹು ಬದ್ಧವಾಗಿ ಅಂಟಿ ಕೊಂಡಿರುವರು. ಮತ್ತು ಅವನು ಹೋಗುವ ಸ್ಥಳಗಳಲ್ಲೆಲ್ಲಾ ಸಡ್ಡವಾಗದ ವಿಶ್ವಾಸದಿಂದ ಕೂಡ ಹೋಗುವರು. (Normans) ನೊರ್ಮನ್ನರು ಇಂಗ್ಲಾಂಡನ್ನು ಜಯಿಸಿದ ಮೊದಲಲ್ಲಿ ಪ್ರಭುಗಳಿಗೆ ಉಳಿದ ಪ್ರಜೆಗಳು ವಿಧೇಯವಾಗಿದ್ದ ಪ್ರಕಾರ, ಸ್ವಲ್ಪ ಹೆಚ್ಚು ಕಡಿಮೆ ಈ ಬೆಟ್ಟದ ಶೀಮೆಯವರೂ ತಮ್ಮ ಪ್ರಭುಗಳಿಗೆ ವಿಧೇಯರಾಗಿದ್ದು ಊಳಿಗ ಮಾಡುತ್ತಾ ಬರುವರು.

ಚಾರ್ಲ್ಸ್ ಎಡ್ವರ್ಡ್ ಎಂಬುವ ರಾಜಪುತ್ರನು ಸುಂದರವಾದ ಮುಖವೂ ಇಂಪಾದ ಕೃತ್ಯವೂ ಉಳ್ಳವನಾಗಿದ್ದು, ಆ ಬಡ ಜನರ ಹೃದಯವನ್ನು ಪೂರ್ಣವಾಗಿ ಸ್ವಾಧೀನ ಮಾಡಿ ಕೊಂಡನು. ಅವರ ಭಾಷೆಯಲ್ಲಿ ಕೆಲವು ಮಾತುಗಳನ್ನು ಕಲಿತು ಕೊಂಡನು. ಪ್ರಯಾಣ ಮಾಡುವಾಗ ಅವರ ಸಂಗಡ ವಿನೋದವಾಗಿ ಮಾತಾಡುವನು. ಅವರಿಗೆ ಬಂದ ಕಷ್ಟಗಳನ್ನು ತಾನೂ ಸ್ನೇಹಿತನಾಗಿ ಸಹಿಸುವನು. ಅವರು ಅಸಹ್ಯಿಸುವದನ್ನು ತಾನೂ ಅಸಹ್ಯಿಸಿ, ಅವರು ಮೆಚ್ಚುವದನ್ನು ತಾನೂ ಮೆಚ್ಚುವನು. "ಜಯ ಹೊಂದುವೆವು, ಅಥವಾ ಯುದ್ಧಮುಖದಲ್ಲಿ ಮಡಿಯುವೆವು" ಎಂದು ಚಾರ್ಲ್ಸನು ಹೇಳಿದ ಪ್ರಕಾರವೇ ಮಹಾ ವೀರನಾದ ರಾಜಪುತ್ರನ ಸಂಗಡ ಕೈ ಇಟ್ಟಿದ್ದೇವೆಂಬ ಧೃಢದಿಂದ ಆ (Highlanders) ಹೈಲಾರ್ಂಡರು ಆಯುಧಪಾಣಿಗಳಾಗಿ, ಅವನ ಧ್ವಜವು

ಮುಂದಗಡೆ ಹೋಗಲಾಗಿ, ಬಹು ಗಂಭೀರ ಧ್ವನಿಯೊಡನೆ ಹಿಂದ
ಹೋಗಿ ಯುದ್ಧವೀರರು ತಮ್ಮ ಶ್ರೇಷ್ಠರ ಬಳಿಯಲ್ಲಿ ಸಾಧಾರಣವಾ
ಇಡುವ ಪ್ರೀತಿಗಿಂತ ಮುಮ್ಮಡಿಯಾದ ಪ್ರೀತಿಯನ್ನು ಹೃದಯದಲ್ಲಿ
ಕೊಂಡು ನಡಿಯುವರು. ಚಾರ್ಲ್ಸ್ ಎಂಬುವನ ದಂಡಿನಲ್ಲಿದ್ದು ಸ
ಮಕ್ಕಳನ್ನು ಕುರಿತು “ಆ ಮಕ್ಕಳನ್ನು ತಿರಿಗಿ ಸಂತೋಷವಾಗಿ ಹೊಂ
ಅವರನ್ನೆಲ್ಲಾ ಚಾರ್ಲ್ಸ್ ಎಂಬುವ ರಾಜಪುತ್ರನಿಗಾಗಿ ಕಳೆದು ಬಿಡು
ದೇ ನನಗೆ ಅಪೇಕ್ಷೆ” ಎಂದು ಹೇಳಿದ ಸ್ತ್ರೀಯ ಪ್ರೀತಿಯ ಹಾಗೆಯೇ
ನೇಕ ಜನರು ಆ ರಾಜಪುತ್ರನನ್ನು ಸ್ನೇಹಿಸಿದರು.

ಹೀಗೆ ಚಾರ್ಲ್ಸನು ತಗ್ಗಿನ ಭೂಮಿಯಲ್ಲಿ ದಂಡು ಸಹಿತವಾ
ಬಂದು ಇಳಿಯ ತಕ್ಕ ಯತ್ನದಲ್ಲಿರುವ ಕಾಲದಲ್ಲಿ ಇಂಗ್ಲಾಂಡಿನಲ್ಲಿಯ
ಸ್ಕೊತ್ಲಾಂಡಿನಲ್ಲಿಯೂ ಇರುವ ಇಂಗ್ಲಿಷ್ ಧೊರೆತನದವರು ತ್ವರೆಯಾ
ಯೂ ಧೈರ್ಯವಾಗಿಯೂ ಇದ್ದು ಯತ್ನ ಮಾಡದೆ ಇದ್ದರು. ಸ್ಕೊತ್ಲಾ
ದಿನಲ್ಲಿದ್ದ ಶ್ರೇಷ್ಠ ನ್ಯಾಯಾಧಿಪತಿಯಾದ (Sir John Cope) ಸ
ಜಾನ್ ಕೋಪ್ ಎಂಬವನು ಒಳ್ಳೇ ಚಿಂತೆಯುಳ್ಳವನಾಗಿದ್ದಾಗ್ಯೂ,
ದ್ಯೋಗಸ್ಥಿತಿಯಲ್ಲಿ ಅಜಾಗ್ರತಸ್ಥನೂ ಬಲಹೀನನೂ ಆಗಿದ್ದನು.
ದುತಿಸುವದಕ್ಕೆ ಬರುವ ಹೈಲ್ಯಾಂಡರನ್ನು ಅವನು ಎದುರಿಸಿ ಹೋದ
ಗ್ಯೂ, ಸಂಗಡಲೇ ನಿಂತು ಯುದ್ಧ ತೊಡಗುವದಕ್ಕೆ ಬದಲಾಗಿ ಯು
ವನ್ನು ತಪ್ಪಿಸಿ ಕೊಂಡು (Inverness) ಇನ್ವರ್ನೆಸ್ ಊರಿಗೆ ತಿರುಗಿ ಕೊ
ಡು ಬಂದದರಿಂದ, ರಾಜಧಾನಿಗೆ ಹೋಗುವ ಮಾರ್ಗವು ಶತ್ರುಗಳಿಗೆ
ಡೆ ಇಲ್ಲದೆ ಇತ್ತು. ತನ್ನ ಎಹುಲಿಗಳು ಹಿಂದಗಡೆಯಲ್ಲಿ ಇದ್ದಾಗ್ಯೂ
ಯೌವನಸ್ಥನಾದ ವಂಚಕನು ತನಗೆ (Edinburgh) ಎದಿನ್ಬರೋ ಪ
ದಲ್ಲಿ ಅನೇಕ ಶತ್ರುಗಳು ಇದ್ದರೂ, ಸ್ನೇಹಿತರು ಸಹ ಅನೇಕರು ಇದ
ರೆಂದು ತಿಳಿದು ನೆಟ್ಟಗೆ ಆ ಪಟ್ಟಣಕ್ಕೆ ಹೋಗ ಧೈರ್ಯ ಹೊಂದಿದನು.
ಸರ್ ಜಾನ್ ಕೋಪನು ಹೋದ ಶೀಮೆಗಳು ಕರಡು ಮೊರಡಾಗಿದ್ದು ರ
ಹುತರಿಗೆ ಸರಿ ಬೀಳದೆ ಇದ್ದದರಿಂದ, ಎರಡು ಕುದುರೆಪಟಾಳಗಳನ
ಹಿಂದೆ ಇರಿಸಿ ಹೋಗಿದ್ದನು. ಆ ಎರಡು ಪಟಾಳಗಳೂ ಹೈಲ್ಯಾಂಡರ
ಬರಲಾಗಿ ಬಹಳ ನಾಚಿಕೆಯೊಡನೆ ಓಡಿ ಹೋದವು. ರಾಜಪುತ್ರನ

ಸ್ವಲ್ಪವಾದರೂ ಅಡ್ಡಿ ಇಲ್ಲದೆ ರಾಜಧಾನಿಯಲ್ಲಿ ಪ್ರವೇಶಿಸಿ, ಮುಂಚೆ ತನ್ನ ಪೂರ್ವಿಕರಾದ ಸ್ಕೋತರ ಅರಸರು ಸಿಂಹಾಸನಾರೂಢರಾಗಿ ಮುದ್ರೆ ನಡಿಸಿದ (Holyrood) ಹೋಲಿರೂದ್ ಎಂಬವನ ಅರಮನೆಯಲ್ಲಿ ಶೇರಿ ಅಲ್ಲಿ ಇದ್ದನು. ಅಲ್ಲಿದ್ದ ಯಾಕೋಬಿಯರು ಕೇಳಿಕೆಗಳಿಂದಲೂ ಆಟ ಪಾಟಗಳಿಂದಲೂ ಘರಾರಿಯಾಗಿದ್ದ ರಾಜಪುತ್ರನ ಬರುವಿಕೆಯನ್ನು ಹೊಗಳಿದರು.

ಕೆಲವು ದಿವಸಗಳೊಳಗಾಗಿ ಸರ್ ಜಾನ್ ಕೋಪನು ತನ್ನ ತಪ್ಪನ್ನು ಗ್ರಹಿಸಿ ಹೈಲ್ಯಾಂದರ ಸಂಗಡ ಯುದ್ಧ ಮಾಡುವದಕ್ಕೆ ತಿರಿಗಿ ಬಂದನು. (Preston Pans) ಪ್ರೆಸ್ಟೊನ್ ಪಾನ್ಸ್ ಎಂಬ ಸಣ್ಣ ಗ್ರಾಮದ ಬಳಿಯಲ್ಲಿ ಎರಡು ರಾಣುವೆಗಳೂ ಒಂದನ್ನು ಒಂದು ಎದುರಿಸಿದವು. ಮಾರಣೆ ದಿವಸ ಉದಯದಲ್ಲಿ ರಾಜಕುಮಾರನೇ ಎರಡನೇ ಸಾಲನ್ನು ನಡಿಸಿ ಕೊಂಡು ಯುದ್ಧಕ್ಕೆ ಹೋದನು. ಅರಸನ ರಾಣುವೆಯ ಮೇಲೆ ಹೈಲ್ಯಾಂದರು ಭಯಂಕರವಾದ ಆರ್ಭಟ ಮಾಡಿ ಕೊಂಡು ನುಗ್ಗಿದರು. ನುಗ್ಗಿದ ಮೊದಲನೇ ಸಾರಿಯೇ ಫಿರಂಗಿರಾಣುವೆಯೆಲ್ಲಾ ಫಿರಂಗಿಗಳನ್ನು ಬಿಟ್ಟು ಓಡಿದರು. ಕೆಲವು ದಿವಸಗಳಿಗೆ ಮುಂಚೆ ಮಾಡಿದ ಪ್ರಕಾರವೇ ಕುದುರೆ ರಾಣುವೆಯವರು ನಿಲ್ಲಲಾರದೆ ನಾಚಿಕೆಗೆಟ್ಟು ಓಡಿದರು. ಸ್ವಲ್ಪ ಹೊತ್ತು ಪದಾತಿಗಳು ಧೈರ್ಯವಾಗಿ ನಿಂತು ಹೋರಾಡಿದರೂ ಅವರು ಸಹ ಕೈಲಾಗದೆ ಬೆನ್ನು ತೋರಿಸಿ ಓಡಿದರು. ಈ ಯುದ್ಧದ ತರುವಾಯ ಹೈಲ್ಯಾಂದರ ಸ್ವಲ್ಪ ನಾಗರೀಕತನವನ್ನು ತೋರಿಸುವ ಕೆಲವು ವಿನೋದಗಳು ನಡೆದವು; ಏನಂದರೆ, ರಾಜಕುಮಾರನ ದಂಡಿನಲ್ಲಿದ್ದ ಯುದ್ಧದ ವಿದ್ಯೆ ಅರಿಯದ ಆ ಕಿರಾತರು ತಮಗೆ ದೊರಕಿದ ಕೊಳ್ಳೆಯನ್ನು ಬಚ್ಚಿಡುವದಕ್ಕೆ ಬೆಟ್ಟಗಳಿಗೆ ಓಡಿ ಹೋದರು.

ಈ ಶೀಘ್ರವಾದ ಸ್ಥಿರವುಳ್ಳ ಜಯವು ದೊರಕಿದ ಮೇಲೆ ರಾಜಕುಮಾರನು ಒಡ್ಡೋಲಗದೊಡನೆ ತಿರಿಗಿ ರಾಜಧಾನಿಯಲ್ಲಿ ಪ್ರವೇಶಿಸಿದನು. ಯಾಕೋಬಿಯರು ತಮ್ಮ ಟೊಪ್ಪಿಗೆಗಳಲ್ಲಿ ಧರಿಸುವ ಜಯದ ಬಿಳೀ ಪುಷ್ಪಗಳನ್ನು ಮುಂಚಿಗಿಂತ ಅಧಿಕವಾಗಿ ಮುಡಿದು ಕೊಂಡು ರಾಜಧಾನಿಯ ಬೀದಿಗಳಲ್ಲೆಲ್ಲಾ ತುಂಬಿ ಮೆರೆದರು. ಚಾರ್ಲ್ಸನು ತನ್ನ ಪೂ

ರ್ರೀಕರ ಅರಮನೆಯಲ್ಲಿ ತಿರಿಗಿ ಶೇರಿ, ತಂದೆಯ ಹೆಸರಿನಿಂದ ಧೊರೆತ
ಮಾಡಿದನು. ಇದಲ್ಲದೆ ಇಂಗ್ಲಾಂದಿಗೂ ಹೋಗ ಯತ್ನಯಿಸಿದನ
ಆದಾಗ್ಯೂ ಅನೇಕ ಯುದ್ಧವೀರರು ಅವನ ರಾಣುವೆಯನ್ನು ಬಿಟ್ಟು ಅ
ಲಿದ್ದರಿಂದಲೂ, ಇನ್ನೂ ರಾಣುವೆಗೆ ಶೇರ ಬೇಕಾದ ಅನೇಕರು ಶೇರ
ಇದ್ದದರಿಂದಲೂ ಇನ್ನೊಂದು ಕಾಲದಲ್ಲಿ ಆಗಲಿ ಎಂದು ಅವನ ಮಂ
ಗಳು ಆಲೋಚನೆ ಹೇಳಿದರು.

ಅವನು ಎದಿನ್‌ಬರೋದಲ್ಲಿ ಒಂದು ತಿಂಗಳಿಗೆ ಹೆಚ್ಚಾಗಿ ಇದ್ದ ತರ
ವಾಯ, ಅವನು ಬಹು ದಿವಸಗಳು ಕೋರಿ ಇದ್ದ ಪ್ರಕಾರವೇ ಇಂಗ್ಲಾ
ದಿನ ಮೇಲೆ ಹೋಗ ತಕ್ಕ ಸೈನ್ಯಾಭಿವೃದ್ಧಿಯೂ ಆರಂಭಿಸಿತು. ಅದು
ಹ ಬಹು ಬುದ್ಧಿಯಾಗಿಯೂ ಕ್ರಮವಾಗಿಯೂ ನಡಿಸಲ್ಪಟ್ಟಿತು. ದಾ
ಯಲ್ಲಿ ಕೊಳ್ಳೆ ಮಾಡಲೂ ಇಲ್ಲ. ಮನುಷ್ಯರನ್ನು ಹಿಂಸೆ ಪಡಿಸಲ
ಇಲ್ಲ. ಎದುರಿಗೆ ಬಂದ ಇಂಗ್ಲಿಷ್ ಸೈನ್ಯಗಳನ್ನೆಲ್ಲಾ ಮೆಲ್ಲಗೆ ಸಾವ
ಧ್ಯವಾಗಿ ತಪ್ಪಿಸಿ ಕೊಂಡರು. (Wade) ವೇದ್ ಎಂಬ ದಳಕರ್ತನ
ಬಹಳ ರಾಣುವೆಯ ಸಹಿತವಾಗಿ (Newcastle) ನ್ಯೂಕಾಸೆಲ್ ಊರಿ
ಲ್ಲಿ ಇದ್ದನು. ತಕ್ಕ ರಾಣುವೆಯನ್ನು ಕೂಡಿಸಿ ಕೊಂಡು ಕಂಬರ್ಲಾಂಡ
ಡ್ಯೂಕ್ ಪ್ರಭುವು ಸಹ ರಾಜ್ಯದ ಮಧ್ಯಶೀಮೆಯಲ್ಲಿ ಇದ್ದನು. ಅವ
ರಾಣುವೆಯು ಹೊಲ್ಲಾಂದಿನವರಿಂದಲೂ ಬೇರೆ ಸಹಾಯಸೈನ್ಯಗಳಿಂ
ಲೂ ವಿಸ್ತರಿಸಲಾಯಿತು. ಹೀಗಿರುವಲ್ಲಿ ಆ ಯೌವನಸ್ಥನಾದ ಮಂ
ಕನು ನ್ಯೂಕಾಸೆಲ್ ಊರಿಗೆ ಹೋಗುವವನಂತೆ ತೋರಿಸಿ, ವೇದ್ ಎ
ಬುವ ಸೈನ್ಯಾಧಿಪತಿಯ ರಾಣುವೆಗೆ ಎಡಗಡೆ ತಿರುಗಿ ಕಂಬರ್ಲಾಂಡ
ನಾಡಿನಲ್ಲಿ ಹೊಕ್ಕು, (Carlisle) ಕಾರ್ಲೈಲ್ ಪಟ್ಟಣವನ್ನು ಮುತ್ತಿಗೆ ಹಾ
ಕಿ, ತಾಮಸವಿಲ್ಲದೆ ಅದನ್ನು ಕಟ್ಟಿ ಕೊಂಡನು. ಇನ್ನೂ ಶೀಘ್ರವಾಗಿ ದ
ಕ್ಷಿಣಕಡೆ ಹೋದ ಹೈಲ್ಯಾಂಡರು (Manchester) ಮಾನ್‌ಚೆಸ್ತೆರ್ ಪಟ್ಟ
ದಲ್ಲಿ ಪ್ರವೇಶಿಸಲಾಗಿ, ಆ ಪಟ್ಟಣದವರು ಸಹ ಆ ರಾಜಕುಮಾರನನ್ನು ಅ
ಧಿಕ ಪಕ್ಷವಾಗಿ ಅಂಗೀಕರಿಸಿದರು. ಕೆಲವು ದಿವಸಗಳೊಳಗೆ ಅವನು ಲಂ
ದನ್ ಪಟ್ಟಣಕ್ಕೆ ಹೆಚ್ಚು ಕಡಿಮೆ ನೂರ ಮೂವತ್ತು ಮೈಲುಗಳ ದೂರ ಮಾ
ತ್ರವುಳ್ಳ (Derby) ದೆರ್ಬಿ ಊರಿಗೆ ಬಂದು ಶೇರಿದನು. ಹೈಲ್ಯಾಂದರ

ರಾಣುವೆಯ ದಳಕರ್ತನಾಗಿದ್ದ (George Murray) ಜೋರ್ಜ್ ಮರ್ರೇ ಎಂಬುವ ಪ್ರಭುವು ಬಹು ತಂತ್ರೋಪಾಯದಿಂದ ಕಂಬರ್ಲಾಂಡ್ ದ್ಯೂಕ್ ಪ್ರಭುವಿನ ರಾಣುವೆಗೆ ತಪ್ಪಿಸಿ ಕೊಳ್ಳಲು, ಹೈಲಾಂಡರ ರಾಣುವೆಯು ಆ ಪ್ರಭುವಿಗೂ ರಾಜಧಾನಿಗೂ ಅಡ್ಡ ಬಿತ್ತು.

ಇನ್ನೂ ಕೆಲವು ದಿನಗಳಲ್ಲಿ ಆ ಯೌವನಸ್ಥನಾದ ವಂಚಕನು ಲಂದನ್ ಪಟ್ಟದೊಳಗೆ ಪ್ರವೇಶಿಸ ಬಹುದು. ಅವನ ಬರುವಿಕೆಯನ್ನು ಅಭ್ಯಂತರಿಸುವದಕ್ಕೆ ಯಾವದೂ ಇರಲಿಲ್ಲ. ಪಟ್ಟದ ಕಾವಲಿಗೋಸ್ಕರ ಕೂಡಿಸಲ್ಪಡ ಬೇಕಾದವರು ಕೂಡಿಸಲ್ಪಡಲೂ ಇಲ್ಲ. ಲಂದನ್ ಪಟ್ಟದವರು ಸಹ ಈ ಹೊತ್ತೋ ನಾಳೆಯೋ ಅವನು ಬರುತ್ತಾನೆಂದು ಬಹು ದಿಗುಲಿನಿಂದ ಎದುರು ನೋಡುತ್ತಾ ಇದ್ದರು. ಹೀಗೆ ಇದ್ದಾಗ್ಯೂ ಅವನ ಮಂತ್ರಿಗಳು ದರ್ಬಿಯಲ್ಲಿಯೇ ಹಿಂತೆಗೆದು ಹೋಗಿ ಬಿಡುವಂತೆ ಅವನಿಗೆ ಆಲೋಚನೆ ಹೇಳಿದರು. ಇನ್ನು ಅವನಿಗೆ ಶಿದ್ಧಿಸಲಾರದೆಂದೂ, ಅವನಿಗೆ ಸಹಾಯವಾಗಿ ಫ್ರಾನ್ಸಿನಿಂದ ಇನ್ನೂ ದಂಡುಗಳು ಬರಲಿಲ್ಲವೆಂದೂ, ಇಂಗ್ಲಿಷ್ ಯಾಕೋಬಿಯರು ಅವನು ಕೋರಿದಂತೆ ಎದ್ದು ಬರಲಿಲ್ಲವೆಂದೂ ಜನರು ಬಹುಶಾ ಅವನ ಸೈನ್ಯದ ಬರುವಿಕೆಯನ್ನು ಬಹು ತಿರಸ್ಕಾರದಿಂದಲೂ ಅಸಹ್ಯದಿಂದಲೂ ನೋಡುತ್ತಾರೆಂದೂ, ಅದರಿಂದ ಅವನ ಬರುವಿಕೆ ಬಹು ತ್ವರೆಯಾಯಿತೆಂದೂ, ಅದು ತೃಣೀಕರವಾಗಿ ಪಡಿದು ಹೋಯಿತೆಂದೂ ಈ ಪ್ರಕಾರ ಹೇಳಿದ್ದರಿಂದ, ಆ ರಾಜಕುಮಾರನು ತಿರುಗುವದಕ್ಕೆ ತಕ್ಕ ಮುಖಾಂತ್ರವನ್ನು ಕಾಣದೆ ಇದ್ದರೂ, ಬಹು ಮನಸ್ಸು ಮುರಿದವನಾಗಿ ತಿರುಗಿ ಕೊಂಡು ಹೋಗ ಸಮ್ಮತಿಸಿದನು. ಅವನು ಸ್ಕೊತ್ಲಾಂದಿನಿಂದ ಬಂದ ಬರುವಿಕೆಗೂ ಅವನು ಹಿಂತಿರುಗಿ ಹೋಗುವ ಹೋಗುವಿಕೆಗೂ ಬಹು ವ್ಯತ್ಯಾಸವಾಗಿತ್ತು. ಅವನು ಮುಂಚೆ ಸೈನ್ಯಗಳಿಗೆ ಮುಂದಿನ ಸಾಲಿನಲ್ಲಿದ್ದು ಅವರಿಗೆ ದೃಢವೂ ಧೈರ್ಯವೂ ಪಡಿಸಿ ಕೊಂಡು ನಡೆದ ಪ್ರಕಾರ ನಡೆಯದೆ ಹಿಂದಿನ ಸಾಲಿನ ಹಿಂದೆ ಹೋದನು. ಅವನ ಮುಖವನ್ನು ದುಃಖವೂ ವ್ಯಸನವೂ ತುಂಬಿ ಕೊಂಡಿತ್ತು. ಅವನ ಮನುಷ್ಯರು ಸಹ ಮುಂಚೆ ಇದ್ದಂತೆ ನೆಟ್ಟಗೆ ನಡೆದು ಕೊಳ್ಳದೆ ಅನೇಕ ಕೊಳ್ಳೆ ಕೊಲೆ ಅಕ್ರಮಗಳನ್ನು ಮಾಡುತ್ತಾ ಬಂದರು. ಹಿಂತಿರುಗಿ ಹೋ

ದ ಆ ಹೈಲ್ಯಾಂಡರ ರಾಣುವೆಗೂ ಕಂಬಲ್ಯಾಂಡ್ ಪ್ರಭುವಿನ ದಂಡುಗ
ಳಿಗೂ ಅನೇಕ ಸಣ್ಣ ಸಣ್ಣ ಯುದ್ಧಗಳು ನಡೆದವು. ಆದಾಗ್ಯೂ ಅವರ
ಪ್ರಯಾಣವು ಅನೇಕ ಸಾರಿ ತಡೆಯದೇ ನಡಿಯಿತು. ಎದಿನ್‌ಬರೋ ಪ
ಟ್ಟಣವನ್ನು ಬಿಟ್ಟು ಸಾಮರ್ಥ್ಯದಿಂದ ತೃಣೀಕರವಾಗಿ ಹೊರಟ ಎರಡು ತಿಂ
ಗಳ ತರುವಾಯ ಆ ರಾಜಕುಮಾರನು ಸ್ಕೊತ್ಲಾಂಡಿಗೆ ತಿರುಗಿದನು. ಆ
ಎರಡು ತಿಂಗಳಲ್ಲಿಯೂ ಐದು ಸಾವಿರಕ್ಕಿಂತ ಹೆಚ್ಚಾದ ಯುದ್ಧವೀರರು
ಅವನ ದಂಡಿನಲ್ಲಿ ಇದ್ದದ್ದಿಲ್ಲ.

ಅವನು ಬಂದ ಕೂಡಲೆ ಆ ಶೀಮೆಯ ಸ್ಥಿತಿಗತಿಯನ್ನು ವಿಚಾರಿಸಿ
ಕೊಳ್ಳ ತಕ್ಕ ನೆಲೆಯಲ್ಲಿತ್ತು; ಏನಂದರೆ, ಅವನು ಹೋದ ಕಾಲ ಮೊದಲು
ಗೊಂಡು ಆ ಶೀಮೆಯ ಧೊರೆತನದವರು ಅವನ ಪಕ್ಷದವರನ್ನು ಎದುರಿ
ಸ ತಕ್ಕ ಸೈನ್ಯಗಳನ್ನು ಕೂಡಿಸಿ ಕೊಂಡಿದ್ದರು. (Glasgow) ಗ್ಲಾಸ್ಗೋ
ಮುಂತಾದ ಹೆಸರ್ವಾಶಿಯುಳ್ಳ ಪಟ್ಟಣಗಳು ಸಹ ಅವನಿಗೆ ಹಗೆಯಾದ
ವು. ಎದಿನ್‌ಬರೋ ಕೋಟೆಯೂ (Stirling) ಸ್ತೈರ್ಲಿಂಗ್ ಊರಿನ
ಕೋಟೆಯೂ ಇಂಗ್ಲಿಷಿನವರ ಠಾಣ್ಯಗಳಿಂದ ಕಾಯಲ್ಪಟ್ಟಿದ್ದವು. ಆ ರಾ
ಜಕುಮಾರನೂ ಸ್ತೈರ್ಲಿಂಗ್ ಕೋಟೆಯನ್ನು ಮೊದಲು ವಶ ಮಾಡಿ ಕೊ
ಳ್ಳ ತೀರ್ಮಾನಿಸಿದನು. ಆದಾಗ್ಯೂ ಅದು ಶೀಘ್ರದಲ್ಲಿ ಆಗ ತಕ್ಕ ಕಾ
ರ್ಯವೆಂದು ಅವನು ಎಣಿಸಿದ್ದಾಗ್ಯೂ, ಇದು ಈಡೇರುವದಕ್ಕೆ ಬಹಳ
ದಿವಸಗಳು ಹಿಡಿದವು. ಕಂಬಲ್ಯಾಂಡ್ ಡ್ಯೂಕ್ ಪ್ರಭುವಿನ ಆಲೋಚನೆ
ಯ ಪ್ರಕಾರ ಆ ಸ್ಥಳದಲ್ಲಿ ಶ್ರೇಷ್ಠಾಧಿಕಾರವನ್ನು ಹೊಂದಿ ಇದ್ದ (Halley)
ಹಾಲ್ಲಿ ಧೊರೆಯು ಅವನಿಗೆ ಸಮೀಪಿಸಿ ಯುದ್ಧ ಮಾಡಲೂ ಪಟ್ಟಣವನ್ನು
ಕಾಯಲೂ ಬಂದನು. ಹಾಲ್ಲಿ ಎಂಬ ಸೈನ್ಯಾಧಿಪತಿಯು ಕ್ರೂರನೇ ಹೊ
ರ್ತು ಸಾಮರ್ಥ್ಯನಲ್ಲ. ಜಯ ಉಂಟಾಗುವದಕ್ಕೆ ಸಾಧಾರಣವಾಗಿ ನ
ಡಿಸ ಬೇಕಾದ ಕಾರ್ಯಗಳನ್ನು ಸಹ ಅವನು ನಡಿಸದೆ ಎದುರಿಗಳ ಧೈ
ರ್ಯದಿಂದ ಹ್ಯಾಗೋ ಹಾಗೆ ತನ್ನ ಅಜಾಗ್ರತೆಯಿಂದಲೇ ತನಗೆ ಅಪ
ಜಯವಾಗಲಾಗಿ ತನ್ನ ಬಳಿಯಲ್ಲಿದ್ದ ಯುದ್ಧವೀರರನ್ನು ಬಹು ಕ್ರೂರ
ವಾಗಿ ಹಿಂಸೆ ಪಡಿಸಿದನು. ಹೈಲ್ಯಾಂಡರು ತನ್ನ ದಂಡಿನ ಅಂಚಿಗೆ ಬ
ರುವಾಗ ಅವನು ಅಲ್ಲಿ ಇಲ್ಲದೆ ಇದ್ದನು. ಅದರ ಮೇಲೆ ಯುದ್ಧಪ್ರಯ

ತ್ನಗಳು ಸಹ ಆತುರವಾಗಿಯೂ ಕೆಡುವಂತೆಯೂ ಮಾಡಲ್ಪಟ್ಟವು. ಆ ರಾಜಕುಮಾರನು ಸಹ ಸಾಮರ್ಥ್ಯವಾಗಿ ಮಾಡಿದ ತಂತ್ರದಿಂದಲೇ ಇಂಗ್ಲಿಷ್ ಸೈನ್ಯಾಧಿಪತಿಯನ್ನು ವಿಮಾರಿಸಿ ಬಿಟ್ಟು, ಅವನು ಎಷ್ಟು ಮಾತ್ರವೂ ನೆನಸದೆ ಇದ್ದ ದಿಕ್ಕಿನಿಂದ ಬಂದು ತಗಲಿದನು. ಆ ಸಮಯದಲ್ಲಿ ಮಳೆಯು ಸಹ ಹಿಡಿಯಿತು. ಅವನು ಘಾಳಿ ಬಡಿಯುವ ದಿಕ್ಕಿನಿಂದ ಯುದ್ಧ ತೊಡಗಿದ್ದರಿಂದ ಇಂಗ್ಲಿಷ್ ಸೈನ್ಯದವರ ಮುಖದ ಮೇಲೆ ಮಳೆ ಹೊಡಿಯುತ್ತಾ ಬಂತು. (Preston) ಪ್ರೆಸ್ಟೊನಿನಲ್ಲಿ ನಡೆದ ಪ್ರಕಾರ ಕುದುರೆರಾಹುತರೇ ಮುಂಚೆ ಓಡಿ ಹೋದರು. ಅವರನ್ನು ಕಂಡು ಪದಾತಿಯವರಲ್ಲಿ ಮುಕ್ಕಾಲುವಾಶಿ ತಾವೂ ಓಡಿ ಹೋದರು. ಕೆಲವರು ಮಾತ್ರ ಸದ್ದವಾಗದೆ ನಿಂತಾಗ್ಯೂ ಹಿಂತೆಗಿಯ ಬೇಕಾಗಿದ್ದದರಿಂದ ಒಳ್ಳೇ ಕ್ರಮವಾಗಿ ಹಿಂತೆಗದರು.

ಫ್ರಾನ್ಸರು ಇಂಗ್ಲಾಂಡನ್ನು ಮುತ್ತಿಗೆ ಹಾಕ ಬರುತ್ತಾರೆಂಬುವ ವದಂತಿಯಿಂದ ಕಂಬರ್ಲಾಂಡ್ ಪ್ರಭುವು ದಕ್ಷಿಣ ದಿಶೆಗೆ ಹೋಗಿದ್ದನು. ಮೇಲೆ ನಡೆದ ವಿಪತ್ತನ್ನು ನಿವರ್ತಿಸುವ ಉದ್ದಿಷ್ಟ ಸಂಗಡಲೇ ಸ್ಕೊತ್ಲಾಂದಿಗೆ ಕಳುಹಿಸಲ್ಪಟ್ಟನು. ಅವನು ಬಂದ ಎರಡು ದಿವಸಗಳೊಳಗೆ ರಾಜಕುಮಾರನ ರಾಣುವೆಯು ಸ್ಟೆರ್ಲಿಂಗ್ ಪಟ್ಣವನ್ನು ಮುತ್ತಿಗೆ ಹಾಕಿತು. ಕಡೆಯಾಗಿ ನಡಿಸಿದ ಯುದ್ಧದ ತರುವಾಯ ಅವನ ಯುದ್ಧಗಳಲ್ಲಿ ಅನೇಕರು ತಮ್ಮ ಕೊಳ್ಳೆಯನ್ನು ಬಚ್ಚಿಡುವದಕ್ಕೆ ರಾಣುವೆಯನ್ನು ಬಿಟ್ಟು ಓಡಿ ಹೋಗಿ, ಅವನ ರಾಣುವೆಯು ಸಹ ಸಂಖ್ಯೆಯಲ್ಲಿ ಬಹು ಕಡಿಮೆಯಾಗಿತ್ತು. ಇದಲ್ಲದೆ ಹೈಲಾಂಡರ ರಾಣುವೆಯ ಶ್ರೇಷ್ಠರೊಳಗೆ ಆಗಾಗ್ಯೆ ಜಗಳಗಳು ಹುಟ್ಟಿದದರಿಂದಲೂ, ಹೈಲಾಂದಿಗೆ ಹಿಂತೆಗದು ಹೋಗುವದು ತಕ್ಕದ್ದೆಂದು ಹೇಳಿದ ಮಂತ್ರಿಗಳ ಆಲೋಚನೆಗೂ ಅವನು ಸಮ್ಮತಿಸ ಬೇಕಾಗಿತ್ತು.

ಈ ವ್ಯಸನವಾದ ಕಾರ್ಯಗಳಿಂದ ಆ ರಾಜಪುತ್ರನ ದಂಡಿನಲ್ಲಿ ಇನ್ನು ಉಪಯೋಗವಿಲ್ಲವೆಂಬುವಂತೆ ಆಯಿತು. ಆದಾಗ್ಯೂ ಹೈಲಾಂದರ ಸೈನ್ಯವನ್ನು ಇಂಗ್ಲಿಷ್ ಸೈನ್ಯವು ಕಡೇ ಸಾರಿ (Culloden) ಕಲ್ಲೋದನ್ ಊರಿನಲ್ಲಿ ಎದುರಿಸಿ ಪೂರ್ಣವಾಗಿ ಜಯಿಸಿ ಬಿಟ್ಟರು. ಚಾರ್ಲ್ಸ್

ಸನು ಸಹ ಥಕ್ಕನೆ ಮಾಡಿದ ರಾತ್ರಿಪ್ರಯಾಣದಿಂದ ಕಂಬರ್ಲಾಂಡ್ ಡ್ಯೂಕ್ ಪ್ರಭುವಿನ ರಾಣುವೆಯಲ್ಲಿ ಚಗ್ಗನೆ ಹಾಯುವಂತೆ ಅಪೇಕ್ಷಿಸಿದನು. ಆದಾಗ್ಯೂ ಹಿಂದಿನ ದಂಡು ಮುಂದಂಡಿನೊಡನೆ ಶೇರಿ ಬಾರದೆ ಬಹು ದೂರದಲ್ಲಿ ನಿಂತು ಹೋದದರಿಂದ ಅವನ ಆಲೋಚನೆ ಕೆಟ್ಟಿತು. ಮತ್ತು ಇಂಗ್ಲಿಷಿನವರು ಅವನನ್ನು ಎದುರಿಸುವಾಗ ಅವನಿದ್ದ ಸ್ಥಳವು ಸಹ ಕೆಟ್ಟದ್ದಾಗಿತ್ತು. ಅವನ ಸಂಗಡ ಇದ್ದವರು ಸ್ವಲ್ಪ ಮಂದಿಯಾಗಿದ್ದರು. ಜೋರ್ಜ್ ಮರ್ರೇ ಎಂಬ ಪ್ರಭುವಿನಿಂದ ನಡಿಸಲ್ಪಟ್ಟ ಬಲಸಾಲೂ ಎಡಸಾಲೂ ಇಂಗ್ಲಿಷಿನವರ ಮೇಲೆ ಮೂರ್ಖವಾಗಿ ಹಾದರು. ಹಾದು, ಸ್ವಲ್ಪ ದೂರ ಜಯ ಹೊಂದುವಾಗ ಎರಡನೇ ಸಾಲಿನ ದಂಡು ಹಿಂತೆಗೆಯದೆ ನಿಂತು ಪ್ರಯೋಗಿಸಿದ ಗುಂಡುಗಳಿಂದ ಹಿಂತೆಗದು ಹೋದರು. ಎಡಭಾಗದಲ್ಲಿ ನಿಂತ ದಂಡುಗಳು ತಮಗೆ ಶ್ರೇಷ್ಠ ಪಾರ್ಶ್ವವಾದ ಬಲಗಡೆಯಲ್ಲಿ ಸ್ಥಳ ದೊರಕದೇ ಹೋದದ್ದು ತಮ್ಮ ಘನಕ್ಕೆ ಕಡಿಮೆ ಎಂದು ಎಣಿಸಿ ಕೊಂಡು ಯುದ್ಧದಲ್ಲಿ ಎದುರಿಸಿ ಹೋಗುವದಿಲ್ಲವೆಂದು ನಿಂತು ಕೊಂಡರು. ಅವರ ಸೈನ್ಯಾಧಿಪತಿಯು ಸಹ ತನ್ನಿಂದಲಾಗುವಷ್ಟು ಯತ್ನಯಿಸಿ ಕಡೆಯಲ್ಲಿ ಮುಂದೆ ನಿಂತು ಅವರನ್ನು ಬೇಡಿ ಕೊಳ್ಳುತ್ತಿದ್ದ ಪ್ರಕಾರವೇ ಮರಣ ಹೊಂದಿದನು.

ಕಲ್ಲೋದನ್ ಊರಿನ ಬಳಿಯ ಉಂಟಾದ ಜಯವು ಮುಗಿಯಿತು. ಯಾಕೋಬಿಯ ಶ್ರೇಷ್ಠರಲ್ಲಿ ಅನೇಕರು ಫ್ರಾನ್ಸಿಗೆ ಓಡಿ ಹೋಗಿ ಮರೆ ಹೊಕ್ಕರು. ಅನೇಕರು ಕೊಲ್ಲಲ್ಪಟ್ಟರು. ಜಯಿಸಲ್ಪಟ್ಟ ಹೈಲಾಂಡರನ್ನು ಕಂಬರ್ಲಾಂಡ್ ಪ್ರಭುವು ಬಹು ಕ್ರೂರವಾಗಿ ಕಷ್ಟ ಪಡಿಸಿದನು. ಅವನು ಮಧ್ಯ ಹೈಲಾಂಡಿನಲ್ಲಿ ಸ್ವಲ್ಪ ಕಾಲ ಇದ್ದು ಕೊಂಡು ಶೀಮೆಯನ್ನು ಹಾಳು ಮಾಡಿ ತನ್ನ ಕೈಗೆ ಶಿಕ್ಕಿದ ಒಬ್ಬರನ್ನಾದರೂ, ಪ್ರಾಣದಿಂದ ಇರಿಸದೆ ನಾಶ ಮಾಡಿದನು. ಇದರ ಮಧ್ಯೆ ಚಾರ್ಲ್ಸ್ ಎಂಬ ಅರಸ ಮಗನು ತನ್ನ ಜನನಭೂಮಿಯಲ್ಲಿ ಭಿಕ್ಷಗಾರನಾದನು, ಅವನು ತಂಗುವದಕ್ಕೆ ಸ್ಥಳವಿರಲಿಲ್ಲ. ಅವನ ತಲೆಗೆ ಒಂದು ಬೆಲೆ ಗೊತ್ತಾಯಿತು. ಇನ್ನು ಜಯ ಹೊಂದುವೆನೆಂಬ ನಂಬಿಕೆ ಸ್ವಲ್ಪವಾದರೂ ಇಲ್ಲದೆ ಫರಾರಿಯಾಗಿ ಅಲೆದನು. ಆದಾಗ್ಯೂ ಅವನ ದಾಸರ ಹೃದಯದಲ್ಲಿ ಆಶ್ರಯಸ್ಥಾನವಿ

ತ್ತು. ತನ್ನ ವಿಪತ್ತಿನ ಕಾಲದಲ್ಲಿಯೂ ನಂಬಿಕೆಯುಳ್ಳ ಅನೇಕ ಸ್ನೇಹಿತರು ಅವನಿಗೆ ಇದ್ದರು. ಐದು ತಿಂಗಳುಗಳ ಕಾಲ ಅವನು ಸ್ಕೊತ್ಲಾಂದ್ ಬೆಟ್ಟಗಳನ್ನೂ ದ್ವೀಪಗಳನ್ನೂ ಸುತ್ತಿ ತಿರುಗಿದನು. ಆದಾಗ್ಯೂ ಅವನು ಓಡಿ, ಬಚ್ಚಿಟ್ಟು ಕೊಂಡ ಸ್ಥಳಗಳನ್ನು ತಿಳಿದ ಧೈರ್ಯವೂ ವೀರತ್ವವೂ ಉಳ್ಳ ಆ ಸೀಮೆಯ ಮನುಷ್ಯರು ಅವನನ್ನು ತೋರಿಸಿ ಕೊಡ ನೆನಸಲಿಲ್ಲ. ಅವನು ಸಹ ಅನೇಕ ಸಮಯಗಳಲ್ಲಿ ಶತ್ರುಗಳ ಕೈಯಲ್ಲಿ ಸಿಕ್ಕಿ ಕೊಳ್ಳುವದಕ್ಕೆ ಸ್ವಲ್ಪ ತಪ್ಪಿದನು. ಅಂಥಾ ಸಮಯಗಳಲ್ಲೆಲ್ಲಾ ಅವನು ತನ್ನ ಸ್ವಂತ ತೃಣೀಕರದಿಂದ ಅಥವಾ ತನ್ನ ಮಿತ್ರರ ವೈರಾಗ್ಯದಿಂದ ತಪ್ಪುವನು. ಅವನ ಪಕ್ಷದಲ್ಲಿದ್ದು ಅವನನ್ನು ಆದರಿಸಿದವರಲ್ಲಿ (Flora Macdonald) ಫ್ಲೋರ ಮಾಕ್ಡೊನಾಲ್ಡ್ ಎಂಬ ಬಾಲ್ಯಳಾದ ಧೊರೆಮಗಳು ಮಾಡಿದ್ದು ಬಹು ಪ್ರತಾಪವಾದದ್ದು. ಅವಳು ಘನವೂ ಶಾಂತಗುಣವೂ ಉಳ್ಳ ಧೊರೆಸಾನಿ. ತನ್ನ ಪ್ರಾಣಕ್ಕೆ ಅಪಾಯ ಹುಡುಕಿ ಆ ಅರಸನ ಮಗನ ಪ್ರಾಣವನ್ನು ತಪ್ಪಿಸಿದಳು; ಹ್ಯಾಗಂದರೆ, ಅವಳು ಅವನಿಗೆ ಸ್ತ್ರೀವೇಷ ಹಾಕಿ ಶತ್ರುಗಳ ನಡುವೆ ಒಂದು ಮರೆಯಾದ ಸ್ಥಳಕ್ಕೆ ಕರಕೊಂಡು ಹೋದಳು. ಕಡೆಯಲ್ಲಿ ಸ್ಕೊತ್ಲಾಂದಿನ ತೀರದಲ್ಲಿ ಬಂದು ಇಳಿದ ಒಂದು ಫ್ರಾನ್ಸ್ ಹಡಗವನ್ನು ಕಂಡು ಚಾರ್ಲ್ಸ್ ಎಂಬ ರಾಜಪುತ್ರನು ಅದರಲ್ಲಿ ಫ್ರಾನ್ಸಿಗೆ ಓಡಿ ಹೋದನು. ಈ ಯಾತ್ರೆಯ ಸಂಗಡಲೇ ಚಾರ್ಲ್ಸ್ ಎದ್ವರ್ದ್ ಪ್ರಭುವಿನ ಧೈರ್ಯವೂ ಬಲಹೀನವೂ ಆದ ದಂಡಿನ ಹೊರಡೋಣವು ಮುಗಿದು ಹೋಯಿತು. ಅದರಲ್ಲಿ ಅವನು ತೋರಿಸಿದ ಶೌರ್ಯ ಕೊಂಚವಾದದ್ದಲ್ಲ. ಅವನು ಹೈಲಾಂದರ ರಾಣುವೆಯ ಶ್ರೇಷ್ಠರ ಯೋಚನೆಗೆ ಒಪ್ಪದೆ ಪೂರ್ಣವಾಗಿ ತನ್ನ ತೃಣೀಕರವಾದ ಯೋಚನೆಯ ಹಾಗೆ ಮಾಡಿ ಇದ್ದರೆ, ಅವನು ನೆನಸಿದ ಕಾರ್ಯವೆಲ್ಲಾ ಕೈಗೂಡಿ ಇರುವದು. ಅದು ಹ್ಯಾಗಿದ್ದರೂ ಆ ಧೈರ್ಯಶಾಲಿಯಾದ ಬಾಲ್ಯನಾದ ಅರಸ ಮಗನನ್ನು ನಾವು ಮೆಚ್ಚಿ, ಅವನಿಗೆ ಬೇರೆ ಗುಣಾತಿಶಯಗಳು ಇಲ್ಲದೆ ಇದ್ದರೂ ಅವನ ಧೈರ್ಯಕ್ಕಾಗಿ ಅವನನ್ನು ಘನ ಪಡಿಸುತ್ತೇವೆ. ಆದಾಗ್ಯೂ ಅವನು ಜಯ ಹೊಂದದೆ ಹೋದದ್ದು ಇಂಗ್ಲಾಂಡಿಗೆ ಮೇಲೆಂದು ನಿಧಾನಿಸುತ್ತೇವೆ. (Stuart) ಸ್ಟು

ವಾರ್ಡ್ ಎಂಬ ಕುಟುಂಬದ ಅರಸುತನದ ಕೆಳಗೆ ಇಂಗ್ಲಾಂಡಿಗೆ ಉಂಟಾಗ ತಕ್ಕ ಮೇಲುಗಳಿಗಿಂತ ಜೋರ್ಜ್ ಅರಸನ ಕುಟುಂಬದ ಅರಸರ ಶಾಂತವಾದ ಧೊರೆತನದಲ್ಲಿ ಅಧಿಕ ಮೇಲುಗಳು ಉಂಟಾಗಿರುತ್ತವೆ.

ಸ್ಕೊತ್ಲಾಂದಿನಲ್ಲಿ ಇದ್ದ ಕಲಹದ ತರುವಾಯ (Aix la Chapelle) ಆಯಿ ಲಾ ಚಾಪೆಲ್ ಎಂಬ ಊರಿನ ಒಡಂಬಡಿಕೆಯ ಮೂಲಕವಾಗಿ ಇಂಗ್ಲಾಂಡಿಗೂ ಫ್ರಾನ್ಸಿಗೂ ಸಮಾಧಾನ ಉಂಟಾಯಿತು. ಆದಾಗ್ಯೂ ಅದು ಯೂರೋಪ್ಪ ಶ್ರೇಷ್ಠ ಧೊರೆತನಗಳಿಗೆ ಬಹು ದಿವಸಗಳಿಗೆ ತಕ್ಕ ಸಮಾಧಾನವಾಗಿರದೆ, ಸ್ವಲ್ಪ ಕಾಲದ ಸಮಾಧಾನವಾಗಿ ಮುಗಿಯಿತು; ಏನಂದರೆ, ಕೆಲವು ವರುಷಗಳೊಳಗೆ ತಿರಿಗಿ ಯುದ್ಧ ಹತ್ತಿತ್ತು. 1756ನೇ ವರುಷದಲ್ಲಿ ಸಪ್ತವರುಷದ ಯುದ್ಧವೆಂದು ಹೇಳಲ್ಪಟ್ಟ ಯುದ್ಧವು ಪ್ರಾರಂಭಿಸಿತು. ಇದರಲ್ಲಿ ಇಂಗ್ಲಾಂಡಿಗೆ ಮುಂಚಿನ ಶತ್ರುವಾದ ಫ್ರಾನ್ಸ್ ಶೀಮೆಯೇ ಶತ್ರುವು. (Prussia) ಪ್ರುಸ್ಯದ ಅರಸನಾದ (Frederick the Great) ಮಹಾ ಫ್ರೇಡ್ರಿಕ್ ಎಂಬವನು ಮಿತ್ರನು. ಫ್ರಾನ್ಸರು ಇಂಗ್ಲಿಷ್ ಅರಸನಿಗೆ ಹಾನೋವರಿನಲ್ಲಿ ಇರುವ ರಾಜ್ಯಾಧಿಕಾರವನ್ನು ಎದುರಿಸಿದರು. ಅಮೇರಿಕದಲ್ಲಿಯೂ ಹಿಂದುಸ್ಥಾನದಲ್ಲಿಯೂ ಕೂಡ ಆ ಎರಡು ಶೀಮೆಗಳವರಿಗೂ ಹೋರಾಟವಿತ್ತು. ಯುದ್ಧದ ಆರಂಭದಲ್ಲಿ ನಡೆದ ಒಂದು ಸಂಗತಿ ಇಂಗ್ಲಾಂಡಿಗೆ ದೊಡ್ಡ ವಿಪತ್ತಾಗಿ ಮುಗಿಯಿತು; ಏನಂದರೆ, (Byng) ಬಿಂಗ್ ಎಂಬುವ ನಾವಿಕಸೈನ್ಯಾಧಿಪತಿಯು ಫ್ರಾನ್ಸಿನ ಯುದ್ಧದ ನಾವೆಗಳನ್ನು ಎದುರಿಸದೆ ಬಿಟ್ಟ ಅಧೈರ್ಯದಿಂದ (Minorca) ಮಿನೋರ್ಕಾ ದ್ವೀಪವು ಇಂಗ್ಲಿಷಿನವರ ವಶದಿಂದ ಕಿತ್ತು ಕೊಳ್ಳಲ್ಪಟ್ಟಿತು. ಆ ಅಪರಾಧಕ್ಕಾಗಿ ವಿಚಾರಣೆ ಮಾಡಲ್ಪಟ್ಟು ಕೊಲ್ಲಲ್ಪಟ್ಟನು. ಅದು ಪೂರ್ಣವಾಗಿ ಸರಿ ಎಂಬುವದು ನಮ್ಮ ಅಭಿಪ್ರಾಯವಲ್ಲ. ಅವನು ಮಾಡಿದ ತಪ್ಪು ಯೋಚನೆಯ ತಪ್ಪೇ ಹೊರ್ತು ಬೇರೆ ಅಲ್ಲವೆಂಬುವದು ನಮ್ಮ ಅಭಿಪ್ರಾಯವು. ಆದಾಗ್ಯೂ ಸಾಧಾರಣವಾಗಿ ಇಂಗ್ಲಿಷಿನವರಿಗೆ ಸಮುದ್ರದ ಜಯಗಳು ಉಂಟಾದವು. ಹಿಂದುಸ್ಥಾನದಲ್ಲಿ (Clive) ಕ್ಲೈವ್ ಎಂಬವನಿಂದ ಫ್ರಾನ್ಸ

ದ ಅಧಿಕಾರವು ಶುದ್ಧವಾಗಿ ನಿರ್ಮೂಲ ಮಾಡಲ್ಪಟ್ಟಿತು. ಉತ್ತರ ಅಮೇರಿಕದಲ್ಲಿಯೂ ಇಂಗ್ಲಿಷಿನವರಿಗೆ ಜಯವಾಯಿತು.

1757ನೇ ವರುಷದಲ್ಲಿ ತರುವಾಯ (Lord Chatham) ಚಾತ್ತಮ್ ಪ್ರಭು ಎಂಬ ಘನವನ್ನು ಹೊಂದಿದ (Pitt) ಪಿತ್ತ್ ಧೊರೆಯು ಪ್ರಧಾನಮಂತ್ರಿಯಾದನು. ಆದ ಕೂಡಲೆ ಅಮೇರಿಕದಲ್ಲಿ ಇಂಗ್ಲಿಷಿನವರಿಗೆ ಇರುವ ಚೂ ಮಿರಾಶಿಗಳನ್ನು ಸ್ಥಿರ ಪಡಿಸ, (Canada) ಕಾನದಾ ಶೀಮೆಯನ್ನು ಜಯಿಸಿ ಕಟ್ಟಿ ಕೊಳ್ಳ ಬೇಕೆಂದು ಶೀರ್ಮಾನ ಮಾಡಿದನು. ಆ ಸ್ಥಳದಲ್ಲಿ ಈ ಕೆಲಸವನ್ನು ಪೂರೈಸುವ ಉದ್ದಿಶ್ಯ ಕಳುಹಿಸಿದ ಸೈನ್ಯಕ್ಕೆ ತಲೆಯಾಗಿ ಯೌವನಸ್ಥನೂ ಸಾಮರ್ಥ್ಯನೂ ಆಗಿದ್ದ (Wolfe) ಊಲ್ಫ್ ಎಂಬ ಸೈನ್ಯಾಧಿಪತಿಯನ್ನು ಕಳುಹಿಸಿದನು. ಅವನು ಸಹ ಹೋದ ಕೆಲಸವನ್ನು ಪೂರ್ಣವಾಗಿ ಈಡೇರಿಸಿದನು. ಕಾನದಾ ದೇಶದ ರಾಜಧಾನಿಯಾದ (Quebec) ಕ್ವಿಬೆಕ್ ಬಹು ಬಂದೋಬಸ್ತಾದ ಪಟ್ಣವು. ಅದಕ್ಕೆ ಒಂದು ಪಕ್ಕದಲ್ಲಿ ಯಾರೂ ಏರ ಕೂಡದ ಉನ್ನತವಾದ ಶಿಖರಗಳುಂಟು. (Marquis de Montcalm) ಧೀ ಮೊಂತ್‌ಕಾಮ್ ಎಂಬ ಸಮರ್ಥನಾದ ಸೈನ್ಯಾಧಿಪತಿ ನಡಿಸಿದ ಫ್ರಾನ್ಸ್ ರಾಣುವೆಯು ಬೇರೆ ಪಕ್ಕದಲ್ಲಿ ಇತ್ತು. ಇದರಿಂದ ಆ ಫ್ರಾನ್ಸ್ ಸೈನ್ಯಾಧಿಪತಿಯು ತಾನು ಕಾದು ಕೊಂಡ ಕೋಟೆಯನ್ನು ಹೊಡಿಯುವದಕ್ಕೆ ಯಾರಿಂದಲೂ ಆಗದೆಂದು ಇದ್ದನು. ಫ್ರಾನ್ಸರು ಕಾದು ಕೊಂಡ ಮುಖದಲ್ಲಿಯೇ ಬೇಕಾದ ಯತ್ನಗಳನ್ನು ಮಾಡಿಯೂ ಪಟ್ಣವನ್ನು ಹಿಡಿಯಲಾರದೆ, ಊಲ್ಫ್ ಎಂಬುವ ಸೈನ್ಯಾಧಿಪತಿಯು ಇನ್ನು ಪಟ್ಣಕ್ಕೆ ಹಿಂದಗಡೆ ಇರುವ ಶಿಖರಗಳಲ್ಲಿ ಏರಿ ಬರ ಬೇಕೆಂದು ಶೀರ್ಮಾನಿಸಿ, ಆ ಕಷ್ಟವೂ ತೃಣೀಕರವೂ ಆದ ಉಪಾಯವನ್ನು ಹುಡುಕಿದನು. ತೃಣೀಕರವು ಸಾಧಾರಣವಾಗಿ ಕೈಕೊಡುವದಷ್ಟೇ. ಹಾಗೆಯೇ ಊಲ್ಫನೂ ಶಿಖರಗಳ ತುದಿಯಲ್ಲಿ ಏನೂ ಅಪಾಯವಿಲ್ಲದೆ ತನ್ನ ಸೈನ್ಯವನ್ನು ಹತ್ತಿಸಿ ಅಲ್ಲಿ ಸಾಲ್ಗಟ್ಟಿ ಫ್ರಾನ್ಸರನ್ನು ಪೂರಾ ಸೋಲಿಸಿದನು. ಜಯವು ಪೂರ್ಣವಾದಾಗ ಅವನು ಸಹ ಮಡಿದನು. ಆದಾಗ್ಯೂ ಫ್ರಾನ್ಸರು ಸೋತು ಹೋದದರಿದ ತಾನು ಭಾಗ್ಯವಾದ ಮರಣ ಹೊಂದುತ್ತೇನೆಂದು ಹೇಳಿ ಪ್ರಾಣ ಬಿಟ್ಟನು.

ಅದಕ್ಕೆ ಮುಂಚಿನ ತಿಂಗಳಲ್ಲಿ ಇಂಗ್ಲಿಷಿನವರೂ (Brunswick) ಬ್ರ
ನ್ಸ್ವಿಕ್ (Prince Ferdinand) ಪ್ರಭುವಾದ ಫೆರ್ಡಿನಾಂಡ್ ಎಂಬ
ನಿಂದ ನಡಿಸಲ್ಪಟ್ಟ ಪ್ರುಸ್ಯರೂ ಕೂಡಿ (Minden) ಮಿಂದೆನ್ ಊರಿನ ಬ
ಳಿಯಲ್ಲಿ ಫ್ರಾನ್ಸರನ್ನು ಜಯಿಸಿ ಜಯ ಹೊಂದಿ ಇದ್ದರು. ಇಂಗ್ಲಾಂ
ಡಿಗೆ ಇದ್ದ ನಾವಿಕಸೈನ್ಯಾಧಿಪತಿಗಳಲ್ಲಿ ಮಹಾ ವೀರಪ್ರತಾಪನಾದ (Si
Edward Hawke) ಸರ್ ಎಡ್ವರ್ಡ್ ಹಾಕ್ ಎಂಬವನು ಸಮುದ್ರದ ಬ
ಳಿಯಲ್ಲಿಯೇ ತನ್ನ ಶೀಮೆಯ ಧ್ವಜವನ್ನು ನಾಟಿದನು. ಒಂದು ಸಮ
ಯದಲ್ಲಿ ಭಯಂಕರವಾದ ಪ್ರಳಯಘಾಳಿಯೂ ಹಲ್ಲಕಲ್ಲೋಲವೂ ಉಂ
ಟಾಗಿದ್ದಾಗ್ಯೂ, ಅಂಥಾ ಸಮಯದಲ್ಲಿಯೂ, ಶತ್ರುವನ್ನು ಎದುರಿಸಿ ಜ
ಯ ಹೊಂದಿದನು. ಹಲ್ಲಕಲ್ಲೋಲವಾಗಿರುವ ಸಮುದ್ರವೂ, ಶತ್ರುಗಳ
ದೊಡ್ಡ ಸಂಖ್ಯೆಯೂ ಬೇರೆ ಯಾವ ವಿಧ ವಿಘ್ನಗಳೂ ಇಂಗ್ಲಿಷ್ ಯು
ದ್ಧವೀರರ ಸಾಧನೆಯನ್ನೂ ನಾವಿಕರ ಧೈರ್ಯವನ್ನೂ ಕುಗ್ಗಿಸಲಾರವು.

ಹೀಗೆ ತನ್ನ ಪ್ರಜೆಗಳು ಯೂರೋಪಿನಲ್ಲಿಯೂ ಅಮೆರಿಕದಲ್ಲಿಯೂ
ಹಿಂದುಸ್ಥಾನದಲ್ಲಿಯೂ ನೀರಿನ ಮಾರ್ಗವಾಗಿಯೂ ನೆಲದ ಮೇಲೆಯೂ
ಜಯ ವೃದ್ಧಿ ಹೊಂದುತ್ತಿರುವ ಕಾಲದಲ್ಲಿ ಎರಡನೇ ಜೋರ್ಜ್ ಅರಸ
ನು ದೇಹವಿಯೋಗವಾದನು. ಅವನು ಸ್ವತಹಾ ಧೈರ್ಯಶಾಲಿಯೇ,
ಧೊರೆತನ ಮಾಡಿದ್ದರಲ್ಲಿ ಶಾಂತವೂ ನೆಟ್ಟನೆತನವೂ ಉಳ್ಳ ಅಧಿಪತಿ.
ಆದಾಗ್ಯೂ ಅವನು ಇಂಗ್ಲಾಂದ್ ಶೀಮೆಯ ಮೇಲಿಗಿಂತ ಹಾನೋವರ್
ನಾಡಿನ ಮೇಲನ್ನು ಅಧಿಕವಾಗಿ ಅಪೇಕ್ಷಿಸಿದ್ದದರಿಂದ ಇಂಗ್ಲಾಂಥ್ ದೇಶ
ದವರು ಅವನನ್ನು ಘನ ಪಡಿಸಿದ್ದಾಗ್ಯೂ ಸ್ನೇಹಿಸಲಿಲ್ಲ.

## CHAPTER XXII.

### THE WAR OF AMERICAN INDEPENDENCE.

FROM A. D. 1760 TO A. D. 1783.

## 22 ಸಂಧಿ.

### ಸ್ವಾಧೀನಕ್ಕಾಗಿ ಮಾಡಿದ ಅಮೆರಿಕ ಯುದ್ಧವು.

ಕ್ರಿ. ಶ. 1760 ಮೊದಲು ಕ್ರಿ. ಶ. 1783 ವರೆಗೂ.

ಮುಖ್ಯ ತಾರೀಖುಗಳು: (George III) 3ನೇ ಜೋರ್ಜ್ ಹುಟ್ಟಿದ್ದು. ಕ್ರಿ. ಶ. 1738. ಸಿಂಹಾಸನಕ್ಕೆ ಬಂದದ್ದು 1760. (American) ಅಮೆರಿಕ ಯುದ್ಧದ ಪ್ರಾರಂಭವು 1775. ತೀರಿದ್ದು 1783. ಅದೇ ಕಾಲದ ಇಂಡ್ಯ ಚರಿತ್ರೆ: (Arcot) ಆರ್ಕಾಡು ಇಂಗ್ಲಿಷಿನವರಿಂದ ವಶ ಮಾಡಲ್ಪಟ್ಟದ್ದು 1760. (Lord Clive) ಕ್ಲೈವ್ ಪ್ರಭು ಗವರ್ನರ್ ಜೆನರಾಲ್ ಆದದ್ದು 1765. ಇಂಗ್ಲಿಷಿನವರು (Hyder) ಹೈದರನ ಮೇಲೆ ಯುದ್ಧ ಮಾಡಿದ್ದು 1768. ಹೈದರನು ತೀರಿಹೋದದ್ದು 1782. (Tippu Sultan) ಟೀಪು ಸುಲ್ತಾನನಿಗೂ ಇಂಗ್ಲಿಷರಿಗೂ ಯುದ್ಧ 1783. ಶ್ರೇಷ್ಠ ನಾಮಗಳು: (Captain Cook) ಕೆಪ್ತನ್ ಕೂಕ್ 1728—1779. (Byron) ಬೈರೊನ್ 1723—1768. (Herschel) ಹೆರ್ಷೆಲ್ 1738—1822. (Davy) ದೇವಿ 1778—1829. (Sir William Jones) ಸರ್ ಉಲ್ಲಿಯಮ್ ಜೋನ್ಸ್ 1746—1794. (Wesley) ವೆಸ್ಲಿ 1703—1791. (Howard) ಹೊವಾರ್ಡ್ 1726—1790. (Watt) ವಾಠ್ 1736—1819.

ಸತ್ತು ಹೋದ ಅರಸನ ಮೊಮ್ಮಗನಾದ (George III) ಮೂರನೇ ಜೋರ್ಜ್ ಎಂಬವನಿಗೆ ಇಂಗ್ಲಾಂದಿನ ರಾಜತ್ವವೂ ಕಿರೀಟವೂ ಕೊಡಲ್ಪಟ್ಟವು. ಈ ಯೌವನ ಅರಸನ ಧೊರೆತನದ ಆರಂಭವು ಒಳ್ಳೇ ಆರಂಭವು. ಇದಲ್ಲದೆ ಅನೇಕ ಜನರು ಅವನು ಬಹಳ ದಿವಸಗಳು ಬಾಳಿ ಧೊರೆತನ ಮಾಡುವಂತೆ ದೇವರು ಅವನಿಗೆ ದಯ ಮಾಡಲಿ ಎಂದು ಪ್ರಾರ್ಥಿಸುವದಕ್ಕೆ ಹೇತುವೆಯಾಗಿದ್ದದ್ದಲ್ಲದೆ, ಅವನು ಬದುಕಿದ

ದೀರ್ಘಾಯುಷ್ಯದ ಕಾಲವೆಲ್ಲಾ ಜನರು ಆದಿಯಲ್ಲಿ ಕೋರಿ ಇದ್ದ ಕೊ ರಿಕೆಗಳು ಕೆಟ್ಟು ಹೋಗಲಿಲ್ಲ. ತನಗೆ ಮುಂಚೆ ಇದ್ದ ಇಬ್ಬರು ಅರಸರು ಪರದೇಶಗಳಲ್ಲಿ ಹುಟ್ಟಿದವರು. ಇವನು ಇಂಗ್ಲಾಂಡ್ ಶೀಮೆಯಲ್ಲಿ ಯೇ ಹುಟ್ಟಿದವನು. ಈ ಸಂಕಲ್ಪ ಒಂದೇ ತನ್ನ ಪ್ರಜೆಗಳಲ್ಲಿ ಪ್ರೀತಿಯ ನ್ನು ಉಂಟು ಮಾಡುವದಕ್ಕೆ ಹೇತುವೆಯಾಗಿದ್ದದರಿಂದ ಅವನೂ ಅದ ಕ್ಕಾಗಿ ಸಂತೋಷ ಪಟ್ಟನು. ಅವನು ಕಿರೀಟ ಧರಿಸಿದ ಮಾರಣೆ ವರುಷ ದಲ್ಲಿ ಜರ್ಮನಿ ದೇಶಕ್ಕೆ ಹೋಗಿ (Mecklenburgh Strelitz) ಮೆಕ್ಲನ್ ಬುರ್ಗ್ ಸ್ಟ್ರೆಲಿತ್ಸ್ ಊರಿನವಳಾದ (Princess Charlotte) ಚಾರ್ಲೋ ತ್ ಎಂಬ ರಾಜಕನ್ನಿಕೆಯನ್ನು ವಿವಾಹ ಮಾಡಿ ಕೊಂಡನು. ಆ ರಾಣಿ ಯ ಸಂಗಡ ಅನೇಕ ವರುಷಗಳ ಮಟ್ಟಿಗೂ ಭಾಗ್ಯವಂತನಾಗಿ ಬಾಳಿದ ನು. ಅರಸನೂ ರಾಣಿಯೂ ಇಬ್ಬರೂ ಬೇರೆಯಾಗದ ಒಂದೇ ಮನ ಸ್ಸೂ ಕ್ರಿಯೆಯೂ ಉಳ್ಳವರಾಗಿದ್ದರು. ಮತ್ತು ಅವರ ಆಸ್ಥಾನವು ಆ ಕಾಲದಲ್ಲಿ ಯೂರೋಪಿನಲ್ಲಿರುವ ಸಕಲ ರಾಜಸ್ಥಾನಗಳಿಗಿಂತ ಮಹಾ ಮರ್ಯಾದೆಯೂ ಉತ್ತಮವೂ ಆದದ್ದೆಂದು ಪ್ರಸ್ತಾಪ ಹೊಂದಿತು.

ಇದು ವರೆಗೂ ಅಪಜಯವಿಲ್ಲದೆ ನಡೆದ ಫ್ರಾನ್ಸ್ ಯುದ್ಧವು ಇ ನ್ನೂ ಅಧಿಕ ಬಲವಾಗಿ ನಡಿಯಲಾಯಿತು. ಫ್ರಾನ್ಸರು ಸ್ಪಾನಿಯ ರನ್ನು ತಮ್ಮ ಸಂಗಡ ಸ್ನೇಹದ ಒಡಂಬಡಿಕೆ ಮಾಡುವಂತೆ ಬೋಧನೆ ಮಾ ಡಿದರು. ಅವರು ಸಹ ಸಂಗಡಲೇ ಇಂಗ್ಲಿಷಿನವರ ಸಂಗಡ ಯುದ್ಧ ಕೋರಿ ಕೊಳ್ಳದೆ ಇದ್ದರು. ಆದಾಗ್ಯೂ ಆ ಕಾಲದಲ್ಲಿ ಇಂಗ್ಲಾಂಡ್ ಶೀ ಮೆಯ ಸಕಲ ಸಂಸ್ಥಾನದ ಮೇಲುಗಳಿಗೂ ಕಾರಣನಾಗಿದ್ದ ಜ್ಞಾನವೂ ಧೈರ್ಯವೂ ಉಳ್ಳವನಾದ (Mr. Pitt) ಪಿತ್ತ್ ಎಂಬ ಧೊರೆಯು ಅವ ರನ್ನು ವಿರೋಧಿಸಿ ಸಂಗಡಲೇ ಯುದ್ಧವು ಸಾರ ಬೇಕೆಂದು ಕೋರಿದನು. ಅವನ ಕೋರಿಕೆಯನ್ನು ಈಡೇರಿಸುವದಕ್ಕೆ ಅಭ್ಯಂತರ ಕಂಡದ್ದರಿಂದ, ಅವ ನು ತನ್ನ ಮಂತ್ರಿತನವನ್ನು ಬಿಟ್ಟು ನಿರ್ವತಿಯಾದನು. ಆದಾಗ್ಯೂ ಅ ವನ ತರುವಾಯ ಬಂದ ಮಂತ್ರಿಯಾದವನು ಅವನ ಕೋರಿಕೆಯ ಪ್ರಕಾ ರವೇ ಮಾಡ ಅವಶ್ಯವಾದದರಿಂದ ಇಂಗ್ಲಾಂಡರಿಗೂ ಫ್ರಾನ್ಸರು ಸ್ಪಾ ನಿಯರು ಎಂಬ ಎರಡು ಜಾತಿಗಳವರಿಗೂ ಯುದ್ಧ ಸಂಭವಿಸಿತು. ಪ

ರಾತನ ಹಗೆಯವರು ಹ್ಯಾಗೋ ಹಾಗೆಯೇ ಈ ನೂತನ ಶತ್ರುಗಳು ಸಹ ಒಳ ಬೀಳಲಾದರು. ಸ್ಪಾನಿಯರ ವರ್ತಕರೇವುಗಳು ತಡೆ ಮಾಡಲ್ಪಟ್ಟವು. ಮತ್ತು ಆ ಶೀಮೆಯ ನಾನಾ ಪ್ರದೇಶಗಳ ಮಿರಾಶಿಗಳು ಹಿಡಿಯಲ್ಪಟ್ಟವು: ಆ ಶೀಮೆಯವರಿಗೆ ಪಶ್ಚಿಮ ಹಿಂದೂ ದ್ವಿಪಗಳಲ್ಲಿ ಮುಖ್ಯವಾಗಿದ್ದ (Havanna)ಹವನ್ನಾ ಎಂಬ ಪಟ್ಟವೂ, ಪೂರ್ವ ಹಿಂದೂ ದ್ವೀಪಗಳಲ್ಲಿರುವ ಫಿಲಿಪ್ಪಿ ದ್ವೀಪಗಳಲ್ಲಿ ಶ್ರೇಷ್ಠ ಪಟ್ಟವಾದ (Manilla) ಮನಿಲ್ಲವೂ ಇಂಗ್ಲಿಷಿನವರ ಕೈವಶವಾದವು. ಈ ಪ್ರಕಾರ ಕೆಲವು ದಿವಸಗಳೊಳಗೆ ಫ್ರಾನ್ಸೂ ಸ್ಪೇನೂ ಇಂಗ್ಲಾಂದಿನ ಸಂಗಡ ಯುದ್ಧ ಮಾಡಿ ಜಯಿಸಲಾರದೆ ತಮಗೇ ಬಹು ಕೇಡುಗಳು ಸಂಭವಿಸುವದನ್ನು ತಿಳಿದು ಸಮಾಧಾನವನ್ನು ಕೋರಿದ್ದರಿಂದ (Paris) ಪಾರಿಸ್ ಪಟ್ಣದಲ್ಲಿ ಇಂಗ್ಲಿಷಿನವರಿಗೂ ಅವರಿಗೂ ಸಮಾಧಾನವೊಡಂಬಡಿಕೆ ಏರ್ಪಡಿಸಲ್ಪಟ್ಟಿತು.

ಆ ಕಾಲದಲ್ಲಿ ಮಹಾ ಬ್ರಿತನಿಗುಂಟಾಗಿದ್ದ ರಾಜ್ಯಭಾರವು ಬಹಳ ವಿಸ್ತಾರವಾಯಿತು. ಗತಿಸಿದ ಯುದ್ಧದಲ್ಲಿ ಅನೇಕ ಹೊಸ ಶೀಮೆಗಳು ಅವರ ಕೈಗಳಲ್ಲಿ ಬಿದ್ದವು. (Canada) ಕಾನದಾ ಶೀಮೆಯು ಶೇರಿಕೆಯಾಯಿತು. ಸ್ಪಾನಿಯರ ಬಳಿಯಲ್ಲಿಯೂ ಫ್ರಾನ್ಸರ ಬಳಿಯಲ್ಲಿಯೂ ಕಟ್ಟಿಕೊಂಡ ಅನೇಕ ಮುಖ್ಯವಾದ ಶೀಮೆಗಳು ಬಿಡಿಸಿ ಕೊಳ್ಳಲ್ಪಡದೆ ಅವರ ವಶದಲ್ಲಿಯೇ ಇದ್ದವು. ಹಿಂದುಸ್ಥಾನಿನಲ್ಲಿ ಇಂಗ್ಲಾಂದಿಗೆ ಶೇರಿದ ರಾಜ್ಯಭಾರವು ಸಹ ಒಳ್ಳೇ ನೆಲೆಯಲ್ಲಿ ನಿಲ್ಲಿಸಲ್ಪಟ್ಟಿತು. ಅದು ಮೊದಲ್ಗೊಂಡು ಇಂಗ್ಲಾಂದ್ ಶೀಮೆಯ ಚರಿತ್ರೆಯು ಒಂದು ಸಣ್ಣ ದ್ವೀಪದ ಚರಿತ್ರೆಯಾಗಿರದೆ, ಯಾವಾಗಲಾದರು ಬೇರೊಂದು ಶೀಮೆಯವರಿಗೆ ಕೊಡಲ್ಪಟ್ಟ ಯಾವ ರಾಜ್ಯಭಾರಂಕ್ಕಿತಲೂ ಮಹಾ ವಿಸ್ತಾರವಾದ ರಾಜ್ಯಭಾರದ ಚರಿತ್ರೆಯಾಯಿತು.

ಪಾರಿಸ್ ಪಟ್ಣದಲ್ಲಿ ಸಮಾಧಾನದ ಏರ್ಪಾಟು ಉಂಟಾದಾಗ, ಅಮೆರಿಕದಲ್ಲಿ ವಿಸ್ತಾರವಾದ ಶೀಮೆಗಳು ಇಂಗ್ಲಿಷಿನವರಿಗೆ ವಸ್ತಿಯಾದ ಸ್ಥಳಗಳಾದವು. ಹ್ಯಾಗಂದರೆ, ಹದಿನಾರನೇ ಶತಮಾನದಲ್ಲಿ ಇಂಗ್ಲಿಷ್ ಮನುಷ್ಯರು ತಮ್ಮ ಪೂರ್ವಿಕರ ಶೀಮೆಯನ್ನು ಬಿಟ್ಟು ಅನ್ಯ ದೇಶದಲ್ಲಿ

ಸಂಚರಿಸ ಹೋಗಿ, ತಮ್ಮ ಪ್ರಿಯವಾದ ಜನರ ಶೀಮೆಗೆ ನೂತನವಾದ
ಮಿರಾಶಿಗಳನ್ನು ಶೇರಿಸ ಪ್ರಾರಂಭಿಸಿದರು. ಇನ್ನು ಅನೇಕರು ಹಿಂದಿನ
ಕಾಲಗಳಲ್ಲಿ ಲಾಭದ ಅಪೇಕ್ಷೆಯಿಂದಲೂ, ಕೀರ್ತಿ ಪ್ರತಾಪದ ಅಪೇಕ್ಷೆ
ಯಿಂದಲೂ ಪ್ರೇರಿಸಲ್ಪಟ್ಟು ಅವರ ಹೆಜ್ಜೆಗಳಲ್ಲಿ ನಡೆದರು. ಅದಕ್ಕೆ ಸ
ಮ್ಮಂಥವಾದ ಶತಮಾನದಲ್ಲಿ ಇಂಗ್ಲಾಂಡ್ ಶೀಮೆಗೆ ಆಪತ್ತು ಉಂಟಾ
ಗಿ, ಒಂದೇ ರಕ್ತವಾದವರು ಒಬ್ಬರ ಸಂಗಡಲೊಬ್ಬರು ಯುದ್ಧ ಮಾಡ
ಪ್ರಾಪ್ತಿಸಿದ ಕಾಲದಲ್ಲಿ ಏಕಾಂತವಾಗಿದ್ದು ಸಮಾಧಾನವಾಗಿ ಬದುಕ ಬ
ಹುದು ಎಂಬುವ ರೋಷದಿಂದ ಅನೇಕರು ಅಮೆರಿಕದ ಘಡವನ್ನು ಶೇರಿ
ದರು. ಮತ ಆರಾಧನೆಗಳ ಉದ್ದಿಶ್ಯ ಅನೇಕರು ಇಂಗ್ಲಾಂಡಿನಲ್ಲಿ ಧೊರೆತ
ನದವರಿಂದ ಕಷ್ಟ ಹೊಂದಿದರು. ಕಷ್ಟವೂ ಆಟಂಕವೂ ಇಲ್ಲದೆ ತಮ್ಮ
ದೇವರನ್ನು ಆರಾಧಿಸುವ ಹಾಗೆ ಅಮೆರಿಕದಲ್ಲಿರುವ ದಟ್ಟವಾದ ಕಾಡು
ಗಳಲ್ಲಿಯೂ ವಿಸ್ತಾರವಾದ ಬೈಲುಗಳಲ್ಲಿಯೂ ಹೋಗಿ ತಂಗುವ ಸ್ಥಾ
ನಗಳನ್ನು ಕಂಡು ಕೊಂಡರು. ಹೀಗೆ ಹೋದ ಆ ಪ್ರಜೆಗಳು ದಿನಚರಿ
ಯಲ್ಲಿಯೂ ಸಂಖ್ಯಾಭಿವೃದ್ಧಿಯಾಗಿ ಬಲ ಪಡುತ್ತಾ ಬಂದವು. ಒಂದು
ಕಾಲದಲ್ಲಿ ಅರಣ್ಯಗಳೂ ವನಾಂತ್ರಗಳೂ ಆಗಿ ಇದ್ದ ಸ್ಥಳಗಳಲ್ಲಿ ನೂತನ
ವಾದ ನಗರಗಳು ತೋರಲಾದವು. ಅವುಗಳಿಗೆ ಸಾಧಾರಣವಾಗಿ ಇಂ
ಗ್ಲಾಂಡ್ ಶೀಮೆಯ ಪಟ್ಣಗಳ ನಾಮಗಳೇ ಇಡಲ್ಪಟ್ಟವು. ಆ ಶೀಮೆ
ಯ ಪೂರ್ವಿಕ ನಿವಾಸಿಗಳು ಸಹ ನೂತನ ವಾಸಿಗಳನ್ನು ಕಂಡು, ಅಗಲಿ
ಹೋಗಿ ಬೆಟ್ಟಗಳಲ್ಲಿಯೂ ವನಾಂತ್ರಗಳಲ್ಲಿಯೂ ನಿವಾಸ ಮಾಡಿದರು.

ಹೀಗೆ ತಮ್ಮ ತಾಯಿಶೀಮೆಯನ್ನು ಬಿಟ್ಟು ಅಗಲಿ, ಅಮೆರಿಕದ
ಲ್ಲಿ ನಿಂತು ಹೋದ ಪ್ರಜೆಗಳೂ ತಮ್ಮ ತಾಯಿಶೀಮೆಯಲ್ಲಿ ಇಟ್ಟಿದ್ದ
ಪ್ರೀತಿಯನ್ನು ಕಳಕೊಂಡರು. ಹಳೇದು ಹೋಗಿ ಹೊಸದೇ ಅವರ
ಪ್ರೀತಿಗೆ ಸ್ಥಾನವಾಯಿತು. ಹಾಗಿರಲಾಗಿ, ಮೇಲೆ ಹೇಳಿದ ಯುದ್ಧವು
ಮುಗಿದ ಕಾಲದಲ್ಲಿ ಆ ಯುದ್ಧದ ಖರ್ಚನ್ನು ತೀರಿಸುವ ಉದ್ದಿಶ್ಯ ಇಂ
ಗ್ಲಾಂಡ್ ಶೀಮೆಯ ಮಂತ್ರಿಗಳು ಅಮೆರಿಕದವರ ಬಳಿಯಲ್ಲಿಯೂ ತೆರಿ,
ಗೆ ರೂಢಿಸ ಬೇಕೆಂದು ತೀರಿಸಿದ ಪ್ರಮಾಣದಿಂದ ಸಾಧಾರಣವಾಗಿ ಸಕ
ಲ ಅಮೆರಿಕದವರೂ ತಮ್ಮ ತಾಯಿದೇಶವನ್ನು ಅಸಹ್ಯಿಸುವಂತೆ ಹೇ

ತುವೆಯಾಯಿತು. ಈ ಪ್ರಮಾಣವು ನ್ಯಾಯವಾದದ್ದೇ ಹೊರ್ತು ಬೇರೆ ಅಲ್ಲ. ನಾವಿಕಸೈನ್ಯಗಳಿಂದಲೂ ಥಡದ ಸೈನ್ಯಗಳಿಂದಲೂ ಕಾವಲು ಹೊಂದಿ ಆದರಿಸಲ್ಪಡುವವರು ಎಲ್ಲಿರೂ ತಮ್ಮನ್ನು ಹೀಗೆ ಆದರಿಸಿದ ಯುದ್ಧವೀರರಿಗೆ ಬಹುಮಾನ ಮಾಡುವ ವಿಷಯದಲ್ಲಿ ಬೇರೊಬ್ಬರ ಸಂಗಡ ಕೂಡಿ ಕೊಳ್ಳುವದು ಸರಿ. ಒಂದು ರಾಜ್ಯಚಾರದಲ್ಲಿ ಯುದ್ಧವಾಗುವ ಕಾಲದಲ್ಲಿ ಅದರಿಂದ ಉಂಟಾಗುವ ಸಾಮಾನ್ಯವಾದ ಕಷ್ಟವನ್ನಾಗಲಿ ಕೀರ್ತಿಯನ್ನಾಗಲಿ, ಆ ರಾಜ್ಯಚಾರಕ್ಕೆ ಶೇರಿದ ಯಾವ ದೇಶದವರಾದರೂ ಸಾಮಾನ್ಯವಾಗಿ ಹೊಂದುವದು ತಕ್ಕದ್ದೇ. ಇದಲ್ಲದೆ ಅಮೆರಿಕದವರು ತೆರಿಗೆ ಕೊಡುವದಕ್ಕೆ ಉಪೇಕ್ಷಿಸಿದವರಲ್ಲ. ತಮ್ಮ ಅನುಮತಿಯನ್ನು ಕೋರದೆ ಇಂಗ್ಲಾಂಡ್ ಪಾರ್ಲಿಮೆಂಟಿನವರು ಹ್ಯಾಗೆ ನಮ್ಮ ಮೇಲೆ ತೆರಿಗೆ ಹಾಕ ಬಹುದೆಂದು ಮಾತ್ರ ಆಕ್ಷೇಪಿಸಿದರು. ಆ ಪಾರ್ಲಿಮೆಂಟ್ ಸಂಘದಲ್ಲಿ ಅಮೆರಿಕದವರಿಗೆ ಪ್ರತಿನಿಧಿ ಇಲ್ಲ. ಹಾಗೆ ಪ್ರತಿನಿಧಿ ಇಲ್ಲದೆ ತಮ್ಮ ಅಭಿಪ್ರಾಯವನ್ನು ಆ ಪಾರ್ಲಿಮೆಂಟಿನವರು ತೆಗದು ಕೊಳ್ಳಸ್ಥಳವಿಲ್ಲದೆ ಇರುವಲ್ಲಿ ಅವರು ತಮ್ಮ ಮೇಲೆ ತೆರಿಗೆ ಹಾಕುವದು ಇಂಗ್ಲಾಂಡ್ ಶೀಮೆಯ ಪ್ರಮಾಣಗಳಿಗೂ ಏರ್ಪಾಟುಗಳಿಗೂ ವಿರೋಧವಾದದ್ದು. ಇದರಿಂದ ಅವರ ಮೇಲೆ ಹೀಗೆ ತೆರಿಗೆ ವಿಧಿಸಿದ್ದು ಇಂಗ್ಲಾಂಡ್ ಶೀಮೆಯ ನ್ಯಾಯಪ್ರಮಾಣದ ತಾತ್ಪರ್ಯಕ್ಕೆ ಸರಿ ಬೀಳಲಿಲ್ಲವೆಂಬುವದು ತೋರುತ್ತದೆ.

ಹೀಗೆ ಅಮೆರಿಕದ ಪ್ರಜೆಗಳು ಗುಣುಗುಟ್ಟಿ ಕೊಂಡಿರುವದನ್ನು ಅರಿತಾಗ್ಯೂ, ಆಗ ಮೊದಲನೇ ಮಂತ್ರಿಯಾಗಿದ್ದ (Grenville) ಗ್ರೆನ್‌ವಿಲ್ ಧೊರೆಯು ಏನು ಮಾಡಿದನಂದರೆ, ಇಂದಿನಿಂದ ಅಮೆರಿಕದಲ್ಲಿ ಹುಟ್ಟುವ ಪತ್ರಕರಾರು ಮುಂತಾದವುಗಳನ್ನೆಲ್ಲಾ ಮಿತವಾದ ಒಂದು ಶೀರ್ವೆಯುಳ್ಳ ಮುದ್ರೆಕಾಗದಗಳಲ್ಲಿ ಏರ್ಪಡಿಸ ಬೇಕೆಂದು ವಿಧಿಸಿದನು. ಈ ಮುದ್ರೆಏರ್ಪಾಟು ಅಮೆರಿಕದವರಿಗೆ ಮಿತಿ ಇಲ್ಲದ ಕೋಪವನ್ನು ಉಂಟು ಮಾಡಿತು. ಏನೋ ಶೀಮೆಗೆಲ್ಲಾ ದೊಡ್ಡ ವಿಪತ್ತು ಬಂತೆಂಬುವ ಹಾಗೆ ತೋರಿಸಿದರು. ಯಾವ ಮಹಾ ಶ್ರೇಷ್ಠನಾದರೂ ಸತ್ತರೆ ಹ್ಯಾಗೋ ಹಾಗೆಯೇ ಬೊಸ್ಟೋನ್ ಪಟ್ಣದಲ್ಲಿ ಸಾವುಘಂಟೆ ಬಡಿಯಲ್ಪ

ಟ್ಟಿತು. ಅರಸನಿಗೆ ಖಂಡನೆಯಾದ ನಿರೂಪಗಳನ್ನು ಬರೆದು ಕಳುಹಿಸಿದರು. ಈ ಅತ್ಯಂತರವಾದ ಖಿರ್ಪಾಟನ್ನು ಸಕಲರೂ ಖಿಕೀಚವಿಸಿ ವಿರೋಧಿಸುವ ಉದ್ದಿಶ್ಯ ಆಗ ಇದ್ದ ಹದಿಮೂರು ಪ್ರಜಾನಿವಾಸಶೀಮೆಗಳಿಂದ ಮುಖ್ಯಸ್ಥರಾದವರು ಬಂದು (New York) ನ್ಯೂ ಯೋರ್ಕ್ ಪಟ್ಟದಲ್ಲಿ ಸಭೆಯಾಗಿ ಕೂಡಿದರು.

ಇಂಗ್ಲಾಂಡು ಮಂತ್ರಿಸಭೆಯಲ್ಲಿ ಅನೇಕ ಮಾರ್ಪಡುವಿಕೆಗಳು ಉಂಟಾದ ತರುವಾಯ 1770ನೇ ವರುಷದಲ್ಲಿ (Lord North) ನೊರ್ತ್ ಎಂಬುವ ಪ್ರಭುವು ವೊದಲನೇ ಮಂತ್ರಿಯಾದನು. ಅವನು ಅಮೆರಿಕದವರಿಗೆ ಹಾಕಿದ್ದ ಬೇರೆ ಶೀರ್ವೆಗಳನ್ನೆಲ್ಲಾ ನಿವರ್ತಿಸಿ, ಆ ದೇಶದಲ್ಲಿ ತಾಯಿಶೀಮೆಯ ಅಧಿಕಾರವು ನಿಲ್ಲುವ ಉದ್ದಿಶ್ಯ ಒಂದು ಸ್ವಲ್ಪವಾದ ತೇ ಎಲೆಯ ಶೀರ್ವೆಯನ್ನು ಮಾತ್ರ ತೆಗದು ಹಾಕದೇ ನಿಲ್ಲಿಸಿದನು. ಮುದ್ರೆ ಖಿರ್ಪಾಟಿನ ವಿಷಯ ಇಂಗ್ಲಾಂದಿನ ಪಾರ್ಲಿಮೆಂಟಿನಲ್ಲಿ ಆ ಘೋರವಾದ ತರ್ಕಗಳು ಉಂಟಾಗಲಾಗಿ, ಇನ್ನು ಮೇಲೆ ಅಮೆರಿಕದವರ ಕೋರಿಕೆಗಳನ್ನು ತಡೆಯುವದು ಅವರಲ್ಲಿಯೂ ಒಂದು ವೇಳೆ ಫ್ರಾನ್ಸರಲ್ಲಿಯೂ ಕೂಡ ಯುದ್ಧವಾಗಿ ಮುಗಿಯುವದೆಂದು ಪಿತ್ತ್ ಧೊರೆಯು ಮುನ್ಗಾ್ರಹಿಕೆಯಿಂದ ತಿಳಿದು ಕೊಂಡದರಿಂದ ಆ ಸಂಘದಲ್ಲಿ ತನ್ನ ಚಾತುರ್ಯವೆಲ್ಲಾ ತೋರಿಸಿ ಎಲ್ಲರು ಸಮ್ಮತಿಸುವಂತೆ ಆಶ್ಚರ್ಯವಾಗಿ ಮಾತಾಡಿದಾಗ್ಯೂ, ಅವನು ನೆನಸಿದ ಶಾಂತವುಳ್ಳ ಅಭಿಪ್ರಾಯಗಳನ್ನು ಪೂರ್ಣವಾಗಿ ಒಪ್ಪಿ ಕೊಳ್ಳಲಿಲ್ಲ. ಅವು ಒಪ್ಪಿ ಕೊಳ್ಳಲ್ಪಟ್ಟಿದ್ದರೆ ಆ ಎರಡು ಶೀಮೆಗಳಲ್ಲಿಯೂ ಎಂದಿಗೂ ಯುದ್ಧ ಉಂಟಾಗಿರಲಾರದು. ತೇ ಎಲೆಯ ಶೀರ್ವೆಯು ಅಲ್ಪವಾದದ್ದಾಗಿ ಇದ್ದಾಗ್ಯೂ, ಅಮೆರಿಕದ ಪ್ರಜೆಗಳು ಅದರ ಮೇಲೆ ಬಹು ಕೋಪಗೊಂಡು ಅದನ್ನು ಅಂಗೀಕರಿಸುವದಿಲ್ಲವೆಂದು ತಡೆದದ್ದು ಮಾತ್ರವಲ್ಲದೆ, ಬೊಸ್ಟೊನ್ ರೇವಿನಲ್ಲಿ ಕೆಲವು ಹಡಗಗಳು ತೇ ಎಲೆಯ ಭಾರ ಹೊತ್ತು ಕೊಂಡು ನಿಂತಾಗ ಆ ಪಟ್ಟದಲ್ಲಿ ಕೆಲವರು ಮಾರುವೇಷ ಧರಿಸಿ ಕೊಂಡು ಅವುಗಳಲ್ಲಿ ಹೊಕ್ಕು ಅವುಗಳಲ್ಲಿದ್ದ ಸಕಲ ತೇ ಎಲೆಯ ಪೆಟ್ಟಿಗೆಗಳನ್ನು ನೀರಿನಲ್ಲಿ ಎತ್ತಿ ಹಾಕಿ ಬಿಟ್ಟರು. ಆ ಕೃತ್ಯದ ನಿಮಿತ್ತ ಆ ಪಟ್ಟದವರನ್ನು ಶಿಕ್ಷಿಸುವ ಉದ್ದಿಶ್ಯ ಬೊಸ್ಟೊನ್

ಪಟ್ಟಕ್ಕೆ ಆ ಪರಿಯಂತರ ಇದ್ದ ವರ್ತಕಶ್ಲಾಘ್ಯಗಳು ಪೂರ್ಣವಾಗಿ ನಿಲ್ಲಿಸಲ್ಪಟ್ಟವು; ಮತ್ತು ಅಲ್ಲಿ ಸಮಾಧಾನವೂ ಕ್ರಮವೂ ಉಂಟಾಗುವದಕ್ಕೋಸ್ಕರ ಬೇರೆ ಸೈನ್ಯಗಳು ಸಹ ಕಳುಹಿಸಲ್ಪಟ್ಟವು.

ಆದಾಗ್ಯೂ ಅಮೇರಿಕದವರಿಗೆ ಉಂಟಾದ ಉಗ್ರವು ದೊಡ್ಡದಾಯಿತು. ತಾಯಿಶೀಮೆಗೂ ಅವರಿಗೂ ಅನೇಕ ಸಂವತ್ಸರಗಳ ಮಟ್ಟಿಗೂ ಹೆಚ್ಚಿದ ಕ್ರೋಧದಿಂದ ಯುದ್ಧ ನಡಿಯುತ್ತಾ ಬಂತು. ಅದು ನಿವರ್ತಿಯಾಗ ಉಭಯತ್ರರಲ್ಲಿ ಒಬ್ಬರು ತಾವು ಪ್ರಾರಂಭಿಸಿದ ಕರ್ಮವನ್ನು ಪೂರ್ಣವಾಗಿ ಬಿಟ್ಟು ಹೊಂದಿಕೆಯಾಗ ಬೇಕೇ ಹೊರ್ತು, ಬೇರೆ ಯಾವ ವಿಧದಲ್ಲಿಯೂ ಆ ಒಳಕಲಹವೂ ಒಳಯುದ್ಧವೂ ನಿಲ್ಲುವದು ಅರಿದು. ಆ ಯುದ್ಧದಲ್ಲಿ (Lexington) ಲೆಕ್ಸಿನ್‌ಗ್ಟನ್ ಊರಿನಲ್ಲಿ ಮೊದಲು ಮೊದಲು ರಕ್ತ ಹರಿಯಿತು. ಆ ಸ್ಥಳದಲ್ಲಿ ಇದ್ದ ಕೆಲವು ಯುದ್ಧಾಯುಧಶಾಲೆಗಳನ್ನು ಇಂಗ್ಲಿಷಿನವರ ದಂಡುಗಳು ವಶ ಮಾಡಿ ಕೊಂಡು ಹಿಂತಿರುಗುವಲ್ಲಿ ಸುಲಭವಾಗಿ ಹೊಡೆದು ಹೊರಡಿಸಿ ಬಿಡುವದಕ್ಕೆ ಅನುಕೂಲವಾಗಿ ಕೂಡಿ ಕೊಳ್ಳದೆ, ಆ ಊರಿನವರು ಅಲ್ಲಿಯೂ ಇಲ್ಲಿಯೂ ನಿಂತು ಕೊಂಡು ಆ ಇಂಗ್ಲಿಷ್ ರಾಣುವೆಯವರ ಮೇಲೆ ಸುಟ್ಟರು. ಮತ್ತು ನಾನಾ ತೊಂದರೆಯೂ ಮಾಡಿದರು. ಬೊಸ್ಟೊನ್ ಪಟ್ಟಣದ ಬಳಿಯಲ್ಲಿರುವ (Bunker's Hill) ಬಂಕರ್ ಬೆಟ್ಟದಲ್ಲಿ ಕಠಿಣವಾದ ಯುದ್ಧ ಉಂಟಾಯಿತು. ಅದರಲ್ಲಿ ಇಂಗ್ಲಿಷಿನವರು ಕೆಲವು ಸಾರಿ ಅಪಜಯ ಪಟ್ಟಾಗ್ಯೂ, ಕಡೆಯಲ್ಲಿ ಪಟ್ಟಣದ ಬಳಿಯ ಅಮೇರಿಕದವರು ಇಳಿದಿದ್ದ ದಂಡಿನಿಂದ ಅವರನ್ನು ಹೊರಡಿಸಿ ಬಿಟ್ಟರು. ಆದರೂ ಅಮೇರಿಕದವರಿಗೆ ಯುದ್ಧಸಾಧನೆ ಇಲ್ಲದೆ ಹೋದಾಗ್ಯೂ ಇಂಗ್ಲಿಷಿನವರಿಗಿಂತ ಸಂಖ್ಯೆಯಲ್ಲಿ ಅಧಿಕವಾಗಿದ್ದರು. ಅವರ ದಂಡಿನಲ್ಲಿ ಗುರಿ ತಪ್ಪದೆ ಸುಡುವ ಒಳ್ಳೇ ಗುರಿಗಾರರು ಅನೇಕರು ಇದ್ದರು.

ಇಷ್ಟು ವರೆಗೂ ಒಂದೇ ದೇಶಸ್ಥರೊಳಗೆ ನಡೆದ ಒಳಕಲಹದಂತೆ ಇದ್ದ ಈ ಯುದ್ಧವು ಮಾರಣೆ ವರುಷದ ಜುಲಾಯಿ ತಿಂಗಳ 4ನೇ ತಾರೀಖಿನಲ್ಲಿ (United States) *"ಯೂನೈತೆದ್ ಸ್ತೇತ್ಸ್ ನಾಡಿನವರು"

*ಐಕ್ಯ ಪಟ್ಟ ಶೀಮೆಗಳು.

ಸಭೆ ಕೂಡಿ ಮಾಡಿದ ತೀರ್ಮಾನದಿಂದ ಬೇರೆ ವಿಧವಾದದ್ದಾಯಿತು. ಹ್ಯಾಗಂದರೆ, ಆ ದಿವಸದಲ್ಲಿ ತಮ್ಮನ್ನು ಸ್ವಾಧೀನನಾಡಿನವರೆಂದು ಪ್ರಕಟ ಮಾಡಿದರು. ಇದಕ್ಕೆ ಮುಂಚೆ ಅಮೆರಿಕದವರಿಗೂ ಅವರ ಜನನ ದೇಶಕ್ಕೂ ಉಂಟಾಗಿದ್ದ ಹಗೆಯು ಒಂದು ವೇಳೆ ನಿವರ್ತಿಯಾಗುವದಕ್ಕೆ ಸ್ಥಳವಿತ್ತು. ಮೇಲೆ ಹೇಳಿದ ಪ್ರಕಟಣೆಯು ಪ್ರಸಿದ್ಧವಾದದರಿಂದ ಇನ್ನು ಮೇಲೆ ಹಾಗೆ ನಿವರ್ತಿಯಾಗಲಿಕ್ಕೆ ಎಷ್ಟು ಮಾತ್ರವೂ ಕೂಡದೆ ಹೋಯಿತು. ಅಂದಿನಿಂದ ಆ ಯುದ್ಧವು ಸಮಾಧಾನವಾಗುವದಕ್ಕೆ ಹೇತುವೆ ಇಲ್ಲದೆ ಸ್ವಾಧೀನದ ಉದ್ದಿಶ್ಯ ನಡಿಯುವಂತೆ ಆಯಿತು. ಇಂಗ್ಲಿಷಿನವರು ಒಳ್ಳೇ ಯುದ್ಧಸಾಧನೆ ಬಲ್ಲಿವರಾದದರಿಂದ ಆರಂಭದಲ್ಲಿ ಜಯ ಹೊಂದುತ್ತಾ ಬಂದರು. ಆದಾಗ್ಯೂ ಕೆಲವು ದಿವಸಗಳಿಗೆ ಮುಂಚೆ (George Washington) 'ಜೋರ್ಜ್ ವಾಷಿಂಗ್ಟನ್ ಎಂಬುವ ದಳಕರ್ತನು ಅಮೆರಿಕದ ರಾಣುವೆಗಳಿಗೆಲ್ಲಾ ಶ್ರೇಷ್ಠ ಸೈನ್ಯಾಧಿಪತಿಯಾಗಿ ವಿರ್ಪಡಿಸಲ್ಪಟ್ಟನು. ಅವನು ಮಹಾ ಧೈರ್ಯವೂ ಶೌರ್ಯವೂ ಉಳ್ಳ ಪುರುಷನು. ಕಷ್ಟ ಬಂದ ಕಾಲದಲ್ಲಿ ಯಾವದನ್ನಾದರೂ ತಳ್ಳಿ ಬಿಡುವಂಥವನು. ಮೋಸ ಪ್ರಾಪ್ತಿಸುವ ಕಾಲದಲ್ಲಿ ಮನಸ್ಸು ಚದರದವನು. ಅವನು ಅಮೆರಿಕದವರ ಪಕ್ಷವನ್ನು ಹೆಚ್ಚಿನ ಧರ್ಮದಿಂದ ಅನುಸರಿಸಿ ವಿವೇಕವಾಗಿ ಕಡೆ ಮುಟ್ಟುವಂತೆ ಸಾಧಿಸಿದನು. ಅವನು ತನ್ನ ಶೌರ್ಯಪ್ರತಾಪದಲ್ಲಿ ಯಾವ ಪ್ರಕಾರ ಹೆಚ್ಚಿದನೋ ಅದೇ ಪ್ರಕಾರ ತನ್ನ ಧರ್ಮಶೀಲವಾದ ನಡತೆಯಲ್ಲಿಯೂ ಹೆಚ್ಚಿದನು.

ಕಾನಡಾ ಶೀಮೆಯವರು ಬಹುಶಾ ಇಂಗ್ಲಾಂದರಿಗೆ ನಿಜವನ್ನು ತೋರಿಸಿದ್ದರಿಂದ (Burgoyne) ಬುರ್ಗಾಯಿನ್ ಎಂಬ ಸೈನ್ಯಾಧಿಪತಿಯು ಆ ಶೀಮೆಯಿಂದ ಕಲಹಿಸಿದ ನಾಡುಗಳ ಮೇಲೆ ದಂಡು ನಡಿಸಿದನು. ಅವನ ಬರುವಿಕೆಯನ್ನು ತಡೆಯುವದಕ್ಕೆ ಕೂಡಿದ ಅಮೆರಿಕದ ಸೈನ್ಯಗಳು ಆತುರವಾಗಿ ಶೇರಿಸಲ್ಪಟ್ಟಾಗ್ಯೂ ಅವರೊಳಗೆ ಧೈರ್ಯಶಾಲಿಗಳೂ ದೃಢವಾಗಿ ನಿಲ್ಲ ತಕ್ಕವರೂ ಅನೇಕರಿದ್ದರು. ಅದರಿಂದ ಅವರು ಬಹು ಶೌರ್ಯದೊಡನೆ ಇಂಗ್ಲಿಷಿನವರನ್ನು ಎದುರಿಸಿದರು. (Behmus) ಬೇಮಸ್ ಬೆಟ್ಟಗಳೆಂಬ ಮೇಡುಗಳಲ್ಲಿ ಎರಡು ಯುದ್ಧಗಳು ಉಂಟಾದ ಮೇ

ಲೆ ಇಂಗ್ಲಿಷ್ ಸೈನ್ಯಾಧಿಪತಿಯು ಹೇರಾಳವಾದ ಶತ್ರುಗಳ ಮುಂದೆ ನಿಲ್ಲಲಾರದೆ ಹಿಂಜೆಗದನು. ಅವನು (Saratoga) ಸರತೋಗ ಎಂಬ ಊರಿಗೆ ಶೇರಿದಾಗ ಎದುರಿಗಳು ನಾಲ್ಕು ದಿಕ್ಕುಗಳಲ್ಲಿಯೂ ಬಂದು ಮುತ್ತಿಕೊಂಡರು. ಅವನಿಗೆ ಕೆಲವು ದಿವಸಗಳ ಮಟ್ಟಿಗೂ ಆಹಾರಾದಿ ಪದಾರ್ಥಗಳು ದೊರಕಲಿಲ್ಲ. ಇದಲ್ಲದೆ ನೋವಿನಿಂದಲೂ ಸಾವಿನಿಂದಲೂ ಅವನ ದಾಣುವೆಯು ಬಹು ಕಡಿಮೆಯಾಗಿ ಹೋಯಿತು. ಅವನ ದಾಣುವೆಯ ಸಂಖ್ಯೆಗಿಂತ ಐದಷ್ಟು ಅಧಿಕವಾದ ಹಗೆಯವರು ಬಂದು ಸುತ್ತಿ ಕೊಂಡರು. ಇನ್ನು ಹಿಂತೆಗಿಯುವದಕ್ಕೆ ಸ್ಥಳವಿಲ್ಲ. ಎದುರಿಸುವದರಿಂದ ವ್ಯರ್ಥವಾಗಿ ಪ್ರಾಣನಷ್ಟವೇ ಹೊರತು ಪ್ರಯೋಜನವಿಲ್ಲ. ಇದರಿಂದ ಶತ್ರುಗಳ ಕೋರಿಕೆಯ ಪ್ರಕಾರ ಅವನು ಅವರಿಗೆ ಬೊಗ್ಗುವದಕ್ಕೆ ಸಮ್ಮತಿಸಿದನು. ಈ ಯುದ್ಧದಲ್ಲಿ ಇದ್ದ ಅಮೇರಿಕ ಸೈನ್ಯಾಧಿಪತಿಯ ಹೆಸರು ಗೇಟ್ಸ್; ಆದಾಗ್ಯೂ ಈ ಕೀರ್ತಿ ಪ್ರತಾಪವು ಎಲ್ಲಾ ಯುದ್ಧಮುಖದಲ್ಲಿ ಮೊದಲನೆಯವನಾಗಿದ್ದ (Arnold) ಆರ್ನೊಲ್ಡ್ ಧೊರೆಗೆ ಸಲ್ಲ ತಕ್ಕದ್ದು. ಆದಾಗ್ಯೂ ತರುವಾಯ ಇವನು ತನ್ನ ಕೆಲಸದಲ್ಲಿ ದ್ರೋಹಿಯಾದನು.

ಆ ಯುದ್ಧವು ಅಮೇರಿಕದಲ್ಲಿ ಇಂಗ್ಲಿಷಿನವರಿಗಿದ್ದ ಅಧಿಕಾರವನ್ನು ಬುಡದ ಸಹಿತ ಮುಗುಚಿ ಬಿಟ್ಟಿತು. ಫ್ರಾನ್ಸರು ಈ ಸಮಾಚಾರವನ್ನು ಕೇಳಿ, ಇನ್ನು ಮೇಲೆ ನಿಮಗೆ ಸಹಾಯ ಮಾಡುವೆವೆಂದು ಅಮೇರಿಕದವರಿಗೆ ದೃಢವಾಕ್ಕು ಕೊಟ್ಟರು. ಅದರಿಂದ ಇಂಗ್ಲಾಂದಿಗೆ ಆ ಪುರಾತನ ಹಗೆಯವರಿಗೂ ಈ ನೂತನ ಶತ್ರುಗಳಿಗೂ ಮೊದಲಲ್ಲಿ ಒಂದು ವ್ಯಾಪಾರದ ಕಟ್ಟುಪಾಟಿನಂತೆಯೂ, ತರುವಾಯ ಆದರಣೀಯ ನಿರ್ಬಂಧನಂತೆಯೂ ಒಂದು ಒಡಂಬಡಿಕೆ ನಿರ್ಣಯಿಸಲ್ಪಟ್ಟಿತು. ಸ್ಪೇನ್ ದೇಶವೂ ಫ್ರಾನ್ಸನ್ನು ಅನುಸರಿಸಿತು. ಹೊಲ್ಲಾಂದೂ ಇಂಗ್ಲಾಂದಿನ ಮೇಲೆ ಯುದ್ಧ ಪ್ರಕಟಿಸಿತು. ಹೀಗೆ ಇಂಗ್ಲಾಂದಿಗೆ ಆ ಕಾಲದಲ್ಲಿ ಯೂರೋಪಿನಲ್ಲಿದ್ದ ಮೂರು ಶೀಮೆಗಳವರ ಸಂಗಡ ಕಲಹ ಉಂಟಾಗಿ ಮೀರಿದ ಪ್ರಜೆಗಳ ಬಳಿಯಲ್ಲಿಯೂ ಹಗೆ ಹೊತ್ತಿತು. ಹಾಗೆ ಹಗೆ ಹೊತ್ತಿದಾಗ್ಯೂ ಆದಿಯಿಂದ ಅದಕ್ಕೆ ಸ್ವಭಾವಿಕವಾದ ಶೌರ್ಯವು ಕುಂದಲಿಲ್ಲ. ಈ ಯು

ದ್ಧದ ನಿಮಿತ್ತ ಯೂನೈಟೆದ್ ಸ್ಟೇಟ್ಸ್ ನಾಡುಗಳು ತಮ್ಮನ್ನು ಪ್ರತ್ಯೇಕ ಪ ಡಿಸಿ ಕೊಂಡಾಗ್ಯೂ ಫ್ರಾನ್ಸೂ ಸ್ಪೇನೂ ಇಂಗ್ಲಿಷಿನವರಿಗೆ ಬೊಗ್ಗಿದವು. ಹೀಗೆ ನೂತನವಾಗಿ ಉಂಟಾದ ವಿಘ್ನಗಳಿಂದ ಈ ಯುದ್ಧವನ್ನು ಕೈ ಬಿ ಟ್ಟು ಬಿಡುವದು ಯುಕ್ತಿ ಎಂದು ಪ್ರಭುಗಳ ಸಂಘದಲ್ಲಿ ಕೆಲವರು ಹೇಳಿ ದಾಗ, ಕೆಲ ದಿನಗಳ ಮುಂಚೆ (Chatham) ಚಾತ್ತಮ್ ಏರ್ಲ್ ಪ್ರಭು ಎಂಬ ಘನವನ್ನು ಹೊಂದಿ ಇದ್ದ ಪಿಟ್ ಎಂಬುವ ಪ್ರಭುವು ಅದನ್ನು ತ ಡೆದು, ಅದು ಕೇಡು ಎಂದು ಹೇಳುವದಕ್ಕೆ ಎದ್ದನು. ಎದ್ದು ನಾವು ಇ ನ್ನೂ ಒಂದು ಸಾರಿ ಯತ್ನಯಿಸುವೆವು. ನಾವು ಬೀಳ ಬೇಕಾದ ಪ್ರಾಪ್ತಿ ಇದ್ದರೆ, ಪುರುಷರಂತೆ ಬೀಳುವ ಎಂದು ಹೇಳಿದನು. ತರುವಾಯ ತನ್ನ ಮಾತನ್ನು ಅಭ್ಯಂತರಿಸಿದವನಿಗೆ ಎದುರುತ್ತರ ಹೇಳ ತನ್ನ ಬಾಯಿ ತೆರೆ ಯುವಾಗ ಒಂದು ಶೆಳೆಯುವಿಕೆ ಬಂದು ಬಿದ್ದನು. ಆ ಮೇಲೆ ಕೆಲವು ವಾರಗಳು ಗತಿಸಿದನಂತರ ಕಾಲವಾದನು. ಹೀಗೆ ತನ್ನ ದೇಶಕ್ಕೆ ಒಳ್ಳೆ ಸೇವೆ ಮಾಡಿದ ಹಿರಿಯನು ತನ್ನ ಮರಣದ ಮಟ್ಟಿಗೂ ತನ್ನ ದೇಶದ ಹೆ ಸರನ್ನೂ ಘನವನ್ನೂ ನಿರ್ವಹಿಸಿದವನಾಗಿ ಸತ್ತನು.

1780ನೇ ವರುಷದಲ್ಲಿ ಲಂದನ್ ಪಟ್ಣದಲ್ಲಿ ಅನೇಕ ನೀಚವಾದ ಕ ಲಾಪನೆಗಳು ಉಂಟಾದವು. ಏನಂದರೆ, ಕೆಲವು ದಿವಸಗಳ ಮುಂಚೆ ರೋಮನ್ ಸಭೆಯವರಿಗೆ ವ್ಯತಿರಿಕ್ತವಾಗಿದ್ದ ಕೆಲವು ಕಟ್ಟಳೆಗಳು ಮಾರ್ಪ ಡಿಸಲ್ಪಟ್ಟವು. ಇದು ತನ್ನಷ್ಟಕ್ಕೆ ನೀತಿಯೂ ನೆಟ್ಟನೆಯೂ ಆದ ಕಾರ್ಯ ವಾಗಿದ್ದರೂ ಹೀಗೆ ಅವರಿಗೆ ಉಂಟಾದ ಸಡ್ಲದ ನಿಮಿತ್ತ ರಾಜ್ಯದಲ್ಲಿ ಬಹಳ ಮಂದಿಗೆ ಮನಸ್ತಾಪ ಉಂಟಾಯಿತು. ಹೀಗೆ ಹೊಸದಾಗಿ ಉಂಟಾದ ನಿಬಂಧನೆಗಳನ್ನು ತೆಗದು ಹಾಕ ಬೇಕೆಂದು ಅನೇಕ ಸ್ಥಳಗಳ ಲ್ಲಿ ಸಂಘಗಳು ಕೂಡಿದವು. ಪ್ರಜೆಗಳು ರಾಜಮಂತ್ರಿಸಭೆಗೆ ವಿರೋ ಧವಾಗಿ ಎದ್ದರು. ಇದು ಯಥಾರ್ಥವಾದ ವಿಷಯವೆಂದು ಎಣಿಸಿ, ಮಂತ್ರಿಗಳನ್ನು ವಿರೋಧಿಸಿದ ಮನುಷ್ಯರ ಸಂಗಡ ಕೊಳ್ಳೆ ಸೂರೆಗಳ ಮೇ ಲೆ ಅಪೇಕ್ಷೆಯಾಗಿದ್ದ ಅನೇಕ ನೀಚರು ಸಹ ಕೂಡಿ ಕೊಂಡರು. ಅವರಿಗೆ, (George Gordon) ಜೋರ್ಜ್ ಗೋರ್ಡನ್ ಎಂಬ ಒಬ್ಬ ಚಿಕ್ಕ ಮೂಢ ಧೊರೆಮಗನು ಶ್ರೇಷ್ಠನಾಗಿದ್ದನು. ಅವನು ಹುಚ್ಚನೆಂದು ಬೇರೊ

ಭ್ಯರಿಂದ ಹೇಳಲ್ಪಟ್ಟವನು. ಅವನಿಂದ ಪ್ರೇರೇಪಿಸಲ್ಪಟ್ಟು ಅನೇಕ ನಿಷ್ಠೂರ ಕೆಲಸಗಳಿಗೆ ಒಡಂಬಟ್ಟರು. ಪಾರ್ಲಿಮೆಂಟ್ ಸಂಘದವರನ್ನು ಅಪಮಾನ ಪಡಿಸಿದರು. ರೋಮನ್ ಸಚೆಯವರ ಅನೇಕ ಗುಡಿಗಳನ್ನು ಬೆಂಕಿ ಹಚ್ಚಿ ಸುಟ್ಟು ಬಿಟ್ಟರು. ಶೆರೆಮನೆಗಳನ್ನೆಲ್ಲಾ ತೆರೆದು ಬಿಟ್ಟರು. ಅನೇಕ ಮನೆಗಳಲ್ಲಿ ಹೊಕ್ಕು ಕೊಳ್ಳೆ ಇಟ್ಟರು. ಈ ಕಾಲದಲ್ಲಿರುವ ಪ್ರಕಾರ ಆ ಕಾಲದಲ್ಲಿ ಪೋಲೀಸು ಅಧಿಕಾರಿಗಳು ಅವಸರಕಾಲಕ್ಕೆ ತಕ್ಕ ಬಂದೋಬಸ್ತು ಮಾಡ ಬಲ್ಲವಿಲ್ಲದೆ ಇದ್ದದರಿಂದ ಲಂಡನ್ ಪಟ್ಟಣವೆಲ್ಲಾ ಕಟ್ಟುಕಾವಲು ಇಲ್ಲದೆ ನಾಶವಾಗಿ ಹೋದಾಗ, ರಾಣುವೆಯವರು ಬಂದು ಗುಂಪುಗಳ ಮೇಲೆ ತುಪಾಕಿಗಳಿಂದ ಸುಟ್ಟ ತರುವಾಯ ಕಲಹಗಾರರೆಲ್ಲರೂ ಚದರಿ ಓಡಿ ಹೋದರು.

ಇದರ ಮಧ್ಯೆ ಅಮೆರಿಕದಲ್ಲಿ ಇಂಗ್ಲಿಷಿನವರಿಗೆ ಇದ್ದ ಯುದ್ಧವು ವೃದ್ಧಿಯಾಗಲಿಲ್ಲ. ಅಮೆರಿಕದವರ ಬಳಿಯಲ್ಲಿ ಫ್ರಾನ್ಸರು ಬಹಿರಂಗವಾಗಿ ಒಪ್ಪಂದ ಮಾಡಿ ಕೊಂಡ ಕೆಲವು ಕಾಲದ ತರುವಾಯ ನಡೆದ ಯುದ್ಧವೆಲ್ಲಾ ಇಂಗ್ಲಿಷಿನವರಿಗೆ ಅನುಕೂಲವಾಗಿತ್ತು. ಶ್ರೇಷ್ಠ ನ್ಯಾಯಾಧಿಪತಿಯಾದ (Sir Henry Clinton) ಸರ್ ಹೆನ್ರಿ ಕ್ಲಿಂತನ್ ಎಂಬವನಿಗೂ ಜಯ ಉಂಟಾಯಿತು. ಅವನು (Charleston) ಚಾರ್ಲಸ್ಟೋನ್ ಪಟ್ಟಣವನ್ನು ಮುತ್ತಿಗೆ ಹಾಕಿ ಅದರಲ್ಲಿದ್ದ ಅಮೆರಿಕದವರನ್ನು ಬೊಗ್ಗುವಂತೆ ಮಾಡಿದನು. (Lord Cornwallis) ಕಾರ್ನ್‌ವಾಲಿಸ್ ಎಂಬ ಪ್ರಭುವು ಗೇತ್ ಎಂಬುವ ಸೈನ್ಯಾಧಿಪತಿಯನ್ನು ಸೋಲಿಸಿದನು. ಫ್ರಾನ್ಸರು ಸಹ ಹಿಮ್ಮೆಟ್ಟಿ ಹೋದರು. ಹೀಗೆ ಅಮೆರಿಕದವರ ಪಕ್ಷವು ಫಲಿತವಾಗಲಿಲ್ಲವೆಂದು ತೋರಿದಾಗ್ಯೂ ವಾಷಿಂಗ್ಟನ್ ಎಂಬವನು ಮಾತ್ರ ಮನ ಸಣ್ಣವಾಗದೆ ಇದ್ದನು. ತನ್ನ ಶೀಮೆಯವರ ಧೈರ್ಯವನ್ನೂ ಶೌರ್ಯವನ್ನೂ ಎಬ್ಬಿಸ ಸಂಗಡಲೇ ತಾನು ಒಂದು ತೃಣೀಕರ ಮಾಡ ಬೇಕೆಂದೂ, ಅಮೆರಿಕದವರು ಮುಂಚಿನಂತೆ ತಮ್ಮ ಸ್ವಂತ ಪರಾಕ್ರಮವನ್ನು ತೋರಿಸದೆ ಪರಶೀಮೆಯವರ ಸಹಾಯದಲ್ಲಿ ನಂಬಿಕೆ ಇಟ್ಟಿದ್ದಾರೆಂದೂ ನಿಶ್ಚಯಿಸಿ, ದಕ್ಷಿಣ ದಿಕ್ಕಿನಲ್ಲಿದ್ದ ಕಾರ್ನ್‌ವಾಲಿಸ್ ಎಂಬ ಪ್ರಭುವಿನ ವಶವಾಗಿದ್ದ ಚಿಕ್ಕ ಸೈನ್ಯದ ಸಂಗಡ ಸರ್ ಹೆನ್ರಿ ಕ್ಲಿಂತನ್ ಎಂಬವನು ಬಂದು

ಕೂಡಿ ಕೊಳ್ಳುವದಕ್ಕಿಂತ ಮುಂಚೆ ಅವನನ್ನು ಹೊಡೆದು ಜಯಿಸ ಬೇಕೆಂದು ಶೀರ್ಮಾನಿಸಿದನು. ಅದೇ ವೇಗವಾಗಿ ದಕ್ಷಿಣಕ್ಕೆ ಹೊರಟು, ಕಾರ್ನ್‌ವಾಲಿಸ್ ದಂಡಿಳಿದಿದ್ದ ಯೋರ್ಕ್‌ತಾನ್ ಎಂಬುವ ಪಟ್ಣವನ್ನು ತನಗಿದ್ದ ಫ್ರಾನ್ಸರ ಸಹಾಯಸೈನ್ಯಗಳೊಡನೆ ಕೂಡ ಮುತ್ತಿಗೆ ಹಾಕಿದನು. ಆ ಕೋಟೆಯು ಸಹ ಬಹು ಬಲಹೀನವಾಗಿತ್ತು. ಅದನ್ನು ದುರುಸ್ತು ಮಾಡಿ ಬಂದೋಬಸ್ತು ಮಾಡಿ ಕೊಳ್ಳುವದಕ್ಕೆ ಸಹ ಕಷ್ಟವಾಗಿದೆ ಎಂದು ತಕ್ಷಣವೇ ಇಂಗ್ಲಿಷ್ ಸೈನ್ಯಾಧಿಪತಿಯು ಮೇಲಿನ ಅಧಿಕಾರಸ್ಥರಿಗೆ ತಿಳಿಸಿ ಇದ್ದನು. ಇದರಿಂದ ಅದು ಹದಿನಾಲ್ಕು ದಿವಸಗಳು ಮುತ್ತಿಗೆ ಹಾಕಲ್ಪಟ್ಟ ಮೇಲೆ ಕಾರ್ನ್‌ವಾಲಿಸ್ ಎಂಬವನು ಬೊಗ್ಗಿ ಬರ ಬೇಕಾಯಿತು. ಅವನ ಬಳಿಯಲ್ಲಿದ್ದ ಸೈನ್ಯವು ಯುದ್ಧಕ್ಕೆ ತಕ್ಕದ್ದಾಗಿದ್ದರೂ, ಶತ್ರುಗಳ ಸೈನ್ಯದಲ್ಲಿ ಅರ್ಧ ಸಹ ಇಲ್ಲಿ. ಇದೂ ಅಲ್ಲದೆ ಅವರಲ್ಲಿ ಅನೇಕರು ಒಂದು ಕ್ರೂರ ವ್ಯಾಧಿಯಿಂದ ಸತ್ತರು. ಸರ್ ಹೆನ್ರಿ ಕ್ಲಿಂತನ್ ಸಮುದ್ರಮಾರ್ಗವಾಗಿ ಕಳುಹಿಸುತ್ತೇನೆಂದು ಹೇಳಿ ಇದ್ದ ಸಹಾಯ ಸಹ ಬಂದು ಒದಗಲಿಲ್ಲ.

ಕಾರ್ನ್‌ವಾಲಿಸ್ ಶರಣಾಗತನಾದದರಿಂದ ಸ್ವಾಧೀನದ ಉದ್ದಿಶ್ಯ ನಡೆದ ಅಮೇರಿಕದ ಯುದ್ಧವು ಮುಗಿಯಿತು. ಆದಾಗ್ಯೂ ಇನ್ನೂ ಎರಡು ವರುಷಗಳ ಮಟ್ಟಿಗೂ ಫ್ರಾನ್ಸ್ ಶೀಮೆಯಲ್ಲಿಯೂ ಸ್ಪೇನ್ ಶೀಮೆಯಲ್ಲಿಯೂ ತನಗೆ ಉಂಟಾಗಿದ್ದ ಯುದ್ಧಗಳು ಮುಗಿದ ತರುವಾಯ ತಾನು ಸಮಾಧಾನವಾದದ್ದು ತಿಳಿಯಲ್ಪಟ್ಟಿತು. ಇದರ ನಡುವೆ ಇಂಗ್ಲಿಷ್ ನಾವಿಕರು ಸಮುದ್ರದಲ್ಲಿ ತಮ್ಮ ಬಿರುದನ್ನೇ ನಾಟಿದರು. ಅದರ ದಳಕರ್ತರು ಬಹಳ ಜಯ ಹೊಂದಿದರು. ಅವರಲ್ಲಿ (Sir George Rodney) ಸರ್ ಜೋರ್ಜ್ ರೊಡ್ನಿ ಎಂಬವನು ಹೊಂದಿದ ಜಯಗಳೇ ಅಧಿಕ ಪ್ರತಾಪವೂ ಫಲವೂ ಉಳ್ಳವುಗಳು. 1780ನೇ ವರುಷ ಜನವರಿ 16ನೇ ತಾರೀಖಿನಲ್ಲಿ ಸ್ಪಾನಿಯ ನಾವಿಕಶ್ರೇಷ್ಠನಾದ (Don Juan de Longara) ದೊನ್ ಜುವಾನ್ ಧಿ ಲಾಂಗೇರಾ ಎಂಬವನನ್ನು ಸ್ವಂತಷಾಗಿ ಜಯಿಸಿ ಶೆರೆ ಹಿಡಿದನು. 1782ನೇ ವರುಷ ಏಪ್ರಿಲ್ ತಿಂಗಳು 2ನೇ ತಾರೀಖಿನಲ್ಲಿ ಪಶ್ಚಿಮ ಹಿಂದೂ ದ್ವೀಪಗಳಲ್ಲಿ (Count de Grasse) ದಿಗ್ರಾ

ಸ್ ಎಂಬ ಪ್ರಭುವಿನಿಂದ ನಡಿಸಲ್ಪಟ್ಟ ಫ್ರಾನ್ಸ್ ನಾವಿಕಸೈನ್ಯಗಳನ್ನು ಪೂರ್ಣವಾಗಿ ಸೋಲಿಸಿದನು. ಹ್ಯಾಗಂದರೆ, ಫ್ರಾನ್ಸರ ಹಡಗಗಳು ಒಂದು ಸಾಲಾಗಿ ನಿಲ್ಲಿಸಲ್ಪಟ್ಟಿದ್ದವು. ಇಂಗ್ಲಿಷ್ ನಾವಿಕಶ್ರೇಷ್ಠನು ಹತ್ತಿದ್ದ ಹಡಗವು ಮುಂದೆ ಹೋಗಲಾಗಿ ಮಿಕ್ಕಾದವುಗಳು ಅದನ್ನು ಹಿಂಬಾಲಿಸಿ, ಅವರ ಹಡಗದ ಸಾಲಿನ್ನು ಎರಡಾಗಿ ವಿಭಾಗಿಸಿ ಒನ್ನೊಂದು ತಾಸುಹೊತ್ತು ಉಗ್ರವಾಗಿ ಯುದ್ಧ ಮಾಡಿದ ತರುವಾಯ ಶತ್ರುಗಳು ಬೊಗ್ಗಿ ಹೋದರು. ಆದಾಗ್ಯೂ ಫ್ರಾನ್ಸ್ ನಾವಿಕಶ್ರೇಷ್ಠನು ಲೇಸಾಗಿ ಬೊಗ್ಗಲಿಲ್ಲ. ಅವನು ತನ್ನ ಹಡಗವನ್ನು ಬಹು ಶೌರ್ಯವಾಗಿ ಯುದ್ಧ ಮಾಡಿಸಿದನು. ಆದಾಗ್ಯೂ ಕಡೆಯಲ್ಲಿ ಜಯಿಸ ಕೂಡದಂಥ ರೊಢ್ನಿಯ ಮುಂದೆ ತನ್ನ ಧ್ವಜವನ್ನು ಇಳಿಸಿ ಬಿಟ್ಟನು. ಈ ಜಯದಿಂದ ಫ್ರಾನ್ಸರು ಜಮೇಕಾ ದ್ವೀಪದ ಮೇಲೆ ದಂಡೆತ್ತುವ ನೆನವು ಭಂಗವಾಯಿತು.

ಈ ಪ್ರಕಾರ ಇಂಗ್ಲಿಷಿನವರು, ಸಮುದ್ರದ ಮೇಲೆ ಜಯ ವೃದ್ಧಿಯಾಗಿರುವ ಕಾಲದಲ್ಲಿ, ಭೂಮಿಯ ಮೇಲೆ ಸಹ ಬಹು ತಾಳ್ಮೆಯನ್ನೂ ತಟಾಯಕರವನ್ನೂ ತೋರಿಸಿದರು. ಹ್ಯಾಗಂದರೆ, ಸ್ಪೇನ್ ಶೀಮೆಯ ಮೇಲೆ ಯುದ್ಧವುಂಟಾಗಿದ್ದ ಕಾಲವೆಲ್ಲಾ (Elliot) ಎಲ್ಲಿಯೂತ್ ಎಂಬುವ ಸೈನ್ಯಾಧಿಪತಿಯು ಮಹಾ ಬಲವಾದ (Gibraltar) ಜಿಬ್ರಾಲ್ಟರ್ ಕೋಟೆಯನ್ನು ಬಿಡದೆ ಕಟ್ಟಿ ಕೊಂಡನು. ಯುದ್ಧ ಪ್ರಾರಂಭಿಸಿದ ಮೊದಲಲ್ಲಿಯೇ ಸ್ಪಾನಿಯರು ಆ ದುರ್ಗವನ್ನು ಮುತ್ತಿಗೆ ಹಾಕಿದರು. ಮತ್ತು ಆ ಠಾಣ್ಯದವರಿಗೆ ಸಹಾಯವಾಗಿ ಇಂಗ್ಲಿಷ್ ಹಡಗಗಳು ಯಾವಾಗ ಬರುವವೋ ಆ ಕಾಲಗಳ ಹೊರ್ತು ಮಿಕ್ಕಾದ ಕಾಲವೆಲ್ಲಾ ಸಮಾಧಾನದ ಒಡಂಬಡಿಕೆಯಾಗುವ ಮಟ್ಟಿಗೂ, ಮುತ್ತಿಗೆ ಹಾಕಿ ತೆಗಿಯದೆ ಇದ್ದರು. ಕೆಲವು ವೇಳೆಗಳಲ್ಲಿ ಮುತ್ತಿಗೆ ಹಾಕಿದವರು ಆ ಠಾಣ್ಯದವರನ್ನು ನಾಲ್ಕು ಕಡೆಗಳಲ್ಲಿಯೂ ಬಿಡದೆ ಇಕ್ಕಟ್ಟು ಪಡಿಸುವರು. ಕೆಲವು ವೇಳೆಗಳಲ್ಲಿ ಬಹು ಬಲವಾಗಿ ತಾಕುವರು. ಅಂಥಾ ಸಮಯಗಳಲ್ಲಿ ಇಂಗ್ಲಿಷ್ ಯುದ್ಧವೀರರು ಹಶಿವೆಯಿಂದ ಬಹು ಸಂಕಟ ಪಟ್ಟಾಗ್ಯೂ ತಮ್ಮ ತಮ್ಮ ಸ್ಥಾನಗಳಲ್ಲಿ ಬಲವಾಗಿಯೂ ದೃಢವಾಗಿಯೂ ನಿಲ್ಲುವರು. ಮುತ್ತಿಗೆ ಹಾಕಿದವರು ತಾಕುವಾಗತೆಲ್ಲಾ ಅವರಿಗೆ ನಷ್ಟ ಉಂಟಾಗು

ವಂತೆ ಆ ಇಂಗ್ಲಿಷಿನವರು ಓಡಿಸಿ ಬಿಡುವರು. ಸ್ಪಾನಿಯರಿಗೆ ಫ್ರಾನ್‌ಸರು ಕೂಡ ಸಹಾಯ ಮಾಡುವರು. ಮಾಡಿದಾಗ್ಯೂ ಅವರ ಪ್ರಯತ್ನವೆಲ್ಲಾ ವ್ಯರ್ಥವಾಯಿತು. ಕಡೇ ಸಾರಿ 1782ನೇ ವರುಷ ಸಪ್ಟೆಂಬರ್ ತಿಂಗಳಲ್ಲಿ ಎದುರಿಗಳು ತಮ್ಮ ಎಲ್ಲಾ ಬಲದೊಡನೆ ಬಂದು ಹಾಯ್ದರು. ಫ್ರಾನ್‌ಸರಲ್ಲಿ ಬಹು ಸಾಮರ್ಥ್ಯನಾದ ಒಬ್ಬ ಇಂಜನೀರ್ ಧೊರೆಯು ಮಹಾ ದಪ್ಪವೂ ಬಲವೂ ಉಳ್ಳ ಅನೇಕ ಫಿರಂಗಿಗಳ ತೆಪ್ಪವನ್ನು ಮಾಡಿ, ಆ ಕೋಟೆಯ ಅಲಂಗಕ್ಕೆ ಕೆಲವು ನೂರು ಗಜಗಳ ಮಟ್ಟಿಗೂ ತೆಗದುಕೊಂಡು ಬಂದನು. ಆ ಫಿರಂಗಿತೆಪ್ಪಗಳಿಂದ ಅನೇಕ ತಾಸುಗಳ ಹೊತ್ತು ಬಿಡದೆ ಸುಡುವರು. ಅದಕ್ಕೆ ಇಂಗ್ಲಿಷಿನವರೂ ಉರಿಯುವ ಅಗ್ನಿಗಂಡುಗಳನ್ನು ಬದಲಾಗಿ ಸುರಿಯುವರು. ಈ ಪ್ರಕಾರ ರಾತ್ರಿಯಲ್ಲಿ ಬಹಳ ಹೊತ್ತಿನ ಮಟ್ಟಿಗೂ ಯುದ್ಧ ನಡಿಯುತ್ತಾ ಇತ್ತು. ಕಡೆಯಲ್ಲಿ ಸ್ಪಾನಿಯರ ಕೆಲವು ಹಡಗಗಳು ಬೆಂಕಿ ಹತ್ತಿ ಕೊಂಡು ಸ್ಥಳ ತಪ್ಪಿ ತೇಲುತ್ತಾ ಹೋದದರಿಂದ ಸ್ಪಾನಿಯರ ಹಡಗಗಳೂ ಫ್ರಾನ್‌ಸರ ಹಡಗಗಳೂ ಯುದ್ಧಕ್ಕೆ ವಾರೆಯಾಗಿ ಹೋಗ ಬೇಕಾಯಿತು. ಅಲ್ಲಿ ಉರಿಯುತ್ತಾ ಇದ್ದ ಹಡಗಗಳ ನೋಟವೂ ಧೈರ್ಯಮನಸ್ಸುಳ್ಳವರಾದ ಇಂಗ್ಲಿಷಿನವರ ಅಂತರ್ಯದಲ್ಲಿ ಕರುಣೆಯನ್ನು ಉಂಟು ಮಾಡಿತು. ತಮ್ಮ ದೇಶದ ಘನವನ್ನು ಕಾಪಾಡಲೂ, ತಮ್ಮ ವಶವಾದ ಕೋಟೆಯನ್ನು ಕಾಯಲೂ, ತಮ್ಮ ಜೀವವನ್ನು ಸಹ ಲಕ್ಷ್ಯ ಮಾಡದವರು ತಮ್ಮ ಕೈಯಲ್ಲಿ ಬಿದ್ದ ಶತ್ರುಗಳ ಪ್ರಾಣವನ್ನು ಕಾಯಲೂ ಸಹ ತಮ್ಮ ಜೀವವನ್ನು ದೊಡ್ಡದಾಗಿ ಎಣಿಸಲಿಲ್ಲ. ಈ ಅತಿಶಯವಾದ ತ್ರಾಣೀಕರದಲ್ಲಿ (Captain Curtis) ಕೆಪ್ಟೆನ್ ಕರ್ಟಿಸ್ ಎಂಬವನೂ ಅವನ ಹಡಗದವರೂ ಮೊದಲನೆಯವರಾಗಿದ್ದರು. ಅವರು ರಣಾಗ್ರದಲ್ಲಿ ಉಂಟಾದ ಮರಣಾವಸ್ಥೆಗಿಂತ ಅತಿ ಭಯಂಕರವಾದ ಮೋಸದೊಳಗಿಂದ, ತಮ್ಮ ಬಳಿಯಲ್ಲಿ ಹಗೆ ಸಾಧಿಸಿದವರಾದ ಬಹಳ ಶತ್ರುಗಳನ್ನು ರಕ್ಷಿಸಿದರು. ಪ್ರಾಣ ಹೋಗುವ ಮಟ್ಟಿಗೂ ನಿಂತು ಹೋರಾಡ ಬೇಕಾಗಿದ್ದರೂ, ಬಿದ್ದವರನ್ನು ರಕ್ಷಿಸಿ, ಘಾಯ ಪಟ್ಟವರನ್ನು ಕಾಪಾಡುವದು ತಕ್ಕದೆಂಬುವ ಮತವುಳ್ಳ ಧೈರ್ಯಶಾಲಿಗಳ ದೊಡ್ಡಸ್ತಿಕೆಯಾದ ಗುಣವು ಇವರದೇ ಸರಿ.

ಹೀಗೆ ಯೂರೋಪಿನಲ್ಲಿ ಯುದ್ಧ ನಡಿಯುತ್ತಾ ಇರುವ ಕಾಲದೊಳಗೆ ಹಿಂದುಸ್ಥಾನದಲ್ಲಿ ಇಂಗ್ಲಿಷಿನವರಿಗೆ ವಶವಾದ ದೇಶಗಳೆಲ್ಲಾ ಬಂಗಾಳ ದೇಶದ ಶ್ರೇಷ್ಠಾಧಿಕಾರಿಯಾದ (Warren Hastings) ವಾರೆನ್ ಹೇಸ್ಟಿಂಗ್ಸ್ ಎಂಬವನ ಸಾಮರ್ಥ್ಯದಿಂದಲೂ ಧೈರ್ಯದಿಂದಲೂ ಸ್ಥಿರ ಹೊಂದಿದವು. ಈ ದೇಶದಲ್ಲಿ ಇಂಗ್ಲಿಷಿನವರ ಎಲ್ಲಾ ಶತ್ರುಗಳಲ್ಲಿಯೂ ಮಹಾ ಬಲಿಷ್ಠನಾಗಿದ್ದ (Hyder Ali) ಹೈದರಲ್ಲಿ ಎಂಬವನು ಕರ್ನಾಟಕ ಸೀಮೆಯಲ್ಲಿ ದಂಡೆತ್ತಿದನು. ಅವನಿಗೆ ಫ್ರಾನ್ಸರು ಸಹಾಯ ಮಾಡಿದರು. ಅಂಥವನು ಸಹ ಇಂಗ್ಲಿಷ್ ಸೈನ್ಯಾಧಿಪತಿಗಳ ಧೈರ್ಯದಿಂದಲೂ ಭುಜಬಲಪರಾಕ್ರಮದಿಂದಲೂ ಜಯಿಸಲ್ಪಟ್ಟನು. ಅಮೇರಿಕವು ಇಂಗ್ಲಿಷಿನವರ ಕೈಯಿಂದ ತಪ್ಪಿ ಹೋಗುವ ಕಾಲದಲ್ಲಿ ಹಿಂದು ದೇಶನಿವಾಸಿಗಳಿಗೆ ಬಹು ಸ್ಥಿರವಾದ ಮೇಲುಗಳು ಉಂಟಾಗುವಂತೆ ಇಂಗ್ಲಿಷಿನವರ ಅಧಿಕಾರವು ಸ್ಥಿರ ಪಟ್ಟಿತು.

1783ನೇ ವರುಷ ಸಪ್ತೆಂಬರ್ ತಿಂಗಳ ಮೂರನೇ ತಾರೀಖಿನಲ್ಲಿ ಯೂರೋಪಿನೊಳಗೆ ಯುದ್ಧಸ್ಥಿತಿಯಲ್ಲಿದ್ದ ಸೀಮೆಗಳಿಗೆಲ್ಲಾ (Versailles) ವರ್ಸೇಲ್ಸ್ ಎಂಬ ಪಟ್ಟಣದಲ್ಲಿ ಸಮಾಧಾನದ ಒಡಂಬಡಿಕೆ ಉಂಟಾಯಿತು. ಅಮೇರಿಕದ ಯುದ್ಧವು ಅನುಕೂಲವಾಗಿ ಮುಗಿಯದೆ ಇದ್ದದರಿಂದ ನೋರ್ತ್ ಎಂಬುವ ಪ್ರಭುವು ತನ್ನ ಮಂತ್ರಿಯುದ್ಯೋಗದಿಂದ ತೊಲಗಲು, ಆ ಕಾಲದಲ್ಲಿ ಮೊದಲನೇ ಮಂತ್ರಿಯಾಗಿದ್ದ (Shelburne) ಷೆಲ್ಬರ್ನ್ ಎರ್ಲ್ ಪ್ರಭುವು ಸಮಾಧಾನಕ್ಕೆ ತಕ್ಕ ಕಾರ್ಯಗಳನ್ನು ಪೂರೈಸಿದನು. ವರ್ಸೇಲ್ಸ್ ಪಟ್ಟಣದಲ್ಲಿ ಉಂಟಾದ ಒಡಂಬಡಿಕೆ ಅಮೇರಿಕವು ಸ್ವಾಧೀನವಾದ ರಾಜ್ಯವೆಂದು ಮೊದಲು ಇಂಗ್ಲಾಂಡೂ ಯೂರೋಪಿನ ಬೇರೆ ಸೀಮೆಗಳೂ ಅಂಗೀಕರಿಸಿದವು. ತಾಯಿಸೀಮೆಯು ಸಹ ತನ್ನಿಂದ ಒಕ್ಕಲುತನವೇರಿದ ಅಮೇರಿಕದ ಸೀಮೆಗಳಿಂದ ಪ್ರತ್ಯೇಕವಾಯಿತು. ಈ ಪ್ರಕಾರ ಪುರಾತನವಾಗಿದ್ದ ಜಾತಿಗಳ ದೊಡ್ಡಸ್ತಿಕೆಯಲ್ಲಿ ನೂತನವಾದ ಒಂದು ಜಾತಿಯವರು ಬಂದು ಒಂದು ಭಾಗ ತೆಗದು ಕೊಂಡರು.

# CHAPTER XXIII.

## ERA OF THE FRENCH REVOLUTION.

FROM A. D. 1783 TO A. D. 1804.

## 23 ಸಂಧಿ.

## ಫ್ರಾನ್ಸ್ ಧೊರೆತನವು ಭೇಧವಾದ ಕಾಲವು.

ಕ್ರಿ. ಶ. 1783 ಮೊದಲು ಕ್ರಿ. ಶ. 1804 ವರೆಗೂ.

ಮುಖ್ಯ ತಾರೀಖುಗಳು: ಫ್ರಾನ್ಸರ ಸಂಗಡ ಯುದ್ಧವು 1793. (Nile) ನೈಲ್ ನದಿಯ ಯುದ್ಧ 1798. ಇಂಗ್ಲಿಷ್ ಐರಿಷ್ ಪಾರ್ಲಿಮೆಂಟುಗಳು ಐಕ್ಯವಾದದ್ದು 1800. ಅದೇ ಕಾಲದ ಇಂದ್ಯ ಚರಿತ್ರೆ: (Seringapatam) ಶ್ರೀರಂಗಪಟ್ಟವು ಇಂಗ್ಲಿಷರಿಂದ ಹಿಡಿಯಲ್ಪಟ್ಟದ್ದು 1799. ಶ್ರೇಷ್ಠ ನಾಮಗಳು: (Napoleon) ನಪೋಲಿಯನ್ 1769—1821. (Nelson) ನೆಲ್ಸನ್ 1758—1805. (Pitt) ಪಿತ್ತ್ 1759—1806. (Burke) ಬರ್ಕ 1730—1797.

ಅಮೇರಿಕದವರ ಸಂಗಡ ನಡೆದ ಯುದ್ಧವು ಮುಗಿದ ತರುವಾಯ (Mr. Fox) ಫಾಕ್ಸ್ ಧೊರೆಯೂ (Lord North) ನೊರ್ಥ್ ಪ್ರಭೂ ಅನ್ಯೋನ್ಯವಾಗಿ (Duke of Portland) ಪೋರ್ತ್‌ಲಾಂದ್ ದ್ಯೂಕ್ ಪ್ರಭುವು ಮುಖ್ಯಸ್ಥನೆಂಬುವ ಹೆಸರನ್ನು ಧರಿಸಿ, ಮಂತ್ರಿಸಭೆಯಲ್ಲಿ ಮುಖ್ಯವಾದ ಅಧಿಕೃವನ್ನು ಹೊಂದಿದರು. ಮುಂಚೆ ನೊರ್ಥ್ ಎಂಬ ಪ್ರಭುವಿಗೆ ಅನುಸರಣೆಯಾಗಿದ್ದ ಅರಸನು ಅವರು ಹಾಗೆ ಅನ್ಯೋನ್ಯವಾಗುವದನ್ನು ಪೂರ್ಣವಾಗಿ ತಡೆದನು. ಇದಲ್ಲದೆ ಆ ಇಬ್ಬರು ಮಂತ್ರಿಗಳೂ ಧೊರೆತನದ ವಿಷಯಗಳಲ್ಲಿ ಒಬ್ಬರಿಗೊಬ್ಬರು ಬೊಗ್ಗದ ಎದುರಿಗಳಾಗಿದ್ದು ಈಗ ತಮ್ಮ ನೆಟ್ಟಗಾದ ನಡತೆಗಳನ್ನು ಬಿಟ್ಟು ಅಯುಕ್ತ ವಿಧವಾಗಿ ಇಬ್ಬರೂ ಕೂಡಿ ಕೊಂಡದ್ದರಿಂದ ಅದು ತಪ್ಪೆಂದು ಸಾಧಾರಣವಾಗಿ ಎಲ್ಲರೂ ಹೇಳಿ ಕೊಂಡರು. ಆದಾಗ್ಯೂ ಅವರ ಮಂತ್ರಿತನವು

ಬಹಳ ದಿವಸಗಳು ಇರಲಿಲ್ಲ. ಫಾಕ್ಸ್ ಧೊರೆಯು ಹಿಂದು ದೇಶದ ಧೊರೆತನದಲ್ಲಿ ಸುಗುಣಕರವಾದ ವ್ಯತ್ಯಾಸಗಳನ್ನು ಕಲ್ಪಿಸುವದಕ್ಕಾಗಿ ಮಾಡಿದ ಯತ್ನವು ವ್ಯರ್ಥವಾಯಿತು. ಅದು ಸಿದ್ಧಿಯಾಗಿದ್ದರೆ ಹಿಂದುಸ್ಥಾನವು ನೆಟ್ಟಗೆ ಇಂಗ್ಲಾಂಡ್ ಶೀಮೆಯ ಧೊರೆತನದವರ ಸ್ವಾಧೀನದಲ್ಲಿಯೇ ಇರುವದು. ಕಾಲವಾಗಿ ಹೋದ (Lord Chatham) ಚಾತ್ತ್ರಮ್ ಪ್ರಭುವಿನ ಎರಡನೇ ಮಗನಾದ (William Pitt) ಉಲ್ಲಿಯಮ್ ಪಿಟ್ಟ್ ಎಂಬವನು 25ನೇ ವರುಷಪ್ರಾಯದಲ್ಲಿಯೇ ಮೊದಲನೇ ಮಂತ್ರಿಯಾದನು. ಆ ಘನವನ್ನು ಕೆಲವು ದಿವಸಗಳ ಹೊರ್ತು ಮಿಕ್ಕ ತನ್ನ ಆಯುಷ್ಯದ ದಿವಸಗಳೆಲ್ಲಾ ಕಾಪಾಡಿ ಕೊಂಡನು. ತಂದೆಯಲ್ಲಿ ಇದ್ದಂಥಾ ಮಾತುಬಿರಿಯೂ ದೇಶಾಭಿಮಾನವೂ ಅವನಿಗೆ ಇತ್ತು. ಮತ್ತು ತನ್ನ ತಂದೆಯ ಹಾಗೆಯೇ ತನ್ನ ದೇಶಕ್ಕೆ ನಂಬಿಕೆಯಾಗಿಯೂ ಚನ್ನಾಗಿಯೂ ಸೇವೆ ಮಾಡಿದನು. ಅವನು ಧೊರೆತನ ಮಾಡ ಪ್ರಾರಂಭಿಸಿದ ಮೊದಲಲ್ಲಿ ಏರ್ಪಡಿಸಿದ ಒಂದು ಏರ್ಪಾಟಿನಿಂದ ಈ ದೇಶದಲ್ಲಿ ಇಂಗ್ಲಿಷಿನವರಿಗೆ ಕೈವಶವಾದ ಭೂಮಿಗಳನ್ನೆಲ್ಲಾ (East India Company) "ಈಸ್ಟ್ ಇಂದಿಯಾ ಕಂಪೆನಿ"ಯವರ ಅಧಿಕಾರದಲ್ಲಿ ಇರಿಸಿ ವಿಲಾಯಿತಿ ಧೊರೆತನದವರ ಅಧಿಕಾರಕ್ಕೆ ಸಹ ಒಳಗಾಯಿತು.

1788ನೇ ವರುಷದಲ್ಲಿ ಅರಸನ ದೇಹವು ಮಹಾ ಮೋಸವಾದ ವ್ಯಾಧಿಗೆ ಹೇತುವೆಯಾಗಿತ್ತು. ಅವನ ಬುದ್ಧಿಯು ಕೆಟ್ಟು ಹೋಗಲಾಗಿ, ಕೆಲವು ಕಾಲದ ಮಟ್ಟಿಗೂ ಬಹು ಬಲಹೀನವಾದ ಸ್ಥಿತಿಯಲ್ಲಿದ್ದನು. ಅದರಿಂದ ಧೊರೆತನದ ಕಾರ್ಯಗಳನ್ನು ನಡಿಸುವ ಉದ್ದಿಶ್ಯ ಒಬ್ಬ ಪ್ರತಿ ಅರಸನನ್ನು ನೇಮಿಸ ಬೇಕಾದ ಅವಸರವಾಯಿತು. ಆದಾಗ್ಯೂ ಆ ಪ್ರತಿ ಅರಸನಿಗೆ ಸಲ್ಲ ತಕ್ಕ ಅಧಿಕಾರವು ಎಷ್ಟೆಂಬುವದನ್ನು ಕುರಿತು ಪಾರ್ಲಿಮೆಂಟಿನವರು ಆಲೋಚನೆ ಮಾಡುವ ಕಾಲದಲ್ಲಿ, ಎಲ್ಲಾ ಪ್ರಜೆಗಳಿಗೂ ಯಥಾರ್ಥವಾದ ಸಂತೋಷ ಉಂಟಾಗುವಂತೆ ಅರಸನು ಸೌಖ್ಯವಾದನು. ಅವನು ಅದೇ ಕಾಲದಲ್ಲಿ ಏಪ್ರಿಲ್ ತಿಂಗಳ 23ನೇ ತಾರೀಖಿನಲ್ಲಿ ಒಡ್ಡೋಲಗದೊಡನೆ ಆ ಪಟ್ಟಣದ ಪ್ರಧಾನದೇವಾಲಯವಾದ (St. Paul's Cathedral) ಸೆಂತ್ ಪಾಲನ ಶ್ರೇಷ್ಠಾಲಯಕ್ಕೆ ಹೋಗಿ, ತನಗೆ

ಬುದ್ಧಿಯನ್ನೂ ಸೌಖ್ಯವನ್ನೂ ತಿರಿಗಿ ಕೊಟ್ಟ ದೇವರಿಗೆ ಬಹಿರಂಗವಾಗಿ ಸ್ತೋತ್ರ ಸಲ್ಲಿಸಿದನು. ಅವನ ಸಂಗಡ ಅನೇಕ ಸಾವಿರ ಪ್ರಜೆಗಳು ಸ್ತುತಿಯನ್ನು ಸಲ್ಲಿಸ ಹೋಗಿದ್ದರು. ಮತ್ತು ರಾಜ್ಯದಲ್ಲಿ ಎಲ್ಲಾ ಮನೆಗಳಲ್ಲಿಯೂ ಬೀದಿಗಳಲ್ಲಿಯೂ ಜನರು ತೋರಿಸಿದ ಸಂತೋಷವೂ ಉತ್ಸಾಹವೂ ಮಾಡಿದ ಸ್ತೋತ್ರವೂ ಅವನ ಮನಸ್ಸಿನಲ್ಲಿದ್ದಂತೆ ಯಥಾರ್ಥವಾಗಿದ್ದವು.

ಆ ಕಾಲದಲ್ಲಿ ಇಂಗ್ಲಾಂದ್ ದೇಶವು ಅನೇಕ ವರುಷಗಳ ಮಟ್ಟಿಗೂ ಶಾಂತವಾಗಿ ಬಾಳಿತು. ಆದಾಗ್ಯೂ ಜೋರ್ಜ್ ಅರಸನು ಸೌಖ್ಯ ಹೊಂದಿದ ವರುಷದಲ್ಲಿ ಫ್ರಾನ್ಸ್ ದೇಶದ ಧೊರೆತನದಲ್ಲಿ ಉಂಟಾದ ಮಹಾ ಭೇದದಿಂದ ಆ ದೇಶಕ್ಕೆ ಹೇಳ ಕೂಡದ ಉಪದ್ರಗಳು ಸಂಭವಿಸಿದವು. ಮತ್ತು ಅದರಿಂದ ನೆರೆಯ ಶೀಮೆಗಳಿಗೆಲ್ಲಾ ಬಹು ಮೋಸವೂ ನಡುಗುವಿಕೆಯೂ ಉಂಟಾಯಿತು. ಇದಕ್ಕೆ ಮುಂಚೆ ಬಹು ದಿವಸಗಳ ವರೆಗೂ ಫ್ರಾನ್ಸ್ ಶೀಮೆಯಲ್ಲಿ ಒಳ್ಳೇ ಧೊರೆತನವಿರಲಿಲ್ಲ. ಆ ದೇಶದಲ್ಲಿ ಶ್ರೇಷ್ಠ ಜಾತಿ ಕೀಳು ಜಾತಿ ಎಂಬುವ ಜಾತೀಕಟ್ಟುಪಾಟುಗಳಿಂದ ಬಹು ಮತ್ಸರ ಉಂಟಾದದಲ್ಲದೆ ಶ್ರೇಷ್ಠ ಜಾತಿಯವರ ಮೇಲೆ ಕೀಳು ಜಾತಿಯವರಿಗೆ ಬಹು ಅಸಹ್ಯ ಉಂಟಾಯಿತು. ಇದಕ್ಕೆ ಮುಂಚೆ ತಮ್ಮ ತಾಯಿಶೀಮೆಯಿಂದ ಅಮೆರಿಕದವರು ಪ್ರತ್ಯೇಕವಾದದ್ದು ಸಹ ಫ್ರಾನ್ಸ್ ದೇಶದಲ್ಲಿ ಕಲಕಿಂಸಿ ಎದ್ದವರಿಗೆ ಮಾದ್ರಿಯಾಗಿ, ರಾಜಶಕ್ತಿಯು ಪೂರ್ಣವಾಗಿ ಕೆಟ್ಟು, ನೀತಿ ನಡಿಯುವದಕ್ಕೆ ಅನೀತಿಯಾದ ಯತ್ನಗಳನ್ನು ಬಳಿಸಿದರು. 1789ನೇ ವರುಷದಲ್ಲಿ (Paris) ಪಾರಿಸ್ ಪಟ್ಟಣದಲ್ಲಿ ಕಲಹ ಉಂಟಾಯಿತು. ಅದು ಬೇರೆ ಎಲ್ಲೆಲ್ಲಿಯೂ ನಡಿಯುವ ಪ್ರಜಾಕಲಹದಂತೆ ಸ್ವಲ್ಪ ಕಾಲದಲ್ಲಿ ನಿವರ್ತಿಯಾಗದೆ ದಿನದಿನ ಮೂರ್ಖದಲ್ಲಿಯೂ ವೈರದಲ್ಲಿಯೂ ಅಧಿಕವಾಗುತ್ತಾ ಬಂತು. ಅರಸನು ಅನೇಕ ತಿಂಗಳು ಶೆರೆಯಲ್ಲಿ ಹಾಕಲ್ಪಟ್ಟ ತರುವಾಯ ಕೊಲ್ಲಲ್ಪಟ್ಟನು. ಕೆಲವು ದಿವಸಗಳ ತರುವಾಯ ಶಾಂತವೂ ಘನವೂ ಉಳ್ಳ ಅವನ ರಾಣಿಗೂ ಅದೇ ಪ್ರಕಾರ ಅಂತ್ಯವಾಯಿತು. ದೇಶದಲ್ಲಿದ್ದ ಅನೇಕ ಧೊರೆಮಕ್ಕಳು ಪ್ರಾಣ ಕಳಕೊಂಡರು. ಲಹರಿ ಹೊಂದಿದ ಪ್ರಜೆಗಳಿಗೆ ಸರಿ

ಬೀಳದವನು ಯಾರಾದರೂ ಸರಿ, ಅವನು ಹೇಣವಾಗುವದೇ ನಿಶ್ಚಯ. ಆ ಕಲಿಗಾ ಕಾಲಕ್ಕೆ ಭಯಂಕರ ಪರಿಪಾಲನೆ ಎಂದು ಸರಿಯಾದ ಹೆಸರು ಬಳಿಕೆಯಾಯಿತು. ಸಕಲ ಅನೀತಿಯೂ ಕ್ರೂರವೂ ಸ್ಥಿರ ಪಟ್ಟ ಆ ಕಾಲದಲ್ಲಿ ಕೇಡೂ ಪಾತಕವೂ ಮಾಡಿದ ಎಲ್ಲರೊಳಗೆ (Robespierre) ರೊಬ್ಸ್‌ಪೀರ್, (Danton) ದಾಂತನ್, (Murat) ಮರಾತ್ ಎಂಬ ಚಂಡಾಲರು ಹೆಸವಾರ್ಶಿಯಾಗಿದ್ದರು.

ಹೀಗೆ ತಮ್ಮ ದೇಶದಲ್ಲಿ ಉಂಟಾದ ನಿರ್ಬಂಧಗಳು ಸಾಕೆಂದಿರದೆ ಫ್ರಾನ್ಸ್ ದೇಶದ ಪ್ರಜಾಶ್ರೇಷ್ಠರೆಲ್ಲರೂ ಕೂಡಿ "ದೇಶಸಂಘ" ಎಂದು ಹೇಳಲ್ಪಟ್ಟ ಒಂದು ವಿಧ ಪಾರ್ಲಿಮೆಂತಾಗಿ ಕೂಡಿ ಯಾವ ನಾಡಿನಲ್ಲಿಯೂ ಧೊರೆತನಕ್ಕೆ ವಿರೋಧವಾಗಿ ಏಳುವವರಿಗೆಲ್ಲಾ ಸಹಾಯ ಮಾಡುತ್ತೇವೆಂದು ತಿಳಿಯ ಪಡಿಸಿದರು. ಇದರಿಂದ ಫ್ರಾನ್ಸರಿಗೆ ವಿರೋಧವಾಗಿ ದೊಡ್ಡ ಒಡಂಬಡಿಕೆ ಮಾಡಲ್ಪಟ್ಟಿತು. ಅದರಲ್ಲಿ (Austria) ಆಸ್ತ್ರಿಯಾ, (Prusia) ಪ್ರುಸ್ಯ, (Holland) ಹೊಲ್ಲಾಂದ್ ಎಂಬ ಮೂರು ಶೀಮೆಗಳೂ ಕೂಡಿ ಕೊಂಡವು. ಫ್ರಾನ್ಸ್ ಅರಸನಾದ ಹದಿನಾರನೇ ಲೂವಿಸ್ ಎಂಬವನು ಮರಣ ಹೊಂದಿದ ತರುವಾಯ ಮೇಲೆ ಹೇಳಿದ ಒಡಂಬಡಿಕೆಯಲ್ಲಿ ಇಂಗ್ಲಾಂದ್ ಶೀಮೆಯೂ ಶೇರಿ ಕೊಂಡಿತು. ಯುದ್ಧ ಪ್ರಕಟ ಮಾಡಲ್ಪಟ್ಟ ಕಾಲದಲ್ಲಿ ಫ್ರಾನ್ಸ್ ರಾಣುವೆಯೂ ಹೊಲ್ಲಾಂದ್ ಶೀಮೆಯಲ್ಲಿ ಪ್ರವೇಶಿಸಿ ಇದ್ದದರಿಂದ ಆ ದೇಶದ ಪ್ರಜೆಗಳಿಗೆ ಸಹಾಯ ಮಾಡುವ ಉದ್ದಿಶ್ಯ ಇಂಗ್ಲಾಂದಿನಿಂದ ಅರಸನ ಎರಡನೇ ಕುಮಾರನಾದ ಯೋರ್ಕ್ ಎಂಬುವ ದ್ಯೂಕ್ ಪ್ರಭುವಿನ ವಶವಾಗಿ ಒಂದು ಸೈನ್ಯವು ಕಳುಹಿಸಲ್ಪಟ್ಟಿತು. ಆ ಸೈನ್ಯವು ಹೋದ ಕಾರ್ಯವು ಸಿದ್ಧಿಯಾಗದೆ ಅನೇಕ ಆಪತ್ತುಗಳನ್ನು ಹೊಂದಿ ಇಂಗ್ಲಾಂದಿಗೆ ಹಿಂತಿರುಗಿ ಬರಲಾಯಿತು. ಸ್ವಲ್ಪ ಕಾಲದ ತರುವಾಯ ಹೊಲ್ಲಾಂದ್ ಶೀಮೆಯು ಜಯಿಸಲ್ಪಟ್ಟು ಫ್ರಾನ್ಸ್ ಶೀಮೆಗೆ ಕೂಡಿಸಲ್ಪಟ್ಟಿತು.

ಆದಾಗ್ಯೂ ಆರಂಭದಲ್ಲಿ ಇಂಗ್ಲಿಷಿನವರು ನೆಲದ ಮೇಲೆ ಜಯ ಹೊಂದದೆ ಇದ್ದಾಗ್ಯೂ ಕಡಲಿನ ಮೇಲೆ ತೊಡಗಿದ ಯುದ್ಧಗಳಲ್ಲೆಲ್ಲಾ ಜಯಪ್ರತಾಪರಾಗಿಯೇ ಇದ್ದರು. ಇಂಗ್ಲಿಷ್ ಗೊಂದಿಯಲ್ಲಿ ಉಂಟಾ

ದ ಉಗ್ರವಾದ ಯುದ್ಧದಲ್ಲಿ (Lord Howe) ಹೌ ಎಂಬುವ ಪ್ರಭು ವು ಫ್ರಾನ್ಸರ ನಾವಿಕಸೈನ್ಯಗಳನ್ನು ಪೂರ್ಣವಾಗಿ ಸೋಲಿಸಿದನು. ಇ ದರ ಮಧ್ಯೆ ಫ್ರಾನ್ಸ್ ಶೀಮೆಯಲ್ಲಿ ಎದ್ದ ಪ್ರಜಾಧೊರೆತನವು ಸಹ ಒಂ ದಾವರ್ತಿ ನೆಲೆಗೊಂಡಿತ್ತು. ಧೊರೆತನದ ವಿಷಯಗಳನ್ನೆಲ್ಲಾ (Executive Directory) "ಎಕ್ಸೆಕ್ಯುತಿವ್ ಡೈರೆಕ್ಟರಿ" ಎಂಬ ಒಂದು ಸಂಘದವರು ನ ಡಿಸಿ ಕೊಂಡು ಬಂದರು. ಆ ಧೊರೆತನದವರು ಮುಂಚೆ ಇದ್ದವರಿಗಿಂತ ಶಾಂತವಾದ ಅಭಿಪ್ರಾಯಗಳು ಉಳ್ಳವರಾಗಿದ್ದದರಿಂದ ಅವರ ಸಂಗಡ ಸಮಾಧಾನದ ಒಡಂಬಡಿಕೆ ಮಾಡುವ ಉದ್ದಿಶ್ಯ ಇಂಗ್ಲಿಷ್ ಧೊರೆತನದ ವರು ಯತ್ನ ಮಾಡಿದರು. ಅದಾಗ್ಯೂ ಅದು ನಿಂತು ಹೋಗಿ ಶಿರಿಗಿ ಯುದ್ಧವೇ ಪ್ರಾರಂಭಿಸಿತು. ಫ್ರಾನ್ಸರಿಗೆ ಹಲವು ಶೀಮೆಗಳವರ ಸಂ ಗಡಲೂ ಯುದ್ಧ ಉಂಟಾಗಿತ್ತು. ಅದರಿಂದ ಯಾವಾಗಲೂ ಅವರಿಗೆ ಮಾತ್ರ ಜಯ ಉಂಟಾಗಲಿಲ್ಲ. ಆದಾಗ್ಯೂ 1796ನೇ ವರುಷದಲ್ಲಿ ಫ್ರಾ ನ್ಸ್ ರಾಣುವೆಯಲ್ಲಿದ್ದ (Corsica) ಕೊರ್ಸಿಕಾ ಏಂಬ ದ್ವೀಪದಲ್ಲಿ ಹುಟ್ಟಿದ ಸೈನ್ಯಾಧಿಪತಿಯಾದ (Napoleon Buonaparte) ನಪೋಲಿ ಯನ್ ಬೊನಪಾರ್ತ್ ಎಂಬ ಹೆಸರುಳ್ಳವನು ಯುದ್ಧದಲ್ಲಿ ತಾನು ತೋ ರಿಸಿದ ಶೌರ್ಯದಿಂದ ಮೇಲೆ ಹೇಳಿದ ದೊಡ್ಡ ಅಂತಸ್ತನ್ನು ಹೊಂದಿ ಇದ್ದು, ಇತಲಿ ನಾಡಿನಲ್ಲಿದ್ದ ರಾಣುವೆಗೆ ಶ್ರೇಷ್ಠನಾದನು. ಅವನಿಗೆ ಪ್ರಾಪ್ತಿಸಿದ ಜಯಗಳು ಅತಿ ಶೀಘ್ರವೂ ನಿಶ್ಚಯವೂ ಆದವುಗಳಾಗಿದ್ದದ ರಿಂದ ಅಂದಿನಿಂದ ಫ್ರಾನ್ಸ್ ರಾಣುವೆಯು ಹೋಗುವ ಸ್ಥಳದಲ್ಲೆಲ್ಲಾ ಜಯಶೀಲರಾದರು.

ಈ ಯುದ್ಧವು ನಡಿಯುತ್ತಾ ಇರುವಾಗಲು ಇಂಗ್ಲಾಂದಿಗೆ ಇದ್ದ ಅನೇಕ ಸಹಾಯಶೀಮೆಗಳು ಈವಾಗ ಕೈ ಬಿಟ್ಟು ಬಿಟ್ಟದ್ದರಿಂದ ಆ ದೇ ಶದ ನಿರ್ವಾಹವು ಬಹು ವ್ಯಸನಕ್ಕೆ ಹೇತುವೆಯಾಗಿತ್ತು. ಆದಾಗ್ಯೂ ಆ ದೇಶಸ್ಥರ ವೀರತ್ವವು ಯಾವಾಗಿನಂತೆಯೇ ಘನವಾಗಿತ್ತು. ಒಳಕಲ ಹಗಳು ಪೂರ್ಣವಾಗಿ ತುಳಿಯಲ್ಪಟ್ಟವು. ಹೊರಗಿನ ಯುದ್ಧಗಳು ದೃ ಢವಾಗಿಯೂ ಶೌರ್ಯವಾಗಿಯೂ ನಡಿಸಲ್ಪಟ್ಟವು. ಆ ಸಮಯದಲ್ಲಿ ಬ್ರಿತಿಷ್ ಗೊಂದಿಯಲ್ಲಿದ್ದ ನಾವಿಕಸೈನ್ಯಗಳೊಳಗೆ ಒಂದು ಕಲಕಹವೆದ್ದಿ

ತು. ಆ ನಾವಿಕರಿಗೆ ಸಮಾಧಾನ ಹೇಳಿ ಆ ಕಲಹವನ್ನು ಅಡಗಿಸಿದ ಕೂಡ್ಲೇ ಥೇಮ್ಸ್ ನದಿಯ ಮುಖದ್ವಾರದ ಬಳಿಯ (Nore) ನೋರ್ ಎಂಬ ಸ್ಥಳದಲ್ಲಿ ಅದಕ್ಕಿಂತ ಭಯಂಕರವಾದ ಬೇರೊಂದು ಕಲಾಪನೆ ಎದ್ದಿತು. ಮುಂಚಿನದು ಹ್ಯಾಗೆ ಸಾಮರ್ಥ್ಯದಿಂದ ಅಡಗಿಸಲ್ಪಟ್ಟಿತೋ ಹಾಗೆಯೇ ಇದು ದಂಡದಿಂದ ಅಡಗಿಸಲ್ಪಟ್ಟಿತು. ಆ ವರುಷದಲ್ಲಿಯೇ ಇಂಗ್ಲಾಂಡರು ತಮ್ಮ ಶತ್ರುಗಳನ್ನು ಎರಡು ಸಾರಿ ಜಯಿಸಿದರು. ಅದರಲ್ಲಿ ಹಿಂದಿನ ಜಯವು ಮುಂಚೆ ಕಲಹಿಸಿ ಎದ್ದ ರಾಣುವೆಯಿಂದಲೇ ಉಂಟಾಯಿತು. ಸ್ಪೇನ್ ಶೀಮೆಯೂ ಫ್ರಾನ್ಸ್ ಶೀಮೆಯ ಸಂಗಡ ಶೇರಿ ಕೊಂಡು, ಆ ದೇಶದ ನಾವಿಕಸೈನ್ಯಗಳು ಫ್ರಾನ್ಸರ ಕೆಲವು ನಾವಿಕಸೈನ್ಯಗಳನ್ನು ಕರಕೊಂಡು ಬರುವಂತೆ ಹೋಗುವಲ್ಲಿ (Sir John Jervis) ಸರ್ ಜಾನ್ ಜೆರ್ವಿಸ್ ಎಂಬವನು (Cape St. Vincent) ಕೇಪ್ ಸೆಂತ್ ವಿನ್ಸೆಂತ್ ಎಂಬ ಸ್ಥಳದ ಬಳಿಯ ಅವುಗಳನ್ನು ಕಂಡು ಸಂಗಡಲೇ ಯುದ್ಧ ತೊಡಗಿ ಸೋಲಿಸಿದನು. ಈ ಜಯವಾದ ಸ್ಥಳವು ಕೇಪ್ ಸೆಂತ್ ವಿನ್ಸೆಂತ್ ಎಂಬ ಹೆಸರುಳ್ಳದಾದ್ದರಿಂದ, ಆ ಜಯದ ನಿಮಿತ್ತ ಅವನು ಸೆಂತ್ ವಿನ್ಸೆಂತ್ ಪ್ರಭು ಎಂಬ ಪ್ರಭುತ್ವವನ್ನು ಹೊಂದಿದನು. ಅದಕ್ಕೆ ಕೆಲವು ದಿನಗಳ ತರುವಾಯ (Admiral Duncan) ಅದ್ಮಿರಲ್ ದನ್ಕನ್ ಎಂಬವನೂ (Camperdown) ಕಾಂಪರ್ದೌನ್ ಊರಿನ ಬಳಿಯ ಹೊಲ್ಲಾಂದಿನವರ ನಾವಿಕಸೈನ್ಯಗಳನ್ನು ಜಯಿಸಿದನು. ಅದರ ಉದ್ದಿಶ್ಯ ಅವನು ಸಹ ಪ್ರಭುವಾದನು.

ಆ ಕಾಲದಲ್ಲಿ ಇಂಗ್ಲಾಂದ್ ಶೀಮೆಯು ಬಹಳ ಗಲಿಬಿಲಿಯಾಗಿತ್ತು. ಕೆಲವು ಮನುಷ್ಯರಲ್ಲಿ ಇಂಗ್ಲಿಷ್ ದೊರೆತನವನ್ನು ಕುರಿತು ಗುಜುಗುಟ್ಟುವಿಕೆ ಉಂಟಾಗಿತ್ತು. ಹೀಗೆ ಗುಜುಗುಟ್ಟುತ್ತಾ ಇದ್ದವರ ಸಂಖ್ಯೆಯು ಫ್ರಾನ್ಸ್ ಜನರ ಬೋಧನೆಯಿಂದ ಅಧಿಕವಾಗುತ್ತಾ ಬಂತು. ಅದರಿಂದ ಒಂದು ನಿರ್ಭಾಗ್ಯವಾದ ಕಲಹ ಉಂಟಾಯಿತು. ಆದಾಗ್ಯೂ ಅದು ಸಂಗಡಲೇ ಅಡಗಿಸಲ್ಪಟ್ಟಿತು. ಸ್ವಲ್ಪ ಕಾಲಕ್ಕೆ ಮುಂಚೆ ಹಿಂದು ದೇಶಕ್ಕೆ (Lord Cornwallis) ಗವರ್ನರ್ ಜೆನರಾಲ್ ಆಗಿದ್ದ ಕಾರ್ನ್‌ವಾಲಿಸ್ ಎಂಬುವ ಪ್ರಭುವೂ ಐರ್ಲಾಂಡ್ ಶೀಮೆಗೆ ಪ್ರತಿ ಅರಸನಾದ

(Lord Lieutenant) ಲೆಫ್ಟಿನಾಂತ್ ಎಂಬ ಪ್ರಭುವಾಗಿ ನೇಮಿಸಲ್ಪಟ್ಟದ್ದರಿಂದ ಆ ಶೀಮೆಯಲ್ಲಿ ತಿರಿಗಿ ಸಮಾಧಾನವೂ ನಂಬಿಕೆಯೂ ಉಂಟಾದವು. ನೂರು ವರುಷಗಳಿಗೆ ಮುಂಚೆ ಸ್ಕೊತ್ಲಾಂದ್ ಶೀಮೆಯ ಪಾರ್ಲಿಮೆಂತು ಇಂಗ್ಲಾಂದ್ ಶೀಮೆಯ ಪಾರ್ಲಿಮೆಂತಿನ ಸಂಗಡ ಕೂಡಿ ಕೊಂಡ ಪ್ರಕಾರ, ಈ ಕಾಲದಲ್ಲಿ ಐರ್ಲಾಂದ್ ಶೀಮೆಯ ಪಾರ್ಲಿಮೆಂತೂ ಇಂಗ್ಲಾಂದ್ ಶೀಮೆಯ ಪಾರ್ಲಿಮೆಂತಿನ ಸಂಗಡ ಕೂಡಿ ಕೊಂಡಿತು. ಹೀಗೆ ಕೂಡಿ ಐಕ್ಯವಾದದ್ದು ಆ ದೇಶಕ್ಕೆ ಅನುಕೂಲವಾಗಿ ಮುಗಿಯಿತು.

ಫ್ರಾನ್ಸ್ ಶೀಮೆಯೊಡನೆ ನಡೆದ ಯುದ್ಧವು ಬಹು ಬಲವಾಗಿ ನಡಿಯಿತು. ಫ್ರಾನ್ಸ್ ದಳಕರ್ತನಾದ ನಪೋಲಿಯನ್ ಬೊನಪಾರ್ತ್ ಎಂಬವನು ಹಿಂದುಸ್ಥಾನದಲ್ಲಿ ಇಂಗ್ಲಿಷಿನವರ ವಶವಾಗಿರುವ ದೇಶಗಳನ್ನು ಆಕ್ರಮಿಸಿ ಕೊಳ್ಳ ಯೋಚಿಸಿ, ಮೂವತ್ತು ಸಾವಿರ ಸೈನಿಕರನ್ನು ಹೊತ್ತ ನಾವೆಗಳನ್ನು ಐಗುಪ್ತಕ್ಕೆ ಕಳುಹಿಸಿದನು. ಆ ದೇಶವನ್ನು ತಡೆಇಲ್ಲದೆ ಕಟ್ಟಿ ಕೊಂಡು (Syria) ಸಿರಿಯಕ್ಕೆ ಹೋದನು. ಹೋದಾಗ ಇಂಗ್ಲಿಷ್ ನಾವಿಕದಳಕರ್ತನಾದ (Sir Sidney Smith) ಸರ್ ಸಿಡ್ನಿ ಸ್ಮಿತ್ ಎಂಬವನ ಶ್ರಣೀಕರದಿಂದ ನೆಲೆ ತಪ್ಪಿಸಲ್ಪಟ್ಟನು. ಅವನು ಏನು ಮಾಡಿದನೆಂದರೆ, ತಾನೂ ತನ್ನ ನಾವಿಕರೂ ಕೂಡಿ ಕೊಂಡು (Acre) ಏಕ್ಕರ್ ಎಂಬುವ ಊರಿನಲ್ಲಿರುವ ತುರುಕರನ್ನು ಎಬ್ಬಿಸಿ ಬಿಟ್ಟು ತಮ್ಮ ಪಟ್ಣವನ್ನು ಸಡ್ಲವಾಗದೆ ನಿಂತು ಕಾಯುವಂತೆ ಮಾಡಿದನು. ಇದರ ಮಧ್ಯೆ (Sir Horatio Nelson) ಸರ್ ಹೊರೇಷಿಯೋ ನೆಲ್ಸನ್ ಎಂಬವನು ಫ್ರಾನ್ಸ್ ಹಡಗಗಳು ಬರುತ್ತವೆ ಎಂದು ಬಹು ಕಾಲ ಕಾದಿದ್ದು ಕಾಣದೆ, ಕಡೆಯಲ್ಲಿ ಅವು (Nile) ನೈಲ್ ನದಿಯ ಮುಖದ್ವಾರದಲ್ಲಿ ಆಬೂಕರ್ ಎಂಬ ಮೂಲೆಯಲ್ಲಿ ಇಳು ಕೊಂಡವೆ ಎಂದು ಕೇಳಿ, ಅವನು ಸಹ ಸಂಗಡಲೇ ಹೊರಟು ಹೋಗಿ, ಯಾವ ವಿಧದಲ್ಲಾದರೂ ಅವರನ್ನು ಯುದ್ಧಕ್ಕೆ ಕರೆಯ ಬೇಕೆಂದು ಶೀರ್ಮಾನಿಸಿ ಕೊಂಡನು. ಅವನು ಹೋಗಿ ತಗಲಿದ್ದು ಬಹು ಶ್ರಣೀಕರವಾದ ಕೆಲಸ. ಆದಾಗ್ಯೂ ಕಾರ್ಯ ಸಿದ್ಧಿಯಾಯಿತು. ಫ್ರಾನ್ಸರು ಆಳವಿಲ್ಲದ ಸ್ಥಳದಲ್ಲಿ ಲಂಗರು ಹಾಕಿದ್ದರು. ಆದಾಗ್ಯೂ ಇಂಗ್ಲಿಷಿನವರು ಅವರಿಗೂ ಥಡಕ್ಕೂ ನಡುವೆ ಬಹು ಧೈರ್ಯ

ವಾಗಿ ಪಠಗಳನ್ನು ಬಿಚ್ಚಿ ಒಂದು ನಿಮಿಷವಾದರೂ ನಿಲ್ಲದೆ ಯುದ್ಧ ತೊಡಗಿದರು. ಇಂಗ್ಲಿಷ್ ನಾವಿಕಸೈನ್ಯಗಳನ್ನು ನಡಿಸಿದ ನೆಲ್ಸನ್ ಎಂಬವನೇ ಇಂಗ್ಲಾಂಡಿನಲ್ಲಿ ಎದ್ದ ಸಕಲ ನಾವಿಕದಳಕರ್ತರಿಗಿಂತ ದೊಡ್ಡವನು. ಅವನು ಧೈರ್ಯಸ್ಥನೂ, ವಿವೇಕಿಯೂ, ಶತ್ರುಗಳನ್ನು ಕಂಡಾಗಲೇ ಸ್ವಲ್ಪವಾದರೂ ತಾಮಸ ಮಾಡದೆ ಹೋಗಿ ಯುದ್ಧ ಮಾಡುವಂಥವನೂ ಆಗಿದ್ದನು. ಅವನ ತ್ವರ್ಯಕರದಿಂದ ಎಂಥಾ ತಡೆಗಳಿದ್ದಾಗ್ಯೂ ಅವುಗಳನ್ನು ತಾತ್ಸಾರ ಮಾಡುವನು. ಅವನಿಗಿದ್ದ ಬುದ್ಧಿಸಾಮಾರ್ಥ್ಯದಿಂದ ಆ ವಿಘ್ನಗಳನ್ನೆಲ್ಲಾ ಮೇಲ್ಗೊಳ್ಳುವನು. ಅವನಿಗೆ ಇದ್ದ ಅತಿಶಯವಾದ ಗುಣಗಳೂ, ಅವನು ಹೊಂದಿದ ಮುಖ್ಯವಾದ ಜಯಗಳೂ, ಅವನನ್ನು ನಾವಿಕರ ಹೃದಯದೊಡನೆ ಕಟ್ಟುವ ಹಗ್ಗಗಳಾಗಿದ್ದವು. ಇದಲ್ಲದೆ ಇಂಗ್ಲಿಷ್ ಜಾತಿಯವರ ಬಳಿಯ ಮರ್ಯಾದೆಯೂ ನಂಬಿಕೆಯೂ ಅವನಲ್ಲಿ ಉಂಟಾಗಿದ್ದವು.

ಈ ಯುದ್ಧವು ರಾತ್ರಿಯಲ್ಲಿ ಪ್ರಾರಂಭಿಸಿದ್ದು· ಬೆಳಗಾಗುವದ್ದಕ್ಕಿಂತ ಮುಂಚೆಯೇ ಫ್ರಾನ್ಸ್‌ರ ಹಡಗಗಳಲ್ಲಿ ಹಲವು ಇಂಗ್ಲಿಷಿನವರ ಕೈವಶವಾದವು. ಮಧ್ಯ ಝಾಮದಲ್ಲಿ ಒಂದು ಮಹಾ ಧ್ವನಿ ಉಂಟಾಯಿತು; ಫಿರಂಗಿಗಳ ನಾದಕ್ಕಿಂತಲೂ ಯುದ್ಧ ಮಾಡುವವರ ಆರ್ಭಟಕ್ಕಿಂತಲೂ ಅಧಿಕವಾದ ಮಹಾ ಧ್ವನಿ. ಸ್ವಲ್ಪ ಹೊತ್ತು ಯುದ್ಧವು ಸಹ ನಿಂತಿತು. ನಾವಿಕರೆಲ್ಲಾ ಮೌನವಾಗಿದ್ದರು. ಅದು ಏನಂದರೆ, ಫ್ರಾನ್ಸರ ಹಡಗಗಳಲ್ಲಿ ಒಂದು ದೊಡ್ಡ ಹಡಗವು ತುಪಾಕಿಮದ್ದಿನಿಂದ ಒಡೆದು ಹೋಯಿತು. ಇದಲ್ಲದೆ ನೆಲ್ಸನ್ ಘಾಯ ಪಟ್ಟನು. ತನಗಾದ ಘಾಯವನ್ನು ಸಹ ನೋಡದೆ, ತನ್ನ ಹಡಗದ ತಳಕ್ಕೆ ಓಡಿ ಬಂದು, ತನ್ನ ಕೈಯಲ್ಲಿ ಬಿದ್ದ ಶತ್ರುಗಳನ್ನು ರಕ್ಷಿಸಿದನು. ಬೊನಪಾರ್ತ ಎಂಬವನ ಆಶ್ಯಾಶೆಯಾದ ಗುಣಕ್ಕೆ ಇಲ್ಲಿ ನಡೆದ ಜಯವು ದೊಡ್ಡ ಕೊಟ್ಲಿಯಾಗಿದ್ದದರಿಂದ ಇಂಥಾ ದೊಡ್ಡ ಜಯವನ್ನು ಕೊಟ್ಟ ದೇವರಿಗೆ ಇಂಗ್ಲಿಷ್ ನಾವೆಗಳಲ್ಲಿ ಇದ್ದವರೆಲ್ಲರೂ ಸ್ತೋತ್ರ ಸಲ್ಲಿಸಿದರು.

ಜಗಲೋಕವನ್ನೆಲ್ಲಾ ತನ್ನದಾಗ ಮಾಡಿ ಕೊಳ್ಳ ಬೇಕೆಂಬುವದು ನಪೋಲಿಯನ್ ಬೊನಪಾರ್ತನ ಮನೋಽಭಿಪ್ರಾಯವು. ಈ ಅಭಿಪ್ರಾಯವು

ಕೈಕೂಡಿ ಬರುವದಕ್ಕೆ ಅವನು ಮೊದಲು ಮೊದಲು ಯೋಚಿಸಿದ್ದೇನಂದರೆ, ತನ್ನ ಶೀಮೆಗೆ ತಿರಿಗಿ ಬಂದು, ಅಲ್ಲಿ ತಾರುಮಾರಾಗಿದ್ದ ಧೊರೆತನವನ್ನು ಮಗುಚಿ ಬಿಟ್ಟು, ಶ್ರೇಷ್ಠಾಧಿಕಾರವನ್ನು ತಾನೇ ಹೊಂದ ಬೇಕೆಂದು ಶೀರ್ಮಾನಿಸಿದನು. ಐಗುಪ್ತದಲ್ಲಿದ್ದ ರಾಣುವೆಯನ್ನು ತನಗೆ ಎರಡನೇ ದಳಕರ್ತನಾಗಿದ್ದವನ ವಶವಾಗಿ ಬಿಟ್ಟು, ಒಂದು ಸಣ್ಣ ಫ್ರಾನ್ಸ್ ಹಡಗದಲ್ಲಿ ಹತ್ತಿ ಕೊಂಡು, ಮೆದಿತೆರೇನಿಯನ್ ಕಡಲಿನಲ್ಲಿ ಇದ್ದ ಇಂಗ್ಲಿಷಿನವರ ದಂಡುಗಳಿಗೆ ಉಪಾಯವಾಗಿ ತಪ್ಪಿಸಿ ಕೊಂಡು, ಫ್ರಾನ್ಸಿನಲ್ಲಿ ಧಡವಿಳಿದು, ಸಂಗಡಲೇ ಪಾರಿಶ್ ಪಟ್ಟಕ್ಕೆ ಹೋದನು. ಹೋದ ಕೂಡ್ಲೆ ಇದ್ದ ಧೊರೆತನವನ್ನು ಅಳಿಸಿ ಬಿಟ್ಟು (Directory) "ದೈರೆಕ್ತರಿ" ಎಂಬ ಅಧಿಕೃವನ್ನು ತೆಗದು ಹಾಕಿ, *ಕೊನ್ಸಲ್ ಎಂಬ ಮೂರು ಮಂದಿಯ ವಶದಲ್ಲಿ ಧೊರೆತನವನ್ನು ಇರಿಸಿದನು. ಆ ಮೂವರಲ್ಲಿ ತಾನೇ ಮುಖ್ಯಸ್ತನಾದನು. (First Consul) ಮೊದಲನೇ ಕೊನ್ಸಲ್ ಎಂಬ ಹೆಸರನ್ನು ಇಟ್ಟು ಕೊಂಡು ಅವನು ಫ್ರಾನ್ಸ್ ಶೀಮೆಯನ್ನು ಆಳಿದ್ದು ಕ್ರೊಮ್ವೆಲ್ ಇಂಗ್ಲಾಂಡನ್ನು ಆಳಿದ ಪ್ರಕಾರವೇ ಪೂರ್ಣವಾಗಿ ತಾನೇ ಸ್ವತಹ ಅರಸನಾಗಿದ್ದನು. ಅಂದಿನಿಂದ ಫ್ರಾನ್ಸ್ ಧೊರೆತನವು ರಾಣುವೆಯ ಸಮ್ಮಂಧವಾದದ್ದಾಯಿತು. ಫ್ರಾನ್ಸರು ವೀರತ್ವವಾದ ಜಾತಿಯಾಗಿಯೂ ಡಂಬದಲ್ಲಿಯೂ ಯುದ್ಧದಲ್ಲಿಯೂ ಜಯದಲ್ಲಿಯೂ ಮುಖ್ಯಸ್ತರಾಗಿಯೂ ಇದ್ದದರಿಂದ, ತಮ್ಮ ಮುಖ್ಯಸ್ತನಿಗೆ ಪ್ರಾಪ್ತಿಸಿದ ಜಯಗಳಿಂದ ಬಹು ಆನಂದ ಹೊಂದಿದರು.

ಗತಿಸಿದ ಯುದ್ಧದಲ್ಲಿ ನಡೆದ ಹಲವು ಜಗಳಗಳಲ್ಲಿಯೂ ಸಮುದ್ರದಲ್ಲಿ ಯಾವದ್ದೇಶದವರನ್ನೂ ಗೆದ್ದು ಇಂಗ್ಲಿಷಿನವರು ತಮ್ಮ ಧ್ವಜವನ್ನೇ ನಾಟುತ್ತಾ ಬಂದದರಿಂದ ಈ ವರೆಗೂ ಇಂಗ್ಲಾಂಡನ್ನು ಎದುರಿಸದೆ ಇದ್ದ ದೇಶಗಳಲ್ಲಿ ಸಹ ಅವರನ್ನು ಕುರಿತು ಹೊಟ್ಟೇ ಕಿಚ್ಚು ಉಂಟಾಯಿತು. ಉಚಯಕಕ್ಷಿಗಳಲ್ಲಿಯೂ ಶೇರದೆ ಇದ್ದ ದೇಶಗಳವರ ಹಡಗಗಳಲ್ಲಿ ಶತ್ರುಗಳಿಗೆ ಬೇಕಾದ ಸಾಮಾನುಗಳು ಹತ್ತಿಸಿ ತಂದಿದ್ದಾರೋ ಇಲ್ಲವೋ ಎಂದು ಇಂಗ್ಲಿಷಿನವರು ಶೋಧಿಸುತ್ತಾ ಬರುವದುಂಟು.

*ಕೊನ್ಸಲ್ ಅಂದರೆ ರೋಮಾಯತಲ್ಲಿ ಮುಖ್ಯವಾದ ಪಟ್ಟದ ಹೆಸರು.

ಇಂಥಾ ನ್ಯಾಯವು ಅವರಿಗೆ ಇಲ್ಲದಂತೆ ತಡೆ ಮಾಡ ರುಸ್ಯ, ಸ್ವೀದೆನ್, ದೆನ್‌ಮಾರ್ಕ್ ಎಂಬ ಮೂರು ಶೀಮೆಗಳೂ ಇಂಗ್ಲಾಂದಿಗೆ ವಿರೋಧವಾಗಿ ಒಡಂಬಡಿಕೆ ಮಾಡಿ ಕೊಂಡರು. ನೈಲ್ ನದಿಯ ಜಯದ ನಿಮಿತ್ತ ಪ್ರಖ್ಯಾತಿಯನ್ನು ಹೊಂದಿದ ನೆಲ್ಸನನ ವಶವಾಗಿಯೂ, (Sir Hyde Parker) ಸರ್ ಹೈದ್ ಪಾರ್ಕರ್ ಎಂಬವನ ವಶವಾಗಿಯೂ ಒಂದು ನಾವಿಕದಂಡು ಕಳುಹಿಸಲ್ಪಡಲಾಗಿ, ನೆಲ್ಸನ್ ಎಂಬವನು ಸಂಗಡಲೇ (Copenhagen) ಕೋಪನ್‌ಹೇಗನ್ ಪಟ್ಟಣಕ್ಕೆ ಹೋಗಿ ದೆನ್‌ಮಾರ್ಕಿನವರ ನಾವಿಕಸೈನ್ಯವನ್ನೆಲ್ಲಾ ನಾಶ ಮಾಡಿ ದೆನ್‌ಮಾರ್ಕ್ ಶೀಮೆಯ ಅಧಿಕಾರವನ್ನು ಪೂರ್ಣವಾಗಿ ಒಳ ಬೀಳ ಮಾಡಿದನು. ಇನ್ನು ರುಸ್ಯದ ಚಕ್ರವರ್ತಿಯು ಕಾಲವಾಗಿ ಹೋದದರಿಂದ ರುಸ್ಯರೂ ಸ್ವೀದರೂ ವಿರೋಧವಾಗಿ ಎಣಿಸಿದ್ದ ನೆನಪುಗಳು ನಾಶವಾದವು. ಆ ಚಕ್ರವರ್ತಿತನಕ್ಕೆ ಬಂದವನು ಸಹ ತನ್ನ ಶೀಮೆಗೂ ಇಂಗ್ಲಾಂದಿಗೂ ಮುಂಚೆ ಯಾವ ಯಾವ ಸ್ನೇಹಸಂಬಂಧಗಳಿದ್ದವೊ ಅವುಗಳನ್ನೆಲ್ಲಾ ನೂತನ ಪಡಿಸಿ ಕೊಂಡನು.

ಇದರ ಮಧ್ಯೆ ಐಗುಪ್ತದಲ್ಲಿದ್ದ ಫ್ರಾನ್ಸ್ ರಾಣುವೆಯು ಸೋಲಿಸಲ್ಪಟ್ಟಿತು. ಆ ಶೀಮೆಯಿಂದ ಅವರನ್ನು ಅಟ್ಟಿ ಹೊಡಿಯುವ ಹಾಗೆ ಒಂದು ಇಂಗ್ಲಿಷ್ ರಾಣುವೆಯು ಕಳುಹಿಸಲ್ಪಟ್ಟಿತು. ಅವರು ಹೋಗಿ ಮಾಡಿದ ಒಂದೇ ಯುದ್ಧದಿಂದ ಫ್ರಾನ್ಸರು ಹೊರಡಿಸಲ್ಪಟ್ಟರು. ಆ ಯುದ್ಧದಲ್ಲಿ ಧೈರ್ಯಶಾಲಿಯಾದ (Sir Ralph Abercrombie) ಸರ್ ರಾಲ್ಫ್ ಅಬರ್ಕ್ರಾಂಬಿ ಎಂಬ ಇಂಗ್ಲಿಷ್ ಸೈನ್ಯಾಧಿಪತಿ ಮರಣ ಹೊಂದಿದನು. ಅವನು ಸತ್ತರೂ ಅವನ ತರುವಾಯ ಆ ಉದ್ಯೋಗಕ್ಕೆ ಬಂದವನು ನಿಂತು ಯುದ್ಧವನ್ನು ಜಯವಾಗಿ ನಡಿಸಿದನು. ಫ್ರಾನ್ಸರ ದಳಕರ್ತರು ವಿಧೇಯರಾಗಿ ಹೋದರು. ಇಂಗ್ಲಿಷಿನವರ ಹಡಗಗಳಿಂದ ಫ್ರಾನ್ಸ್ ರಾಣುವೆಯು ಇಂಗ್ಲಾಂದಿಗೆ ತೆಗದು ಕೊಂಡು ಹೋಗಲ್ಪಟ್ಟಿತು. ಐಗುಪ್ತದಲ್ಲಿ ಇನ್ನು ಅನ್ಯ ಶತ್ರುಗಳು ಒಬ್ಬರೂ ಇಲ್ಲಿ. ಈ ಯುದ್ಧದಲ್ಲಿ (Sir David Baird) ಸರ್ ದೇವಿದ್ ಬೇರ್ದ್ ಎಂಬವನಿಂದ ನಡಿಸಲ್ಪಟ್ಟ ಕೆಲವು ರಾಣುವೆಗಳು ಐಗುಪ್ತಕ್ಕೆ ಬಂದು ಆ ಶೀಮೆಯನ್ನು ಕಾಯುವ ಕೆಲಸಕ್ಕೆ ಕೂಡಿ ಕೊಂಡವು.

## ಸಂಧಿ 23. ಬೊನಪಾರ್ತನು ಇಂಗ್ಲಾಂಡಿಗೆ ಹೋಗ ಎತ್ನೈಸಿದ್ದು.

ಇಂಗ್ಲಿಷಿನವರ ದಂಡುಗಳು ಹಿಂದುಸ್ಥಾನದಲ್ಲಿ ಸಹ ಜಯವೃದ್ಧಿ ಹೊಂದಿದವು. ನಪೋಲಿಯನಿಗೆ ಉಂಟಾಗಿದ್ದ ಜಯಗಳನ್ನೂ ಅವನು ಇಂಗ್ಲಿಷಿನವರ ಮೇಲೆ ಹಗೆಯಾಗಿರುವದನ್ನೂ ಕೇಳಿ ಟೀಪು ಸುಲ್ತಾನನು ತಿರಿಗಿ ಇಂಗ್ಲಿಷಿನವರ ಬಳಿಯ ಯುದ್ಧ ತೊಡಗಿದನು. ಆದರೂ ಅವನ ರಾಜ್ಯಭಾರದಲ್ಲಿ ಮುಖ್ಯ ನಗರವಾದ ಶ್ರೀರಂಗಪಟ್ಣವು ಹಿಡಿಯಲ್ಪಟ್ಟಿತು. ಅಲ್ಲಿ ನಡೆದ ಯುದ್ಧದಲ್ಲಿ ಅವನು ಮರಣ ಹೊಂದಿದನು. ಕ್ರಮವಾದ ಧೊರೆತನವಿಲ್ಲದ ಕರ್ನಾಟಕ ಮುಂತಾದ ದೇಶಗಳೆಲ್ಲಾ ಇಂಗ್ಲಿಷಿನವರಿಗೆ ಬಿಡಲ್ಪಟ್ಟವು. ಅವುಗಳ ಧೊರೆತನವೆಲ್ಲಾ (Wellesley) ವೆಲ್ಲಿಸ್ಲಿ ಎಂಬ (Marquis) ಮಾರ್ಕ್ವಿಸ್ ಪ್ರಭುವಿನ ಕೈಯಲ್ಲಿದ್ದವು. ಅವನು ಯಾರಂದರೆ, ಹಿಂದುಸ್ಥಾನವನ್ನು ಆಳಿದ ಒಬ್ಬ ಧೊರೆಯು. ಅವನ ಆಲೋಚನೆಯಿಂದಲೂ ಧೈರ್ಯದಿಂದಲೂ ಆಳಿಕೆಯ ಸಾಮರ್ಥ್ಯದಿಂದಲೂ ಹಿಂದುಸ್ಥಾನದಲ್ಲಿ ಇಂಗ್ಲಿಷಿನವರಿಗೆ ಉಂಟಾಗಿದ್ದ ಅಧಿಕಾರವು ಸಮಸ್ತ ಪ್ರಜೆಗಳಿಂದಲೂ ಕೊಂಡಾಡಲ್ಪಡ ತಕ್ಕದ್ದಾಯಿತು.

ಅದೇ ಸಂವತ್ಸರದಲ್ಲಿಯೇ ನಪೋಲಿಯನನು ಇಂಗ್ಲಾಂಡನ್ನು ಮುತ್ತಿಗೆ ಹಾಕುವದಕ್ಕೆ ಯತ್ನ ಮಾಡಿ ಕೊಂಡಿದ್ದನು. ಇಂಗ್ಲಾಂಡಿನ ಥಡದ ಎದುರಿನಲ್ಲಿರುವ (Boulogne) ಬೊಲೋನ್ ಎಂಬ ಊರಿನಲ್ಲಿ ಒಂದು ರಾಣುವೆಯು ಕೂಡಿಸಲ್ಪಡುತ್ತಾ ಇತ್ತು. ಬ್ರಿಟಿಷ್ ಗೊಂದಿಯನ್ನು ದಾಟಿ, ಆ ರಾಣುವೆಯನ್ನು ತೆಗದು ಕೊಂಡು ಬರ ಹಡಗಗಳು ಸಹ ಸಿದ್ಧವಾಗಿದ್ದವು. ಅವನನ್ನು ಎದುರಿಸಿ ಅವನಿಗೆ ಬೊಗ್ಗದೆ ಇದ್ದ ಶೀಮೆ ಇಂಗ್ಲಾಂಡ್ ಒಂದೇ. ಆದದರಿಂದ ಅದನ್ನು ಸಹ ತಗ್ಗಿಸ ಅವನು ಅತ್ಯಾಶೆ ಪಟ್ಟಿದ್ದನು. ಆದಾಗ್ಯೂ ಕಡೇ ಮಟ್ಟಿಗೂ ಅವನನ್ನು ಎದುರಿಸ ಇಂಗ್ಲಾಂಡಿನವರು ಯತ್ನವಾಗಿದ್ದರು. ರಾಜ್ಯಭಾರದ ಯಾವದ್ದಿಕ್ಕುಗಳಲ್ಲಿಯೂ ದಂಡುಗಳು ಕೂಡಿಸಲ್ಪಡುತ್ತಾ ಇದ್ದವು. ಇಂಗ್ಲಿಷ್ ಗೊಂದಿಯಲ್ಲಿದ್ದ ನಾವಿಕಸೈನ್ಯವು ಯಾವಾಗಲೂ ಎಚ್ಚರಿಕೆಯಾಗಿತ್ತು. ಇಂಗ್ಲಿಷ್ ಜಾತಿಯವರ ಬಲವೂ, ಕಟ್ಟುಪಾಟೂ, ಶೀಮಾರ್ನವೂ, ಇದಕ್ಕೆ ಮುಂಚೆ ಯಾವ ಕಾಲದಲ್ಲಿಯೂ ಇಷ್ಟು ಪ್ರಕಾಶವಾಗಿ ತೋರಲಿಲ್ಲ. ಜನರು ಬೊನಪಾರ್ತೆಂಬವನನ್ನು ಜನ್ಮಹಗೆಯಾಗಿ ಹಗೆ ಮಾಡಿದರು. ಅದ

ರಿಂದ ಅವನು ತಮ್ಮ ಶೀಮೆಗೆ ದಂಡೆತ್ತಿ ಕೊಂಡು ಬಂದರೆ, ಸಾಯುವ ಮಟ್ಟಿಗೂ ಅವನನ್ನು ಎದುರಿಸಿ ಹೋರಾಡುವೆವೆಂದು ಛಲ ಸಾಧಿಸಿದರು. ಬೊಲೋಯಿನಲ್ಲಿದ್ದ ಹಡಗಗಳನ್ನು ಹಿಂಡಿಯ ಬೇಕೆಂದು ನೆಲ್ಸನ್ ಎಂಬವನು ಮಧ್ಯರಾತ್ರಿಯಲ್ಲಿ ಎದುರಿಸಿದನು. ಅವನು ಜಯ ಹೊಂದದೆ ಹೋದಾಗ್ಯೂ, ಅವನೂ ಅವನ ಸಂಗಡ ಇದ್ದವರೂ ತೋರಿಸಿದ ಧೈರ್ಯವನ್ನೂ ದೃಢವನ್ನೂ ನೋಡಿದ ಬೊನಪಾರ್ತ್ ಎಂಬವನು ತಾನು ಮಾಡಿದ ಯೋಚನೆ ಈಡೇರಲಾರದೆಂದು ತಿಳುಕೊಳ್ಳ ಹೇತುವೆಯಾಯಿತು. ಇಂಗ್ಲಾಂಡನ್ನು ಜಯಿಸುವಂತೆ ಅವನು ಕೂಡಿಸುತ್ತಿದ್ದ ದಂಡು ಸಹ ನಿಲ್ಲಿಸಲ್ಪಟ್ಟಿತು. ಮಾರಣೆ ವರುಷದಲ್ಲಿ (Amiens) ಆಮಿಯೆನ್ಸ್ ಎಂಬುವ ಸ್ಥಳದಲ್ಲಿ ಫ್ರಾನ್ಸಿಗೂ ಇಂಗ್ಲಾಂದಿಗೂ ಸಮಾಧಾನದ ಒಡಂಬಡಿಕೆ ಉಂಟಾಯಿತು. 1801ನೇ ವರುಷದಲ್ಲಿ ಮಹಾ ಯುದ್ಧಮಂತ್ರಿಯಾದ (Pitt) ಪಿತ್ತ್ ಧೊರೆಯು ತನ್ನ ಮಂತ್ರಿತನವನ್ನು ಬಿಟ್ಟು ನಿವರ್ತಿಯಾದನು. ಅವನ ತರುವಾಯ ಮಂತ್ರಿಯಾದ ಅದಿಂಗ್ತನ್ ಧೊರೆಯು ಸಮಾಧಾನವೊಡಂಬಡಿಕೆಗಾದ ಕಾರ್ಯಗಳನ್ನು ಈಡೇರಿಸಿದನು. ಯುದ್ಧವು ಸಮಾಧಾನ ಉಂಟಾದ ಮೇಲೆ ಲಂಡನ್ ಪಟ್ಟದಲ್ಲಿಯೂ ಪಾರಿಸ್ ಪಟ್ಟದಲ್ಲಿಯೂ ಉಂಟಾಗಿದ್ದ ಸಂತೋಷವು ಕೊಂಚವಾದದ್ದಲ್ಲ. ಯಾಕಂದರೆ ಎರಡು ಶೀಮೆಗಳಲ್ಲಿಯೂ ಯುದ್ಧ ಯುದ್ಧ ಅಂತ ದಣಿದು ಹೋಗಿದ್ದರು.

ಆದಾಗ್ಯೂ ಆ ಸಮಾಧಾನವು ಬಹು ದಿವಸ ನಿಲ್ಲಲಿಲ್ಲ. ಅದು ಬಹು ಸ್ವಲ್ಪ ಕಾಲ ಮಾತ್ರವಿತ್ತು. ಹಾಗೆ ಸಮಾಧಾನವಾಗಿದ್ದ ದಿವಸಗಳಲ್ಲಿ ಕೂಡ ಯುದ್ಧವನ್ನು ಹ್ಯಾಗೆ ನೂತನ ಪಡಿಸ ಬಹುದೆಂದು ಬೊನಪಾರ್ತೆಂಬವನು ಯೋಚನೆಯಾಗಿದ್ದನು. 1803ನೇ ವರುಷದಲ್ಲಿ ಮತ್ತೂ ಹಗೆ ಹುಟ್ಟಿತು. ಪಿತ್ತ್ ಧೊರೆಯು ತಿರಿಗಿ ಮಂತ್ರಿತನವನ್ನು ಹೊಂದಿದನು. ಯುದ್ಧ ಆರಂಭವಾದ ಕಾಲದಲ್ಲಿ ಬೊನಪಾರ್ತೆಂಬವನು ಫ್ರಾನ್ಸಿಗೆ ಪ್ರಯಾಣಮಾರ್ಗವಾಗಿ ಹೋಗಿದ್ದ ಸಕಲ ಇಂಗ್ಲಿಷಿನವರನ್ನೂ ಹಿಂಡಿದು ಶೆರೆಯಲ್ಲಿಟ್ಟನು. ಇದು ಮಹಾ ವಿಶ್ವಾಸಘಾತಕವಾದ್ದರಿಂದ ಅವನ ಶೀಮೆಯವರೇ ಅವನ ಮೇಲೆ ನ್ಯಾಯವಾಗಿ ಬಹು ಕೋಪಗೊಂಡರು.

## ಸಂಧಿ 23. ಬೊನಪಾರ್ತ್ ಫ್ರಾನ್ಸ್ ಚಕ್ರವರ್ತಿಯಾದದ್ದು.

1804ನೇ ವರುಷದಲ್ಲಿ ಬೊನಪಾರ್ತ್ ಎಂಬವನು ಫ್ರಾನ್ಸ್ ಚಕ್ರವರ್ತಿ ಎಂಬ ಪಟ್ಟವನ್ನು ಹೊಂದಿದನು. ಅವನು ಪಾರಿಸ್ ಪಟ್ಣದಲ್ಲಿ ಬಹು ಅಟ್ಟಹಾಸದಿಂದಲೂ ಮಹಿಮೆಯಿಂದಲೂ ಕಿರೀಟ ಧರಿಸಿದನು. ಅದರಲ್ಲಿ ಪಾಪು ಸಹ ರೋಮಾಪುರಿಯಿಂದ ಬಂದು ಆಚರಣೆಗಳನ್ನು ನಡಿಸಿದನು. ಈ ಪ್ರಕಾರ ಬೊನಪಾರ್ತೆಂಬವನು ತನ್ನ ಶೀಮೆಯ ವಿಷಯ ಮಾಡಿ ಕೊಂಡ ಅತ್ಯಾಶೆಯು ಮುಗಿಯಿತು. ಆದಾಗ್ಯೂ ಜಯದ ಮೇಲೆ ಅವನಿಗಿದ್ದ ಆಶೆ ಇನ್ನೂ ತೀರಲಿಲ್ಲ. ಅವನು ಬಹು ವಾಂಛೆಯಾಗಿದ್ದ ಪ್ರಕಾರ ಯೂರೋಪಿನ ಬೇರೆ ಶೀಮೆಗಳನ್ನೆಲ್ಲಾ ಆಳುವ ಅರಸರಿಗಿಂತ ಮೇಲಾದ ಅಧಿಕಾರವನ್ನು ಅವನು ಇನ್ನೂ ಹೊಂದಿದ್ದಿಲ್ಲ. ಆದರೆ ಮುಂದೆ ಬರುವ ಸಂಧಿಯಲ್ಲಿ ಹೇಳುವ ಪ್ರಕಾರ ಅದನ್ನು ಸಹ ಅವನು ಒಂದು ಸಾರಿ ಹೊಂದಿದ ತರುವಾಯ ಸಂಗಡಲೇ ಅದನ್ನು ಕಳಕೊಂಡು ಬಹು ಘನಹೀನ ಹೊಂದಿದನು.

## CHAPTER XXIV.

### THE DOWNFALL OF NAPOLEON.

FROM A. D. 1804 TO A. D. 1815.

## 24 ಸಂಧಿ.

### ನಪೋಲಿಯನ್ ತಗ್ಗಿಸಲ್ಪಟ್ಟದ್ದು.

ಕ್ರಿ. ಶ. 1804 ಮೊದಲು ಕ್ರಿ. ಶ. 1815 ವರೆಗೂ.

ಮುಖ್ಯ ತಾರೀಖುಗಳು: (Trafalgar) ತ್ರಫಾಲ್ಗರ್ ಯುದ್ಧ 1805. ಅರ್ಧ ದ್ವೀಪದ ಯುದ್ಧ 1807—1813. (Waterloo) ವಾತರ್ಲೂ ಯುದ್ಧ 1815. ಅದೇ ಕಾಲದ ಇಂದ್ಯ ಚರಿತ್ರೆ: (Vellore) ವೇಲೂರಿನ ಕಲಹ 1806. (Nepaul) ನೇಪಾಲಿನ ಸಂಗಡ ಯುದ್ಧ 1814. ಶ್ರೇಷ್ಠ ನಾಮಗಳು: (Nopoleon) ನಪೋಲಿಯನ್, (Wellington) ವೆಲ್ಲಿಂಗ್ಟನ್, (Sir John Moore) ಸರ್ ಜಾನ್ ಮೂರ್.

ನಪೋಲಿಯನು ಇಂಗ್ಲಾಂದು ಶೀಮೆಯ ಸಂಗಡ ಯುದ್ಧ ತೊಡಗಿದ್ದರಲ್ಲಿ ಅದಕ್ಕುಂಟಾಗಿದ್ದ ನಾವಿಕಸೈನ್ಯಕ್ಕೆ ಸಮಾನವಾಗಿ ತಾನೂ ನಾವಿಕಸೈನ್ಯವನ್ನು ಕೂಡಿಸ ಬೇಕೆಂದು ಮೊದಲು ಅದಕ್ಕೆ ಬೇಕಾದ ಸಾಧನೆಗಳನ್ನೆಲ್ಲಾ ಮಾಡಿದನು. ಅವನು ನೆಲದ ಮೇಲೆ ಮಾಡಿದ ಯುದ್ಧಗಳಲ್ಲೆಲ್ಲಾ ತನಗೇ ಜಯ ಉಂಟಾದಾಗ್ಯೂ, ಸಮುದ್ರದಲ್ಲಿಯೂ ತನ್ನ ಆಜ್ಞೆಯೇ ಸಲ್ಲ ಬೇಕೆಂದು ಆಶೆ ಪಟ್ಟನು. ಆದಾಗ್ಯೂ ಅವನು ಮಾಡಿದ ಸಾಧನೆಗಳು ಸಿದ್ಧಿಯಾಗಲಿಲ್ಲ. ಫ್ರಾನ್ಸರ ಹಡಗಗಳೆಲ್ಲಾ ಬಲದಲ್ಲಿಯೂ ದಪ್ಪದಲ್ಲಿಯೂ ಸ್ಥಿರ ಪಡಿಸಲ್ಪಟ್ಟಾಗ್ಯೂ, ಅವು (Nelson) ನೆಲ್ಸನ್ ಎಂಬವನ ಸಂಗಡ ತೊಡಗಿದ ಒಂದೇ ಯುದ್ಧದಲ್ಲಿ ನಾಶವಾಗಿ ಹೋದವು. ಸ್ಪೇನ್ ಶೀಮೆಯು ನಪೋಲಿಯನ ಅಧಿಕಾರದಲ್ಲಿ ಇದ್ದ

ದರಿಂದ ಆ ದೇಶದ ಹಡಗಗಳ ಸಂಗಡ ಫ್ರಾನ್ಸ್ ಹಡಗಗಳಲ್ಲಿ ಮುಕ್ಕಾಲುವಾಶಿಯೂ ಶೇರಿ ಕೊಂಡು (Trafalgar) ತ್ರಫಾಲ್ಗರ್ ಮೂಲೆ ಎಂಬ ಸ್ಥಳದ ಬಳಿಯ ಇಂಗ್ಲಿಷಿನವರ ಹಡಗಗಳ ಸಂಗಡ ಯುದ್ಧ ಪ್ರಾರಂಭಿಸಿದವು. ಇಂಗ್ಲಿಷಿನವರ ಹಡಗಗಳು ಸಹ ಶತ್ರುಗಳ ಹಡಗಗಳನ್ನು ಸಮೀಪಿಸಿದಾಗ ನೆಲ್ಸನ್ ತನ್ನ ಅಧಿಕಾರದ ಕೆಳಗೆ ಇರುವವರಿಗೆ ಕಡೆಯಾಗಿ ತೋರಿಸಿದ ಗುರುತಿನ ಧ್ವಜದಲ್ಲಿ "ಒಬ್ಬೊಬ್ಬನು ತನ್ನ ಕೆಲಸವನ್ನು ಈಡೇರಿಸುವನೆಂಬುವದನ್ನೇ ಇಂಗ್ಲಾಂಡ್ ಶೀಮೆಯು ನಂಬಿ ಕೊಂಡಿರುತ್ತದೆ" ಎಂಬ ವಚನವು ಅಡಗಿತ್ತು. ಈ ವಚನದ ಸಾರಾಂಶವೇ ನೆಲ್ಸನ್ ಎಂಬವನ ದೊಡ್ಡ ಅಭಿಲಾಷೆಯೂ, ಯಾವ ಇಂಗ್ಲಿಷಿನವನ ಅಪೇಕ್ಷೆಯೂ ಆಗಿತ್ತು. ಅದೇ ಪ್ರಕಾರ ಆ ಯುದ್ಧದಲ್ಲಿ ಒಬ್ಬೊಬ್ಬನು ತನ್ನ ತನ್ನ ಕೆಲಸವನ್ನು ನಂಬಿಕೆಯಾಗಿಯೂ ಚನ್ನಾಗಿಯೂ ಮಾಡಿದನು. ಫ್ರಾನ್ಸರಿಗೂ ಸ್ಪಾನಿಯರಿಗೂ ಶೇರಿದ ಹಡಗಗಳಲ್ಲಿ ಮುಕ್ಕಾಲುವಾಶಿ ಹಿಡಿಯಲ್ಪಟ್ಟವು. ಆದಾಗ್ಯೂ ಯುದ್ಧ ಮುಗಿಯುವ ಕಾಲದಲ್ಲಿ ದೊಡ್ಡ ಪ್ರಳಯಘಾಳಿ ಎದ್ದದರಿಂದ ಅವುಗಳಲ್ಲಿ ಅನೇಕ ನಾಶವಾಗಿ ಹೋಗಲಾಗಿ, ನಾಲ್ಕು ಮಾತ್ರ ಜಯೋತ್ಸಾಹವಾಗಿ ಇಂಗ್ಲಾಂದಿಗೆ ತರಲ್ಪಟ್ಟವು. ಈ ಒಂದು ಜಯದಿಂದ ಇನ್ನು ಫ್ರಾನ್ಸರು ಇಂಗ್ಲಾಂದಿಗೆ ದಂಡೆತ್ತಿ ಕೊಂಡು ಬರ ಯೋಚಿಸಿದೆಲ್ಲಾ ನಾಶವಾಯಿತು. ಇಂಗ್ಲಿಷಿನವರ ಹಡಗಗಳಿಗೆ ಇನ್ನು ಯಾವ ಸಂದೇಹಕ್ಕೂ ಆಸ್ಪದವಿಲ್ಲದೆ ಸಮುದ್ರದಲ್ಲಿ ಜಯವು ಸ್ಥಿರವಾಗಿತ್ತು. ಆದಾಗ್ಯೂ ಈ ಸಮಾಚಾರವು ಇಂಗ್ಲಾಂದಿಗೆ ಮುಟ್ಟಿದಾಗ ಸಕಲರ ಮನಸ್ಸುಗಳು ನೊಂದವು, ಸಕಲರ ಕಣ್ಣುಗಳಲ್ಲಿಯೂ ನೀರು ತುಂಬಿದವು. ಯಾಕಂದರೆ, ಇಂಗ್ಲಾಂಡ್ ಶೀಮೆಯ ಮಹಾ ದೊಡ್ಡ ನಾವಿಕಸೈನ್ಯಾಧಿಪತಿಯು ಆ ಯುದ್ಧದಲ್ಲಿ ಸತ್ತು ಹೋದನು. ಅವನು ಜಯ ಹೊಂದಿದ್ದು ನಿಶ್ಚಯವೇ, ಆದಾಗ್ಯೂ ಅದಕ್ಕಾಗಿ ಪ್ರಾಣ ಕಳಕೊಂಡನು. ಅವನು ಹಡಗದ ಮೇಲ್ತಟ್ಟಿನಲ್ಲಿ ತಿರುಗಾಡುವ ಸಮಯ ನೋಡಿ ಫ್ರಾನ್ಸ್ ಹಡಗಗಳಲ್ಲಿದ್ದ ಒಬ್ಬ ಗುರಿಗಾರನು ಚನ್ನಾಗಿ ಗುರಿ ಇಟ್ಟು ಅವನನ್ನು ಸುಟ್ಟು ಬಿಟ್ಟನು. ಅವನನ್ನು ಎತ್ತಿ ಕೀಳ್ತಟ್ಟಿಗೆ ತೆಗದು ಕೊಂಡು ಹೋಗುವಾಗ ಮರಣ ಹೊಂದಿದನು.

ಆದಾಗ್ಯೂ ಸಾಯುವದಕ್ಕಿಂತ ಮುಂಚೆ ಶತ್ರುಗಳ ಹಡಗಗಳೆಲ್ಲಾ ಹಿಡಿಯಲ್ಪಟ್ಟವೆಂಬ ತಂಪಾದ ಸುದ್ದಿಯನ್ನು ಕಿವಿಯಿಂದ ಕೇಳಿದನು.

ಅದೇ ವರುಷದಲ್ಲಿಯೇ ಯೂರೋಪು ಖಂಡದಲ್ಲಿ ಯುದ್ಧವು ತಿರಿಗಿ ಹತ್ತಿ ಕೊಂಡಿತು. ಆಸ್ಟ್ರಿಯರೂ ಪ್ರುಸ್ಯರೂ ಕೂಡಿ ನಪೋಲಿಯನ ಸಂಗಡ ಯುದ್ಧ ಮಾಡಿ (Austerlitz) ಆಸ್ತರ್ಲಿತ್ಜ್ ಎಂಬ ಸ್ಥಳದಲ್ಲಿ ಅಪಜಯ ಹೊಂದಿದರು. ಜರ್ಮನಿ ಚಕ್ರವರ್ತಿಯನ್ನು ಸಹ ನಪೋಲಿಯನು ಅಣಗಿಸಿ, ತಾನು ಹೇಳಿದ ಘನಹೀನವಾದ ಒಡಂಬಡಿಕೆಗೆ ಸಮ್ಮತಿಸ ಮಾಡಿದನು. ತರುವಾಯ ಬಂದ ಎರಡು ವರುಷಗಳೊಳಗಾಗಿ ನಪೋಲಿಯನು ಯೂರೋಪಿನಲ್ಲಿ ದೊಡ್ಡ ಘನವನ್ನೂ ಶ್ರೇಷ್ಠ ಅಧಿಕಾರವನ್ನೂ ಹೊಂದಿದನು. ಆಸ್ಟ್ರಿಯಾ, ಪ್ರುಸ್ಯ, ಜರ್ಮನಿಯ ಸಣ್ಣ ನಾಡುಗಳೆಲ್ಲಾ ಅವನ ಮಾತಿನ ಪ್ರಕಾರ ನಡೆಯಲಾದವು. (Naples) ನೇಪಲ್ಸ್ ರಾಜ್ಯಭಾರವನ್ನು ತನ್ನ ಮೈದುನನಾದ (Mura) ಮೂರಾ ಎಂಬವನಿಗೆ ಕೊಟ್ಟನು. ಹೊಲ್ಲಾಂದನ್ನು ಸಹೋದರನಾದ ಲೂವಿಸ್ ಬೊನಪಾರ್ತೆಂಬವನು ಆಳಿದನು. ಪೊರ್ತುಗಲ್ ಶೀಮೆಯು ಅವನ ರಾಣುವೆಯ ವಶದಲ್ಲಿ ಇತ್ತು. ಇನ್ನೊಬ್ಬ ಸಹೋದರನಾದ ಯೋಸೆಫನನ್ನು ಸ್ಪೇನ್ ಶೀಮೆಯ ಧೊರೆತನದಲ್ಲಿ ಇರಿಸಿದನು. ಆದಾಗ್ಯೂ ಅವನ ಜಯಪ್ರತಾಪಗಳನ್ನು ಇಂಗ್ಲಿಷ್ ಶೀಮೆಯು ತಡೆದು ಬಿಟ್ಟಿತು. ಈ ವರೆಗೂ ತಡೆದು ಜಯ ಹೊಂದಿದ್ದು ಇಂಗ್ಲಾಂಡ್ ಶೀಮೆ ಒಂದೇ.

ಯುದ್ಧ ಹತ್ತಲಾಗಿ ತಿರಿಗಿ ಮೊದಲನೇ ಮಂತ್ರಿಯಾಗಿದ್ದ ಪಿತ್ತ್ ಧೊರೆಯು 1806ನೇ ವರುಷದಲ್ಲಿ ಮರಣ ಹೊಂದಿದನು. ಅವನ ತರುವಾಯ ಅವನ ವೈರಿಯಾಗಿದ್ದ ಫಾಕ್ಸ್ ಧೊರೆಯು ಮೊದಲನೇ ಮಂತ್ರಿಯಾದನು. ಆದಾಗ್ಯೂ ಅವನು ಅದೇ ವರುಷದಲ್ಲಿಯೇ ಕಾಲವಾದನು. ಮಾರಣೆ ವರುಷದಲ್ಲಿ ಇಂಗ್ಲಾಂದಿನವರು ಹಲವು ದಿಕ್ಕುಗಳಲ್ಲಿ ಯುದ್ಧಕ್ಕೆ ದಂಡೆತ್ತಿ ಕೊಂಡು ಹೋದಾಗ್ಯೂ ಒಂದೂ ಸಿದ್ಧಿಸಲಿಲ್ಲ. ದೆನ್ಮಾರ್ಕ್ ಶೀಮೆಗೆ ಹೋದ ದಂಡಿಗೆ ಮಾತ್ರ ಕಾರ್ಯ ಸಿದ್ಧಿಯಾಯಿತು. ಅದರಿಂದ ಆ ಶೀಮೆಯವರು ನಪೋಲಿಯನ್ನು ಅನುಸರಿಸಿ ಕೊಳ್ಳುವದಕ್ಕಾದರೂ ಇಂಗ್ಲಾಂಡಿಗೆ ಕೇಡು ಮಾಡುವದಕ್ಕಾದರೂ ಬಲವಿಲ್ಲದೆ ಹೋ

ದರು. ಹ್ಯಾಗಂದರೆ ನಪೋಲಿಯನ ಕಡ್ಡಾಯದ ನಿಮಿತ್ತ ಅವನ ಸಂಗಡ ಸ್ನೇಹದ ಕಟ್ಟುಪಾಟು ಮಾಡುವದಕ್ಕೆ ಆ ಶೀಮೆಯವರು ಯತ್ನಯಿಸಿದ್ದಾರೆಂದು ಎಣಿಸಿ, ಇಂಗ್ಲಿಷ್ ಧೊರೆತನದ ಮಂತ್ರಿಗಳು ಆ ಶೀಮೆಯವರೊಡನೆ ಯುದ್ಧ ಪ್ರಕಟಣೆ ಮಾಡದೆ ಇದ್ದಾಗ್ಯೂ ಸಂಗಡಲೇ ಸಾಕಾದ ರಾಣುವೆಯನ್ನು ಕಳುಹಿಸಿ, (Copenhagen) ಕೋಪನ್‌ಹೇಗನ್ ಎಂಬ ಪಟ್ಣವನ್ನು ಹಿಡಿದು ಕೊಂಡು, ದೇನಿಯರ ನಾವಿಕದಂಡುಗಳನ್ನೆಲ್ಲಾ ವಶ ಪಡಿಸಿ ಕೊಂಡರು.

ಸ್ಪೇನ್ ಧೊರೆತನವನ್ನು ಆಕ್ರಮಿಸಿ ಕೊಂಡು ಆ ಶೀಮೆಯಲ್ಲಿ ತನ್ನ ಸಹೋದರನಾದ ಯೋಸೆಫನನ್ನೇ ಅರಸನಾಗಿ ನೇಮಿಸ ಬೇಕೆಂದು ಎಣಿಸಿದ ನಪೋಲಿಯನ ಶೀರ್ಮಾನವು ಸ್ಪಾನಿಯರಿಗೆ ಪೂರ್ಣ ಹಗೆಯನ್ನೂ ಕೋಪವನ್ನೂ ಹುಟ್ಟಿಸಿದ್ದರಿಂದ, ಅವನ ಅನ್ಯಾಯವಾದ ಅಭಿಪ್ರಾಯಗಳನ್ನು ತಡೆಯುವ ಉದ್ದಿಶ್ಯ ಬಹು ಬಂಧಿತವಾದ ಶೀರ್ಮಾನದಿಂದಲೂ ವೈರಾಗ್ಯದಿಂದಲೂ ಕಲಹಿಸ ಎದ್ದರು. ಸ್ಪಾನಿಯರಿಗೆ ಆರಂಭದಲ್ಲಿ ಜಯ ಉಂಟಾಯಿತು. ಒಂದು ಫ್ರಾನ್ಸ್ ರಾಣುವೆಯು ಅವರಿಗೆ ಬೊಗ್ಗಿ ಹೋಗ ಬೇಕಾಗಿ ಇತ್ತು. ಮತ್ತು ಹೊಸ ಅರಸನು ಸಹ (Madrid) ಮದ್ರಿದ್ ಪಟ್ಣವನ್ನು ಬಿಟ್ಟು ಓಡಿ ಹೋಗ ಬೇಕಾಯಿತು. ಅವರು ಏಕೀಭವಿಸಿ ಒಂದೇ ಪಟ್ಟಾಗಿ ನಿಂತು ಸಾಧಿಸಿದರೆ, ಪರದೇಶದ ಸಹಾಯವು ಇಲ್ಲದಲೇ ಅವರ ಯೋಚನೆ ಕೈಕೂಡಿರುವದು. ಆದಾಗ್ಯೂ ಯುದ್ಧಾಯುಧಗಳಲ್ಲಿಯೂ, ಯುದ್ಧಾಭ್ಯಾಸದಲ್ಲಿಯೂ, ಯುದ್ಧ ಶ್ರೇಷ್ಠರಲ್ಲಿಯೂ ಅವರಿಗೆ ಬಹಳ ಕೊರತೆ ಇದ್ದದರಿಂದ ಇಂಗ್ಲಾಂದಿಗೆ ಸಹಾಯ ಕೇಳುವ ಉದ್ದಿಶ್ಯ ರಾಯಭಾರಿಗಳನ್ನು ಕಳುಹಿಸಿದರು. ಇಂಗ್ಲಿಷ್ ಧೊರೆತನದ ಮಂತ್ರಿಗಳು ಸಂಗಡಲೇ ಅವರ ವಿಜ್ಞಾಪನೆಗೆ ಸಮ್ಮತಿಸಿದರು. ಹತ್ತು ಸಾವಿರ ಮಂದಿಯುಳ್ಳ ಒಂದು ಸೈನ್ಯವನ್ನು (Sir Arthur Wellesley) ಸರ್ ಆರ್ತರ್ ವೆಲ್ಲೆಸ್ಲಿ ಎಂಬವನ ವಶವಾಗಿ ಪೊರ್ತುಗಲ್ ಶೀಮೆಗೆ ಕಳುಹಿಸಿದರು. ಅದರ ತರುವಾಯ ಯುದ್ಧ ಪ್ರಾರಂಭಿಸಿತು. ಅದರ ಮೂಲಿಕವಾಗಿಯೇ ನಪೋಲಿಯನ ಅಧಿಕಾರಕ್ಕೆ ಭಿನ್ನವೂ ಇಂಗ್ಲಿಷಿನವರ ಹೆಸರಿಗೆ ಘನವೂ ಉಂಟಾಯಿತು.

## ಸಂಧಿ 24. ಸರ್ ಆರ್ತರ್ ವೆಲ್ಲೆಸ್ಲಿ ಎಂಬವನ ಗುಣಾತಿಶಯವು.

ಸರ್ ಆರ್ತರ್ ವೆಲ್ಲೆಸ್ಲಿಯು ತರುವಾಯ (Duke of Wellington) ವೆಲ್ಲಿಂಗ್ಟನ್ ಡ್ಯೂಕ್ ಪ್ರಭುವೆಂಬ ಹೆಸರನ್ನು ಹೊಂದಿದವನೇ. ಇಂಗ್ಲಾಂದು ಶೀಮೆಗೆ ಉಂಟಾಗಿದ್ದ ಸಕಲ ದಳಕರ್ತರಲ್ಲಿ ಅವನೇ ದೊಡ್ಡವನು. ಯುದ್ಧತಂತ್ರದಲ್ಲಿ ಪೂರ್ಣ ಸಾಮರ್ಥ್ಯನು. ನಪೋಲಿಯನ ಸೈನ್ಯಾಧಿಪತಿಗಳಲ್ಲಿ ಬಹಳ ಸಾಮರ್ಥ್ಯರಾದವರನ್ನು ಸಹ ಪರಿಶೆಯಾಗಿ ಜಯಿಸಿದನು. ಕಡೆಯಲ್ಲಿ ನಪೋಲಿಯನ್ನು ಸಹ ಜಯಿಸಿದನು. ಅವನು ತನ್ನ ಯುದ್ಧಾದಾಳುಗಳಿಗೆಲ್ಲಾ ಒಳ ಬೀಳುವ ಕ್ರಮಗಳನ್ನು ಸರಿಯಾಗಿ ಅಭ್ಯಾಸ ಮಾಡಿಸಿದ್ದನು. ಅರ್ಧ ದ್ವೀಪದಲ್ಲಿ ಅವನ ವಶವಾಗಿದ್ದ ರಾಣುವೆಯೂ ಅವನಿಂದ ಯುದ್ಧಸಾಧನೆಯಲ್ಲಿ ಪೂರ್ಣಾಭ್ಯಾಸ ಹೊಂದಿ, ಅವನು ತಮ್ಮ ಸಂಗಡ ಇರುವದರಿಂದ ಧೈರ್ಯ ಹೊಂದಿ, ಅವನು ಆಜ್ಞಾಪಿಸುವ ಯಾವದನ್ನಾದರೂ ಮಾಡಲೂ, ಅವನು ಹೇಳುವ ಯಾವ ಸ್ಥಳಕ್ಕಾದರೂ ಹೋಗಲೂ ಅಂಜುವದಿಲ್ಲ. ಅವನ ಎದೆಯಲ್ಲಿದ್ದ ದೊಡ್ಡ ಕೋರಿಕೆ ಏನಂದರೆ, ತನಗೆ ಒಪ್ಪಿಸಲ್ಪಟ್ಟದ್ದು ಯಾವದೋ ಆ ಕೆಲಸವನ್ನು ಈಡೇರಿಸ ಬೇಕೆಂಬುವದೇ. ನನ್ನ ಕೆಲಸವನ್ನು ನಾನು ಈಡೇರಿಸ ಬೇಕಲ್ಲ, ಎಂಬ ನೆನಪೇ ಎಲ್ಲಾ ಕಾಲದಲ್ಲಿಯೂ ಆ ವೀರನೊಳಗೆ ದೃಢವನ್ನು ಉಂಟು ಮಾಡಿ ಕೊಂಡಿತ್ತು. ರಾಣುವೆಗಳನ್ನು ನಡಿಸುವ ಶ್ರೇಷ್ಠ ಕೆಲಸಗಳಲ್ಲಿ ಪ್ರವೇಶಿಸುವದಾದರೂ, ಅದನ್ನು ಬಿಟ್ಟು ಫಿವರ್ಶಿಯಾಗುವದಾದರೂ ತನ್ನ ಕೆಲಸವಾದರೆ, ಯಾವದಕ್ಕೂ ಸಮ್ಮತಿಯಾಗಿರುವನು. ಹಿಂದುಸ್ಥಾನದಲ್ಲಿಯೋ, ದೇನ್‌ಮಾರ್ಕಿನಲ್ಲಿಯೋ, ಅರ್ಧ ದ್ವೀಪದಲ್ಲಿಯೋ, ಎಲ್ಲಿ ಕಳುಹಿಸಲ್ಪಡುವನೋ ಅಲ್ಲೆಲ್ಲಾ ಉತ್ಸಾಹದಿಂದ ಹೋಗಿ ಯುದ್ಧ ಮಾಡುವನು. ಅವಮಾನವಾಗಲಿ, ಇಕ್ಕಟ್ಟಾಗಲಿ, ತನ್ನ ದೇಶದವರು ತನ್ನ ಮೇಲೆ ಅನ್ಯಾಯವಾಗಿ ಹೊರಿಸುವ ಅಪರಾಧವಾಗಲಿ, ಗರ್ವಿಷ್ಠರೂ ವಂಚಕರೂ ಆದ ಸಹಾಯಸೈನ್ಯಗಳಿಂದ ಬರುವ ವಿಘ್ನಗಳಾಗಲಿ, ಯಾವದನ್ನೂ ಸಹಿಸಿ ಮೇಲ್ಗೊಳ್ಳುವನು. ತಾನು ಮಾಡ ತಕ್ಕ ಕೆಲಸ ಅಂದರೆ, ಅದರಲ್ಲಿ ತನ್ನ ಆಯುಸ್ಸನ್ನು ಕಳಿಯುವದಕ್ಕಾದರೂ ಪ್ರಾಣವನ್ನು ಕೊಡುವದಕ್ಕಾದರೂ ಎಲ್ಲಾ ಕಾಲದಲ್ಲಿಯೂ ಅಪೇಕ್ಷೆಯುಳ್ಳವನಾಗಿರುವನು. ಅವನಿಗೆ ಇದ್ದ ಎದುರಿಸ ಕೂಡದ ಚಿ

ತ್ತ್ರದಿಂದ ಸಂಚವಿಸಿದ ಸಕಲ ವಿಘ್ನಗಳನ್ನೂ ಅಪಾಯಗಳನ್ನೂ ಮೇಲ್ಗೊಂಡನು. ಯೂರೋಪಿನಲ್ಲೆಲ್ಲಾ ವೀರಾಧಿವೀರನೆಂಬ ಹೆಸರೂ ಘನವೂ ಅವನಿಗೆ ಯಾವಾಗ್ಯೂ ಎಲ್ಲರಿಂದಲೂ ಕೊಡಲ್ಪಟ್ಟಿದೆ. ಅವನು ಸಹ ತನ್ನ ವೀರತ್ವದಿಂದ ತನ್ನ ದೇಶಕ್ಕೆ ಉಂಟಾದ ಮಹಿಮೆಯನ್ನೂ ಅಲಂಕಾರವನ್ನೂ ಅಧಿಕವಾಗಿ ಹೊಳೆಯ ಮಾಡಿದನು. ಸೈನ್ಯಾಧಿಪತಿತ್ವದಲ್ಲಿ ತನ್ನ ಸಾಮರ್ಥ್ಯವನ್ನು ಮುಂಚೆ ಹಿಂದು ದೇಶದಲ್ಲಿ ಹೊಳೆಯ ಮಾಡಿ ಇದ್ದನು. ಹಿಂದು ದೇಶದಲ್ಲಿ (Assaye) ಅಸ್ಸೇ ಊರಿನ ಬಳಿಯಲ್ಲಿ ನಡೆದ ಯುದ್ಧದಲ್ಲಿ ತೋರಿಸಿದ ಧೈರ್ಯದಿಂದಲೂ ಬಿಗಿಯಿಂದಲೂ ಕೊರತೆ ಇಲ್ಲದ ಸೈನ್ಯಾಧಿಪತಿಗೆ ತಕ್ಕ ಸಾಮರ್ಥ್ಯವೂ ಸಾಧನೆಯೂ ತನಗೆ ಉಂಟೆಂದು ದೃಷ್ಟಾಂತ ಪಡಿಸಿ ಇದ್ದನು. ಅದರ ತರುವಾಯ ದೆನ್‌ಮಾರ್ಕ್ ಶೀಮೆಯೊಳಗೆ ನಡೆದ ಯುದ್ಧದಲ್ಲಿ ತನ್ನ ಹೆಸರನ್ನು ಘನ ಪಡಿಸಿದನು. ಅದರಿಂದ ಪೋರ್ತುಗಲ್ ಶೀಮೆಯಲ್ಲಿಯೂ ಸ್ಪೇನ್ ಶೀಮೆಯಲ್ಲಿಯೂ ಇದ್ದ ಇಂಗ್ಲಿಷ್ ಸೈನ್ಯವನ್ನು ನಡಿಸುವ ಶ್ರೇಷ್ಠತ್ವವನ್ನು ಹೊಂದಿದನು.

ಅವನು (Lisbon) ಲಿಸ್ಬನ್ ಪಟ್ಟದ ಬಳಿಯಲ್ಲಿ (Mondego) ಮಂದೀಗೋ ಎಂಬ ಕೊಲ್ಲಿಯಲ್ಲಿ ಧಡವಿಳಿದನು. ಅಲ್ಲಿ ಒಂದು ಫ್ರಾನ್ಸ್ ಸೈನ್ಯವನ್ನು ಇಟ್ಟು ಕೊಂಡು ನಪೋಲಿಯನ ಪ್ರಧಾನಸೈನ್ಯಾಧಿಪತಿಗಳಲ್ಲಿ ಒಬ್ಬನಾದ ಜೂನೊತ್ ಎಂಬವನು ಇದ್ದನು. ಮೇಲೆ ಹೇಳಿದ ಪಟ್ಟಕ್ಕೆ ಅಭಿಮುಖವಾಗಿ ಸರ್ ಆರ್ತರ್ ವೆಲ್ಲೆಸ್ಲಿ ಹೋಗುವ ಕಾಲದಲ್ಲಿ ರೊಲೀಸಾ ಎಂಬ ಗ್ರಾಮದ ಬಳಿಯ ಕೆಲವು ಫ್ರಾನ್ಸ್ ದಂಡುಗಳು ಅವನನ್ನು ಎದುರಿಸಿದವು. ಆದರೆ ಪೂರ್ಣವಾಗಿ ಸೋತು ಓಡಿ ಹೋದರು. ಒಂದು ದಂಡಿನಿಂದ ಮತ್ತೊಂದು ದಂಡಿಗೆ ಓಡುವರು. ಇಂಗ್ಲಿಷ್ ರಾಜುವೆಯವರು ಸಹ ತಮ್ಮ ಹಳೇ ಶತ್ರುಗಳನ್ನು ಯಾವಾಗ್ಯೂ ಎದುರಿಸ ಪೂರ್ಣ ಸಾಮರ್ಥ್ಯರೆಂದು ತೋರಿಸಿ, ಒಂದೊಂದು ದಂಡಾಗಿ ಅವರನ್ನು ಅಟ್ಟಿ ಕೊಂಡೇ ಹೋಗುವರು. ಈ ಯುದ್ಧವಾದ ಕೆಲವು ದಿನಗಳ ತರುವಾಯ ವಿಮ್ಮೆರೋ ಎಂಬ ಸ್ಥಳದಲ್ಲಿ (Junoh) ಜೂನೊ ಎಂಬವನನ್ನು ಸಹ ಜಯಿಸಿದನು. ಆದಾಗ್ಯೂ ಅವನು ತನಗೆ ಆದ ಜಯಗಳ ಫಲವನ್ನು ಹೊಂದುವದಕ್ಕಿಲ್ಲದೆ ಹೋದದ್ದು ಯಾಕಂದರೆ,

(Sir Harry Burrard) ಸರ್ ಹರ್ರಿ ಬುರ್ರ್ರಾರ್ಡ್ ಎಂಬವನು ಅವನ ಉದ್ಯೋಗವನ್ನು ಹೊಂದಿ, ಇನ್ನೂ ಸೈನ್ಯಗಳು ಬಂದು ತನಗೆ ಸಹಾಯ ಮಾಡುವ ಮಟ್ಟಿಗೂ ಯುದ್ಧ ಪ್ರಾರಂಭಿಸ ಕೂಡದೆಂದು ಇದ್ದನು.

ಈ ಜಯಶೀಲರಾದ ರಾಣುವೆಗೆ ಸರ್ ಹರ್ರಿ ಬುರ್ರ್ರಾರ್ಡ್ ಎಂಬವನು ಶ್ರೇಷ್ಠತ್ವವನ್ನು ಹೊಂದಿದ ಕೆಲವು ದಿವಸಗಳಲ್ಲಿ ಅವನು ತೆಗದು ಹಾಕಲ್ಪಟ್ಟದ್ದರಿಂದ (Sir Hew Dalrymple) ಸರ್ ಹ್ಯೂ ದಾಲ್‌ರಿಂಪಲ್ ಎಂಬವನು ಆ ಅಂತಸ್ತನ್ನು ಹೊಂದಿದನು. ಅವನು ಸಹ ಎದುರಿಗಳ ದಂಡುಗಳು ಸೋತು ಹೋಗಿ ಛಿನ್ನಾಛಿನ್ನವಾಗಿದ್ದಾಗ್ಯೂ ಮೇಲು ಸಹಾಯದ ದಂಡುಗಳಿಲ್ಲದೆ ಎದುರಿಸುವದು ತಕ್ಕದ್ದಲ್ಲ ಎಂದು ಇದ್ದನು. ಅದಕ್ಕೆ ಕೆಲವು ದಿನಗಳಿಗೆ ಮುಂಚೆ ಜೂನೊತ್ ಎಂಬವನು ಸಮಾಧಾನವನ್ನು ಕೋರಿ ಇದ್ದನು. ಸಿಂದಿರಾ ಎಂಬ ಸ್ಥಳದಲ್ಲಿ ಇಂಗ್ಲಿಷರಿಗೂ ಫ್ರಾನ್ಸರಿಗೂ ಐಕ್ಯ ಏರ್ಪಾಟು ಉಂಟಾಯಿತು. ಆ ಏರ್ಪಾಟಿನ ತಾತ್ಪರ್ಯಗಳನ್ನು ನೋಡುವಲ್ಲಿ ಅಪಜಯ ಪಟ್ಟ ಎದುರಿಗಳು ಕೇಳಲೂ ಅಪೇಕ್ಷಿಸಲೂ ಕೂಡುವದಕ್ಕಿಂತ ಅಧಿಕ ಅನುಕೂಲವನ್ನೇ ಫ್ರಾನ್ಸರು ಹೊಂದಿದರು. ಅವನು ಇನ್ನು ಪೊರ್ತುಗಲ್ ಶೀಮೆಯನ್ನು ಬಿಟ್ಟು ಹೋಗಿ ಬಿಡ ಬೇಕಾಯಿತು. ಆದಾಗ್ಯೂ ಆಗ ಸರ್ ಆರ್ಥರ್ ವೆಲ್ಲೆಸ್ಲಿ ಹೇಳಿದ ಆಲೋಚನೆಯ ಪ್ರಕಾರ ಮಾತ್ರ ನಡೆದಿದ್ದರೆ, (Rolica) ರೊಲೀಸಾ, (Vimeiro) ವಿಮ್ಯೆರೋ ಎಂಬ ಸ್ಥಳಗಳಲ್ಲಿ ಜಯ ಹೊಂದಿದ ಕೂಡಲೇ ಎದುರಿಗಳನ್ನು ಅಟ್ಟಿ ಕೊಂಡೇ ಹೋಗಿದ್ದರೆ, ಫ್ರಾನ್ಸ್ ರಾಣುವೆ ಎಲ್ಲಾ ಅರ್ಧ ದ್ವೀಪವನ್ನು ಬಿಟ್ಟು ಓಡಿ ಹೋಗ ಬೇಕಾಗಿ ಪ್ರಾಪ್ತಿಸುವದು.

ಇನ್ನು ಕೆಲವು ದಿವಸಗಳ ತರುವಾಯ ಇಂಗ್ಲಿಷ್ ಸೈನ್ಯದಿಂದ ಒಂದು ದಂಡು (Sir John Moore) ಸರ್ ಜಾನ್ ಮೂರ್ ಎಂಬವನ ವಶವಾಗಿ ಹೋಗಿ ಮಧ್ಯ ದ್ವೀಪದ ಉತ್ತರ ಪಶ್ಚಿಮದ ಸ್ಪಾನಿಯರಿಗೆ ಸಹಾಯ ಮಾಡ ಕಳುಹಿಸಲ್ಪಟ್ಟಿತು. ಆದಾಗ್ಯೂ ನಪೋಲಿಯನು ಅತಿ ಶೀಘ್ರವಾದ ಯುದ್ಧಗಳಿಂದಲೂ ಯುದ್ಧದಲ್ಲಿ ತನಗೆ ಬಳಕೆಯಾಗಿದ್ದ

ಅತಿಶಯವಾದ ತ್ವರೆಯಿಂದಲೂ, ಸ್ವಲ್ಪ ಹೆಚ್ಚು ಕಡಿಮೆ ಸ್ಪೇನ್ ಶೀಮೆಯನ್ನೆಲ್ಲಾ ತಿರಿಗಿ ಕಟ್ಟಿ ಕೊಂಡನು. ನಪೋಲಿಯನ ಸೈನ್ಯಾಧಿಪತಿಗಳಲ್ಲಿ ಬಹು ಪ್ರಬಲವಾಗಿದ್ದವನಾದ (Marshal Soult) ಸೂಲ್ತ್ ಎಂಬ ಸೈನ್ಯಾಧಿಪತಿಯು ನಡಿಸಿ ಕೊಂಡು ಬಂದ ರಾಣುವೆಯ ಮುಂದೆ ಸರ್ ಜಾನ್ ಮೂರ್ ಎಂಬವನು ಹಿಮ್ಮೆಟ್ಟ ಬೇಕಾಯಿತು. ಅವನು ಹಿಮ್ಮೆಟ್ಟಿ ಹೋದದ್ದು ಸಹ ಬಹು ವಿಪತ್ತಾದ ಪ್ರಯಾಣವಾಗಿತ್ತು. ಆದಾಗ್ಯೂ ವ್ಯಸನವಾಗಿ ಮಾಡಿದ ಆ ಪ್ರಯಾಣವು ಮಹಿಮೆಯಾಗಿ ಮುಗಿಯಿತು. ಹ್ಯಾಗಂದರೆ, ಅವನು (Corunna) ಕೊರನ್ನವನ್ನು ಶೇರಿದಾಗ ಇನ್ನು ಇಂಗ್ಲಿಷ್ ರಾಣುವೆಯನ್ನು ಹಡಗಗಳಲ್ಲಿ ಹತ್ತಿಸುವದಕ್ಕಿಂತ ಮುಂಚೆ ಫ್ರಾನ್ಸರ ರಾಣುವೆಯು ಸಮೀಪಿಸಿ ಕೊಂಡದ್ದರಿಂದ ಒಂದು ಯುದ್ಧ ಮಾಡ ಬೇಕಾಯಿತು. ಹಾಗೆ ಹಿಂತಿರುಗಿ ಕೊಂಡು ಸಾಲ್ಗೆಟ್ಟು ತಾರುಮಾರಾಗಿದ್ದ ದಂಡುಗಳು ಧೈರ್ಯದಿಂದ ತಿರುಗಿ ಕೊಂಡು ಶತ್ರುಗಳನ್ನು ಎದುರಿಸಿ, ಒಂದು ಮುಖ್ಯವಾದ ಜಯವನ್ನು ಸಹ ಹೊಂದಿದರು.

ಆ ಯುದ್ಧದಲ್ಲಿ ಇಂಗ್ಲಿಷ್ ರಾಣುವೆಯ ಕರ್ತನು ಕೊಲ್ಲಲ್ಪಟ್ಟನು. "ಸ್ವದೇಶದಲ್ಲಿ ನನ್ನನ್ನು ಕುರಿತು ಸರಿಯಾಗಿ ಎಣಿಸುವರೆಂದು ನಂಬುತ್ತೇನೆ" ಎಂಬ ಮಾತುಗಳನ್ನು ಹೇಳಿ ಸತ್ತನು. ಸ್ವದೇಶಸ್ಥರು ಅವನನ್ನು ಸರಿಯಾಗಿ ಎಣಿಸಿದರೆಂಬುವದಕ್ಕೆ ಸಂದೇಹವಿಲ್ಲ. ಸರ್ ಜಾನ್ ಮೂರ್ ಎಂಬವನ ಮರಣದ ನಿಮಿತ್ತ ಸ್ವದೇಶಸ್ಥರೆಲ್ಲರೂ ಅಧಿಕವಾಗಿ ದುಃಖ ಕೊಂಡಾಡಿದರು.

ಇದರ ತರುವಾಯ ಮಾರ್ಲ್‌ಬರೋ ಎಂಬವನ ದಿವಸಗಳು ಪ್ರಾರಂಭಿಸಿ ಫ್ರಾನ್ಸರಿಗೂ ಇಂಗ್ಲಿಷರಿಗೂ ಆದ ಎಲ್ಲಾ ಯುದ್ಧಗಳಿಗಿಂತ ಅಧಿಕವಾದ ಹೋರಾಟ ಉಂಟಾಗ ಹೇತುವೆಯಾಯಿತು. ಹ್ಯಾಗೆ ಅಂದರೆ, 1809ನೇ ವರುಷದಲ್ಲಿ ಸರ್ ಆರ್ತರ್ ವೆಲ್ಲೆಸ್ಲಿ ಎಂಬವನು ತಿರಿಗಿ ಪೋರ್ತುಗಲ್ ಶೀಮೆಯ ರಾಣುವೆಯನ್ನು ನಡಿಸುವ ಅಧಿಕಾರ ಹೊಂದಿದನು. ಹೊಂದಿ ತನಗೆ ಸಹಾಯವಾಗಿ ನಿಂತ ಪೋರ್ತುಗಲ್ ಶೀಮೆಯವರ ರಾಣುವೆಯನ್ನು ಕರಕೊಂಡು ಅದನ್ನು ಸರಿಯಾಗಿ ಕ್ರಮಪಡಿಸಿ, ಫ್ರಾನ್ಸರನ್ನು ಎದುರಿಸ ಆರಂಭಿಸಿದನು. ಸೂಲ್ತ್ ಎಂಬ ಸೈ

ನ್ಯಾಧಿಪತಿಯು ನಡೆಸಿದ ಫ್ರಾನ್ಸ್ ರಾಣುವೆಯು ತಿರಿಗಿ ಪೋರ್ತುಗಲ್ ಶೀಮೆಯಲ್ಲಿ ಪ್ರವೇಶಿಸಿ (Oporto) ಒಪೋರ್ತೋ ಪಟ್ಣವನ್ನು ಕಟ್ಟಿ ಕೊಂಡು, ಅದರ ಮೇಲೆ ಲಿಸ್ಬನ್ ಪಟ್ಣಕ್ಕೆ ಇಳಿದು ಬರುವಾಗ ಅಂಚಿನಲ್ಲಿದ್ದ ಸ್ಪೇನ್ ಪ್ರಾಂತ್ಯಗಳಿಂದ ಬೇರೆ ಇಬ್ಬರು ಫ್ರಾನ್ಸ್ ಸೈನ್ಯಾಧಿಪತಿಗಳ ಸಂಗಡ ಕೂಡಿ ಕೊಂಡು ಆ ಲಿಸ್ಬನ್ ಪಟ್ಣದಲ್ಲಿದ್ದ ಅಲ್ಪವಾದ ಇಂಗ್ಲಿಷ್ ರಾಣುವೆಯ ಮೇಲೆ ಫಕ್ಕನೆ ಬಿದ್ದು ಓಡಿಸ ಬಹುದೆಂದು ಯೋಚನೆ ಮಾಡಿ ಕೊಂಡಿದ್ದನು. ಅವನು (Douro) ದೂರೊ ನದಿಯಲ್ಲಿದ್ದ ಶೇತುವೆಯನ್ನು ಒಡೆದು ಬಿಟ್ಟು ಶತ್ರುಗಳು ಸುಲಭವಾಗಿ ಆ ಅಗಲವಾದ ನದಿಯನ್ನು ದಾಟಿ ಬರುವದು ಅಸಾಧ್ಯವೆಂದು ನಂಬಿ ಕೊಂಡು ಈಚೇಥಡದಲ್ಲಿ ದಂಡಿಳಿದಿದ್ದನು. ಅವನನ್ನು ಸಂಗಡಲೇ ಎದುರಿಸ ಬೇಕೆಂದು ಸರ್ ಆರ್ಥರ್ ವೆಲ್ಲೆಸ್ಲಿ ತೀರ್ಮಾನ ಮಾಡಿ, ಫ್ರಾನ್ಸರ ರಾಣುವೆಯು ಮುಂದೆ ಇದ್ದಾಗ್ಯೂ ಅಂಜದೆ ನದಿಯನ್ನು ದಾಟಿ, ಅದನ್ನು ಪೂರ್ಣವಾಗಿ ಸೋಲಿಸಿ, ಇನ್ನು ಸ್ಪೇನ್ ದೇಶದ ನೆರೆ ನಾಡಾದ (Estremadura) ಎಸ್ತ್ರಿಮದೂರಾ ನಾಡಿನಿಂದ ಪೋರ್ತುಗಲ್ ಶೀಮೆಯಲ್ಲಿ ನುಗ್ಗ ಬೇಕೆಂದಿದ್ದ ಫ್ರಾನ್ಸ್ ಸೈನ್ಯಗಳನ್ನು ಎದುರಿಸಿ ಹೋಗುವದಕ್ಕೆ ತಕ್ಕ ಬಲ ಉಂಟೆಂದು ಗ್ರಹಿಸಿದನು.

ರಾಜಧಾನಿಗೆ ಅಭಿಮುಖವಾಗಿ ಹೋಗುವಾಗ ಸ್ಪೇನ್ ದೇಶದ ಅರಸನೆಂಬ ಹೆಸರನ್ನು ಇಟ್ಟು ಕೊಂಡಿದ್ದ ನಪೋಲಿಯನ ಸಹೋದರನು, ಸಾಮರ್ಥ್ಯವುಳ್ಳ ಇಬ್ಬರು ಫ್ರಾನ್ಸ್ ಸೈನ್ಯಾಧಿಪತಿಗಳು ನಡಿಸಿದ ಸೈನ್ಯಗಳ ಸಂಗಡ ಕೂಡಾ (Talavera) ತಲವೀರಾ ಎಂಬ ಸ್ಥಳದಲ್ಲಿ ಬಂದು ಎದುರಿಸಿದನು. ಹೆಸರಿಗೆ ಮಾತ್ರ ಸ್ಪಾನಿಯರ ಒಂದು ರಾಣುವೆ ಅವನಿಗೆ ಸಹಾಯವಾಗಿತ್ತು. ಅದು ಇದ್ದದರಿಂದ ಅವನಿಗೆ ಉಪಯೋಗವಿಲ್ಲ. ಕೇಡೇ ಉಂಟಾಯಿತು. ಸರ್ ಆರ್ಥರ್ ವೆಲ್ಲೆಸ್ಲಿಯಾದರೆ 22000 ಇಂಗ್ಲಿಷ್ ಸೈನಿಕರ ಸಹಿತವಾಗಿ, ಅದಕ್ಕೆ ಇಮ್ಮಡಿಯಾದ ಶುದ್ಧ ವೀರರುಳ್ಳ ನಪೋಲಿಯನ ರಾಣುವೆಯನ್ನು ಎದುರಿಸುವದಕ್ಕೆ ಬಂದನು. ಆದರೂ ಅದರಲ್ಲಿ ನಿಂತು ಸಡ್ಲವಾಗದೆ ಯುದ್ಧ ಮಾಡುವದಕ್ಕೆ ಅವನಿಗೆ ಸಾಮರ್ಥ್ಯವಿತ್ತು. ಒಂದೊಂದು ಕಡೆಯಲ್ಲಿಯೂ ಫ್ರಾನ್ಸರು ಹಿಮ್ಮೆ

ಟ್ಟಿ ಹೋದರು. ಸರ್ ಆರ್ಥರ್ ವೆಲ್ಲೆಸ್ಲಿಯು ಸ್ಪೇನ್ ಶೀಮೆಯ ಪು ಧ್ಧದಲ್ಲಿ ಜಯಪ್ರದನಾಗಿ ನಿಂತನು. ಈ ಜಯದ ಉದ್ದಿಷ್ಟವೇ ವೆಲ್ಲಿಂಗ್ಟನ್ ಎಂಬುವ ಪಟ್ಟದ ಹೆಸರನ್ನೂ ಪ್ರಭುತ್ವವನ್ನೂ ಹೊಂದಿದನು. ಅಂದಿನಿಂದ ಇದೇ ಹೆಸರಿನಿಂದ ಅರಿಯಲ್ಪಟ್ಟು ಎಲ್ಲರಿಂದ ಘನ ಪಡಿಸಲ್ಪಟ್ಟನು.

ತಲವೀರಾ ಯುದ್ಧದ ತರುವಾಯ ನಪೋಲಿಯನು ಬಹುಶಾ ಅಂಜಿ ಸ್ಪೇನ್ ಶೀಮೆಯಲ್ಲಿ ತನ್ನ ಅಧಿಕಾರ ಭಂಗವಾಗುವದೆಂದು ಎಣಿಸಿ, ತನ್ನ ವೀರ ಪ್ರತಾಪರಾದ ಮಾರ್ಷಲ್ ಎಂಬ ಸೈನ್ಯಾಧಿಪತಿಗಳ ವಶವಾಗಿ ರಾಣುವೆ ರಾಣುವೆಯಾಗಿ ಆ ಶೀಮೆಗೆ ಕಳುಹಿಸುತ್ತಾ ಬಂದನು. ವೆಲ್ಲಿಂಗ್ಟನ್ ಫ್ರಾನ್ಸರ ಸೈನ್ಯದ ಸಂಖ್ಯೆಯು ಹೆಚ್ಚುತ್ತಾ ಬರುವದನ್ನು ತಿಳಿದು ಪೊರ್ತುಗಲ್ ಶೀಮೆಗೆ ಹೋಗ ಹಿಂತೆಗದನು. ನಪೋಲಿಯನು ಹೇಳಿದ ಮಾತಿನ ಮೇರೆಗೆ "ಇಂಗ್ಲಿಷ್ ಶಿಪಾಯಿಗಳನ್ನು ಕಡಲಿನಲ್ಲಿ ಅಟ್ಟಿ ಮುಣುಗಿಸ ಬೇಕು" ಎಂದು (Massina) ಮಸ್ಸೇನಾ ಎಂಬ (Marshal) ಮಾರ್ಷಲ್ ಶೀರ್ಮಾನ ಮಾಡಿ ಕೊಂಡು ಹಿಂದಟ್ಟಿ ಹೋದನು. ಆದಾಗ್ಯೂ,

"ಹೇಳುವದು ಸುಲಭ, ಮಾಡುವದರಿದು"

ಆ ಫ್ರಾನ್ಸ್ ಮಾರ್ಷಲಿನ ಮುಂದೆ ವೆಲ್ಲಿಂಗ್ಟನ್ ಹಿಂತಿರುಗಿ ಕೊಂಡೇ ಹೋದನು. ಆದಾಗ್ಯೂ ಭಯದಿಂದ ಹಾಗೆ ಮಾಡಲಿಲ್ಲವೆಂದು ತೋರಿಸಲೂ, ತನ್ನ ಯುದ್ಧಸ್ಥರಿಗೆ ಧೈರ್ಯ ಹುಟ್ಟಿಸಲೂ, ಫ್ರಾನ್ಸರ ಸಂಗಡ ನಿಂತು ಯುದ್ಧ ಮಾಡ (Busaco) ಬುಸಾಕೋ ಎಂಬ ಸ್ಥಳದಲ್ಲಿ ದಂಡಿಳಿದನು. ಅಲ್ಲಿ ಫ್ರಾನ್ಸರನ್ನು ಸೋಲಿಸಿ, ತಿರಿಗಿ ಮುಂಚಿನಂತೆ ಹಿಂದೆ ದೃಷ್ಟಿಸಿ ಕೊಂಡೇ ಹೋದನು. ಮಸ್ಸೇನಾ ಎಂಬವನು ತನ್ನ ಕೋರಿಕೆ ತೀರಿಸುವದಕ್ಕೆ ಇದೇ ಸಮಯವೆಂದು ನೆನಸಿ, ಬಹು ಮೂರ್ಖವಾಗಿ ಹಿಂದಟ್ಟಿದನು. ಹಿಂದಟ್ಟಿದಾಗ್ಯೂ ಇಂಗ್ಲಿಷ್ ಸೈನ್ಯಾಧಿಪತಿಯ ಮುಂತಿಳುವಿಕೆಯಿಂದಲೂ ವಿವೇಕದಿಂದಲೂ ನೆಲೆ ಕೆಟ್ಟನು.

ಹ್ಯಾಗಂದರೆ, ತನ್ನನ್ನು ಎದುರಿಸಿದವರ ಬಹು ಅಧಿಕ ಸಂಖ್ಯೆಗೆ ಕೆಲವು ದಿವಸ ಹಿಂದಾಗಿರುವದು ಅವಶ್ಯವೆಂದು ಕಂಡು ವೆಲ್ಲಿಂಗ್ಟನ್ ತನ್ನ

ರಾಣುವೆಯು ಮರೆಯಾಗಿ ಹೊಕ್ಕೊಂಡಿರುವ ಹಾಗೆ ಬಹು ಬಲವಾದ ಒಂದು ಮರೆಸ್ಥಾನವನ್ನು ಉಂಟು ಮಾಡಿದನು. ಫ್ರಾನ್ಸ್ ಮಾರ್ಷಲ್ ಆದವನು ವೆಲ್ಲಿಂಗ್ಟನನ್ನು ಹಿಂದಟ್ಟಿ ಕೊಂಡು ಬಂದು ಆ ಬಲವಾದ ದಂಡಿನ ಮರೆಯ ಸ್ಥಾನದ ಬಳಿಗೆ ಬಂದು ಶೇರಿದನು. ಅಷ್ಟರೊಳಗೆ ಇದ್ದ ಇಂಗ್ಲಿಷಿನವರಿಗೆ ಏನೂ ಕೊರತೆ ಇಲ್ಲದೆ ದೇಶಸ್ಥರ ನಂಬಿಕೆ ಹೊಂದಿರುವಲ್ಲಿ, ಹೊರಗಿದ್ದ ಶತ್ರುಗಳಿಗೆ ದೇಶವೆಲ್ಲಾ ಶತ್ರುತ್ವವಾಗಿತ್ತು. (Torres Vedras) ತೋರೀಸ್ ವೆದ್ರಾಸ್ ಎಂಬ ಆ ದಂಡಿನ ಬಲಸ್ಥಾನಗಳು (Tagus) ತೇಗಸ್ ನದಿಯಿಂದ ಸಮುದ್ರದ ಮಟ್ಟಿಗೂ ಎಬ್ಬಿಸಲ್ಪಟ್ಟ ಮೂರು ವರಿಶೆಯಾದ ಬುರುಜುಗಳು. ಅವು ಎಬ್ಬಿಸಲ್ಪಟ್ಟ ಶೀಮೆಯಲ್ಲಿ ಎಲ್ಲಾ ಇಂಗ್ಲಿಷಿನವರ ಸೈನ್ಯವೂ ಪೊರ್ತುಗೀಸರ ಸೈನ್ಯವೂ ಸೌಖ್ಯವಾಗಿ ನಿವಾಸಿಸ ತಕ್ಕ ಭೂಮಿ ಇತ್ತು. ಈ ಬಲಸ್ಥಾನದ ಮುಂದೆ ಮಸ್ಸೇನಾ ಎಂಬವನು ಒಂದು ತಿಂಗಳ ಮಟ್ಟಿಗೂ ಇದ್ದು ಕಡೆಯಲ್ಲಿ ಹಶಿವೆಯಿಂದಲೂ, ವ್ಯಾಧಿಯಿಂದಲೂ, ತನ್ನ ರಾಣುವೆಯು ಬರ ಬರ ಕಡಿಮೆಯಾಗುವದನ್ನು ಕಂಡು, ಜಯವಾಗುವದು ನಿಜವೆಂಬ ನಂಬಿಕೆಯಿಂದ ಮುಂಚೆ ಫ್ರಾನ್ಸನ್ನು ಬಿಟ್ಟು ಹೊರಟ ದಂಡಿನಲ್ಲಿ ಅರ್ಧ ಮಡಿದು ಹೋಗಿ, ಉಳಿದ ಅರ್ಧ ರಾಣುವೆಯ ಸಹಿತವಾಗಿ ಪೊರ್ತುಗಲ್ ಶೀಮೆಯನ್ನು ಬಿಟ್ಟು ಹೋಗಿ ಬಿಡ ಬೇಕಾಯಿತು. ವೆಲ್ಲಿಂಗ್ಟನ್ ಅವನನ್ನು ಹಿಂದಟ್ಟಿ ಕೊಂಡು ಹೋಗಲಾಗಿ, (Fuentes d'Onoro) ಫ್ವ್ಯೆಂತಿ ದಿ ಓನೋರೊ ಎಂಬ ಸ್ಥಳದಲ್ಲಿ ಆ ಫ್ರಾನ್ಸ್ ಮಾರ್ಷಲ್ ನಿಂತು ಯುದ್ಧ ಮಾಡಿ ತಿರಿಗಿ ಸೋತು ಹೋದನು. ಈ ಪ್ರಕಾರ ಹಿಂತೆಗದರೂ, ನಿಂತರೂ, ಹಿಂದಟ್ಟಿದರೂ ಎಲ್ಲಾ ಕಾಲದಲ್ಲಿಯೂ ವೆಲ್ಲಿಂಗ್ಟನಿಗೆ ಮಾತ್ರ ಜಯ ಉಂಟಾಯಿತು.

ಈ ಪ್ರಕಾರ ಫ್ರಾನ್ಸರನ್ನು ಪೊರ್ತುಗಲ್ ಶೀಮೆಯಿಂದ ಓಡಿಸಿದ ತರುವಾಯ ವೆಲ್ಲಿಂಗ್ಟನು ಸ್ಪೇನಿಗೆ ತಿರಿಗಿ ಹೋಗ ಬೇಕೆಂದು ತೀರ್ಮಾನಿಸಿದನು. ಆದಾಗ್ಯೂ (Ciudad Rodrigo) ಕ್ಯೂದಾದ್ ರೊಡ್ರಿಗೊ (Badajoz) ಬದೆಜೋಜ್ ಎಂಬ ಕೋಟೆಗಳು ಫ್ರಾನ್ಸರ ವಶವಾಗಿರುವ ಮಟ್ಟಿಗೂ ತಾನು ಮಾಡಿದ ತೀರ್ಮಾನವು ಕೈಕೂಡಿ ಬರಲಾರದು. ಆ

ವು ಎರಡೂ ಪೋರ್ತುಗಲ್ ಶೀಮೆಯ ಮೇರೆಗಳಲ್ಲಿ ಇದ್ದುದರಿಂದ, ಅವುಗಳನ್ನು ಹಿಡಿಯುವದಕ್ಕಿಂತ ಮುಂಚೆ ಭಯವಿಲ್ಲದೆ ಸ್ಪೇನ್ ಶೀಮೆಯಲ್ಲಿ ಪ್ರವೇಶಿಸುವದು ಸಹ ಸಾಧ್ಯವಲ್ಲ. ಆದದರಿಂದ ಅವನು ಮೊದಲು ಬದೆಜೋಜ್ ಎಂಬ ಕೋಟೆಯನ್ನು ಆಕ್ರಮಿಸಿ ಕೊಳ್ಳುವದಕ್ಕೆ ಪ್ರಯತ್ನ ಮಾಡಿದನು. ವೆಲ್ಲಿಂಗ್ಟನ್ ಸೈನ್ಯಾಧಿಪತ್ಯವನ್ನು ಸಲ್ಲಿಸದೆ ಇದ್ದದರಿಂದ ಪೋರ್ತುಗಲ್ ಶೀಮೆಯ ಸೈನ್ಯಾಧಿಪತಿಯಾಗಿದ್ದ (Beresford) ಬೆರೆಸ್ಫೋರ್ಡ್ ಎಂಬವನು ಸದರಿ ಪಟ್ಟಣವನ್ನು ಮುತ್ತಿಗೆ ಹಾಕಲಾರಂಭಿಸಿದನು. ಮಾರ್ಷಲ್ ಸೂಲ್ಟ್ ಎಂಬವನೂ ಬದೆಜೋಜ್ ಕೋಟೆಯನ್ನು ಕಾಯುವದಕ್ಕೆ ದಕ್ಷಿಣದಿಂದ ಬಂದು ತಗಲಿ, (Albuera) ಅಲ್ಬ್ಯುಯೆರಾ ಎಂಬ ಸ್ಥಳದಲ್ಲಿ ಉಂಟಾದ ಮಹಾ ಯುದ್ಧದಲ್ಲಿ ಅಪಜಯ ಹೊಂದಿದನು. ಆದಾಗ್ಯೂ ಇಂಗ್ಲಿಷಿನವರು ಮೊದಲಲ್ಲಿ ಮಾಡಿದ ಪ್ರಯತ್ನಗಳು ಅಬಲವಾದವು. ಮುತ್ತಿಗೆಯನ್ನು ಸಹ ತೆಗೆದು ಬಿಟ್ಟರು. ಆದಾಗ್ಯೂ ಕೆಲವು ದಿನಗಳೊಳಗಾಗಿ ವೆಲ್ಲಿಂಗ್ಟನನ ಸಾಮರ್ಥ್ಯದ ಮುಂದೆಯೂ, ಅವನ ದಂಡುಗಳ ಧೈರ್ಯದ ಮುಂದೆಯೂ ಕ್ಯೂದಾದ್ ಕೋಟೆಯಾಗಲಿ, ಬದೆಜೋಜ್ ಕೋಟೆಯಾಗಲಿ ನಿಲ್ಲುವದು ಅಸಾಧ್ಯವಾಯಿತು.

ಈ ಎರಡು ಶ್ರೇಷ್ಠ ಪಟ್ಟಣಗಳನ್ನು ವೆಲ್ಲಿಂಗ್ಟನ್ ಕೈವಶ ಮಾಡಿ ಕೊಂಡಾಗ ಸ್ಪೇನ್ ದೇಶದೊಳಗೆ ಹೋಗುವದಕ್ಕೆ ಯಾವ ತಡೆಯೂ ಇಲ್ಲ. ಆ ಶೀಮೆಯ ಮಧ್ಯದಲ್ಲಿ ಫ್ರಾನ್ಸ್ ರಾಣುವೆಯನ್ನು ನಿಲ್ಲಿಸಿ ಕೊಂಡಿದ್ದ (Marshal Marmont) ಮಾರ್ಮಂತ್ ಎಂಬ ಮಾರ್ಷಲನು ಯುದ್ಧತಂತ್ರದಲ್ಲಿ ಪೂರ್ಣ ಸಾಮರ್ಥ್ಯನು. ಆದಾಗ್ಯೂ ಅದರಲ್ಲಿ ಮಾತ್ರವಲ್ಲ ಬೇರೆ ಎಲ್ಲಾ ವಿಷಯಗಳಲ್ಲಿಯೂ ವೆಲ್ಲಿಂಗ್ಟನ್ ಅವನಿಗಿಂತ ಸಮರ್ಥನು. ವೆಲ್ಲಿಂಗ್ಟನ್ ಏರಿ ಬರಲಾಗಿ ಸ್ವಲ್ಪ ಹೊತ್ತು ಮಾರ್ಮಂತ್ ಹಿಂತಿರುಗಿ ಕೊಂಡಿದ್ದನು. ಆದರೂ ಕಡೆಯಲ್ಲಿ ಎರಡು ರಾಣುವೆಗಳೂ ಮುಖಾಮುಖವಾಗಿ ನಿಂತವು. ಉಭಯ ಸೈನ್ಯಾಧಿಪತಿಗಳೂ ಘಟ್ಟಿಗರಾದದರಿಂದ ಶತ್ರುವಾದವನು ಸ್ವಲ್ಪ ಮಿಮಾರಿ ಇರುವ ಸಮಯ ಕಂಡರೆ, ಅದೇ ಯುದ್ಧಕ್ಕೆ ಒಳ್ಳೇ ಸಮಯವೆಂದು ಇಬ್ಬರೂ ಕಾದು ಕೊಂಡಿದ್ದು ಯುದ್ಧ ತೊಡಗದೇ ಹೀಗೆಯೂ ಹಾಗೆಯೂ ದೂರವಾಗಿದ್ದರು. ಕಡೆಯಲ್ಲಿ

ಮಾರ್ಮಂತ್ ತನ್ನ ರಾಣುವೆಯನ್ನು ಪ್ರತ್ಯೇಕವಾಗ ಹೇಳಿ, ವೆಲ್ಲಿಂಗ್ಟನ್ ಎದುರಿಸ ತಕ್ಕ ಸಮಯ ಕೊಟ್ಟನು. ಅದರಲ್ಲಿ ಇಂಗ್ಲಿಷಿನವರಿಗೆ ಉಂಟಾದ ದೃಢವಾದ ಜಯದಿಂದ ಫ್ರಾನ್ಸ್ ರಾಣುವೆಗಳು ಕೆಲವು ದಿವಸಗಳ ವರೆಗೂ ಭ್ರಮೆಗೊಂಡು ಹೋಗಿ ಬಿಟ್ಟವು. ಜಯಶೀಲರಾದ ದಂಡುಗಳು ಸಂಗಡಲೇ (Madrid) ಮದ್ರಿದ್ ಪಟ್ಟಕ್ಕೆ ನೆಟ್ಟಗೆ ಹೊರಟು ಹೋದರು. ಆ ಪಟ್ಟದವರು ತಮ್ಮನ್ನು ಕಾಯಲಿಕ್ಕೆ ಬಂದ ಇಂಗ್ಲಿಷರ ಬರುವಿಕೆಗಾಗಿ ಬಹು ಸಂತೋಷ ತೋರಿಸಿದರು.

ಆದಾಗ್ಯೂ ಹೀಗೆ ಉಂಟಾದ ಜಯದ ಫಲವು ಶೀಘ್ರವಾಗಿ ನಿವರ್ತಿಯಾಯಿತು. ಹ್ಯಾಗಂದರೆ, ಅರ್ಧ ದ್ವೀಪದ ಮಧ್ಯದಲ್ಲಿದ್ದ ಫ್ರಾನ್ಸರನ್ನು ಮುರಿಯ ಬಡಿದಿದ್ದಾಗ್ಯೂ ಇನ್ನೂ ಅವರ ದಂಡುಗಳು ಕೆಳ ಪಾರ್ಶ್ವದಲ್ಲಿ ವಿಸ್ತಾರವಾಗಿದ್ದವು. ಚದರಿ ಹೋಗಿದ್ದ ಅವರ ದಂಡುಗಳು ಒಂದಾಗಿ ಕೂಡಿ ಕೊಂಡಿದ್ದವು. (Burgos) ಬುರ್ಗೋಸ್ ಎಂಬ ಪಟ್ಟ ಮಾತ್ರ ಅವರ ವಶದಲ್ಲಿ ಇತ್ತು. ಅದನ್ನು ಅವಸರಕಾಲಕ್ಕೆ ಹೊಕ್ಕೊಳ್ಳುವ ಸ್ಥಾನದಂತೆ ಬಲ ಪಡಿಸಿ ಕೊಂಡು ಬಂದರು. ಆದದರಿಂದ ಇಂಗ್ಲಿಷಿನವರು ಇನ್ನು ಯುದ್ಧ ತೊಡಗಿ ಸಿದ್ಧಿ ಹೊಂದ ಬೇಕಾಗಿದ್ದರೆ, ಮುಂಚೆ ಅದನ್ನು ಕೈವಶ ಮಾಡಿ ಕೊಳ್ಳ ಬೇಕಾಗಿತ್ತು. ಆದಾಗ್ಯೂ ಆ ಸ್ಥಳದಲ್ಲಿ ಅವರು ಮಾಡಿದ ಪ್ರಯತ್ನ ಸಿದ್ಧಿಸಲಿಲ್ಲ. ಅದರಿಂದ ವೆಲ್ಲಿಂಗ್ಟನ್ ಮದ್ರಿದ್ ಎಂಬ ಪಟ್ಟದಲ್ಲಿದ್ದ ತನ್ನ ಸೈನ್ಯವನ್ನು ಕರಕೊಂಡು ಪೋರ್ತುಗಲ್ ಶೀಮೆಯ ಮೇರೆಯಲ್ಲಿ ಹೋಗಿ ಇದ್ದನು.

ಈ ಪ್ರಕಾರ ವೆಲ್ಲಿಂಗ್ಟನನ ತಾಳ್ಮೆಗೂ ಸಾಧನೆಗೂ 1813ನೇ ವರುಷದಲ್ಲಿ ತಕ್ಕ ಫಲ ದೊರಕಿತು. ಹ್ಯಾಗಂದರೆ, ಅರ್ಧದ್ವೀಪದಲ್ಲಿ ಫ್ರಾನ್ಸರನ್ನು ಬೇರೊಂದಿಗೆ ಹೊರಡಿಸಿ, ಅವರನ್ನು, (Pyrenees) ಪಿರಿನೀಸ್ ಬೆಟ್ಟಗಳನ್ನು ದಾಟಿ, ಅವರ ಸ್ವಂತ ಶೀಮೆಗೆ ಅಟ್ಟಿ ಕೊಂಡು ಹೋಗಿ, ಅಲ್ಲಿಯೂ ಸೋಲಿಸಿದನು. ಈ ವರೆಗೂ ವೆಲ್ಲಿಂಗ್ಟನ್ (Salamanca) ಸಾಲಮಾಂಕ ಪಟ್ಟದ ಮಾರ್ಗವಾಗಿ ಆದರೂ, (Talavera) ತಲವೀರಾ ಪಟ್ಟದ ಮಾರ್ಗವಾಗಿ ಆದರೂ, ಸ್ಪೇನ್ ದೇಶದೊಳಕ್ಕೆ ಹೋಗುವದು ವಾಡಿಕೆಯಾಗಿತ್ತು. ಈ ಮಾರ್ಗಗಳ ಒಂದರಲ್ಲಿ ಒಬ್ಬ ಫ್ರಾನ್ಸ್ ಮಾ.

ರ್ಷಲನು ಅವನ ಬರುವಿಕೆಗೆ ಎದುರು ನೋಡಿ ಕೊಂಡು ದಾರಿ ಅಡ್ಡಗಟ್ಟಿ ಕೊಂಡಿದ್ದದರಿಂದ (Douro) ಡೂರೋ ನದಿಗೆ ಉತ್ತರ ಕಡೆ ಇರುವ ತಗ್ಗಿನ ಮಾರ್ಗವಾಗಿ ಈ ಸಾರಿ ಹೋದನು. ಫ್ರಾನ್ಸ್ ರಾಜುವೆಯನ್ನು ತಾನೇ ಸ್ವಂತವಾಗಿ ನಡಿಸಿದ (Joseph Bounaparte) ಯೋಸೆಫ್ ಬೊನಪಾರ್ತೆಂಬವನು ಎದುರಿಸಿ ಬರುವ ಇಂಗ್ಲಿಷ್ ರಾಜುವೆಯ ಮುಂದೆ ಹಿಂದಕ್ಕೆ ಸರಿದನು. ಹೋಗುವ ಮಾರ್ಗದಲ್ಲಿ ಬುರ್ಗೋಸ್ ಕೋಟೆಯನ್ನು ತುಪಾಕಿಮದ್ದಿನಿಂದ ಸುಟ್ಟು ಬಿಟ್ಟನು. (Vittoria) ವಿತ್ತೋರಿಯಾ ಎಂಬ ಒಂದು ಸ್ಥಳದಲ್ಲಿ ಯುದ್ಧಕ್ಕಾಗಿ ನಿಂತವನು ತಿರಿಗಿ ಪೂರ್ಣ ಅಪಜಯ ಹೊಂದಿ ಓಡಿದ ಓಟದಲ್ಲಿ ತನ್ನ ಸಾಮಾನು ಸರಂಜಾಮು ಮದ್ದು ಗುಂಡು ಬೊಕ್ಕಸ ಮುಂತಾದವುಗಳನ್ನೆಲ್ಲಾ ಬಿಟ್ಟು ಓಡಿ ಹೋಗಿ ಬಿಟ್ಟನು.

ವೆಲ್ಲಿಂಗ್ಟನನು ಈ ಜಯವನ್ನು ಅನುಸರಿಸಿ ಕೊಂಡು ಬಿಡದೆ ಯುದ್ಧ ತೊಡಗಿದನು. (St. Sebastian) ಸೆಂತ್ ಸೆಬಾಸ್ತಿಯನ್ (Pampeluna) ಪಾಂಪಿಲೂನಾ ಎಂಬ ಪಟ್ಣಗಳನ್ನು ಮುತ್ತಿಗೆ ಹಾಕಿದನು. ಮತ್ತು ಫ್ರಾನ್ಸರು ತಮಗೆ ಬಂದ ಆಪತ್ತನ್ನು ನಿವರ್ತಿಸಲೂ ಸ್ಪೇನ್ ದೇಶದಲ್ಲಿ ತಿರಿಗಿ ಪ್ರವೇಶಿಸಲೂ ಪ್ರಯತ್ನ ಮಾಡಿದರೆ, ಅದಕ್ಕೂ ಸಿದ್ಧವಾಗಿದ್ದನು. ಸೆಂತ್ ಸೆಬಾಸ್ತಿಯನ್ ಕೋಟೆಯನ್ನು ಸಹ ಇಂಗ್ಲಿಷಿನವರು ಯುದ್ಧ ಮಾಡಿ ಹಿಡಿದು ಕೊಂಡರು. ಪಿರಿನೀಸ್ ಬೆಟ್ಟಕಣಿವೆಗಳಲ್ಲಿ ಉಂಟಾದ ಹಲವು ಘೋರ ಯುದ್ಧಗಳಲ್ಲಿಯೂ ಫ್ರಾನ್ಸರು ಅಪಜಯವನ್ನು ಹೊಂದಿ ಓಡಿದರು. ಕಡೆಯಲ್ಲಿ ಇಂಗ್ಲಿಷ್ ರಾಜುವೆಯು ಫ್ರಾನ್ಸ್ ಸೀಮೆಯಲ್ಲಿಯೇ ಶತ್ರುಗಳನ್ನು ಎದುರಿಸಿ ಕೊಂಡು ನುಗ್ಗಿದರು. ಸೂಲ್ತ್ ಎಂಬವನನ್ನು ತನ್ನ ಪೂರ್ವದ ಶತ್ರುವನ್ನು ತಿರಿಗಿ ಹೋಗಿ ಎದುರಿಸ ನಪೋಲಿಯನು ಕಳುಹಿಸಿದನು. ಅವನು (Orthes) ಓರ್ತೆಸ್ (Toulouse) ತುಲೂಸ್ ಎಂಬ ಸ್ಥಳಗಳಲ್ಲಿ ತಿರಿಗಿ ಅಪಜಯ ಹೊಂದಿದನು. ತುಲೂಸಿನಲ್ಲಿ ನಡೆದ ಮೂರ್ಖವಾದ ಯುದ್ಧದ ಮಾರಣೆ ದಿವಸ ಸಹಾಯ ಸೈನ್ಯಗಳ ಕೋರಿಕೆಗಳಿಗೆ ನಪೋಲಿಯನು ತಾನೇ ಸಮ್ಮತಿಸಿದನೆಂದು ಸಮಾಚಾರ ಹುಟ್ಟಿತು. ಆದರಿಂದ ಬಹು ಜಯವೃದ್ಧಿಯಾಗಿ ವೆಲ್ಲಿಂಗ್ಟನು ನಡಿಸಿ ಕೊಂಡಿದ್ದ ಹೋರಾಟವನ್ನು ಮುಗಿಸಿ ಬಿಟ್ಟನು.

## ಸಂಧಿ 24. ಅರಸನು ಬುದ್ಧಿ ತಪ್ಪಿದ್ದು.

ಅರ್ಧದ್ವೀಪದಲ್ಲಿ ನಡೆದ ಯುದ್ಧದ ಸಂಗತಿಗಳನ್ನು ಕ್ರಮವಾಗಿ ಹೇಳುವ ಉದ್ದಿಶ್ಯ ಆ ಕಾಲದಲ್ಲಿ ನಡೆದ ಬೇರೆ ಸಂಗತಿಗಳನ್ನು ಹೇಳದೆ ಬಿಟ್ಟಿದ್ದೆವು. ಅವುಗಳಲ್ಲಿ ಮುಖ್ಯವಾದವುಗಳನ್ನು ಇಲ್ಲಿ ಹೇಳುತ್ತೇವೆ. 1810ನೇ ವರುಷದಲ್ಲಿ ಐವತ್ತು ವರುಷದ ಧೊರೆತನದ ತರುವಾಯ 3ನೇ ಜೋರ್ಜ್ ಎಂಬ ಅರಸನ ದುರ್ಬಲ ಸ್ಥಿತಿ ಮರಕಳಿಸಿ ಕೊಂಡಿತು. ಹ್ಯಾಗಂದರೆ, ಇದಕ್ಕೆ ಮುಂಚೆ ಕೆಲವು ಕಾಲದ ಮಟ್ಟಿಗೂ ಅವನ ದೇಹವು ನಶಿಸಿ ವ್ಯಾಧಿ ಮೇಲಾಡಿ ಕೊಂಡೇ ಬಂತು. ಹಾಗಿರುವಲ್ಲಿ ಅವನ ಚಿಕ್ಕ ಮಗಳು (Amelia) ಆಮಿಲಿಯಾ ಎಂಬವಳು ಸತ್ತು ಹೋದದರಿಂದ ಅವನಿಗೆ ಉಂಟಾದ ಅತಿ ವ್ಯಸನದಿಂದ ಅವನ ಬುದ್ಧಿ ತಪ್ಪಿ ಹೋಗಿ, ಇನ್ನು ಜೀವಿಸಿದ್ದ ದಿವಸಗಳೆಲ್ಲಾ ಒಂಟಿಯಾಗಿ ವಾಸಿಸಿದನು. ಅವನ ತರುವಾಯ 4ನೇ ಜೋರ್ಜ್ ಎಂಬ ಹೆಸರಿನಿಂದ ಧೊರೆತನ ಮಾಡಿದ ವೇಲ್ಸ್ ಶೀಮೆಯ ಪ್ರಭುವು ತನ್ನ ತಂದೆಯು ವ್ಯಾಧಿಯಾಗಿದ್ದ ಕಾಲವೆಲ್ಲಾ ರಾಜ್ಯಭಾರಕ್ಕೆ ಪ್ರತಿ ಅರಸನಾಗಿ ನೇಮಿಸಲ್ಪಟ್ಟನು. ಯಥಾರ್ಥವಾಗಿ 3ನೇ ಜೋರ್ಜ್ ಎಂಬವನ ರಾಜ್ಯಪರಿಪಾಲನೆಯು ಈ ಕಾಲಕ್ಕೆ ಮುಗಿದು ಹೋಯಿತು. ಆದಾಗ್ಯೂ ಇನ್ನೂ ಅನೇಕ ವರುಷಗಳು ಅದೇ ಹೆಸರಿನಿಂದ ನಡೆಯಿತು. ಇಂಗ್ಲಾಂಡ್ ದೇಶಚರಿತ್ರೆಯಲ್ಲಿ ಈ ಧೊರೆತನವೇ ಅಧಿಕ ದೀರ್ಘವಾಗಿಯೂ ಘನವಾಗಿಯೂ ಇತ್ತು. ಮತ್ತು ಪ್ರಜೆಗಳಿಂದ ಬಹುಶಾ ಪ್ರೀತಿ ಮಾಡಲ್ಪಟ್ಟವನೂ ಘನವಾಗಿ ಎಣಿಸಲ್ಪಟ್ಟವನೂ ಆದ 3ನೇ ಜೋರ್ಜ್ ಎಂಬ ಅರಸನು ಇಂಥಾ ಕಾಲದಲ್ಲಿ ಇಂಗ್ಲಾಂಡ್ ಧೊರೆತನದ ಮುದ್ರೆಕೋಲನ್ನು ವಹಿಸಿ ಇದ್ದದ್ದು ಯಥಾರ್ಥವಾಗಿ ಸಂತೋಷ ಪಡ ತಕ್ಕ ಕಾರ್ಯವೇ. ಪ್ರತಿ ಅರಸನ ಗುಣಗಳು ತಂದೆಯ ಗುಣಗಳಿಗೆ ಪೂರ್ಣ ವ್ಯತಿರಿಕ್ತವಾದವುಗಳು. ಅವನು ಮಟ್ಟಿಲ್ಲದ ಕಾಮಾತುರನು. 2ನೇ ಚಾರ್ಲ್ಸ್ ಎಂಬವನ ದಿವಸಗಳಿಂದ ಈ ವರೆಗೂ ಇಂಥಾ ಅಕ್ರಮವುಳ್ಳ ಅರಸನು ಇಂಗ್ಲಾಂಡ್ ಶೀಮೆಯ ಸಿಂಹಾಸನದಲ್ಲಿ ಏರಿದ್ದಿಲ್ಲ.

1812ನೇ ವರುಷದಲ್ಲಿ ಅಮೆರಿಕದ ಯೂನೈಟೆದ್ ಸ್ಟೇತ್ಸ್ ರಾಜ್ಯದವರು ಇಂಗ್ಲಾಂಡರ ಮೇಲೆ ಯುದ್ಧ ಪ್ರಕಟ ಮಾಡಿದರು. ಅದು ಯೂ

ರೋಮಿನಲ್ಲಿ ನಡೆದ ಮಹಾ ದೊಡ್ಡ ಯುದ್ಧದ ಮುಂದೆ ಏನೂ ಇಲ್ಲ. ಆ ಯುದ್ಧದಲ್ಲಿ ನೀರಿನ ಮೇಲೆ ಒಂದೊಂದು ಹಡಗಗಳಾಗಿ ನಡೆದ ಸಣ್ಣ ಸಣ್ಣ ಯುದ್ಧಗಳೇ ಹೊರ್ತು ಬೇರೆ ವಿಶೇಷವಾದ ಸಂಗತಿ ಇಲ್ಲ.

ಆ ಸಂವತ್ಸರದಲ್ಲಿ ನಪೋಲಿಯನಿಂದ ನಡಿಸಲ್ಪಟ್ಟ ಹೇರಾಳವಾದ ಒಂದು ರಾಣುವೆಯು ರುಸ್ಯ ದೇಶದ ಮೇಲೆ ದಂಡೆತ್ತಿ ಕೊಂಡು ಹೋಯಿತು. ಆ ದಂಡು ಬಹು ಶೀತಳದಿಂದ ಕಷ್ಟ ಪಟ್ಟು ಬಹು ಭಯಂಕರವಾದ ಉಪದ್ರಗಳನ್ನು ಅನುಭವಿಸಿ, ಹಿಮ್ಮೆಟ್ಟಿ ಹೋಗ ಬೇಕಾಯಿತು. ರುಸ್ಯರು ಸಹ ಎದುರಿಸಿ ಮೇಲ್ಗೊಂಡದರಿಂದ ಆ ವರೆಗೂ ಜಯಶಾಲಿಯಾಗಿ ಪ್ರಕಟವಾದ ಚಕ್ರವರ್ತಿಗೆ ವಿರೋಧವಾಗಿ ಅನೇಕ ಶೀಮೆಗಳವರು ಒಡಂಬಡಿಕೆ ಮಾಡಿದರು. ಆ ಒಡಂಬಡಿಕೆಯಲ್ಲಿ ಇಂಗ್ಲಾಂಡ್, ಆಸ್ತ್ರಿಯಾ, ಪ್ರುಸ್ಯ, ರುಸ್ಯ ಮೊದಲಾದ ಶೀಮೆಗಳು ಕೂಡಿ ಕೊಂಡವು. ಆ ಒಡಂಬಡಿಕೆಯೂ ಸಿದ್ಧಿಯಾಯಿತು. ಒಡಂಬಡಿಕೆಯ ಶೀಮೆಗಳ ರಾಣುವೆಗಳೆಲ್ಲಾ ಜಯಬಿರುದಿನೊಡನೆ ಪಾರಿಸ್ ಪಟ್ಟದಲ್ಲಿ ಪ್ರವೇಶಿಸಿ, 18ನೇ ಲೂವಿಸನನ್ನು ಸಿಂಹಾಸನದಲ್ಲಿ ಇರಿಸಿ, ನಪೋಲಿಯನ್ನು ಇತಲಿ ನಾಡಿನ ಮೇಲ್ಭಡದ ಅಂಚಿನಲ್ಲಿರುವ (Elba) ಎಲ್ಬಾ ಎಂಬ ಒಂದು ಸಣ್ಣ ದ್ವೀಪಕ್ಕೆ ಶೆರೆಯಾಗಿ ಕಳುಹಿಸಿದರು. ಆ ದ್ವೀಪದಲ್ಲಿ ಅವನು ತನ್ನ ಅಧಿಕಾರವನ್ನೆಲ್ಲಾ ಕಳಕೊಂಡು ಅಲ್ಪ ಪರಿವಾರಜನಸಹಿತವಾಗಿ ಇನ್ನು ತನ್ನ ಆಯುಸ್ಸಿನ ಮಟ್ಟಿಗೂ ಇರ ಬೇಕೆಂದು ಕಟ್ಟಳೆ ಮಾಡಿದರು.

ನಪೋಲಿಯನು ಎಲ್ಬಾ ದ್ವೀಪದಲ್ಲಿ ಕೆಲವು ತಿಂಗಳು ಮಾತ್ರವಿದ್ದ ತರುವಾಯ ತಾನು ಕಳಕೊಂಡ ಕಿರೀಟವನ್ನು ಹೊಂದುವದಕ್ಕೆ ಬಹು ತ್ರಾಣೀಕರವಾದ ತಂತ್ರವನ್ನು ಮಾಡಿದನು. ಏನಂದರೆ, ಅವನು ತನ್ನ ನಂಬಿಕೆಯುಳ್ಳ ಅಲ್ಪ ಪರಿವಾರದೊಡನೆ ಫ್ರಾನ್ಸ್ ಶೀಮೆಯ ಧಡಕ್ಕೆ ಬಂದು ಎಲ್ಲೆಲ್ಲಿಗೆ ಹೋದನೋ ಅಲ್ಲಲ್ಲಿ ಇದ್ದ ಯುದ್ಧದ ರಾಣುವೆಗಳಿಂದ ಸಂತೋಷವಾಗಿ ಅಂಗೀಕರಿಸಲ್ಪಟ್ಟನು. 18ನೇ ಲೂವಿಸ್ ತಿರಿಗಿ ಪಾರಿಸ್ ಪಟ್ಟವನ್ನು ಬಿಟ್ಟು ಓಡಿದನು. ನಪೋಲಿಯನು ತಿರಿಗಿ ಫ್ರಾನ್ಸ್ ಶೀಮೆಗೆ ಧೊರೆಯೂ, ಯೂರೋಪ್ ಖಂಡಕ್ಕೆ ಭಯಂಕರನೂ ಆದನು. ಅದರ ತರುವಾಯ ಮತ್ತೂ ಯೂರೋಪಿನ ಶ್ರೇಷ್ಠ ಶೀಮೆಗಳೆಲ್ಲಾ ಒ

ಡಂಬಡಿಕೆ ಮಾಡಿದರು. ಇಂಗ್ಲಿಷ್ ರಾಣುವೆಯೂ ಒಳ್ಳೇ ಸಾಧಕನಾದ ವೆಲ್ಲಿಂಗ್ಟ್ರನ್ ಡ್ಯೂಕ್ ಪ್ರಭುವಿನಿಂದ ನಡಿಸಲ್ಪಟ್ಟಿತು. ಅವು (Belgium) ಬೆಲ್ಜಿಯಮ್ ಶೀಮೆಯಲ್ಲಿ ಕೂಡಿ ಬಂದವು. ಮಾರ್ಷಲ್ (Blucher) ಬ್ಲೂಚರ್ ಎಂಬವನಿಂದ ನಡಿಸಲ್ಪಟ್ಟ ಒಂದು ಪ್ರುಸ್ಯದ ರಾಣುವೆಯು ಸಮೀಪದಲ್ಲಿ ಇತ್ತು. ಈ ಎರಡು ಸಹಾಯಸೈನ್ಯಗಳೂ ಕೂಡಿ ಕೊಳ್ಳು ವದಕ್ಕಿಂತ ಮುಂಚೆಯೇ ಯುದ್ಧ ಪ್ರಾರಂಭಿಸ ಅಪೇಕ್ಷಿಸಿದ ನಪೋಲಿಯು ನು ಬೆಲ್ಜಿಯಮ್ ದೇಶಕ್ಕೆ ತ್ವರೆಯಾಗಿ ಹೋಗಿ, (Ligney) ಲಿಗ್ನಿ ಎಂಬ ಸ್ಥಳದಲ್ಲಿ ಪ್ರುಸ್ಯರನ್ನು ಎದುರಿಸಿದನು. ಅವರು ಹಿಮ್ಮೆಟ್ಟ ಬೇಕಾಗಿತ್ತು. ಅದೇ ದಿವಸದಲ್ಲಿಯೇ ವೆಲ್ಲಿಂಗ್ಟನು (Quatre Bras) ಕಾಂತೆರ್ ಬ್ರಾ ಎಂಬ ಸ್ಥಳದಿಂದ ಫ್ರಾನ್ಸ್ ರಾಣುವೆಯು ತನ್ನನ್ನು ಎದುರಿಸಿ ಬಂದದ ರಿಂದ ತಾನು ಸಹ ಹಿಂತೆಗಿಯ ಬೇಕಾಗಿತ್ತು. ಆದಾಗ್ಯೂ (Waterloo) ವಾತರ್ಲೂ ಎಂಬ ಒಂದು ಗ್ರಾಮದ ಬಳಿಯ ದಂಡಿಳಿದು, ಫ್ರಾನ್ಸರ ಸೈನ್ಯವೆಲ್ಲಾ ಬರಲಿ ಎಂದು ತಾಳ್ಮೆಯಿಂದ ಕಾದಿದ್ದನು.

ಮಾರಣೆ ದಿವಸ ಉದಯದಲ್ಲಿ ಫ್ರಾನ್ಸರು ಯುದ್ಧ ಪ್ರಾರಂಭಿಸಿ ದರು. ನಪೋಲಿಯನ ಶುದ್ಧ ವೀರಸೈನ್ಯವು ಹೇರಾಳವಾಗಿದ್ದಾಗ್ಯೂ, ಇಂಗ್ಲಿಷರ ಸೈನ್ಯಗಳು ನಿಂತು ಯುದ್ಧ ಮಾಡಿದರು. ಹೀಗೆ ಬಹಳ ಹೊ ತ್ತು ಯುದ್ಧ ನಡಿಯುತ್ತಾ ಬಂತು. ವೆಲ್ಲಿಂಗ್ಟನು ಪ್ರುಸ್ಯರ ಬರುವಿಕೆ ಗಾಗಿ ಎದುರು ನೋಡಿ ಕೊಂಡಿದ್ದನು. ಇಂಗ್ಲಿಷ್ ಸೈನ್ಯಗಳು ಶೇರಿ ಕೊಂ ಡು ಒಂದಾಗಿ ಕೂಡಿ ಕೊಂಡಿದ್ದದರಿಂದ ಸಾಲುಗಳಲ್ಲಿ ಸಾಯುವವರು ಬಿದ್ದು ಆಯಾ ಸಮಯಗಳಲ್ಲಿ ಸ್ವಲ್ಪ ತೆರವು ಉಂಟಾಗುವದೇ ಹೊ ರ್ತು ಬೇರೆ ಯಾವ ವಿಧದಿಂದಲೂ ಸಂದು ಬಿಡದೆ ನಿಂತರು. ಇನ್ನು ಅ ಸ್ತಮಿಸುವ ವೇಳೆಯಲ್ಲಿ ಎದುರಿಸಿ ಬರುವ ಪ್ರುಸ್ಯರು ಸಹ ಬಂದು ಕೂ ಡಿ ಕೊಂಡರು. ಕಡೇ ಸಾರಿ ನಪೋಲಿಯನು ತಾಕುತ್ತಾ ಬಂದನು. ಆ ದರೆ ಹಿಮ್ಮೆಟ್ಟಿದನು. ಅದರ ಮೇಲೆ ವೆಲ್ಲಿಂಗ್ಟನ್ ಹೇಳಿದ ಒಂದೇ ಮಾ ತಿನಿಂದ, ಆ ಪರ್ಯಂತರ ಫ್ರಾನ್ಸರ ಗುಂಡಿನ ಮಳೆಗೆ ಬೆಟ್ಟದೋಪಾ ದಿಯಲ್ಲಿ ಚಲಿಸದೆ ನಿಂತ ತಾಳ್ಮೆಯುಳ್ಳ ವೀರ ಸೈನಿಕರು ಹುಲಿಯಂತೆ ಹಾ ರಿ ಎದುರಿಗಳನ್ನು ಓಡಿಸಿ ಚದರಿಸಿದರು.

## ಸಂಧಿ 24. ನವೋಲಿಯನು ಫರಾರಿಯಾದದ್ದು.

ವಾತರ್ಲೂ ಯುದ್ಧದ ತರುವಾಯ ನವೋಲಿಯನು ಪಾರಿಸ್ ಪಟ್ಟಕ್ಕೆ ಓಡಿದನು. ಆದಾಗ್ಯೂ ಅಲ್ಲಿ ಅವನು ಬಹಳ ಕಾಲ ಇರಲಿಲ್ಲ. ಸಮುದ್ರದ ಧಡಕ್ಕೆ ಓಡಿ ಹೋಗಿ, ಅಮೇರಿಕಕ್ಕೆ ಓಡಿ ಹೋಗಿ ಬಿಡುವ ಎಂದು ಒಂದು ಹಡಗದಲ್ಲಿ ಹತ್ತಿದನು. ಆದಾಗ್ಯೂ ಇಂಗ್ಲಿಷರ ಹಡಗಗಳಿಗೆ ತಪ್ಪಿಸಿ ಕೊಳ್ಳುವದು ದುಸ್ತರವೆಂದು ಕಂಡು, (Bellerophon) ಬೆಲ್ಲೆರೋಫನ್ ಎಂಬ ಒಬ್ಬ ಇಂಗ್ಲಿಷ್ ಯುದ್ಧನಾವೆಯ ಯಜಮಾನನಿಗೆ ವಿಧೇಯನಾಗಿ ಬಂದನು. ಆ ತರುವಾಯ ಅವನನ್ನು ಇಂಗ್ಲಾಂದಿಗೆ ವೈದಾಗ ತನ್ನ ವೈರಿಗಳಲ್ಲೆಲ್ಲಾ ಅಧಿಕ ಬಲಶಾಲಿಗಳೂ ದೃಢಸ್ತರೂ ದಯಾಳ ಚಿಂತೆಯುಳ್ಳವರೂ ಆದ ಬ್ರಿಶಿಷ್ ಮನುಷ್ಯರ ಬಳಿಯಲ್ಲಿ ದಯವನ್ನು ಕೋರಿದನು. ಅದರ ತರುವಾಯ ದಕ್ಷಿಣ ಅತ್ಲಾಂಟಿಕ್ ಸಮುದ್ರದಲ್ಲಿ ಏಕಾಂತವಾದ (St. Helena) ಸೆಂತ್ ಹೆಲೀನಾ ಎಂಬ ದ್ವೀಪದಲ್ಲಿ ಸಾಧಾರಣವಾದ ಶೆರೆಯಲ್ಲಿ ಇರಿಸಲ್ಪಟ್ಟು ಆ ಸ್ಥಳದಲ್ಲಿಯೇ ಫರಾರಿಯಾಗಿದ್ದು ತನ್ನ ಆಯುಸ್ಸನ್ನು ಮುಗಿಸಿದನು.

# CHAPTER XXV.

## THE HISTORY OF OUR OWN TIMES.

FROM A. D. 1816 TO A. D. 1856.

## 25 ಸಂಧಿ.

## ತತ್ಕಾಲ ವರ್ತಮಾನವು.

ಕ್ರಿ. ಶ. 1816 ಮೊದಲು ಕ್ರಿ. ಶ. 1856 ವರೆಗೂ.

ಮುಖ್ಯ ತಾರೀಖುಗಳು (George IV) 4ನೇ ಜೋರ್ಜ್ ಅರಸಾದದ್ದು. 1820. ರೋಮನ್ ಮತಸ್ಥರಿಗೆ ಅನುಸರಣೆಯಾದ ಏರ್ಪಾಟು 1829. (William IV) 4ನೇ ಉಲ್ಲಿಯಮ್ ಅರಸಾದದ್ದು 1830. ಜನಪ್ರತಿನಿಧಿಸಂಘದ ವ್ಯತ್ಯಾಸವಾದ ಏರ್ಪಾಟು 1832. (Victoria) ವಿಕ್ಟೋರಿಯ ರಾಣಿಯಾದದ್ದು 1837. ಅದೇ ಕಾಲದ ಇಂದ್ಯ ಚರಿತ್ರೆ: (Lord Amherst) ಅಂಹೆರ್ಸ್ತ್ ಪ್ರಭು ಗವರ್ನರ ಜಿನರಲಾದದ್ದು 1822. (Lord Bentinck) ಬೆಂತಿಂಕ್ ಪ್ರಭು 1828. (Lord Auckland) ಆಕ್ಲಾಂಡ್ ಪ್ರಭು 1836. (Lord Ellenborough) ಎಲ್ಲೆಂಬೊರೊ ಪ್ರಭು 1841. (Sir Henry Hardinge) ಸರ್ ಹೆನ್ರಿ ಹಾರ್ಡಿಂಗ್ 1844. (Lord Dalhousie) ದಲ್ಹೂಸಿ ಪ್ರಭು 1847. (Lord Canning) ಕಾನಿಂಗ್ ಪ್ರಭು 1855. ಶ್ರೇಷ್ಠ ನಾಮಗಳು: (Sir Robert Peel) ಸರ್ ರೋಬೆರ್ಟ್ ಪೀಲ್ 1788—1850. (Dr. Chalmers) ದಾಕ್ತರ್ ಚಾಲ್ಮೆರಸ್ 1780—1847. (Stephenson) ಸ್ತೀಫೆನ್‌ಸನ್ 1781—1848. (Brunel) ಬ್ರುನೆಲ್ 1769—1849.

ಇದಕ್ಕೆ ಮುಂಚಿನ ಸಂಧಿಯಲ್ಲಿ ಹೇಳಿದ ದೊಡ್ಡ ಸಮಾಧಾನದ ಒಡಂಬಡಿಕೆಯು ನಡೆದ ಮಾರಣೆ ವರುಷದಲ್ಲಿ ಮೆದಿತರೇನಿಯನ್ ಕಡಲಿನಲ್ಲಿರುವ (Algiers) ಅಲ್ಜೀರ್ಸ್ ಕೋಟೆಯನ್ನು ಇಂಗ್ಲಿಷ್ ನಾವಿಕ ಸೈನ್ಯವು ಹಿಡಿಯ ಹೋಯಿತು. ಯಾಕಂದರೆ, ಉತ್ತರ ಅಫ್ರಿಕದ ಸಮುದ್ರದ ಅಂಚುಗಳಲ್ಲಿ ಆಗಾಗ್ಯೆ ನಾವೆಯ ಕೊಳ್ಳೆಗಳು ನಡಿಯುತ್ತಾ

ಬಂದದರಿಂದಲೂ, ಆ ಕೊಳ್ಳೆಗಾರರಿಂದ ಹಿಡಿಯಲ್ಪಟ್ಟವರು ಶೆರೆಯವರಾಗಿ ಮಾರಲ್ಪಡುತ್ತಾ ಬಂದದರಿಂದಲೂ, ಅಂಥಾ ಕೇಡುಗಳನ್ನು ಇನ್ನು ಮಾಡ ಕೂಡದೆಂದು (Barbary) ಬಾರ್ಬರಿ ಎಂಬ ಸಣ್ಣ ದೇಶಗಳ ಅಧಿಕಾರಿಗಳಿಗೆ ಇಂಗ್ಲಿಷ್ ಧೊರೆತನದವರು ಖಂಡಿತವಾದ ಕಟ್ಟಳೆ ಕೊಟ್ಟರು. ಹಾಗೆಯೇ (Tunis) ತೂನಿಸ್, (Tripoli) ತ್ರಿಪ್ಪೋಲಿ ಎಂಬ ಉಭಯ ಸಂಸ್ಥಾನಿಕರು ಸಂಗಡಲೇ ಅಂಥಾ ಕೆಟ್ಟ ಮಾಡಿಕೆಗಳನ್ನು ನಿಲ್ಲಿಸಿ ಬಿಟ್ಟು, ಇಂಗ್ಲಿಷ್ ಧೊರೆತನದವರ ಮನಸ್ಸಿನಂತೆ ನಡಿದು ಕೊಳ್ಳ ಸಮ್ಮತಿಸಿದರು. ಹೀಗಿದ್ದಾಗ್ಯೂ ಅಲ್ಜೀರ್ಸ್ ದೇಶವನ್ನು ಆಳಿದ (Dey) ದೇ ಎಂಬುವ ಅಧಿಪತಿಯು ಮಾತ್ರ ತನ್ನ ರಾಜಧಾನಿಕೋಟೆಯ ಬಲವನ್ನು ನಂಬಿ, ಅದು ನಾವಿಕಸೈನ್ಯದಿಂದ ಹಿಡಿಯಲ್ಪಡಲಾರದೆಂಬ ಎಣಿಕೆಯಿಂದ ತನ್ನ ಬಳಿಯಲ್ಲಿದ್ದ ಶೆರೆಯವರನ್ನು ಬಿಡುಗಡೆ ಮಾಡದೆ ನಾವೆಯ ಕೊಳ್ಳೆಗಳನ್ನು ಅಣಗಿಸದೆ ಇದ್ದನು. ಈ ಕಾರಣದಿಂದ (Exmouth) ಎಕ್ಸ್‌ಮೌತ್ ಎಂಬ ಪ್ರಭುವಿನ ಮುಖ್ಯವಾದ ನಾವಿಕಸೈನ್ಯವು ಅಲ್ಜೀರ್ಸ್ ಪಟ್ಟಣವನ್ನು ಹೊಡೆದು ಅದರ ಅಲಂಗಗಳನ್ನೆಲ್ಲಾ ಕೆಡವಿ ಬಿಟ್ಟಿತು. ಮತ್ತು ಆ ಕೋಟೆಯ ಮೇಲೆ ಹೋದ ತಾತ್ಪರ್ಯಗಳು ಕೈ ಕೂಡಿದವು. ಹ್ಯಾಗಂದರೆ, ಅದರೊಳಗೆ ಶೆರೆಯಾಗಿದ್ದ ಕ್ರಿಸ್ತಿಯರೆಲ್ಲರೂ ಬಿಡುಗಡೆ ಹೊಂದಿದರು. ಮತ್ತು ಶ್ರಮೆ ಪಟ್ಟವರ ನಿಮಿತ್ತ ಇಂಗ್ಲಿಷ್ ನಾವಿಕರು ಮಾಡಿದ ಸಕಲ ಯತ್ನಗಳೂ ಸಂಪೂರ್ಣವಾಗಿ ಈಡೇರಿದವು.

ಮಾರಣೆ ವರುಷದಲ್ಲಿ ಪ್ರತಿ ಅರಸನ ಏಕಪುತ್ರಿಯಾದ (Princess Charlotte) ಚಾರ್ಲೋತ್ ಎಂಬ ರಾಜಕುಮಾರ್ತಿಯು ಮರಣ ಹೊಂದಿದ್ದರಿಂದ ಸಮಸ್ತ ಪ್ರಜೆಗಳೂ ದುಃಖಸಾಗರದಲ್ಲಿ ಮುಣುಗಿದರು. ಕೆಲವು ಕಾಲದ ಮುಂಚೆ ಅವಳು ಆ ಕಾಲದ ಬೆಲ್ಜಿಯರ ಅರಸನಾಗಿದ್ದ (Saxe Coburg) ಸಾಕ್ಸ್ ಕೋಬರ್ಗ ನಾಡಿನವನಾದ (Leopold) ಲಿಯೊಪೋಲ್ಡ್ ಎಂಬ ರಾಜಕುಮಾರನನ್ನು ಮದುವೆ ಮಾಡಿ ಕೊಂಡು, ಪ್ರಸವವೇದನೆ ಹೊಂದಿದಾಗ ಮಗುವು ಸತ್ತು ಬಿದ್ದದರಿಂದ ಅವಳು ಸಹ ಸತ್ತಳು.

1820ನೇ ವರುಷದಲ್ಲಿ ಮೇಲೆ ಹೇಳಿದ ವ್ಯಸನದಂತೆ ಮತ್ತೂ ಮ

ಹಾ ವ್ಯಸನವು ಪ್ರಜೆಗಳೆಲ್ಲರಿಗೂ ಸಂಭವಿಸಿತು. ಹ್ಯಾಗಂದರೆ, ಆ ವರುಷದಲ್ಲಿ ದೀರ್ಘಾಯುಷ್ಯವೂ ಬಹಳ ಘನವೂ ಉಳ್ಳ 3ನೇ ಜೋರ್ಜ್ ಎಂಬ ಅರಸನು ದೇಹವಿಯೋಗವಾದನು. ಅವನು ಕೆಲವು ದಿವಸಗಳ ಮಟ್ಟಿಗೂ ಏಕಾಂತ ವಾಸ ಮಾಡ ಪ್ರಾಪ್ತಿಸಿದಾಗ್ಯೂ ಅವನು ಸತ್ತಾಗ ಉಂಟಾದ ವ್ಯಾಕುಲವು ಹಿರಿ ಕಿರಿಯರಿಗೆಲ್ಲಾ ಮಟ್ಟಿಲ್ಲದ್ದಾಗಿತ್ತು. ಎಲ್ಲಾ ಅಂತಸ್ತು ಉಳ್ಳವರೂ ಅವನ ಮರಣಕ್ಕಾಗಿ ದುಖ್ಖ ಕೊಂಡಾಡಿದರು. ಮತ್ತು ತಮ್ಮ ಪ್ರಾಣಸ್ನೇಹಿತನು ಸತ್ತರೆ ಹ್ಯಾಗೋ ಹಾಗೆಯೇ ಎಣಿಸಿ ಪರಿತಪಿಸಿದರು.

3ನೇ ಜೋರ್ಜ್ ಅರಸನು ಆಳಿದ ದೀರ್ಘ ರಾಜ್ಯಭಾರದಲ್ಲಿ ಪ್ರಜೆಗಳ ಸ್ಥಿತಿಯೂ ನಾಗರೀಕತೆಯೂ ಬಹುಶಾ ವೃದ್ಧಿಯಾಯಿತು. ದರಿದ್ರರ ಸ್ಥಿತಿಯು ಬಹು ಅಕ್ಕರೆಯಿಂದ ವಿಚಾರಿಸಲ್ಪಟ್ಟಿತು. ಅವರಿಗೂ ಮೇಲಿನ ಅಂತಸ್ತಿನವರಿಗೂ ಮುಂಚಿಗಿಂತ ಅಧಿಕವಾದ ಪ್ರೀತಿಯೂ ಪಕ್ಷವೂ ತೋರಿತು. ಕಳ್ಳರು ಮುಂತಾದ ಅಪರಾಧಿಗಳ ಶಿಕ್ಷೆಗಳು ಮುಂಚಿದ್ದ ಕಠಿಣವಿಲ್ಲದೆ ಕ್ರಮವಾಗಿ ನೇಮಿಸಲ್ಪಟ್ಟವು. ಸೆರೆಮನೆಗಳಲ್ಲಿ ಇರುವವರ ನಿವಾಸವೂ ಸ್ಥಿತಿಯೂ ನೀತಿಯ ಪ್ರಕಾರ ಸೌಖ್ಯವಾದವು. ಇಂಗ್ಲಾಂದಿನ ಪ್ರಜೆಗಳೆಲ್ಲರಿಗೂ ಸಮಸ್ತ ಭೂಲೋಕವಾಸಿಗಳಿಗೂ ಉಪಯೋಗವಾದ ನಾನಾ ವಿಧ ಯಂತ್ರಗಳು ಮೊದಲು ಮೊದಲು ಆ ಕಾಲದಲ್ಲಿ ಸಾಧಾರಣವಾಗಿ ಬಳಿಸಲಾದವು. ತಮ್ಮ ಸೌಖ್ಯವನ್ನು ಹುಡುಕದೆ ಲೋಕೋಪಕಾರವಾದ ಯತ್ನಗಳನ್ನು ಬಹಳವಾಗಿ ಮಾಡಿದವರಲ್ಲಿ (John Howard) ಯೋಹಾನ್ ಹೌವಾರ್ಡ್ ಎಂಬ ಮಹಾನುಭಾವನೂ (Fry) ಫ್ರೈ ಎಂಬುವ ಧೊರೆಸಾನಿಯೂ ಅಧಿಕ ಪ್ರಬಲವಾಗಿದ್ದವರು.

ಲೋಕೋಪಕಾರವಾದ ಕ್ರಿಯೆಗಳು ಇಂಗ್ಲಾಂದಿನಲ್ಲಿ ಮಾತ್ರ ನಡೆದವೆಂದು ಹೇಳ ಕೂಡದು. ಆ ಲೋಕೋಪಕಾರಿಗಳು ಮಾಡಿದ ಮೇಲು ಅನ್ಯ ದೇಶಗಳಿಗೂ ಅನುಕೂಲವಾಯಿತು. ಆ ಮುಖ್ಯವಾಗಿ ತಮ್ಮ ಮನೆ ಬಾಗಲು ಕಳಕೊಂಡು, ದೇಶ ಊರು ಬಿಟ್ಟು ಗುಲಾಮರಾಗಿ ಮಾರಲ್ಪಟ್ಟು, ಪಶ್ಚಿಮ ಹಿಂದೂ ದ್ವೀಪಗಳಲ್ಲಿಯೂ ಅಮೇರಿಕದಲ್ಲಿ

ಯೂ ಪಣ್ಯದ ಕೆಲಸ ಮಾಡುವ ದಾಸರಾಗಿದ್ದ ನಿರ್ಭಾಗ್ಯರಾದ ಜನಗಳೇ ಅಧಿಕ ದಯವನ್ನು ಅನುಭವಿಸಿದರು. ಹ್ಯಾಗಂದರೆ, ಇಂಗ್ಲಾಂಡಿನವರೆಲ್ಲರೂ ಸ್ವಾಧೀನವುಳ್ಳ ಜಾತಿ ಮನುಷ್ಯರಾಗಿರಲು, ಅವರು ಹೋಗಿ ವಾಸಿಸುವ ಯಾವ ಪರಾಯಿ ಶೀಮೆಯಲ್ಲಾದರೂ ನಡಿಯುವ ಕ್ರೂರವಾದ ಗುಲಾಮತನದ ವ್ಯಾಪಾರಕ್ಕೆ ಇಂಗ್ಲಿಷ್ ಧೊರೆತನದವರು ಸಮ್ಮತಿಸುವದು ಎಷ್ಟು ನಾಚಿಕೆಯಾದ ಕಾರ್ಯವೆಂದೆಣಿಸಿ, ಅನೇಕ ಒಳ್ಳೇ ಮನುಷ್ಯರು ಎದ್ದು, ಅದರ ವಿಷಯವಾಗಿದ್ದ ದೇಶಪ್ರಮಾಣಗಳನ್ನು ಮಾರ್ಪಡಿಸುವದಕ್ಕೆ ಯತ್ನಯಿಸಿದರು. ಆ ಘನವಾದ ಯತ್ನಗಳನ್ನು ಬಿಡದೆ ಪಟ್ಟಾಗಿ ಹಿಡಿದವರಲ್ಲಿ (Wilberforce) ವಿಲ್ಬರ್‌ಫೋರ್ಸ್ (Clarkson) ಕ್ಲಾರ್ಕ್ಸನ್ (Granville) ಗ್ರಾನ್‌ವಿಲ್ (Sharpe) ಶಾರ್ಪ್ ಎಂಬವರೇ ಯಾವಾಗ್ಯೂ ಮರೆಯಲ್ಪಡಲಾರದವರು. ಅವರು ಯತ್ನಯಿಸಿದ ಯತ್ನದಿಂದಲೇ ಇಂಗ್ಲಿಷ್ ಧೊರೆತನಕ್ಕೆ ಒಳಪಟ್ಟ ಪ್ರಜೆಗಳಲ್ಲಿ ಒಬ್ಬರಾದರೂ ಅದು ಮೊದಲ್ಗೊಂಡು ಗುಲಾಮತನದ ವ್ಯಾಪಾರ ಮಾಡ ಕೂಡದು ಎಂದು ಒಂದು ಏರ್ಪಾಟು 1807ನೇ ವರುಷದಲ್ಲಿ ಪಾರ್ಲಿಮೆಂಟಿನ ಉಭಯ ಸಂಘಗಳಿಂದಲೂ ವಿಧಿಸಲ್ಪಟ್ಟಿತು. ಇಂಗ್ಲಾಂಡಿನವರು ಲೋಕದ ಬೇರೆ ಯಾವ ಶೀಮೆಗಳವರಾದರೂ ತಮ್ಮ ಮಾದ್ರಿಯನ್ನು ನೋಡಿ ಮಾಡುವಂತೆ ನಡಿಸಿದ ನಾನಾ ಕೃತ್ಯಗಳಲ್ಲಿ ಇದಕ್ಕಿಂತ ಶ್ರೇಷ್ಠವಾದದ್ದು ಒಂದೂ ಇಲ್ಲ.

ಆ ಕಾಲದಲ್ಲಿ 4ನೇ ಜೋರ್ಜ್ ಅರಸನು ಹೆಸರಿಗೆ ಮಾತ್ರ ಪಟ್ಟ ಹೊಂದಿದನೇ ಹೊರ್ತು ವಿಶೇಷವೇನೂ ಇಲ್ಲ. ಅವನು ಬಹು ದಿವಸಗಳು ಧೊರೆತನ ಮಾಡಿ ಕೊಂಡಿದ್ದದರಿಂದ ಅವನ ಹೆಸರಿನ ಭೇದವೇ ಹೊರ್ತು ಹೆಚ್ಚಾದ ಅಧಿಕಾರವಿರಲಿಲ್ಲ. ಅವನು ಕಿರೀಟ ಹೊಂದಿದ ಕೂಡಲೇ ಅರಸನ ಮಂತ್ರಿಗಳನ್ನು ಕೊಲ್ಲುವದಕ್ಕೆ ಉಂಟಾದ ಒಂದು ಕೇಡಾಲೋಚನೆಯು ಕಂಡು ಹಿಡಿಯಲ್ಪಟ್ಟಿತು. ಆ ಕೇಡಿಗೆ ಮುಖ್ಯಸ್ತನಾಗಿದ್ದ (Thistlewood) ಥಿಸ್ತಲ್‌ವೂಡ್ ಎಂಬವನೂ, ಅವನಿಗೆ ಶೇರಿದ ಇನ್ನೂ ಕೆಲವರೂ ಕೊಲ್ಲಲ್ಪಟ್ಟರು. ಆ ಕಾಲದಲ್ಲಿ ನಾಚಿಕೆ ಇಲ್ಲದಂಥ ಬಹು ನೀಚವಾದಂಥ ಒಂದು ಅಪರಾಧವಿಚಾರಣೆಯೂ ನಡಿಯಿ

ತು. ಅದು ಏನಂದರೆ, ಅರಸನ ಹೆಂಡಶಿಯು ಅನೇಕ ವರುಷಗಳು ಗಂಡನನ್ನು ಬಿಟ್ಟಗಲಿ ಇದ್ದವಳು ಇನ್ನು ಇಂಗ್ಲ್ಯಾಂಡ್ ರಾಣಿ ಎಂಬುವ ಅಂತಸ್ತನ್ನು ತಿರಿಗಿ ಹೊಂದ ಯತ್ನಯಿಸಿದಾಗ, ಅವಳ ಮೇಲೆ ಅಪರಾಧ ಹೊರಿಸಿ, ಪ್ರಭುಗಳ ಸಭೆಯ ನಡುವೆ ನಿಲ್ಲಿಸಿ ಅಪರಾಧ ವಿಚಾರಣೆ ಮಾಡಿದರು. ಆದಾಗ್ಯೂ ಅದರಲ್ಲಿ ಅವಳನ್ನು ಅಪರಾಧವಿಲ್ಲದವಳೆಂದು ತೀರಿಸಿದರು.

4ನೇ ಜೋರ್ಜ್ ಅರಸನ ಕಾಲದಲ್ಲಿ ನಡೆದ ವರ್ತಮಾನಗಳಲ್ಲಿ ರೋಮನ್ ಸಭೆಗೆ ಅನುಸರಣೆಯಾದ ಏರ್ಪಾಟು ಎಂಬುವದೇ ಮುಖ್ಯವಾದದ್ದು. ಅದು ಏನಂದರೆ, ಧೊರೆತನಕ್ಕೆ ಶೇರಿದ ಉದ್ಯೋಗ ಹೊಂದುವ ಸಮಸ್ತರೂ, ಇಂಗ್ಲಿಷ್ ಸಭೆಯ ಆರಾಧನೆಯ ಕ್ರಮಗಳನ್ನು ಕೈಕೊಳ್ಳ ಬೇಕೆಂದು ಒಂದು ಪರೀಕ್ಷೆಯ ಏರ್ಪಾಟು 2ನೇ ಚಾರ್ಲ್ಸ್ ಅರಸನ ಕಾಲದಲ್ಲಿ ಪಾರ್ಲಿಮೆಂಟಿನವರಿಂದ ನೇಮಿಸಲ್ಪಟ್ಟಿತ್ತಷ್ಟೆ. ಆ ಪರೀಕ್ಷೆಯ ಏರ್ಪಾಟು ಈ ಕಾಲದಲ್ಲಿ ತಳ್ಳಲ್ಪಟ್ಟಿತು. ಅದರಿಂದ ಪ್ರೊತೆಸ್ತಾಂತ್ ಮತಸ್ಥರಾದ ಸಕಲ ವಿಭಾಗಗಳವರೂ ಮೇಲೆ ಹೇಳಿದ ಅಂತಸ್ತುಗಳನ್ನು ಹೊಂದುವದಕ್ಕೆ ಇದ್ದ ಅಡ್ಡಿಯು ನಿವರ್ತಿಯಾಯಿತು.

ಹೀಗಿರಲಾಗಿ ರೋಮನ್ ಸಭೆಯವರಿಗೆ ಮಾತ್ರ ಧೊರೆತನದ ಉದ್ಯೋಗಗಳನ್ನು ಮಾಡುವದಕ್ಕಾದರೂ, ಪಾರ್ಲಿಮೆಂತ್ ಸಂಘದಲ್ಲಿ ಶೇರುವದಕ್ಕಾದರೂ ಇನ್ನೂ ಅಡ್ಡಿ ಇದ್ದದರಿಂದ ಒಂದು ಮತಸ್ತರಿಗೆ ಸ್ಥಳ ಕೊಟ್ಟು, ಬೇರೊಂದು ಮತಸ್ತರಿಗೆ ಸ್ಥಳ ಕೊಡದೆ ಇರುವದು ನಿಶ್ಚಯವಾಗಿ ರೋಮನ್ ಮತಸ್ತರಿಗೆ ದುಃಖವಾಗಿತ್ತು. ಐರ್ಲಾಂಡ್ ಶೀಮೆಯಲ್ಲಿ ಅಧಿಕವಾದ ರೋಮನ್ ಸಭೆಯವರು ಇರುವದರಿಂದ ಆ ಸ್ಥಳದಲ್ಲಿ ಅದನ್ನು ಕುರಿತು ಅವರು ಸಂಭಾಷಣೆ ಮಾಡುತ್ತಾ ಮಾಡುತ್ತಾ ಬಹು ವೈರಾಗ್ಯವುಂಟಾಯಿತು. ಕಡೆಯಲ್ಲಿ 1829ನೇ ವರುಷದ ವಸಂತ ಕಾಲದಲ್ಲಿ ಒಂದು ಅನುಕೂಲವಾದ ಏರ್ಪಾಟು ಸಹ ಉಂಟಾಯಿತು. ಅದರ ಮೂಲಕವಾಗಿ ರೋಮನ್ ಮಾರ್ಗದವರಿಗಿದ್ದ ತಡೆಗಳೆಲ್ಲಾ ನಿವರ್ತಿಯಾಗಿ, ಅವರೂ ಸಮವಾಗಿ ಪಾರ್ಲಿಮೆಂತ್ ಸಂಘದಲ್ಲಿ ಶೇರುವದಕ್ಕೆ ಹೇತುವೆಯಾಯಿತು. ಅಂದಿನಿಂದ ಶೀಮೆಯಲ್ಲಿರುವ ಸಕಲ ಜನರ

ಅಭಿಪ್ರಾಯವೇನಂದರೆ, ಒಬ್ಬನು ಯಾವ ಉದ್ಯೋಗಕ್ಕೂ ಅಂತಸ್ತಿಗೂ ತಕ್ಕ ಸಾಮರ್ಥ್ಯವುಳ್ಳವನಾಗಿ ಇರುತ್ತಾನೋ ಆ ಉದ್ಯೋಗ ಹೊಂದುವದಕ್ಕೆ ಅವನ ಮತವು ತಡೆಯಲ್ಲವೆಂದು ಎಣಿಸಿದರು.

ಮಾರಣೆ ವರುಷದಲ್ಲಿ 4ನೇ ಜೋರ್ಜ್ ಅರಸನು ಸತ್ತನು. ಪ್ರಜೆಗಳು ವ್ಯಾಕುಲ ಪಡಲಿಲ್ಲ. ಅವನ ತರುವಾಯ ಅವನ ತಮ್ಮನಾದ (Duke of Clarence) ಕ್ಲಾರೆನ್ಸ್ ಡ್ಯೂಕ್ ಪ್ರಭುವು ಪಟ್ಟ ಹೊಂದಿದನು. ಅವನಿಗೆ ಪಟ್ಟಾಭಿಷೇಕವಾಗುವಾಗ 4ನೇ ಉಲ್ಲಿಯಮ್ ಎಂಬುವ ಹೆಸರಿಡಲ್ಪಟ್ಟಿತು. ಈ ಹೊಸ ಅರಸನು ಗತಿಸಿದ ಅರಸನ ಗುಣಗಳಿಗೆ ಭೇದವಾಗಿ ಕಾಣಿಸಲ್ಪಟ್ಟನು. 4ನೇ ಜೋರ್ಜನು ಒಳಗೆ ಪ್ರೀತಿ ದಯೆ ಇಲ್ಲದವನಾಗಿದ್ದಾಗ್ಯೂ ಹೊರಗೆ ಬಹು ಉಪಚಾರವುಳ್ಳವನಾಗಿದ್ದನು. 4ನೇ ಉಲ್ಲಿಯಮನು ಕೆಲವು ಕಾಲ ಇಂಗ್ಲಿಷ್ ನಾವಿಕಸೈನ್ಯಾಧಿಪತಿಯಾಗಿದ್ದು, ಇಂಗ್ಲಿಷ್ ನಾವಿಕರಿಗೆ ತಕ್ಕ ಯಥಾರ್ಥವಾದ ಗುಣ ಹೊಂದಿದ್ದರಿಂದ ಒರಟುತನವಾದ ಮಾತೂ ತ್ವರೆಯಾಥ ನುಡಿಯೂ ಉಳ್ಳವನು. ಆದಾಗ್ಯೂ ಹೃದಯದಲ್ಲಿ ನಿಜವಾದ ಸ್ನೇಹವೂ ಪೂರ್ಣ ಪ್ರೀತಿಯೂ ಉಳ್ಳವನಾಗಿದ್ದನು.

4ನೇ ಉಲ್ಲಿಯಮನು ಆಳಿದ ಕಾಲದಲ್ಲಿ ಎರಡು ಮುಖ್ಯವಾದ ಏರ್ಪಾಟುಗಳು ಪಾರ್ಲಿಮೆಂಟಿನವರಿಂದ ಉಂಟು ಮಾಡಲ್ಪಟ್ಟವು. ಅವುಗಳಲ್ಲಿ ಒಂದು ಜನಪ್ರತಿನಿಧಿಸಂಘದಲ್ಲಿ ಒಳ್ಳೇ ವ್ಯತ್ಯಾಸಗಳನ್ನು ಮಾಡಿದ ಏರ್ಪಾಟು. ಮುಂಚೆ ಜನಪ್ರತಿನಿಧಿಗಳನ್ನು ಪಾರ್ಲಿಮೆಂಟಿಗೆ ಕಳುಹಿಸುತ್ತಾ ಇದ್ದ ಕೆಲವು ಪಟ್ಣಗಳು ಮುಂಚೆ ಹೊಂದಿದ್ದ ಶ್ರೇಷ್ಠತ್ವ ಕಡಿಮೆಯಾಗಿ ಇದ್ದವು. ಮತ್ತು ಕೆಲವು ದಿವಸಗಳಿಂದ ಜನದಲ್ಲಿಯೂ, ಧನದಲ್ಲಿಯೂ, ಐಶ್ವರ್ಯದಲ್ಲಿಯೂ ಪ್ರಬಲವಾದ ಕೆಲವು ಪಟ್ಣಗಳಿಗೆ ಪಾರ್ಲಿಮೆಂಟಿನಲ್ಲಿ ಶೇರಿ ತಮಗಾಗಿ ಮಾತನಾಡುವದಕ್ಕೆ ಪ್ರತಿನಿಧಿಗಳಿಲ್ಲದೆ ಇದ್ದವು. ಹೀಗೆ ಇದ್ದದರಿಂದ ಶೀಮೆಗೆಲ್ಲಾ ಸಮವಾದ ಸ್ಥಿತಿ ಪಾರ್ಲಿಮೆಂಟಿನಲ್ಲಿ ಇರಲಿಲ್ಲ. ಆದದರಿಂದ ಇಲ್ಲಿಯೂ ಅಲ್ಲಿಯೂ ಬಹು ಮನಸ್ತಾಪಗಳೂ ಗುಣುಗುಟ್ಟುವಿಕೆಗಳೂ ಉಂಟಾದವು. ಹೀಗೆ ಬಹು ದಿವಸ ಪ್ರಜೆಗಳಲ್ಲಿ ಹೋರಾಟವೂ ಮಾತ್ಸರ್ಯವೂ ಉಂಟಾಗಿದ್ದದರಿಂದ

ಪಾರ್ಲಿಮೆಂಟಿನ ಉಭಯ ಸಂಘಗಳಲ್ಲಿಯೂ ಒಂದು ಹೊಸ ಏರ್ಪಾಟು ಅಂಗೀಕಾರವಾಯಿತು. ಆ ಏರ್ಪಾಟಿನಿಂದ ಮುಂಚೆ ಪ್ರತಿನಿಧಿಗಳನ್ನು ಕಳುಹಿಸುತ್ತಾ ಬಂದ ಕೆಲವು ಪಟ್ಟಣಗಳಿಗೆ ಆ ಶ್ಲಾಘ್ಯವು ತಪ್ಪಿ ಹೋಯಿತು. ಅನೇಕ ಪಟ್ಟಣಗಳಿಗೆ ತಕ್ಕ ಪ್ರತಿನಿಧಿಗಳು ನೂತನವಾಗಿ ನೇಮಿಸಲ್ಪಟ್ಟರು. ಪಾರ್ಲಿಮೆಂಟ್ ಸಂಘದವರನ್ನು ಆದು ಕೊಳ್ಳುವ ಕಾಲದಲ್ಲಿ ಚೀಟು ಕೊಡುವವರ ಸಂಖ್ಯೆಯು ಹೆಚ್ಚಿತು. ಈ ವಿಧವಾದ ಏರ್ಪಾಟು ತನ್ನಲ್ಲಿ ತಾನೇ ನ್ಯಾಯವೂ ತಕ್ಕದ್ದೂ ಆಗಿರುತ್ತದೆಯಲ್ಲವೇ. ಇದನ್ನು ವಿಧಿಸಿದರಿಂದಲೇ ಇಂಗ್ಲಿಷಿನವರು ತಮ್ಮ ಶೀಮೆಯ ಪರಂಪರೆಯ ಪ್ರಮಾಣಗಳನ್ನು ಸುಲಭವಾಗಿ ಮಾರ್ಪಡಿಸದೆ, ಬಿಡುವಾದವಾಗಿ ಹಿಡಿದು ಕೊಳ್ಳುವವರಾಗಿದಾಗ್ಯೂ, ಅವುಗಳನ್ನು ಮಾರ್ಪಡಿಸಲೂ, ತೆಗದು ಹಾಕಲೂ ಅವಶ್ಯವಾದ ಕಾಲದಲ್ಲಿ ಹಾಗೆ ಮಾಡುವದಕ್ಕೆ ಮನಸ್ಸುಳ್ಳವರೆಂದು ತೋರುತ್ತದೆ.

4ನೇ ಉಲ್ಲಿಯಮನ ಧೊರೆತನದಲ್ಲಿ ಏರ್ಪಟ್ಟ ಎರಡನೇ ಏರ್ಪಾಟು, ಇಂಗ್ಲಿಷಿನವರು ಹೋಗಿ ವಾಸಿಸುವ ಪರಶೀಮೆಗಳಲ್ಲಿ ನಡಿಯುತ್ತಾ ಬಂದ ಗುಲಾಮತನವನ್ನು ನಿಲ್ಲಿಸಿ ಬಿಟ್ಟದ್ದು. ಮುಂಚೆ ನ್ಯಾಯವಾಗಿ ಗುಲಾಮತನದ ವ್ಯಾಪಾರವು ನಿಲ್ಲಿಸಲ್ಪಟ್ಟಿದ್ದಾಗ್ಯೂ, ಪಶ್ಚಿಮ ಹಿಂದೂ ದ್ವೀಪಗಳಲ್ಲಿದ್ದ ಇಂಗ್ಲಿಷ್ ಆರಂಬಗಾರರು ಗುಲಾಮರನ್ನು ಇಟ್ಟು ಕೊಂಡು ಕೆಲಸ ಮಾಡಿಸಿದರು. ಈ ನಾಚಿಕೆಯಾದ ವಾಡಿಕೆಯು ಈ ಕಾಲದಲ್ಲಿ ಬೇರೊಂದಿಗೆ ಕೀಳಲ್ಪಟ್ಟಿತು. ಇಂಗ್ಲಿಷಿನವರ ಭೂಮಿಯಲ್ಲಿ ಹೆಜ್ಜೆ ಇಟ್ಟ ಯಾವ ಶೆರೆಯವನಾದರೂ, ಅಲ್ಲಿ ಹೆಜ್ಜೆ ಇಟ್ಟ ಸಂಗಡಲೇ ಬಿಡುಗಡೆ ಹೊಂದಿದವನೆಂದು ಮುಂಚೆಯೇ ಪ್ರಮಾಣ ಉಂಟು. ಅದಕ್ಕೆ ಸಮವಾಗಿ ಇನ್ನು ಮೇಲೆ ಇಂಗ್ಲಿಷಿನವರು ಹೋಗಿ ವಾಸಿಸುವ ಯಾವ ದೇಶದಲ್ಲಿ ಇರುವ ಯಾವ ಗುಲಾಮನಾದರೂ, ಇಂಗ್ಲಿಷಿನವರ ಭೂಮಿಯಲ್ಲಿ ನಡಿಯುವ ಗುಲಾಮನಂತೆ ಸಂಗಡಲೇ ಬಿಡುಗಡೆ ಹೊಂದಿದ್ದಾನೆಂದು ವಿಧಿಸಲ್ಪಟ್ಟಿತು. ಇಂಗ್ಲಿಷಿನವರಿಗೆ ಸ್ವಾಭಾವಿಕವಾಗಿ ನಾನಾ ಸಮಯಗಳಲ್ಲಿಯೂ ತೋರುವ ನೀತಿಗೂ, ಸ್ವಪ್ರಯೋಜನ ಹುಡುಕದ ಗುಣಕ್ಕೂ ಈ ಏರ್ಪಾಟು ಮಹಾ ಪ್ರಸಿದ್ಧವಾದ ಸಾಕ್ಷಿ. ಈ ಉಪಕಾ

ರಾರ್ಥವಾದ ವಿರ್ವಾಟಿನಿಂದ ಏಳು ಲಕ್ಷ ಗುಲಾಮರು ಬಿಡುಗಡೆ ಹೊಂದಿದರು.

4ನೇ ಉಲ್ಲಿಯಮನು 1837ನೇ ವರುಷದಲ್ಲಿ ಮರಣ ಹೊಂದಿದನು. ಅವನ ತರುವಾಯ ಅವನ ಅಣ್ಣನ ಮಗಳಾದ ನಮ್ಮ ಶ್ರೇಷ್ಠ ಅರಸಿಯಾದ ವಿಕ್ಟೋರಿಯ ಸಿಂಹಾಸನಕ್ಕೆ ಬಂದಳು. ಅವಳು ಸಿಂಹಾಸನದಲ್ಲಿ ಕುಳಿತಾಗ ಬಹು ಚಿಕ್ಕ ಪ್ರಾಯದ ಹೆಣ್ಣಾಗಿದ್ದು, ಇನ್ನು ಕೊರತೆ ಇಲ್ಲಿ, ಶೀಮೆ. ಸೌಖ್ಯ ಹೊಂದಿ, ನಾಡುಗಳು ಕುದುರುಪಾಟಾಗಿ, ಪ್ರಜೆಗಳು ಬಾಳುವರು ಎಂದು ಎಲ್ಲರೂ ಎಣಿಸುವಂತೆ ಆಕೆಯ ಮುಖವರ್ಚಸ್ಸು ತೋರಿದ್ದರಿಂದ ಎಲ್ಲರ ಹೃದಯಗಳೂ ತಣ್ಣಗಾಗಿ ಸಂತೋಷಪೂರಿತವಾದವು. ಆಕೆಯು 1838ನೇ ವರುಷ ಜೂನ್ ತಿಂಗಳ 28ನೇ ತಾರೀಖು ಕಿರೀಟ ಧರಿಸಲ್ಪಟ್ಟಳು. 1840ನೇ ವರುಷದ ಫೆಬ್ರವರಿ ತಿಂಗಳ 10ನೇ ತಾರೀಖು ತನ್ನ ಬಂಧುವಾದ (Albert) ಆಲ್ಬೆರ್ಟ್ ಎಂಬ ಪ್ರಭುವನ್ನು ಮದುವೆ ಮಾಡಿ ಕೊಂಡಳು. ಅವನೇ (Prince Consort) ಪ್ರಿನ್ಸ್ ಕೊನ್ಸರ್ಟ್ ಎಂದು ಕರೆಯಲ್ಪಡುವವನು. ಅವರಿಬ್ಬರಿಗೂ ನಿಜವಾದ ಪ್ರೀತಿಯುಂಟು.

ವಿಕ್ಟೋರಿಯ ಅರಸಿಯು ಪಟ್ಟ ಹೊಂದಿದ ಕೆಲವು ದಿವಸಗಳಲ್ಲಿ (Canada) ಕಾನಡಾ ಶೀಮೆಯಲ್ಲಿ ಸ್ವಲ್ಪ ಕಾಲದಿಂದ ಕೆಲವು ಪ್ರಜೆಗಳಲ್ಲಿ ಕಲಹವೂ ಹಗೆಯೂ ಹೊತ್ತಿ ಕೊಂಡಿರುವದನ್ನು ಅಣಗಿಸ ಬೇಕೆಂದು, ಆ ದೇಶದ ಕಾರ್ಯಗಳನ್ನು ಕುರಿತು ಮಂತ್ರಿಗಳು ಯೋಚನೆ ಮಾಡಿದರು. ಕಲಹಗುಣವುಳ್ಳವರಿಂದ ಮಾತ್ರ ಆದರಿಸಲ್ಪಟ್ಟ ಒಂದು ಕಲಾಪನೆ ಉಂಟಾಯಿತು. ಆದಾಗ್ಯೂ ಆ ಕಲಹಗಾರರಿಗೆ ತಾವು ಕೋರಿ ಇದ್ದ ಪ್ರಕಾರ ಅಮೆರಿಕದ ಯೂನೈತೆದ್ ಸ್ಟೇತ್ಸ್ ಎಂಬ ನಾಡುಗಳಿಂದ ಸಹಾಯ ಬಾರದೆ ಹೋದದರಿಂದ ಅವರು ತ್ವರೆಯಾಗಿ ಅಣಗಿಸಲ್ಪಟ್ಟರು.

ಇದಕ್ಕೆ ಕೆಲವು ದಿವಸಗಳ ತರುವಾಯ ಸುರಿಯದಲ್ಲಿಯೂ ಚೀನದಲ್ಲಿಯೂ ಹಗೆ ಉಂಟಾಯಿತು. ಹ್ಯಾಗಂದರೆ, ಐಗುಪ್ತದ ಪಾಚ್ಛಾವಾದ ಮಹಮ್ಮದು ಅಲಿ ಎಂಬವನು ಅದು ವರೆಗೂ ಸುಲ್ತಾನನಿಗೆ ಒಳಪಟ್ಟವನೆಂಬ ಹೆಸರಿನಿಂದ ಆಳಿ ಕೊಂಡಿದ್ದನು. ತರುವಾಯ ಸುಲ್ತಾನನ

ಆಜ್ಞೆಯನ್ನು ಮೀರಿ (Syria) ಸುರಿಯವನ್ನು ತನ್ನದಾಗಿ ಮಾಡಿ ಕೊಂಡನು. ಇದರಿಂದ ಪಾಚ್ಛಾವಿಗೂ ಸುಲ್ತಾನನಿಗೂ ಉಂಟಾದ ವಾಗ್ವಾದದಲ್ಲಿ ಕೈ ಹಾಕುವದು ಯುಕ್ತವೆಂದು ಇಂಗ್ಲಿಷ್ ಧೊರೆತನದವರಿಗೆ ತೋರಲಾಗಿ, ಐಗುಪ್ತ್ಯರು ಸುರಿಯವನ್ನು ಬಿಟ್ಟು ಹೋಗಲೂ, ಅವನ ಸಂಗಡ ಶೇರಿಕೆಯಾಗಿದ್ದ ತುರ್ಕಿ ನಾವಿಕಸೈನ್ಯವನ್ನು ವಿಮೋಚಿಸಲೂ, ಸುಲ್ತಾನನೇ ದೊಡ್ಡವನೆಂದು ಅಂಗೀಕರಿಸಲೂ, ಅವನನ್ನು ಬಲವಂತ ಮಾಡಿದರು. (Beyrout) ಬೇರೂತ್ (Sidon) ಸೀದೋನ್ ಎಂಬ ಪಟ್ಟಗಳು ಹಿಡಿಯಲ್ಪಟ್ಟವು. ಆಗಲಿದ್ದ ಇಂಗ್ಲಿಷ್ ನಾವಿಕಸೈನ್ಯಾಧಿಪತಿಯ ಆಜ್ಞೆಯ ಪ್ರಕಾರ (Napier) ನೇಪಿರ್ ಎಂಬ ದಳಕರ್ತನಿಂದ (Acre) ಏಕರ್ ಎಂಬ ಪಟ್ಣವು ಮುತ್ತಿಗೆ ಹಾಕಲ್ಪಟ್ಟಿತು.

ಚೀನದಲ್ಲಿ ಇಂಗ್ಲಿಷ್ ವರ್ತಕರಿಗೆ ಚೀನರಿಂದ ಬಂದ ಅವಮಾನದ ಉದ್ದಿಶ್ಯ ಯುದ್ಧ ಉಂಟಾಯಿತು. (Canton) ಕಾಂತನ್ ಪಟ್ಣವು ಮುತ್ತಿಗೆ ಹಾಕಲ್ಪಟ್ಟಿತು. ಚೀನ ರಾಜ್ಯಚಾರದಲ್ಲಿ ಎರಡನೇ ಶ್ರೇಷ್ಠ ಪಟ್ಣವಾದ (Nankin) ನಾನ್‌ಕಿನ್ ಪಟ್ಣದ ಮುಟ್ಟಿಗೂ (Sir H. Gough) ಸರ್ ಹ್ಯೂ. ಗಾಫ್ ಎಂಬವನಿಂದ ನಡಿಸಲ್ಪಟ್ಟ ಒಂದು ರಾಣುವೆಯು ಹೋಯಿತು. ಅದರ ತರುವಾಯ ಚೀನದ ಚಕ್ರವರ್ತಿಯು ಸಮಾಧಾನವನ್ನು ಕೋರಿದನು. ಮುಂಚೆ ಕಾಂತನ್ ಪಟ್ಣದ ಒಂದೇ ರೇವಿನಲ್ಲಿ ಪರಾಯಿ ಶೀಮೆಯವರು ಪ್ರವೇಶಿಸ ಅಪ್ಪಣೆ ಇತ್ತು. ಇನ್ನು ನಡಿದ ಒಡಂಬಡಿಕೆಯ ಮೂಲಕವಾಗಿ ವರ್ತಕವಿಷಯಕ್ಕಾಗಿ ಬೇರೆ ನಾಲ್ಕು ರೇವುಗಳೂ ಸಕಲ ಶೀಮೆಗಳವರಿಗೂ ಸಾಧಾರಣವಾಗಿ ಮಾಡಲ್ಪಟ್ಟವು. ಕಾಂತನ್ ನದಿಯ ಮುಖದ್ವಾರದಲ್ಲಿರುವ (Hongkong) ಹೊಂಕೊಂಗ್ ಎಂಬ ದ್ವೀಪವೂ ಇಂಗ್ಲಿಷಿನವರಿಗೆ ಬಿಡಲ್ಪಟ್ಟಿತು. ಯುದ್ಧದ ಖರ್ಚಿಗಾಗಿ ಚೀನರಿಂದ ಹೆಚ್ಚು ಸಂಖ್ಯೆಯ ದ್ರವ್ಯವು ಸಹ ಕೊಡಲ್ಪಟ್ಟಿತು.

1846ನೇ ವರುಷದಲ್ಲಿ (United Kingdom) ಐಕ್ಯ ಪಟ್ಟ ರಾಜ್ಯದೊಳಗೆ ಘಡವಿಳಿಯುವ ಧಾನ್ಯವನ್ನು ಕುರಿತ ಪ್ರಮಾಣವು ಮಾರ್ಪಡಿಸಲ್ಪಟ್ಟಿತು. ಮುಂಚೆ ಅನ್ಯ ದೇಶದಿಂದ ಬರುವ ಧಾನ್ಯಗಳಿಗೆ ಹೆಚ್ಚಾದ

ಶೀರ್ವೆ ಇತ್ತು. ಈ ಕಾಲದಲ್ಲಿ ಆ ಸುಂಕವು ತೆಗದು ಹಾಕಲ್ಪಟ್ಟದ್ದರಿಂದ ಶೀರ್ವೆ ಇಲ್ಲದಲೇ ಭೂಮಿಯ ಯಾವ ದಿಕ್ಕಿನಿಂದಲಾದರೂ ಧಾನ್ಯ ವ್ಯಾಪಾರ ಮಾಡುವದಕ್ಕೆ ಸ್ಥಳವಾಯಿತು. ಇದು ವರೆಗೂ ಈ ಹೊಸ ಪ್ರಮಾಣವನ್ನು ಎದುರಿಸಿ ಕೊಂಡಿದ್ದ (Sir Robert Peel) ಸರ್ ರೋಬರ್ಟ್ ಪೀಲ್ ಎಂಬ ಪ್ರಾಧಾನಮಂತ್ರಿಯು ಅದು ಅತ್ಯವಶಕವಾಗಿರುವದನ್ನು ಗ್ರಹಿಸಿ, ಅದನ್ನು ಜನಪ್ರತಿನಿಧಿಸಂಘದಲ್ಲಿ ಅಂಗೀಕಾರ ಹೊಂದುವಂತೆ ಮಾಡಿದನು. ಇದರ ವಿಷಯ ಹ್ಯಾಗೆ ಮುಗಿಯುವದೋ ಎಂದು ಸಕಲ ಪ್ರಜೆಗಳೂ ಬಹು ಆಶೆಯೊಡನೆ ಕಾದು ಕೊಂಡಿದ್ದರು. (Tory) ತೋರಿ ಕಕ್ಷಿಯವರು ಇದನ್ನು ಪೂರ್ಣ ಹಗೆಯಿಂದ ಎದುರಿಸಿದರು. ಆದಾಗ್ಯೂ ಈ ಪ್ರಮಾಣವು ಅಂದಿನಿಂದ ಇದು ವರೆಗೂ ಇಂಗ್ಲಾಂಡ್ ದೇಶಕ್ಕೆ ಉಪಕಾರವಾಗಿಯೇ ಸಂಭವಿಸಿತು. ಕೆಲವರು ಅದರಿಂದ ದೇಶದ ಪ್ರಜೆಗಳಿಗೆ ಮಹಾ ನಷ್ಟ ಪ್ರಾಪ್ತಿಯಾಗುವದು ಅಂದರು. ಆದರೂ ಈ ಪ್ರಮಾಣ ನಿರ್ಪಡಿಸಲ್ಪಟ್ಟ ತರುವಾಯವೂ ಇನ್ನೂ ಯಾವ ಕೊರತೆ ಇಲ್ಲದೆ ಇಂಗ್ಲಾಂಡ್ ಶೀಮೆಗೆ ಸಂಪತ್ತೂ ಬಲವೂ ಉಂಟಾಗುತ್ತಲೇ ಬಂದದೆ.

ಮಾರಣೆ ವರುಷದಲ್ಲಿ ಐರ್ಲಾಂಡಿನಲ್ಲಿಯೂ ಸ್ಕೊತ್ಲಾಂಡಿನಲ್ಲಿಯೂ ಬೆಳೆ ಇಲ್ಲದ್ದರಿಂದ ಬಡ ಜನಗಳಿಗೆ ಆಪತ್ತು ಸಂಭವಿಸಿತು. ಇಂಗ್ಲಾಂಡಿನಲ್ಲಿಯೂ ದೊಡ್ಡ ವಿಪತ್ತು ಇತ್ತು. ಆದಾಗ್ಯೂ ಐರ್ಲಾಂಡಿನಲ್ಲಿ ಸಾಧಾರಣವಾಗಿ ಉಂಟಾಗುವ ಉರುಳಗಡ್ಡೇ ಫಲವನ್ನು ಆ ವರುಷದಲ್ಲಿ ಹುಳ ತಿಂದು ಬಿಟ್ಟದ್ದರಿಂದ ಅಲ್ಲಿ ಉಂಟಾದ ಬರವು ಮಹಾ ಕಠಿಣವಾದದ್ದು. ಹೀಗೆ ಇಕ್ಕಟ್ಟೂ ಉಪದ್ರವೂ ಉಂಟಾದ ಕಾಲದಲ್ಲಿ ಇಂಗ್ಲಾಂಡರು ತೋರಿಸಿದ ದಯಾಳವೂ ಉದಾರತ್ವವೂ ದೇಶಾಭಿಮಾನವೂ ಮಹಾ ದೊಡ್ಡದು. ಶ್ರಮೆ ಪಡುವವರಿಗಾಗಿ ಬಹು ದ್ರವ್ಯ ಕೂಡಿಸಲ್ಪಟ್ಟಿತು. ಬಡವರಿಗೆ ಬಂದ ಈ ವಿಪತ್ತನ್ನು ನಿವರ್ತಿ ಮಾಡುವ ಉದಿಶ್ಯ ಐಶ್ವರ್ಯವಂತರಲ್ಲಿ ಕೆಲವರು ತಮ್ಮ ಸಂಭ್ರಮವಾದ ಆಹಾರ ವಸ್ತ್ರಗಳನ್ನು ಬಿಟ್ಟು ತಮ್ಮಿಂದಲಾಗುವಷ್ಟು ಸಹಾಯ ಮಾಡಿದರು,

1848ನೇ ವರುಷ ಯುರೋಪು ಖಂಡದಲ್ಲಿ ನಾನಾ ಭೇದಗಳು ಉಂಟಾದ ವರುಷವಾಗಿತ್ತು. ಪಾರಿಸ್ ಪಟ್ಟಣದಲ್ಲಿ ರಾಜಾಂಗ ಭೇದವ

ಟ್ಟಿತು. ಹ್ಯಾಗಂದರೆ, ಜನರು ಕಲಹ ಮಾಡಿದ್ದರಿಂದ ಫ್ರಾನ್ಸ್ ಅರಸ ನಾದ ಲೂವಿಸ್ ಫಿಲಿಪ್ಪನೆಂಬವನು ಸಿಂಹಾಸನವನ್ನು ಕಳಕೊಂಡು, ಇಂ ಗ್ಲಾಂದಿಗೆ ಬಂದು ಶರಣು ಹೊಕ್ಕನು. ಬೇರೆ ಸ್ಥಳಗಳಲ್ಲಿಯೂ ರಾಜಾಂ ಗ ವಿಕಲ್ಪಗಳೂ ಚೇದಗಳೂ ಹುಟ್ಟಿ ನೆಲೆ ನಿಂತವು. ಎಲ್ಲೆಲ್ಲಿಯೂ ವ್ಯಾ ಪಿಸಿ ಕೊಂಡಿದ್ದ ಕಲಹಗಳ ಕಲಾವನೆಗಳ ಮಧ್ಯೆ ಇಂಗ್ಲಾಂದು ದೇಶ ಒಂ ದೇ ಕಳವಳ ಪಡದೆ ಇತ್ತು. ಕೀಳು ತರದವರಾದ (Chartists) ಚಾರ್ತಿ ಸ್ಟ್ಸ್ ಎಂಬ ಕೆಲವು ಕಲಹಕಕ್ಷಿಗಾರರು ಸ್ವಲ್ಪ ದಿವಸಗಳ ಮಟ್ಟಿಗೂ ಸಂ ಖ್ಯೆಯಲ್ಲಿ ಅಧಿಕವಾಗುತ್ತಾ ಬಂದರು. ಅವರು ದೇಶದಲ್ಲಿ ಸ್ಥಾಪಿಸ ಅ ಪೇಕ್ಷಿಸಿದ ಒಂದು ವಿಧ ವಿಪರೀತ ಏರ್ಪಾಟುಗಳುಳ್ಳ ಚಾರ್ತರ್ ಎಂಬ ಪ್ರಮಾಣದ ಹೆಸರಿನಿಂದ ಅವರು ತಮ್ಮನ್ನು ಚಾರ್ತಿಸ್ಟ್ಸ್ ಎಂದು ಹೇ ಳಿ ಕೊಂಡರು. ಆದಾಗ್ಯೂ ಈ ಕಕ್ಷಿಯಲ್ಲಿ ಮೇಲುತರದವರೂ ಪ್ರಬಲ ಶಾಲಿಗಳೂ ಒಬ್ಬರೂ ಇಲ್ಲ. ಇವರ ಅಪೇಕ್ಷೆಗಳು ಪ್ರಜೆಗಳ ಅಪೇಕ್ಷೆಗ ಳಿಗೂ ಸೌಖ್ಯಕ್ಕೂ ಹಾನಿಯಾದವುಗಳೆಂದು 1848ನೇ ಏಪ್ರಿಲ್ 10ನೇ ತಾರೀಖಿನಲ್ಲಿ ತಿಳಿಯ ಬಂತು. ಹ್ಯಾಗಂದರೆ, ಆ ದಿವಸ ಚಾರ್ತಿಸ್ಟ್ಸ್ ಎಂಬವರು ಲಂದನ್ ಪಟ್ಟಣದ ಬಳಿಯ ಒಂದಾಗಿ ಕೂಡಿದರು. ಆದಾಗ್ಯೂ ಅವರು ಮುಂಚೆ ನೆನಸಿದ ಅಷ್ಟು ದೊಡ್ಡ ಗುಂಪು ಕೂಡಲಿಲ್ಲ. ಅದರ ಮೇಲೆ ತಮ್ಮ ಚಾರ್ತರ್ ಎಂಬುವ ಏರ್ಪಾಟುಗಳನ್ನು ನೆಲೆಗೊಳಿಸ ಪ ಟ್ಟಣದ ರಾಜಬೀದಿಗಳಲ್ಲಿ ಒಡ್ಡೋಲಗವಾಗಿ ಹೋಗಿ ಪಾರ್ಲಿಮೆಂಟಿನವ ರಿಗೆ ಮನುವರ್ಜಿ ಕೊಡ ಬೇಕೆಂದು ತಾವು ಕೋರಿ ಇದ್ದದ್ದಾಗಿ ತಿಳಿಸಿದರು. ಆ ಪ್ರಕಾರ ಬೀದಿಗಳಲ್ಲಿ ಹೋಗಿ ಯಾವದೊಂದೂ ವ್ಯಾಜ್ಯ ಸಂಚವಿಸದೆ ಇರುವಂತೆ ಅವರನ್ನು ರಾಜಧಾನಿಯೊಳಗೆ ಪ್ರವೇಶಿಸ ಬಿಡ ಬಾರದೆಂದೂ ಆಡಂಬರವಿಲ್ಲದೆ ಅಣಕವಾಗಿ ಅವರು ತಮ್ಮ ಮನವಿಯನ್ನು ಕೊಡ ಬೇ ಕೆಂದೂ, ಒಂದು ವೇಳೆ ಅವರು ತಮ್ಮ ಕೋರಿಕೆಯ ಪ್ರಕಾರ ಮಾಡ ತ್ರ ಣೀಕರಿಸಿದರೆ, ಅವರನ್ನು ಸೈನ್ಯಗಳಿಂದ ತಡೆಯ ಬೇಕೆಂದೂ ಧೊರೆತನದ ವರು ತೀರ್ಮಾನಿಸಿದರು. ಸಮಾಧಾನವನ್ನು ಕಾಪಾಡ ಬಾಧ್ಯ ಪಟ್ಟಿದ್ದ ಧೊರೆಗಳು, ಧನವಂತರು ಪೋಲೀಸು ಅಧಿಕಾರಿಗಳು ಇವರ ವಶವಾಗಿ ರಾಜಧಾನಿಯನ್ನು ಕಾಯುವದಕ್ಕೆ ಇದ್ದ ಯತ್ನಗಳೆಲ್ಲಾ ಕೊಡಲ್ಪಟ್ಟವು.

ಆ ಸಮಯಕ್ಕೆ ಸಾವಿರ ಸಾವಿರ ಯೋಗ್ಯರಾದ ಮನುಷ್ಯರು ತತ್ಕಾಲಕ್ಕೆ ಶೇವಕರಾಗಿ ನಿಂತು ದೇಶಪ್ರಮಾಣದ ಪ್ರಕಾರ ನಡಿಯದವರನ್ನು ನಮ್ಮಿಂದಲಾದ ಮಟ್ಟಿಗೂ ಅಡ್ಡಗಟ್ಟಿ ತಡೆಯುವೆವು ಎಂದು ಪ್ರಮಾಣ ಮಾಡಿಕೊಂಡು, ರಾತ್ರಿ ಹಗಲೂ ಬೀದಿಗಳ ಮಧ್ಯದಲ್ಲಿ ತಿರುಗಾಡುತ್ತಿದ್ದರು. ಅವಸರಕ್ಕೆ ಅನುಕೂಲಿಸುವಂತೆ, ಚಾರ್ಟಿಸ್ಟರು ಥೇಮ್ಸ್ ನದಿಯನ್ನು ಯಾವ ಶೇತುವೆಗಳ ಮಾರ್ಗವಾಗಿ ದಾಟುವರೆಂದು ಕಾಣಲ್ಪಟ್ಟಿತೋ ಆ ಶೇತುವೆಗಳ ಬಳಿಯು ಇದ್ದ ಮನೆಗಳಲ್ಲೆಲ್ಲಾ ಆಯುಧಪಾಣಿಗಳಾದ ರಾಣುವೆಯವರು ತುಂಬಿ ಇದ್ದರು. ಆದಾಗ್ಯೂ ಒಬ್ಬ ಶಿಫಾಯಿ ಆದರೂ ಬೀದಿಗಳಲ್ಲಿ ತಲೆ ತೋರಿಸಲಿಲ್ಲ. ಹೀಗೆ ಆ ದಿವಸ ರಾಜಧಾನಿಯಲ್ಲಿದ್ದ ಶಾಂತಿಯನ್ನು ಕೆಡಿಸ ಯಾವದೂ ಸಂಭವಿಸಲಿಲ್ಲಿ. ಚಾರ್ಟಿಸ್ಟರೆಲ್ಲರೂ ನಿಶ್ಶಬ್ದವಾಗಿ ಚದರಿ ಹೋದರು. (Paris) ಪಾರಿಸ್, (Vienna) ವಿಯೆನ್ನಾ (Berlin) ಬೆರ್ಲಿನ್ ಎಂಬ ಪರಾಯಿ ರಾಜಧಾನಿಗಳಲ್ಲೆಲ್ಲಾ ಜಗಳವೂ ವಾಗ್ವಾದವೂ ಕಲಹವೂ ಆಗಿರುವಲ್ಲಿ ಲಂದನ್ ಪಟ್ಟದಲ್ಲಿ ಮಾತ್ರ ರಾಜಭಕ್ತಿಯೂ ಶಾಂತಿಯೂ ವೃದ್ಧಿಯಾಗಿತ್ತು.

1851ನೇ ವರುಷ (Prince Albert) ಅಲ್ಬೆರ್ಟ್ ಎಂಬ ಪ್ರಭುವಿನ ಅಪೇಕ್ಷೆಯಿಂದಲೂ ಯತ್ನದಿಂದಲೂ ಮಾಡಲ್ಪಟ್ಟ ಒಂದು ವಿನೋದವು ಮುಗಿಯಿತು. ಏನಂದರೆ, ಭೂಮಿಯಲ್ಲಿ ಬದುಕುವ ಸಮಸ್ತ ಜಾತಿಗಳ ಕೈಕೆಲಸಗಳಾದ ಚೀರಣಿ ಕೆಲಸಗಳು, ಯಂತ್ರಗಳು, ಸಾಮಾನುಗಳು ಮುಂತಾದ ಬುದ್ಧಿಸೂಕ್ಷ್ಮದಿಂದ ಮಾಡಲ್ಪಡುವ ಸಕಲ ವಿಚಿತ್ರಗಳೂ, ಲಂದನ್ ಪಟ್ಟದಲ್ಲಿ (Hydepark) ಹೈದ್‌ಪಾರ್ಕ್ ಎಂಬ ಸ್ಥಳದಲ್ಲಿ ಸಕಲರ ನೋಟಕ್ಕಾಗಿಯೂ ಶೇರಿಸಿ ಇಡಲ್ಪಟ್ಟವು. ಅನ್ಯ ದೇಶಗಳಿಂದ ಅದನ್ನು ನೋಡ ಬಂದವರು ಸಾವಿರ ಸಾವಿರ ಮಂದಿಯಾಗಿದ್ದರು. ಅನೇಕ ವಾರಗಳ ಮಟ್ಟಿಗೂ ಲಂದನ್ ಪಟ್ಟದ ಬೀದಿಗಳಲ್ಲೆಲ್ಲಾ ಅನ್ಯರ ಸಂಚಾರವಾಗಿತ್ತು. ನಾನಾ ಶೀಮೆಗಳವರು ಇರ ಬೇಕಾದ ಐಕ್ಯಕ್ಕೂ, ಭೂಮಿಯಲ್ಲೆಲ್ಲಾ ಇರ ಬೇಕೆಂದು ನಾವು ಕೋರುವ ಆ ಶೇರಿಕೆಗೂ ಆ ಪ್ರದರ್ಶಕಶಾಲೆಯನ್ನು ನೋಡ ಬಂದವರ ಬರುವಿಕೆಯೂ ಹೋಗುವಿಕೆಯೂ ಒಳ್ಳೇ ವಣಾದ್ರಿಯಾಗಿತ್ತು.

ಬಹು ದಿವಸಗಳಿಂದ ಯೂರೋಪಿನಲ್ಲಿ ವೃದ್ಧಿಯಾದ ಸಮಾಧಾನವು ಭಂಗವಾಗುವದಕ್ಕೆ ಪ್ರಾರಂಭವಾಯಿತು. ಹ್ಯಾಗಂದರೆ, ರುಸ್ಯ ಚಕ್ರವರ್ತಿಯಾದ (Czar) ತ್ಝಾರ್ ಎಂಬವನ ರಾಜ್ಯಭಾರವು ಗತಿಸಿದ ಐವತ್ತು ವರುಷಗಳಲ್ಲಿ ಬಲದಲ್ಲಿಯೂ ವಿಸ್ತಾರದಲ್ಲಿಯೂ, ಶ್ರೇಷ್ಠತ್ವದಲ್ಲಿಯೂ ವೃದ್ಧಿಯಾಗುತ್ತಾ ಬಂದದರ ಸಹಿತವಾಗಿ ಆ ಚಕ್ರವರ್ತಿಯು ತುರ್ಕಿ ಶೀಮೆಯನ್ನು ಆಕ್ರಮಿಸಿ ಕೊಳ್ಳ ಮನಸ್ಸಾಗಿದ್ದನು. ಅದರ ಮೇಲೆ ಇಂಗ್ಲಿಷ್ ಧೊರೆತನದವರೂ ಫ್ರಾನ್ಸ್ ಧೊರೆತನದವರೂ ಶೇರಿ, ಅವನಿಗೆ ಖಂಡನೆಯ ನಿರೂಪಗಳನ್ನು ಬರೆದಿದ್ದಾಗ್ಯೂ, ಅವನು ಕೇಳದೆ, ತುರ್ಕಿ ರಾಜ್ಯದಲ್ಲಿ ಉತ್ತರ ಭಾಗವಾದ ಮೊಲ್ಡೇವಿಯಾ, ವಾಲೇಷಿಯಾ ಎಂಬ ಶೀಮೆಗಳನ್ನು ಹಿಡಿದು ಕೊಳ್ಳ ರಾಣುವೆಯನ್ನು ಕಳುಹಿಸಿದನು. (Danube) ಡಾನ್ಯೂಬ್ ನದಿಯ ತೀರದಲ್ಲಿ ತುರುಕರಿಗೂ ರುಸ್ಯರಿಗೂ ನಡೆದ ನಾನಾ ಯುದ್ಧಗಳಲ್ಲಿ ತುರುಕರು ರುಸ್ಯರನ್ನು ಸೋಲಿಸಿದರು. ಆದಾಗ್ಯೂ ರುಸ್ಯ ರಾಜ್ಯಕ್ಕೆ ಇರುವ ಭಯಂಕರವಾದ ರಾಣುವೆಯೆಲ್ಲಾ ಅಧಿಕ ಸೈನ್ಯದ ಬಲವಿಲ್ಲದಂಥ ನೆರೆ ಶೀಮೆಯ ಸಂಗಡ ಕಾದುವಾಗ ಆ ತುರ್ಕಿ ಶೀಮೆಯು ಕೆಳಗೆ ಬಿದ್ದು ಕಡೆಯಲ್ಲಿ ಆಧಾರವಿಲ್ಲದೆ ರುಸ್ಯ ಚಕ್ರವರ್ತಿಗೆ ಶೇರಿದ ಒಂದು ಸಣ್ಣ ಶೀಮೆಯಾಗುವದೆಂದು ಭಯ ಪಡುವದಕ್ಕೆ ಹೇತುವೆ ಇತ್ತು. ಆದದರಿಂದ ರುಸ್ಯ ಚಕ್ರವರ್ತಿಯ ಅತ್ಯಾಶೆಯನ್ನು ಅಭ್ಯಂತರಿಸಲೂ, ತುರ್ಕಿ ರಾಜ್ಯಭಾರವನ್ನು ನಿಲ ಹಿಡಿಯಲೂ ಕೋರಿ, ಇಂಗ್ಲಾಂಡ್ ರಾಜ್ಯವೂ ಫ್ರಾನ್ಸ್ ರಾಜ್ಯವೂ ಒಂದು ಒಡಂಬಡಿಕೆ ಮಾಡಿ ಕೊಂಡವು. ತರುವಾಯ ಸಾರ್ಡಿನಿಯಾ ಅರಸನೂ ಆ ಒಡಂಬಡಿಕೆಗೆ ಸಮ್ಮತಿಸಿದನು. ಪ್ರುಸ್ಯ ಅರಸನೂ, ಆಸ್ಟ್ರಿಯಾ ಚಕ್ರವರ್ತಿಯೂ ಉಭಯ ಕಕ್ಷಿಗಳಲ್ಲಿಯೂ ಶೇರದೆ ನಿಂತರು.

ಸಹಾಯಸೈನ್ಯಗಳಾದ ಫ್ರಾನ್ಸ್ ರಾಣುವೆಯೂ ಇಂಗ್ಲಿಷ್ ರಾಣುವೆಯೂ ತುರ್ಕಿ ಶೀಮೆಯಲ್ಲಿ (Constantinople) ಕೋನ್ಸ್ಟಾಂಟಿನೋಪಲ್ ಪಟ್ಣಕ್ಕೆ ದಕ್ಷಿಣ ಕಡೆ (Galipoli) ಗಾಲಿಪ್ಪೊಲಿ ಎಂಬ ಸ್ಥಳದಲ್ಲಿ ಮೊದಲು ಥಡವಿಳಿದರು. ಅದರ ತರುವಾಯ ಅವರು (Varna) ವಾರ್ನಾ ಪಟ್ಣಕ್ಕೆ ಹೋಗಲಾಗಿ ಅವರನ್ನು ಕಂಡ ತುರುಕರು ಧೈರ್ಯ

ಹೊಂದಿದ್ದರಿಂದ, ಅದನ್ನು ದಾಟಿ ರಾಜಧಾನಿಗೆ ಹೋಗ ಎಣಿಸಿ ಕೊಂಡಿದ್ದ ರುಸ್ಯ ರಾಣುವೆಯು ತಡೆಯಲ್ಪಟ್ಟಿತು. ಆ ಸ್ಥಳದಲ್ಲಿ ರುಸ್ಯರಿಗೆ ಇದ್ದ ರೇವುಗಳಲ್ಲಿ ವಿಸ್ತಾರವೂ ಮುಖ್ಯವೂ ಆದ (Crimea) ಕ್ರಿಮಿಯಾದಲ್ಲಿ ಥಡವಿಳಿದು (Sebastopol) ಸೆಬಸ್ತಪೊಲ್ ಪಟ್ಟಣವನ್ನು ಹೊಡಿಯ ಬೇಕಾದ ಯತ್ನಗಳು ದಿಟ್ಟ ಮಾಡಲ್ಪಟ್ಟವು. ಏನೂ ತಡೆ ಇಲ್ಲಧೆ ಅವರ ದಂಡುಗಳು ಅಲ್ಲಿ ಥಡವಿಳಿದವು. ಆದಾಗ್ಯೂ ಅವರು ಸೆಬಸ್ತಪೊಲ್ ಪಟ್ಟಣದ ಕಡೆಗೆ ನಡಿಯುತ್ತಿರುವಲ್ಲಿ (Alma) ಆಲ್ಮಾ ನದಿಯ ಎತ್ತರವಾದ ಥಡದ ಮೇಲೆ ಒತ್ತಾಗಿ ತುಂಬಿದ್ದ ರುಸ್ಯದ ರಾಣುವೆಯು ಅಡ್ಡ ಬೀಳಲಾಗಿ ಆ ಸ್ಥಳದಲ್ಲಿ ಮಹಾ ಬಲವಾದಂಥಾ ಉಗ್ರವಾದಂಥಾ ಯುದ್ಧ ನಡೆಯಿತು. ಮುಂಚೆ ಮುಖಕ್ಕೆ ಮುಖ ಎದುರಾಗಿ ನಿಂತು ಎಷ್ಟು ಧೈರ್ಯವಾಗಿ ಯುದ್ಧ ಮಾಡಿ ಇದ್ದರೋ, ಅಷ್ಟು ಧೈರ್ಯವಾಗಿ ಫ್ರಾನ್ಸರೂ ಇಂಗ್ಲಿಷರೂ ಈಗ ಒಬ್ಬರಿಗೆ ಒಬ್ಬರು ಪಕ್ಕದಲ್ಲಿ ನಿಂತು ಕೊಂಡು ಉಭಯತ್ರರಿಗೂ ಶತ್ರುಗಳಾಗಿದ್ದ ಸೈನ್ಯದ ಸಂಗಡ ಯುದ್ಧ ಮಾಡಿದ ಶೌರ್ಯದಿಂದ ರುಸ್ಯರು ಸೋತು ಹೋದರು.

(Sebastopol) ಸೆಬಸ್ತಪೊಲ್ ಪಟ್ಟಣದ ಉತ್ತರ ಕಡೆಗೆ ನೆಟ್ಟಗೆ ಹೋಗುವದನ್ನು ಬಿಟ್ಟು, ಅದಕ್ಕಿಂತ ಬಲವಾದ ಕೋಟೆ ಬೇರೊಂದಿಲ್ಲವೆಂದು ಉದ್ದೇಶಿಸಲ್ಪಟ್ಟಿದ್ದ ದಕ್ಷಿಣ ಭಾಗದ ಕಡೆ ಹೋದರು. ಆ ಸಹಾಯಸೈನ್ಯಗಳು ಬಾಲಕ್ಲೇವಾ ರೇವನ್ನು ಹಿಡಿದು ಕೊಂಡು ಪಟ್ಟಣಕ್ಕೆದುರಾಗಿ ದಂಡಿಳಿದರು. ಸೆಬಸ್ತಪೊಲ್ ಪಟ್ಟಣದ ಮುತ್ತಿಗೆಯೇ ತತ್ಕಾಲದ ಎಲ್ಲಾ ಮುತ್ತಿಗೆಗಳಿಗಿಂತ ಅಧಿಕ ಮುಖ್ಯವೂ ಆಶ್ಚರ್ಯವೂ ಆದದ್ದು. ಆ ಪಟ್ಟಣವು ಉತ್ತರ ಕಡೆ ಪೂರ್ವ ಕಡೆಗಳಲ್ಲಿ ಬಹು ಸ್ಥಿರವಾದ ಕೋಟೆಗಳಿಂದ ಭದ್ರ ಮಾಡಲ್ಪಟ್ಟಿತು. ದಕ್ಷಿಣ ಕಡೆಯಲ್ಲಿಯೂ ರುಸ್ಯದ ಇಂಜನೀರುಗಳಲ್ಲಿ ಒಬ್ಬನಾದ (Todleben) ತೊಡ್ಲಿಬೆನ್ ಎಂಬುವ ದಳಕರ್ತನು ಅನೇಕ ನೂತನವಾದ ಅಲಂಗಗಳನ್ನು ಬಹು ಗಾತ್ರವಾಗಿ ಕೆಲವು ದಿವಸಗಳೊಳಗಾಗಿಯೇ ಕಟ್ಟಿಸಿದನು. ಈ ಮುತ್ತಿಗೆಯು ಹನ್ನೊಂದು ತಿಂಗಳ ಮಟ್ಟಿಗೂ ಮುಗಿಯಲಿಲ್ಲ. ಅದನ್ನು ಕಾದು ಕೊಂಡ ಕಾಯುವಿಕೆಯಲ್ಲಿ ರುಸ್ಯರು ಬಹು ಸಾಮರ್ಥ್ಯವನ್ನೂ ಧೈರ್ಯವನ್ನೂ ತೋರಿಸಿ

ದರು. ಆದಾಗ್ಯೂ ಸಹಾಯಸೈನ್ಯಗಳು ಒಂದೇ ಪಟ್ಟಾಗಿ ನಿಂತು ಮಾಡಿದ ಯತ್ನಗಳೇ ಕಡೆಯಲ್ಲಿ ಅನುಕೂಲವಾದವು. ಕ್ರಿಮಿಯಾದಲ್ಲಿ ಬಂದ ತಾಳ ಕೂಡದ ಶೀತಕಾಲವೂ, ತಮ್ಮ ದಂಡಿನಲ್ಲಿ ಬಿದ್ದು ಸತ್ತು ಹೋದ ಜನರ ದೊಡ್ಡ ಸಂಖ್ಯೆಯೂ, ಮುತ್ತಿಗೆಯ ದೀರ್ಘ ಕಾಲವೂ, ಒಂದೂ ಅವರ ಮನಸ್ಸನ್ನು ಹಿಂತೆಗಿಯ ಮಾಡಲಿಲ್ಲ. ಇಷ್ಟು ಕಾಲ ಹೋರಾಟ ಮಾಡಿದ ತರುವಾಯ ಸೆಬಸ್ತ್ರಪೋಲಿನ ದಕ್ಷಿಣ ಭಾಗವು ಹಿಡಿಯಲ್ಪಟ್ಟಿತು. ಅದರ ತರುವಾಯ ಅಲ್ಲಿದ್ದ ರುಸ್ಯರು ಸೆಬಸ್ತ್ರಪೋಲ್ ಕಟ್ಟಲ್ಪಟ್ಟಿರುವ ಸಮುದ್ರದ ಕೊನೆಯನ್ನು ಅವಸರ ಅವಸರವಾಗಿ ಮಾಡಿದ ದೋಣಿಗಳ ದಾರಿಯಿಂದ ದಾಟಿ, ಉತ್ತರ ಕೋಟೆಗಳಲ್ಲಿ ಪ್ರವೇಶಿಸಿದರು.

ಮುತ್ತಿಗೆ ಹಾಕಿರುವಲ್ಲಿ ಮೂರು ಯುದ್ಧಗಳು ನಡೆದವು. ಅವುಗಳಲ್ಲೆಲ್ಲಾ ರುಸ್ಯರೇ ಮೊದಲು ಎದುರಿಸಿದವರು. ಮೊದಲನೇ ಯುದ್ಧ ಬಾಲಕ್ಲೇವಾ ಎಂಬ ಊರಿನ ಬಳಿಯ ನಡಿಯಿತು. ಅದರಲ್ಲಿ ಆ ವರುಷದ ಯುದ್ಧದಲ್ಲೆಲ್ಲಾ ಅತಿ ಮುಖ್ಯವಾದ ಒಂದು ಕಾರ್ಯ ಸಂಭವಿಸಿತು. ಏನಂದರೆ, ಹುಟ್ಟಿದ ಒಂದು ಅಪ್ಪಣೆಯನ್ನು ತಪ್ಪರ್ಥವಾಗಿ ಎಣಿಸಿ ಕೊಂಡು ಆರುನೂರು ಇಂಗ್ಲಿಷ್ ರಾಹುತರು, ದಂಟಳಿದಿದ್ದ ರುಸ್ಯರ ಪೂರ್ಣ ರಾಣುವೆಯ ಮೇಲೆ ಹೋಗಿ ಬಿದ್ದರು. ಇಂಥಾ ತ್ರಾಣೀಕರವಾದ ಕೆಲಸ ಉಪಯೋಗವಿಲ್ಲದ್ದೆಂದೂ ನಷ್ಟವಾದದ್ದೆಂದೂ ಹೇಳಬಹುದು. ಅವರು ಹೋಗಿ, ರುಸ್ಯ ಫಿರಂಗಿಯವರು ಫಿರಂಗಿಗಳನ್ನು ಬಿಟ್ಟು ಓಡುವಂತೆ ಮಾಡಿದಾಗ್ಯೂ, ಸಂಖ್ಯೆಯಲ್ಲಿ ಎದುರಿಗಳ ಮುಂದೆ ಬಹು ಸ್ವಲ್ಪವಾಗಿದ್ದದರಿಂದ, ಹೋದವರಲ್ಲಿ ಸಹ ಕೆಲವರು ಮಡಿದು ಹೋದ ತರುವಾಯ, ಉಳಿದವರು ಧೈರ್ಯ ತಪ್ಪದೆ ತಿರುಗಿ ಕೊಂಡು ಬಂದರು. ಯುದ್ಧಕ್ರಮದಲ್ಲಿ ಅವರು ಮಾಡಿದ ಯುದ್ಧ ತಪ್ಪಾಗಿದ್ದರೂ ಆ ಯುದ್ಧದಲ್ಲಿ ಅದು ಅತಿಶಯಿಸ ತಕ್ಕ ಮುಖ್ಯ ಸಂಗತಿಯೇ.

ನವಂಬರ್ ೫ನೇ ತಾರೀಖಿನಲ್ಲಿ ರುಸ್ಯರು ಬಹು ಹೇರಾಳವಾದ ಸೈನ್ಯವನ್ನು ತೆಗದು ಕೊಂಡು ಬಂದು ಇಂಗ್ಲಿಷ್ ರಾಣುವೆಯನ್ನು ಓಡಿಸ ಯತ್ನಯಿಸಿದರು. (Inkerman) ಇಂಕರ್ಮಾನ್ ಎಂಬಲ್ಲಿ ನಡೆದ ಈ ಯುದ್ಧವು ಪೂರ್ಣವಾಗಿ ಶಿಫಾಯಿಗಳ ಯುದ್ಧವೆಂದು ಹೇಳ ಬಹುದು,

ಹ್ಯಾಗಂದರೆ, ಆ ದಿವಸದಲ್ಲಿ ಆಕಾಶವನ್ನು ಮುಚ್ಚಿ ಕೊಂಡಿದ್ದ ಕಾವಳದಿಂದ ಎದುರಿಗಳು ಒಬ್ಬರನ್ನೊಬ್ಬರು ಕಾಣುವದು ಕಷ್ಟವಾಯಿತು. ಅದರಲ್ಲಿ ಯುದ್ಧೋಪಾಯಗಳು ನಡಿಯಲಿಲ್ಲ. ದಳಕರ್ತರ ಯುದ್ಧತಂತ್ರಗಳೂ ಸಲ್ಲಲಿಲ್ಲ. ಅದು ಮುಖಾಮುಖವಾಗಿ ನಿಂತು ಬಲಾತ್ಕಾರದಿಂದ ಮಾಡಿದ ಯುದ್ಧವೇ. 7000 ಇಂಗ್ಲಿಷರು ತಮಗಿಂತ ಐದಷ್ಟಧಿಕವಾದ ರುಸ್ಯರನ್ನು ಬಿಡದೆ ಅಡಗಿಸಿ ಇಟ್ಟು ಕೊಂಡಿದ್ದರು. ಅದರ ಮೇಲೆ ಫ್ರಾನ್ಸರ ಸಹಾಯಸೈನ್ಯಗಳು ಬಂದು ಶೇರಿ ಕೊಂಡು ಎದುರಿಗಳನ್ನು ಶಿರಿಗಿ ಪಟ್ಟಕ್ಕೆ ಓಡುವಂತೆ ಹೊಡೆದರು.

ನಾವು ಹೇಳಿದ ಮೂರನೇ ಯುದ್ಧ (Tchernaya) ಶ್ಚರ್ನೇಯಾ ನದಿಯ ಮೇಲಣ (Traktir) ತ್ರಾಕ್ತಿರ್ ಶೇತುವೆಯ ಮೇಲೆ ನಡೆಯಿತು. ಅದರಲ್ಲಿ ಫ್ರಾನ್ಸರೂ ಸಾರ್ದಿನಿಯರೂ ಮಾತ್ರ ಯುದ್ಧ ಮಾಡಿದವರು. ಇಂಗ್ಲಿಷರು ಸಹಾಯವಾಗಿ ಹೋಗುವದಕ್ಕೆ ಮುಂಚೆ ಮುಗಿದು ಹೋಯಿತು.

ಈ ಯುದ್ಧ ನಡಿಯುವ ಕಾಲದಲ್ಲಿ ಬಾಲ್ತಿಕ್ ಕಡಲಲ್ಲಿರುವ ರುಸ್ಯರ ರೇವುಗಳನ್ನು ಮುತ್ತಿಗೆ ಹಾಕ ಸಹಾಯಸೈನ್ಯಗಳಾದ ನಾವಿಕಸೈನ್ಯವು ಹೋಯಿತು. ಆದಾಗ್ಯೂ ನಾವಿಕಸೈನ್ಯಕ್ಕೆ ಅವು ಕದಲದ ಕೋಟೆಗಳಾದದರಿಂದ ಅದರಲ್ಲಿ ಒಂದೂ ಸಿದ್ಧಿಸಲಿಲ್ಲ. ಎದುರಿಸಿ ಕೊಂಡಿದ್ದ ಶೀಮೆಗಳಿಗೆಲ್ಲಾ 1856ನೇ ವರುಷ ಏಪ್ರಿಲ್ ತಿಂಗಳಲ್ಲಿ ಪಾರಿಸ್ ಪಟ್ಟದಲ್ಲಿ ಸಮಾಧಾನದ ಒಡಂಬಡಿಕೆ ಉಂಟಾಯಿತು. ಈ ಯುದ್ಧ ನಡಿಯುವ ಕಾಲದಲ್ಲಿ ರುಸ್ಯದ ಚಕ್ರವರ್ತಿಯು ಸತ್ತು ಹೋಗಲಾಗಿ ಅವನ ತರುವಾಯ ಚಕ್ರಾಧಿಪತಿಯಾದ ಅವನ ಮಗನಾದ ಅಲೆಕ್ಸಾಂದರನೆಂಬವನು, ಮುಂಚೆ ಪ್ರಿನ್ಸಿಪಾಲಿಟಿಪ್ ಎಂಬ ನಾಡುಗಳ ಮೇಲೆ ತಮಗೆ ಹಕ್ಕು ಉಂಟೆಂದು ರುಸ್ಯರು ಸಾಧಿಸಿದ ಸ್ವತಂತ್ರವನ್ನು ಬಿಟ್ಟು ಬಿಟ್ಟು ಸಹಾಯಸೈನ್ಯಗಳ ಕೋರಿಕೆಗಳಿಗೆ ಸಂಮತಿಸಿದನು. ಈ ಪ್ರಕಾರ ಇಷ್ಟು ತಿಂಗಳಾಗ್ಯಿ ಯೂರೋಪಿನಲ್ಲಿ ಸಮಾಧಾನವನ್ನು ಕೆಡಿಸಿ ಕೊಂಡಿದ್ಧ ಹೋರಾಟವು ಕಡೆಯಲ್ಲಿ ಮುಗಿಯಿತು.

## ಸಂಧಿ 25. ಈ ಚರಿತ್ರೆಯ ಅಂತ್ಯ.

ಪಾರಿಸ್ ಪಟ್ಣದಲ್ಲಿ ಉಂಟಾದ ಸಮಾಧಾನದ ಒಡಂಬಡಿಕೆಯಲ್ಲಿ ನಾವು ಬರೆಯುವ ಈ ಚರಿತ್ರವನ್ನು ಮುಗಿಸುತ್ತೇವೆ. ಆ ಕಾಲದಲ್ಲಿ ಇಂಗ್ಲಿಷ್ ಧೊರೆತನದವರಿಗಿದ್ದ ಬಲವೂ ದ್ರವ್ಯವೂ ಗತಿಸಿದ ಯುದ್ಧದ ಉದ್ದಿಶ್ಯ ಕೊರತೆ ಪಡದೆ ಯುದ್ಧ ಪ್ರಾರಂಭಿಸುವದಕ್ಕೆ ಮುಂಚಿದ್ದದಕ್ಕಿಂತ ಅಧಿಕವಾಗಿಯೂ ಅನುಕೂಲವಾಯೂ ಇತ್ತು. ತಮ್ಮ ಎದುರಿಗಳಿಗಿಂತಲೂ ಸಹಾಯಕರಾದ ಫ್ರಾನ್ಸರಿಗಿಂತಲೂ, ಯುದ್ಧ ತೊಡಗುವದಕ್ಕೆ ತಕ್ಕ ಕಾರ್ಯಗಳಲ್ಲಿ ಅಧಿಕ ಯತ್ನವಾಗಿದ್ದರು. ಯುದ್ಧಕಾಲದಲ್ಲಾದರೂ ಸಮಾಧಾನಕಾಲದಲ್ಲಾದರೂ ಇಂಗ್ಲಾಂದ್ ಶೀಮೆಗೆ ಬಲ ವೃದ್ಧಿಯಾಗುವದೇ ಹೊರ್ತು ಬೇರೆ ಅಲ್ಲ. ಭೂಮಿಯಲ್ಲಿ ಮಹಾ ಕೀಳ್ತರವಾದಂಥಾ ನೀಚವಾದಂಥಾ ಪ್ರಜೆಗಳಿಗೆ ಸಮಾನವಾಗಿ ಮಹಾ ಬ್ರಿತನ್ ಶೀಮೆಯ ಮನುಷ್ಯರು ಬದುಕುತ್ತಾ ಇದ್ದ ಕಾಲದಿಂದ ಈ ಚರಿತ್ರೆಯನ್ನು ಆರಂಭಿಸಿದೆವು. ಆ ಕಾಲದಲ್ಲಿದ್ದ ಆ ಶೀಮೆಯ ಸ್ಥಿತಿಯನ್ನೂ ಈ ಕಾಲದಲ್ಲಿರುವ ಸ್ಥಿತಿಯನ್ನೂ ಸರಿ ನೋಡುವಲ್ಲಿ ಮಹಾ ವ್ಯತ್ಯಾಸವು ಕಾಣುವದಲ್ಲವೇ. ಇಂಗ್ಲಾಂದ್ ದೇಶಚರಿತ್ರೆಯು ಬಹು ವೃದ್ಧಿಯಾದ ದೇಶಸ್ಥರ ಚರಿತ್ರೆಯೇ ಹೊರ್ತು ಬೇರೆ ಅಲ್ಲ. ಒಂದೊಂದು ತಲಾಂತ್ರದಲ್ಲಿಯೂ ಗತಿಸಿದ ತಲಾಂತ್ರದವುಗಳಿಗಿಂತ ನಾನಾ ಕಾರ್ಯಗಳಲ್ಲಿಯೂ ಅಧಿಕವಾದ ವೃದ್ಧಿಯು ಕಾಣುತ್ತದೆ. ಪದ್ಧತಿಗಳಲ್ಲಿಯೂ, ಕ್ರಮಗಳಲ್ಲಿಯೂ, ವಿದ್ಯದಲ್ಲಿಯೂ, ಬುದ್ಧಿಯಲ್ಲಿಯೂ, ಮುಖ್ಯವಾಗಿ ಮತಾಚಾರದಲ್ಲಿಯೂ ಒಳ್ಳೇ ವೃದ್ಧಿಯೇ ತೋರುತ್ತದೆ.

ಇಂಗ್ಲಿಷಿನವರು ಸುಖವಾಗಿ ಬದುಕುವದಕ್ಕೆ ಮುಖ್ಯವಾದ ಒಂದು ಕಾರಣ ಯಾವದಂದರೆ, ಅವರೊಳಗೆ ಇರುವ ನಾನಾ ಅಂತಸ್ತುಗಳುಳ್ಳವರು ಬಹು ಅತಿಶಯವಾಗಿ ಐಕ್ಯ ಪಡುವದರಿಂದ ಶ್ರೇಷ್ಠರೂ ಕೀಳರೂ ಉಂಟಾಗಿದ್ದಾಗ್ಯೂ ಒಳ್ಳೇ ಐಕ್ಯ ಉಂಟು. ಭೇದವಾಗುವದಕ್ಕೆ ಹೇತುವೆಯಾದ ಯಾವ ಕಟ್ಟುವಾಟೂ ಇಲ್ಲ. ಇಂಗ್ಲಾಂದಿನಲ್ಲಿ ಜಾತಿಭೇದವಿಲ್ಲವಷ್ಟೆ. ಆದದರಿಂದ ಸಮಸ್ತ ಕಾರ್ಯವೃದ್ಧಿಗೂ ಜಾತಿಭೇದದಿಂದ ಉಂಟಾಗುವ ವಿಘ್ನಗಳು ಅಲ್ಲಿ ಒಂದೂ ಇಲ್ಲ. ಮತ್ತು ಮ್ಹಾಮೂಲು ಎಂಬ ಪದ್ಧತಿಯನ್ನು ಕುರಿತ ವಿಡುವಾದಗಳೂ ಇಲ್ಲ. ಆದದರಿಂದ ನಾಗ

ರೀಕವೃದ್ಧಿಗೂ ಆ ಪದ್ಧತಿಯಿಂದ ಪ್ರಾಪ್ತಿಸುವ ಅಭ್ಯಂತರ ಒಂದೂ ಇಲ್ಲಿ. ಈ ಕಾರಣಗಳಿಂದಲೂ ಪ್ರಜೆಗಳ ಸಾಧನೆಗಳಿಂದಲೂ ಯತ್ನಗಳಿಂದಲೂ ಜಾಗ್ರತೆಯಿಂದಲೂ ಇಂಗ್ಲಾಂಡ್ ಶೀಮೆಯು ಲೋಕದಲ್ಲಿ ಮೊದಲನೇ ಅಂತಸ್ತನ್ನು ಹೊಂದಿ ಇರುತ್ತದೆ. ಆದಾಗ್ಯೂ ಇವುಗಳಿಗೆಲ್ಲಾ ಮೂಲಕಾರಣವು ಏಕ ಚಕ್ರಾಧಿಪತಿಯಾಗಿಯೂ ಮಹಾ ಪ್ರಭುವಾಗಿಯೂ ಇರುವ ದೇವರ ಕೃಪಾಕಟಾಕ್ಷವೇ. ಆ ಕರುಣಾಸಾಗರನ ಕೃಪೆ ಒಂದರಿಂದಲೇ ಇಂಗ್ಲಾಂಡ್ ನಿವಾಸಿಗಳು ತಾವು ಹೊಂದಿದ ಸಮಸ್ತ ಭಾಗ್ಯಗಳನ್ನು ಅನುಭವಿಸುತ್ತಾರೆ. ಅದರ ಹೊರ್ತು ಬೇರೊಂದರಿಂದ ಅನುಕೂಲವಾಗಲಾರದು. ಆತನ ಅಪರಿಮಿತ ಕೃಪೆಯಿಂದ ಇಂಗ್ಲಾಂಡ್ ಶೀಮೆಗೆ ಬಂದ ಪದವಿಯೆಲ್ಲಾ ಹೆಚ್ಚೆಚ್ಚಾಗಿ ವೃದ್ಧಿಯಾಗಲಿ.

ಸಂಪೂರ್ಣ

INDEX TO

# The Chief Battles in English History

## ಇಂಗ್ಲಾಂಡ್ ದೇಶಚರಿತ್ರೆಯಲ್ಲಿ ನಡೆದ ಮುಖ್ಯ ಯುದ್ಧಗಳ ಸೂಚನೆ.

